ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ,

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೮

## ಕೋಟಿರುದ್ರಸಂಹಿತಾ



ಅನುವಾದಕ :

ಹಾಸನದ ಪಂಡಿತ ವೆಂಕಟರಾವ್

ಆಸ್ಥಾನ ವಿದ್ವಾನ್



ಮೈ ಸೂ ರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**




# ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ವಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲಲಿತವಪುಃ ಸಂಪದೇ ಪಾರ್ವತೀಶಃ ॥

ಬೆಂಗಳೂರು ಪ್ರೆಸ್ ಬ್ರಾಂಚ್.

# ಪ್ರಸ್ತಾವನೆ.



ಶಿವಪುರಾಣದ ನಾಲ್ಕನೆಯ ಸಂಹಿತೆಯಾದ ಈ ಕೋಟಿರುದ್ರಸಂಹಿತೆಯಲ್ಲಿ ಪ್ರಸಿದ್ಧವಾದ ದ್ವಾದಶಜ್ಯೋತಿರ್ಲಿಂಗಗಳ ಮಾಹಾತ್ಮ್ಯೆಯನ್ನೂ ಅವುಗಳ ಪ್ರಾದುರ್ಭಾವ ವೃತ್ತಾಂತವನ್ನೂ ಅವುಗಳ ಆರಾಧನೆಯಿಂದ ಉಂಟಾಗುವ ಫಲಾದಿಗಳನ್ನೂ ಸಂದರ್ಭಾನುಸಾರ ಉಪಾಖ್ಯಾನಗಳೊಡನೆ ವಿಶೇಷವಾಗಿ ವರ್ಣಿಸಲಾಗಿದೆ. ಈ ಹನ್ನೆರಡು ಲಿಂಗಗಳ ಪೈಕಿ ಗುಜರಾತಿನ ಸೋಮೇಶ್ವರ, ಕಾಶಿಯ ವಿಶ್ವೇಶ್ವರ, ರಾಮೇಶ್ವರ, ಮಹಾಬಲೇಶ್ವರ, ಕೇದಾರೇಶ್ವರ ಎಂಬ ಲಿಂಗಗಳು ಪುರಾತನಕಾಲದಿಂದಲೂ ಪ್ರಸಿದ್ಧವಾಗಿರುವವು. ಇವುಗಳಲ್ಲದೆ ಕಾಶೀಕ್ಷೇತ್ರದಲ್ಲಿಯೂ, ಇತರ ಕ್ಷೇತ್ರಗಳಲ್ಲಿಯೂ ಅಸಂಖ್ಯಾತವಾದ ಲಿಂಗಗಳಿರುವವು. ಹೆಚ್ಚೇಕೆ? ಪ್ರಪಂಚದಲ್ಲಿರುವ ಚರಾಚರವಸ್ತುಗಳೆಲ್ಲವೂ ಲಿಂಗಸ್ವರೂಪಗಳೆಂದೇ ಹೇಳಲ್ಪಟ್ಟಿರುವದು. ಆದುದರಿಂದಲೇ ಇದಕ್ಕೆ ಕೋಟಿರುದ್ರಸಂಹಿತೆಯೆಂದು ಹೆಸರು. ಈ ಲಿಂಗಗಳಲ್ಲಿ ಯಾವುದನ್ನಾದರೂ ಭಕ್ತಿಯಿಂದ ಆರಾಧಿಸುವ ಮನುಜನಿಗೆ ಸಕಲೇಷ್ಟಾರ್ಥಗಳೂ ಲಭಿಸುವ ವಿಷಯದಲ್ಲಿ ಸಂಶಯವಿಲ್ಲ.

ಈ ಸಂಹಿತೆಯಲ್ಲಿ ಜ್ಯೋತಿರ್ಲಿಂಗಗಳ ವಿಚಾರವಲ್ಲದೆ ಸರ್ವಾದರಣೀಯವಾದ ಶಿವಸಹಸ್ರನಾಮಸ್ತೋತ್ರವು ವಿವರಿಸಲ್ಪಟ್ಟಿರುವುದು. ಈ ಶಿವಸಹಸ್ರನಾಮವು ಒಂದೊಂದು ಪುರಾಣದಲ್ಲಿ ಒಂದೊಂದು ವಿಧವಾಗಿದೆ. ಎಂದರೆ, ನಾಮಗಳು ಒಂದರಲ್ಲಿದ್ದಂತೆ ಮತ್ತೊಂದರಲ್ಲಿಲ್ಲ. ಬೇರೆಬೇರೆ ನಾಮಗಳಿರುವವು. ಅಥವಾ ಬೇರೆ ಕ್ರಮದಲ್ಲಿರುವವು. ಮಹಾಭಾರತದ ಆನುಶಾಸನಿಕ ಪರ್ವದ ಹದಿನೇಳನೆಯ ಅಧ್ಯಾಯದಲ್ಲಿಯೂ, ಶಿವರಹಸ್ಯದ ಸಪ್ತಮಾಂಶದ ಪ್ರಥಮಾಧ್ಯಾಯದಲ್ಲಿಯೂ, ಪದ್ಮಪುರಾಣದ ಉತ್ತರಖಂಡದ ತೊಂಭತ್ತೊಂದನೆಯ ಅಧ್ಯಾಯದಲ್ಲಿಯೂ, ಲಿಂಗಪುರಾಣದ ಪೂರ್ವಭಾಗದ ಅರವತ್ತೈದನೆಯ ಅಧ್ಯಾಯದಲ್ಲಿಯೂ, ಸೌರಪುರಾಣದ ನಲವತ್ತೊಂದನೆಯ ಅಧ್ಯಾಯದಲ್ಲಿಯೂ, ಸ್ಕಾಂದಪುರಾಣದ ಶಂಕರಸಂಹಿತೆಯ ಎಂಭತ್ತಮೂರನೆಯ ಅಧ್ಯಾಯದಲ್ಲಿಯೂ ಇನ್ನೂ ಅನೇಕ ಪುರಾಣಗಳಲ್ಲಿಯೂ ಶಿವಸಹಸ್ರನಾಮವು ಅನೇಕ ಭೇದಗಳೊಡನೆ ವಿವರಿಸಲ್ಪಟ್ಟಿದೆ. ಇವುಗಳಲ್ಲಿ ಪದ್ಮಪುರಾಣದಲ್ಲಿರುವ ಶಿವಸಹಸ್ರನಾಮವು ಚತುರ್ಥ್ಯಂತವಾಗಿ ಆರಂಭಿಸಲ್ಪಟ್ಟಿರುವುದು. ಇದಕ್ಕೆ ವೇದಸಾರಶಿವಸಹಸ್ರನಾಮವೆಂದು ಹೆಸರು ಪ್ರಸಿದ್ಧವಾಗಿರುವುದು. ಈ ಸಹಸ್ರ

ನಾಮಗಳೆಲ್ಲವೂ ಪಾರಾಯಣಕ್ಕೆ ಅನುಕೂಲವಾಗುವಂತೆ ಶ್ಲೋಕರೂಪದಲ್ಲಿರುವವು. ಸಾಧಕರ ಅನುಕೂಲಕ್ಕಾಗಿ ಚತುರ್ಥ್ಯಂತವಾದ ನಾಮಾವಳಿಯನ್ನು ಓಂಕಾರಪೂರ್ವಕವಾಗಿಯೂ ನಮೋಂತ್ಯವಾಗಿಯೂ ಈ ಗ್ರಂಥದಲ್ಲಿ ಸೇರಿಸಿರುತ್ತೆ.

ಸಕಲಸಜ್ಜನರ ಉಪಕಾರಾರ್ಥವಾಗಿ ಇಂತಹ ಉತ್ಕೃಷ್ಟ ಗ್ರಂಥವನ್ನು ಪ್ರಜಾವತ್ಸಲರೂ, ಶಿವಾರಾಧನತತ್ಪರರೂ ಆದ ನಮ್ಮನ್ನಾಳುವ ಶ್ರೀ **ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ.** ಮಹಾಪ್ರಭುಗಳವರು ಪ್ರಕಾಶಪಡಿಸಲು ಅಪ್ಪಣೆಮಾಡಿರುವರು. ಪ್ರಭುವರ್ಯರ ಆಜ್ಞೆಯನ್ನು ಶಿರಸಾವಹಿಸಿ ಈ ಗ್ರಂಥವನ್ನು ಯಥಾಮತಿಯಾಗಿ ಬರೆದಿರುವೆನು. ಇದರ ಪಠನ ಶ್ರವಣಾದಿಗಳಿಂದ ಜನರಲ್ಲಿ ಶಿವಭಕ್ತಿಯು ಕಿಂಚಿತ್ತಾದರೂ ಉದಯಿಸಿದಲ್ಲಿ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುವೆನು. ಸಕಲಲೋಕರಕ್ಷಕನೂ ಕರುಣಾನಿಧಿಯೂ ಆದ ಪಾರ್ವತೀಪತಿಯು ನಮ್ಮ ಪ್ರಭುವರ್ಯರಿಗೂ ಅವರ ರಾಷ್ಟ್ರಕ್ಕೂ ಸಕಲಸಂಪತ್ಸೌಭಾಗ್ಯಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುವೆನು.

ಮೈಸೂರು,

ಮಾರ್ಗಶಿರ ಬಹುಳ ದ್ವಿತೀಯಾ,  
20-12-45

ಅನುವಾದಕ.  
**ಹಾಸನದ ಪಂಡಿತ ವೆಂಕಟರಾವ್.**



# ವಿಷಯಾನುಕ್ರಮಣಿಕೆ.



ಪುಟಸಂಖ್ಯೆ

ಪುಟಸಂಖ್ಯೆ

ಇಪ್ಪತ್ತೇಳನೆಯ ಅಧ್ಯಾಯವು—



ಇಪ್ಪತ್ತೆಂಟನೆಯ ಅಧ್ಯಾಯವು—



ಇಪ್ಪತ್ತೊಂಭತ್ತನೆಯ ಅಧ್ಯಾಯವು—



ಮೂವತ್ತನೆಯ ಅಧ್ಯಾಯವು—



ಮೂವತ್ತೊಂದನೆಯ ಅಧ್ಯಾಯವು—



ಮೂವತ್ತೆರಡನೆಯ ಅಧ್ಯಾಯವು—



ಮೂವತ್ತಮೂರನೆಯ ಅಧ್ಯಾಯವು—

|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಪ್ರಥಮೋಽಧ್ಯಾಯಃ

---

ಯೋ ಧತ್ತೇ ನಿಜಮಾಯಯೈವ ಭುವನಾಕಾರಂ ವಿಕಾರೋಜ್ಝಿತೋ-
ಯಸ್ಯಾಹುಃ ಕರುಣಾಕಟಾಕ್ಷವಿಭವೌ ಸ್ವರ್ಗಾಪವರ್ಗಾಭಿಧೌ ।
ಪ್ರತ್ಯಗ್ಬೋಧಸುಖಾದ್ವಯಂ ಹೃದಿ ಸದಾ ಪಶ್ಯಂತಿ ಯಂ ಯೋಗಿನ-
ಸ್ತಸ್ಮೈ ಶೈಲಸುತಾಂಚಿತಾರ್ಧವಪುಷೇ ಶಶ್ವನ್ನಮಸ್ತೇಜಸೇ || ೧ ||

---

## ಒಂದನೆಯ ಅಧ್ಯಾಯವು,

೧. ಯಾವ ದೇವನು ತಾನು ಯಾವ ವಿಕಾರವೂ ಇಲ್ಲದವನಾದರೂ ತನ್ನ ಮಾಯಾಶಕ್ತಿಯಿಂದಲೇ ಪ್ರಪಂಚಾಕಾರವನ್ನು ಧರಿಸಿರುವನೋ, ಯಾವನ ದಯಾ ರೂಪವಾದ ಕಡೆಗಣ್ಣಿನ ನೋಟ ಮತ್ತು ವಿಭೂತಿಗಳೇ ಸ್ವರ್ಗಮೋಕ್ಷಗಳೆಂಬ ಹೆಸರನ್ನು ಹೊಂದಿರುವುವೋ, ಯಾರನ್ನು ಯೋಗಿಗಳು ಅದ್ವಿತೀಯ ಸುಖರೂಪವಾಗಿಯೂ ಜ್ಞಾನಾನಂದರೂಪವಾಗಿಯೂ ತಮ್ಮ ಮನಸ್ಸಿನಲ್ಲಿ ಯಾವಾಗಲೂ ಭಾವಿಸುತ್ತಿರುವರೋ, ಅಂತಹ ಪಾರ್ವತಿಯಿಂದ ಅಲಂಕೃತವಾದ ಅರ್ಧಶರೀರವುಳ್ಳ ತೇಜಸ್ಸಿಗೆ (ಪರಮೇಶ್ವರನಿಗೆ) ಮತ್ತೆ ಮತ್ತೆ ನಮಸ್ಕಾರವನ್ನು ಮಾಡುವೆವು.

ಕೃಪಾಲಲಿತವೀಕ್ಷಣಂ ಸ್ಮಿತಮನೋಜ್ಞವಕ್ತ್ರಾಂಬುಜಂ
ಶಶಾಂಕಕಲಯೋಜ್ಜ್ವಲಂ ಶಮಿತಘೋರತಾಪತ್ರಯಮ್ ।
ಕರೋತು ಕಿಮಪಿ ಸ್ಫುರತ್ಪರಮಸೌಖ್ಯಸಚ್ಚಿದ್ವಪು-
ರ್ಧರಾಧರಸುತಾಭುಜೋದ್ವಲಯಿತಂ ಮಹೋ ಮಂಗಲಂ ॥ ೧ ॥

॥ ಋಷಯ ಊಚುಃ ॥

ಸಮ್ಯಗುಕ್ತಂ ತ್ವಯಾ ಸೂತ ಲೋಕಾನಾಂ ಹಿತಕಾಮ್ಯಯಾ ।
ಶಿವಾವತಾರಮಾಹಾತ್ಮ್ಯಂ ನಾನಾಖ್ಯಾನಸಮನ್ವಿತಂ ॥ ೨ ॥

ಪುನಶ್ಚ ಕಥ್ಯತಾಂ ತಾತ ಶಿವಮಾಹಾತ್ಮ್ಯಮುತ್ತಮಂ ।
ಲಿಂಗಸಂಬಂಧಿ ಸುಪ್ರೀತ್ಯಾ ಧನ್ಯಸ್ತ್ವಂ ಶೈವಸತ್ತಮಃ ॥ ೪ ॥

ಶೃಣ್ವನ್ತಸ್ತ್ವನ್ಮುಖಾಂಭೋಜಾನ್ನ ತೃಪ್ತಾಃ ಸ್ಮೋ ವಯಂ ಪ್ರಭೋ ।
ಶೈವಂ ಯಶೋಽಮೃತಂ ರಮ್ಯಂ ತದೇವ ಪುನರುಚ್ಯತಾಂ ॥ ೫ ॥

---

೧. ಆ ಪರಮೇಶ್ವರನ ದಿವ್ಯವಾದ ಶರೀರವು ಭಕ್ತರ ವಿಷಯದಲ್ಲಿ ಕೃಪಾದೃಷ್ಟಿಯಿಂದ ಕೂಡಿ ಬೆಳಗುತ್ತಿರುವುದು. ಮುಖಕಮಲವು ಮಂದಹಾಸದಿಂದ ಕೂಡಿ ಬಹುಮನೋಹರವಾಗಿ ಒಪ್ಪುತ್ತಿರುವುದು. ಶಿರಸ್ಸಿನಲ್ಲಿ ಚಂದ್ರಕಲೆಯು ಪ್ರಕಾಶಿಸುತ್ತಿರುವುದು. ಭಕ್ತರ ಆಧ್ಯಾತ್ಮಿಕ, ಆಧಿದೈವಿಕ, ಆತಿಭೌತಿಕಗಳೆಂಬ ಮೂರುವಿಧವಾದ ತಾಪತ್ರಯಗಳನ್ನು ಪರಿಹಾರಮಾಡಲು ಸಮರ್ಥವಾಗಿರುವುದು. ಶೈಲಸುತೆಯಾದ ಪಾರ್ವತಿಯ ತೋಳುಗಳಿಂದ ಆಲಂಗಿತವಾಗಿರುವುದು. ಅತ್ಯಂತ ಪ್ರಕಾಶಮಾನವಾಗಿಯೂ ಸಚ್ಚಿದಾನಂದಸ್ವರೂಪವಾಗಿಯೂ ಇರುವ ಪರಮೇಶ್ವರನ ಇಂತಹ ದಿವ್ಯವಾದ ಶರೀರವು ನಮಗೆ ಮಂಗಳವನ್ನುಂಟುಮಾಡಲಿ.

೨-೫. ಋಷಿಗಳು ಕೇಳಿದರು :—ಎಲೈ ಸೂತನೇ, ಅನೇಕ ಕಥೆಗಳಿಂದ ಕೂಡಿದ ಶಿವನ ಅವತಾರಗಳ ಮಹಿಮೆಯನ್ನು ಲೋಕಹಿತಕ್ಕಾಗಿ ನೀನು ಚೆನ್ನಾಗಿ ಹೇಳಿದೆ. ನೀನೇ ಶಿವಭಕ್ತರಲ್ಲಿ ಶ್ರೇಷ್ಠನಾದುದರಿಂದ ಕೃತಾರ್ಥನಾಗಿರುವೆ. ಮತ್ತೆ ಲಿಂಗಸಂಬಂಧವಾದ ಶ್ರೇಷ್ಠವಾದ ಶಿವನ ಮಹಿಮೆಯನ್ನು ಅತ್ಯಂತ ಪ್ರೀತಿಯಿಂದ ನಮಗೆ ಹೇಳಬೇಕು. ಅಮೃತದಂತೆ ಮನೋಹರವಾದ ಶಿವನ ಯಶಸ್ಸನ್ನು ನಿನ್ನ ಮುಖಕಮಲದಿಂದ ಕೇಳುತ್ತಿರುವ ನಮಗೆ ತೃಪ್ತಿಯುಂಟಾಗಲಿಲ್ಲ. ಆದುದರಿಂದ ಅವನ್ನೇ ಮತ್ತೆ ಹೇಳಬೇಕು.

ಪೃಥಿವ್ಯಾಂ ಯಾನಿ ಲಿಂಗಾನಿ ತೀರ್ಥೇ ತೀರ್ಥೇ ಶುಭಾನಿ ಹಿ ।
ಅನ್ಯತ್ರ ವಾ ಸ್ಥಲೇ ಯಾನಿ ಪ್ರಸಿದ್ಧಾನಿ ಸ್ಥಿತಾನಿ ವೈ ॥ ೬ ॥

ತಾನಿ ತಾನಿ ಚ ದಿವ್ಯಾನಿ ಲಿಂಗಾನಿ ಪರಮೇಶಿತುಃ ।
ವ್ಯಾಸಶಿಷ್ಯ ಸಮಾಚಕ್ಷ್ವ ಲೋಕಾನಾಂ ಹಿತಕಾಮ್ಯಯಾ ॥ ೭ ॥

॥ ಸೂತ ಉವಾಚ ॥

ಸಾಧು ಪೃಷ್ಟಮೃಷಿಶ್ರೇಷ್ಠಾ ಲೋಕಾನಾಂ ಹಿತಕಾಮ್ಯಯಾ ।
ಕಥಯಾಮಿ ಭವತ್ಸ್ನೇಹಾತ್ತಾನಿ ಸಂಕ್ಷೇಪತೋ ದ್ವಿಜಾಃ ॥ ೮ ॥

ಸರ್ವೇಷಾಂ ಶಿವಲಿಂಗಾನಾಂ ಮುನೇ ಸಂಖ್ಯಾ ನ ವಿದ್ಯತೇ ।
ಸರ್ವಲಿಂಗಮಯೀ ಭೂಮಿ ಸರ್ವಲಿಂಗಮಯಂ ಜಗತ್ ॥ ೯ ॥

ಲಿಂಗಮಯಾನಿ ತೀರ್ಥಾನಿ ಸರ್ವಂ ಲಿಂಗೇ ಪ್ರತಿಷ್ಠಿತಂ ।
ಸಂಖ್ಯಾ ನ ವಿದ್ಯತೇ ತೇಷಾಂ ತಾನಿ ಕಿಂಚಿದ್ಬ್ರವೀಮ್ಯಹಂ ॥ ೧೦ ॥

---

೬-೭. ಭೂಮಿಯಲ್ಲಿ ಅನೇಕ ತೀರ್ಥಗಳೂ ಕ್ಷೇತ್ರಗಳೂ ಇರುವುವು. ಅವುಗಳಲ್ಲಿಯೂ ಮತ್ತೆ ಬೇರೆಕಡೆಗಳಲ್ಲಿಯೂ ಮಂಗಳಕರವಾದ ಲಿಂಗಗಳು ಎಲ್ಲೆಲ್ಲಿ ಇರುವುವು? ಆ ಪರಮೇಶ್ವರನ ಶ್ರೇಷ್ಠವಾದ ಲಿಂಗಗಳನ್ನು ವ್ಯಾಸಶಿಷ್ಯನಾದ ನೀನು ಲೋಕಾನುಗ್ರಹಕ್ಕಾಗಿ ನಮಗೆ ಹೇಳು ಎಂದರು.

೮. ಸೂತನು ಹೇಳಿದನು.—ಎಲೈ ಬ್ರಾಹ್ಮಣಶ್ರೇಷ್ಠರೇ, ಲೋಕಹಿತಕ್ಕಾಗಿ ನೀವು ಉತ್ತಮವಾದ ಪ್ರಶ್ನೆಯನ್ನು ಕೇಳಿದಿರಿ. ನಿಮ್ಮಲ್ಲಿರುವ ಪ್ರೀತಿಯಿಂದ ಅವುಗಳನ್ನೆಲ್ಲ ಸಂಕ್ಷೇಪವಾಗಿ ಹೇಳುವೆನು.

೯-೧೦. ಎಲೈ ಋಷಿಗಳೇ, ಸಮಸ್ತ ಶಿವಲಿಂಗಗಳನ್ನೂ ಲೆಕ್ಕಮಾಡಲು ಸಾಧ್ಯವಿಲ್ಲ. ಭೂಮಿಯೂ ಪ್ರಪಂಚವೂ ತೀರ್ಥಗಳೂ ಎಲ್ಲವೂ ಲಿಂಗಗಳಿಂದ ತುಂಬಿರುವುವು. ಸಮಸ್ತವೂ ಲಿಂಗರೂಪನಾದ ಪರಮೇಶ್ವರನಲ್ಲಿಯೇ ಇರುವುದು. ಆ ಲಿಂಗಗಳನ್ನು ಲೆಕ್ಕಿಸಲು ಸಾಧ್ಯವಿಲ್ಲವಾದರೂ ಕೆಲವನ್ನು ನಾನು ಹೇಳುವೆನು.

ಯತ್ಕಿಂಚಿದ್ದೃಶ್ಯತೇ ದೃಶ್ಯಂ ವರ್ಣ್ಯತೇ ಸ್ಮರ್ಯತೇ ಚ ಯತ್ ।
ತತ್ಸರ್ವಂ ಶಿವರೂಪಂ ಹಿ ನಾನ್ಯದಸ್ತೀತಿ ಕಿಂಚನ ॥ ೧೧ ॥

ತಥಾಪಿ ಶ್ರೂಯತಾಂ ಪ್ರೀತ್ಯಾ ಕಥಯಾಮಿ ಯಥಾಶ್ರುತಂ ।
ಲಿಂಗಾನಿ ಚ ಋಷಿಶ್ರೇಷ್ಠಾಃ ಪೃಥಿವ್ಯಾಂ ಯಾನಿ ತಾನಿ ಹ ॥ ೧೨ ॥

ಪಾತಾಲೇ ಚಾಪಿ ವರ್ತಂತೇ ಸ್ವರ್ಗೇ ಚಾಪಿ ತಥಾ ಭುವಿ ।
ಸರ್ವತ್ರ ಪೂಜ್ಯತೇ ಶಂಭುಃ ಸದೇವಾಸುರಮಾನುಷೈಃ ॥ ೧೩ ॥

ತ್ರಿಜಗಚ್ಛಂಭುನಾ ವ್ಯಾಪ್ತಂ ಸದೇವಾಸುರಮಾನುಷಂ ।
ಅನುಗ್ರಹಾಯ ಲೋಕಾನಾಂ ಲಿಂಗರೂಪೇಣ ಸತ್ತಮಾಃ ॥ ೧೪ ॥

ಅನುಗ್ರಹಾಯ ಲೋಕಾನಾಂ ಲಿಂಗಾನಿ ಚ ಮಹೇಶ್ವರಃ ।
ದಧಾತಿ ವಿವಿಧಾನ್ಯತ್ರ ತೀರ್ಥೇ ಚಾನ್ಯಸ್ಥಲೇ ತಥಾ ॥ ೧೫ ॥

---

೧೧. ಲೋಕದಲ್ಲಿ ಯಾವುದನ್ನು ನೋಡುವೆವೋ, ಯಾವುದನ್ನು ವರ್ಣಿಸುವೆವೋ, ಯಾವುದನ್ನು ಸ್ಮರಿಸುವೆವೋ, ಅವೆಲ್ಲವೂ ಶಿವಸ್ವರೂಪವೇ ಆಗಿರುವುದು. ಶಿವಸ್ವರೂಪವನ್ನು ಬಿಟ್ಟು ಮತ್ತೊಂದಿಲ್ಲ.

೧೧-೧೩. ಹಾಗಾದರೂ ನಾನು ನನ್ನ ಗುರುಗಳಾದ ವ್ಯಾಸರಿಂದ ಹೇಗೆ ಕೇಳಿದೆನೋ ಹಾಗೆಯೇ ನಿಮಗೆ ಪ್ರೀತಿಯಿಂದ ಭೂಮಿಯಲ್ಲಿರುವ ಲಿಂಗಗಳನ್ನು ಹೇಳುವೆನು. ಭೂಮಿಯಲ್ಲಿಯೂ, ಪಾತಾಳದಲ್ಲಿಯೂ, ಸ್ವರ್ಗದಲ್ಲಿಯೂ, ಎಲ್ಲೆಡೆಯಲ್ಲಿಯೂ ಮನುಷ್ಯರೂ ರಾಕ್ಷಸರೂ ದೇವತೆಗಳೂ ಶಿವನನ್ನು ಪೂಜಿಸುವರು.

೧೪. ಶ್ರೇಷ್ಠರಾದ ಋಷಿಗಳೇ, ದೇವಾಸುರಮಾನವರಿಂದ ಕೂಡಿದ ಮೂರು ಲೋಕದ ಜೀವರುಗಳಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಶಿವನು ಲಿಂಗರೂಪದಿಂದ ಮೂರು ಲೋಕಗಳನ್ನೂ ವ್ಯಾಪಿಸಿಕೊಂಡಿರುವನು.

೧೫. ಮಹೇಶ್ವರನು ಲೋಕಾನುಗ್ರಹಕ್ಕಾಗಿ ತೀರ್ಥಗಳಲ್ಲಿಯೂ, ಇತರ ಸ್ಥಳಗಳಲ್ಲಿಯೂ ಬಗೆಬಗೆಯಾದ ಚಿಹ್ನೆಗಳನ್ನು ಧರಿಸಿರುವನು.

ಯತ್ರ ಯತ್ರ ಯದಾ ಶಂಭುರ್ಭಕ್ತ್ಯಾ ಭಕ್ತೈಶ್ಚ ಸಂಸ್ಮೃತಃ ।
ತತ್ರ ತತ್ರಾವತೀರ್ಯಾಥ ಕಾರ್ಯಂ ಕೃತ್ವಾ ಸ್ಥಿತಸ್ತದಾ ॥ ೧೬ ॥

ಲೋಕಾನಾಮುಪಕಾರಾರ್ಥಂ ಸ್ವಲಿಂಗಂ ಚಾಪ್ಯಕಲ್ಪಯತ್ ।
ತಲ್ಲಿಂಗಂ ಪೂಜಯಿತ್ವಾ ತು ಸಿದ್ಧಿಂ ಸಮಧಿಗಚ್ಛತಿ ॥ ೧೭ ॥

ಪೃಥಿವ್ಯಾಂ ಯಾನಿ ಲಿಂಗಾನಿ ತೇಷಾಂ ಸಂಖ್ಯಾ ನ ವಿದ್ಯತೇ ।
ತಥಾಪಿ ಚ ಪ್ರಧಾನಾನಿ ಕಥ್ಯಂತೇ ಚ ಮಯಾ ದ್ವಿಜಾಃ ॥ ೧೮ ॥

ಪ್ರಧಾನೇಷು ಚ ಯಾನೀಹ ಮುಖ್ಯಾನಿ ಪ್ರವದಾಮ್ಯಹಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವಃ ಕ್ಷಣಾತ್ ॥ ೧೯ ॥

ಜ್ಯೋತಿರ್ಲಿಂಗಾನಿ ಯಾನೀಹ ಮುಖ್ಯಮುಖ್ಯಾನಿ ಸತ್ತಮ ।
ತಾನ್ಯಹಂ ಕಥಯಾಮ್ಯದ್ಯ ಶ್ರುತ್ವಾ ಪಾಪಂ ವ್ಯಪೋಹತಿ ॥ ೨೦ ॥

---

೧೬ ಎಲ್ಲೆಲ್ಲಿ ಯಾವಾಗ ಶಿವನನ್ನು ಭಕ್ತರು ಸ್ಮರಿಸುವರೋ, ಅಲ್ಲಲ್ಲಿಗೆ ಶಿವನು ಬಂದು ಭಕ್ತರಿಗೆ ದರ್ಶನವನ್ನು ಕೊಟ್ಟು ಅವರ ಇಷ್ಟಾರ್ಥವನ್ನು ನೆರವೇರಿಸಿ ಅಲ್ಲಿಯೇ ನೆಲೆಸಿರುವನು.

೧೭. ಲೋಕೋಪಕಾರಕ್ಕಾಗಿ ತನ್ನ ಲಿಂಗವನ್ನು ಆ ಸ್ಥಳಗಳಲ್ಲಿ ಕಲ್ಪಿಸಿರುವನು. ಆ ಲಿಂಗವನ್ನು ಪೂಜೆಮಾಡಿ ಇಷ್ಟಸಿದ್ಧಿಯನ್ನು ಹೊಂದಬಹುದು.

೧೮. ಭೂಮಿಯಲ್ಲಿರುವ ಲಿಂಗಗಳು ಲೆಕ್ಕವಿಲ್ಲದಷ್ಟು ಇರುವುವು. ಎಲೈ ಬ್ರಾಹ್ಮಣರೇ, ಅವುಗಳಲ್ಲಿ ಮುಖ್ಯವಾದವುಗಳನ್ನು ಹೇಳುವೆನು.

೧೯-೨೦. ಆ ಮುಖ್ಯವಾದ ಲಿಂಗಗಳಲ್ಲಿಯೂ ಯಾವುವು ಅತ್ಯಂತ ಮುಖ್ಯವಾದವುಗಳೋ ಅವುಗಳನ್ನು ಈಗ ಹೇಳುವೆನು. ಇದನ್ನು ಕೇಳಿದಮಾತ್ರದಿಂದಲೇ ಮನುಷ್ಯನು ಸಮಸ್ತ ಪಾಪಗಳ ಬಿಡುಗಡೆಯನ್ನೂ ಹೊಂದುವನು. ಎಲೈ ಸಜ್ಜನ ಶ್ರೇಷ್ಠರೇ, ಈ ಲೋಕದಲ್ಲಿರುವ ಮುಖ್ಯವಾದ ಜ್ಯೋತಿರ್ಲಿಂಗಗಳನ್ನು ಹೇಳುವೆನು. ಇವುಗಳನ್ನು ಕೇಳಿದವರು ತಮ್ಮ ಪಾಪಗಳನ್ನು ನಾಶಮಾಡಿಕೊಳ್ಳುವರು.

**ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಂ ।**
**ಉಜ್ಜಯಿನ್ಯಾಂ ಮಹಾಕಾಲಮೋಂಕಾರೇ ಪರಮೇಶ್ವರಂ ॥ ೨೧ ॥**

**ಕೇದಾರಂ ಹಿಮವತ್ಪೃಷ್ಠೇ ಡಾಕಿನ್ಯಾಂ ಭೀಮಶಂಕರಂ ।**
**ವಾರಾಣಸ್ಯಾಂ ಚ ವಿಶ್ವೇಶಂ ತ್ರ್ಯಂಬಕಂ ಗೌತಮೀತಟೇ ॥ ೨೨ ॥**

**ವೈದ್ಯನಾಥಂ ಚಿತಾಭೂಮೌ ನಾಗೇಶಂ ದಾರುಕಾವನೇ ।**
**ಸೇತುಬಂಧೇ ಚ ರಾಮೇಶಂ ಘುಶ್ಮೇಶಂ ಚ ಶಿವಾಲಯೇ ॥ ೨೩ ॥**

**ದ್ವಾದಶೈತಾನಿ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।**
**ಸರ್ವಪಾಪವಿನಿರ್ಮುಕ್ತಃ ಸರ್ವಸಿದ್ಧಿಫಲಂ ಲಭೇತ್ ॥ ೨೪ ॥**

**ಯಂ ಯಂ ಕಾಮಮಪೇಕ್ಷ್ಯೈವ ಪಠಿಷ್ಯಂತಿ ನರೋತ್ತಮಾಃ ।**
**ಪ್ರಾಪ್ಸ್ಯಂತಿ ಕಾಮಂ ತಂ ತಂ ಹಿ ಪರತ್ರೇಹ ಮುನೀಶ್ವರಾಃ ॥ ೨೫ ॥**

**ಯೇ ನಿಷ್ಕಾಮತಯಾ ತಾನಿ ಪಠಿಷ್ಯಂತಿ ಶುಭಾಶಯಾಃ ।**
**ತೇಷಾಂ ಚ ಜನನೀಗರ್ಭೇ ವಾಸೋ ನೈವ ಭವಿಷ್ಯತಿ ॥ ೨೬ ॥**

---

೨೧-೨೪. ಸೌರಾಷ್ಟ್ರದಲ್ಲಿ ಸೋಮನಾಥನೂ, ಶ್ರೀಶೈಲದಲ್ಲಿ ಮಲ್ಲಿಕಾರ್ಜುನನೂ, ಉಜ್ಜಯಿನಿಯಲ್ಲಿ ಮಹಾಕಾಲನೂ, ಓಂಕಾರಕ್ಷೇತ್ರದಲ್ಲಿ ಪರಮೇಶ್ವರನೂ, ಹಿಮವತ್ಪರ್ವತದಲ್ಲಿ ಕೇದಾರೇಶ್ವರನೂ, ಡಾಕಿನಿಯಲ್ಲಿ ಭೀಮಶಂಕರನೂ, ಕಾಶಿಯಲ್ಲಿ ವಿಶ್ವೇಶ್ವರನೂ, ಗೌತಮೀನದಿಯ ದಡದಲ್ಲಿ ತ್ರ್ಯಂಬಕೇಶ್ವರನೂ, ಚಿತಾಭೂಮಿಯಲ್ಲಿ ವೈದ್ಯನಾಥೇಶ್ವರನೂ, ದಾರುಕಾವನದಲ್ಲಿ ನಾಗೇಶ್ವರನೂ, ಸೇತುವಿನಲ್ಲಿ ರಾಮೇಶ್ವರನೂ, ಶಿವಾಲಯದಲ್ಲಿ ಘುಶ್ಮೇಶನೂ, ಎಂಬ ಈ ಹನ್ನೆರಡು ಹೆಸರುಗಳನ್ನು ಪ್ರಾತಃಕಾಲದಲ್ಲಿ ಎದ್ದು ಯಾರು ಹೇಳುವರೋ ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು, ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವರು.

೨೫-೨೬. ಮನುಷ್ಯಶ್ರೇಷ್ಠರು ಯಾವ ಯಾವ ಇಷ್ಟಾರ್ಥಗಳನ್ನು ಅಪೇಕ್ಷಿಸಿ ಈ ಹನ್ನೆರಡು ಜ್ಯೋತಿರ್ಲಿಂಗಗಳ ನಾಮವನ್ನು ಉಚ್ಚರಿಸುವರೋ ಅವರು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಆಯಾ ಇಷ್ಟಾರ್ಥಗಳನ್ನು ಪಡೆಯುವರು. ಯಾರು ಯಾವ ಅಪೇಕ್ಷೆಯೂ ಇಲ್ಲದೆ ಈ ನಾಮಗಳನ್ನು ಉಚ್ಚರಿಸುವರೋ ಅವರಿಗೆ ಶುದ್ಧವಾದ ಬುದ್ಧಿಯು ಉಂಟಾಗಿ ಪುನರ್ಜನ್ಮವು ಪ್ರಾಪ್ತವಾಗುವುದಿಲ್ಲ.

ಏತೇಷಾಂ ಪೂಜನೇನೈವ ವರ್ಣಾನಾಂ ದುಃಖನಾಶನಂ ।
ಇಹಲೋಕೇ ಪರತ್ರಾಪಿ ಮುಕ್ತಿರ್ಭವತಿ ನಿಶ್ಚಿತಂ ॥ ೨೭ ॥

ಗ್ರಾಹ್ಯಮೇಷಾಂ ಚ ನೈವೇದ್ಯಂ ಭೋಜನೀಯಂ ಪ್ರಯತ್ನತಃ ।
ತತ್ಕರ್ತುಃ ಸರ್ವಪಾಪಾನಿ ಭಸ್ಮಸಾದ್ಯಾಂತಿ ವೈ ಕ್ಷಣಾತ್ ॥ ೨೮ ॥

ಜ್ಯೋತಿಷಾಂ ಚೈವ ಲಿಂಗಾನಾಂ ಬ್ರಹ್ಮಾದಿಭಿರಲಂ ದ್ವಿಜಾಃ ।
ವಿಶೇಷತಃ ಫಲಂ ವಕ್ತುಂ ಶಕ್ಯತೇ ನ ಪರೈಸ್ತಥಾ ॥ ೨೯ ॥

ಏಕಂ ಚ ಪೂಜಿತಂ ಯೇನ ಷಣ್ಮಾಸಂ ತನ್ನಿರಂತರಂ ।
ತಸ್ಯ ದುಃಖಂ ನ ಜಾಯೇತ ಮಾತೃಕುಕ್ಷಿಸಮುದ್ಭವಂ ॥ ೩೦ ॥

ಹೀನಯೋನೌ ಯದಾ ಜಾತೋ ಜ್ಯೋತಿರ್ಲಿಂಗಂ ಚ ಪಶ್ಯತಿ ।
ತಸ್ಯ ಜನ್ಮ ಭವೇತ್ತತ್ರ ವಿಮಲೇ ಸತ್ಕುಲೇ ಪುನಃ ॥ ೩೧ ॥

---

೨೭. ಈ ಲಿಂಗಗಳನ್ನು ಪೂಜೆಮಾಡಿದರೆ ಸಮಸ್ತ ವರ್ಣದವರಿಗೂ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ದುಃಖವು ನಾಶವಾಗಿ ನಿಯತಕಾಲದಲ್ಲಿ ಮೋಕ್ಷವು ಉಂಟಾಗುವುದು.

೨೮. ಈ ಜ್ಯೋತಿರ್ಲಿಂಗಗಳಿಗೆ ಮಾಡಿದ ನೈವೇದ್ಯವನ್ನು ಪ್ರಯತ್ನಪೂರ್ವಕವಾಗಿ ಎಲ್ಲರೂ ಭೋಜನಮಾಡಬೇಕು. ಹಾಗೆ ಮಾಡಿದರೆ ಆ ಕ್ಷಣದಲ್ಲಿಯೇ ಭೋಜನಮಾಡಿದವರ ಸಮಸ್ತ ಪಾಪಗಳೂ ಸುಟ್ಟು ಬೂದಿಯಾಗಿ ಹೋಗುವುವು.

೨೯. ಎಲೈ ಬ್ರಾಹ್ಮಣರೇ, ಈ ಜ್ಯೋತಿರ್ಲಿಂಗಗಳ ವಿಶೇಷಫಲವನ್ನು ಹೇಳಲು ಬ್ರಹ್ಮಾದಿದೇವತೆಗಳಿಗೂ ಸಾಧ್ಯವಿಲ್ಲ. ಇತರರು ಯಾರೂ ಇದನ್ನು ಹೇಳಲಾರರು.

೩೦. ಒಂದು ಜ್ಯೋತಿರ್ಲಿಂಗವನ್ನು ಪ್ರತಿದಿನವೂ ಆರು ತಿಂಗಳವರೆಗೆ ಪೂಜಿಸಿದರೆ ತಾಯಿಯ ಗರ್ಭದಲ್ಲಿ ಮತ್ತೆ ಹುಟ್ಟುವ ದುಃಖವು ಅವನಿಗೆ ಬರುವುದಿಲ್ಲ.

೩೧-೩೨. ನೀಚಕುಲದಲ್ಲಿ ಹುಟ್ಟಿದವನು ಜ್ಯೋತಿರ್ಲಿಂಗದರ್ಶನವನ್ನು ಮಾಡಿದರೆ ಅವನು ಮತ್ತೆ ಆ ಕ್ಷೇತ್ರದಲ್ಲಿಯೇ ಉತ್ತಮವಂಶದಲ್ಲಿ ಹುಟ್ಟುವನು.

ಸತ್ಕುಲೇ ಜನ್ಮ ಸಂಪ್ರಾಪ್ಯ ಧನಾಢ್ಯೋ ವೇದಪಾರಗಃ ।
ಶುಭಕರ್ಮ ತದಾ ಕೃತ್ವಾ ಮುಕ್ತಿಂ ಯಾತ್ಯನಪಾಯಿನೀಂ ॥ ೩೨ ॥

ಮ್ಲೇಚ್ಛೋ ವಾಪ್ಯಂತ್ಯಜೋ ವಾಪಿ ಷಂಡೋ ವಾಪಿ ಮುನೀಶ್ವರಾಃ ।
ದ್ವಿಜೋ ಭೂತ್ವಾ ಭವೇನ್ಮುಕ್ತಸ್ತಸ್ಮಾತ್ತದ್ದರ್ಶನಂ ಚರೇತ್ ॥ ೩೩ ॥

ಜ್ಯೋತಿಷಾಂ ಚೈವ ಲಿಂಗಾನಾಂ ಕಿಂಚಿತ್ಪ್ರೋಕ್ತಂ ಫಲಂ ಮಯಾ ।
ಜ್ಯೋತಿಷಾಂ ಚೋಪಲಿಂಗಾನಿ ಶ್ರೂಯಂತಾಮೃಷಿಸತ್ತಮಾಃ ॥ ೩೪ ॥

ಸೋಮೇಶ್ವರಸ್ಯ ಯಲ್ಲಿಂಗಮಂತಕೇಶಮುದಾಹೃತಂ ।
ಮಹ್ಯಾಸ್ಸಾಗರಸಂಯೋಗೇ ತಲ್ಲಿಂಗಮುಪಲಿಂಗಕಂ ॥ ೩೫ ॥

ಮಲ್ಲಿಕಾರ್ಜುನಸಂಭೂತಮುಪಲಿಂಗಮುದಾಹೃತಂ ।
ರುದ್ರೇಶ್ವರಮಿತಿ ಖ್ಯಾತಂ ಭೃಗುಕಕ್ಷೇ ಸುಖಾವಹಂ ॥ ೩೬ ॥

---

ಆ ಸತ್ಕುಲದಲ್ಲಿ ಹುಟ್ಟಿದ ಅವನು ಧನವಂತನಾಗಿಯೂ, ವೇದವನ್ನು ಸಂಪೂರ್ಣವಾಗಿ ತಿಳಿದವನಾಗಿಯೂ, ಶುಭಕರ್ಮವನ್ನು ಮಾಡಿ ನಾಶವಾಗದಿರುವ ಮೋಕ್ಷಸುಖವನ್ನು ಪಡೆಯುವನು.

೩೩. ಓ ಎಲೈ ಋಷಿಶ್ರೇಷ್ಠರೇ! ಮ್ಲೇಚ್ಛನಾಗಲಿ, ಚಂಡಾಲನಾಗಲಿ, ನಪುಂಸಕನಾಗಲಿ, ಬ್ರಾಹ್ಮಣನಾಗಿ ಹುಟ್ಟಿ ಮುಕ್ತಿಯನ್ನು ಪಡೆಯುವನು. ಆ ಕಾರಣದಿಂದ ಜ್ಯೋತಿರ್ಲಿಂಗ ದರ್ಶನವನ್ನು ಅವಶ್ಯಕವಾಗಿ ಮಾಡಬೇಕು.

೩೪. ಋಷಿಶ್ರೇಷ್ಠರೇ! ಜ್ಯೋತಿರ್ಲಿಂಗಗಳ ಫಲವನ್ನು ನಾನು ಸ್ವಲ್ಪಮಟ್ಟಿಗೆ ಹೇಳಿದೆನು. ಇನ್ನು ಜ್ಯೋತಿರ್ಲಿಂಗಗಳ ಉಪಲಿಂಗಗಳನ್ನು ಹೇಳುವೆನು ಕೇಳಿರಿ.

೩೫. ಭೂಮಿಗೆ ಸಮುದ್ರವು ಸೇರಿರುವ ಸ್ಥಳದಲ್ಲಿ ಸೋಮೇಶ್ವರನ ಉಪಲಿಂಗವಾಗಿ ಅಂತಕೇಶ್ವರನೆಂಬ ಲಿಂಗವಿರುವುದು.

೩೬. ಭೃಗುನದಿಯ ದಡದಲ್ಲಿ ಮಲ್ಲಿಕಾರ್ಜುನಲಿಂಗಕ್ಕೆ ಉಪಲಿಂಗವಾಗಿ ರುದ್ರೇಶ್ವರಲಿಂಗವಿರುವುದು.

ಮಹಾಕಾಲಭವಂ ಲಿಂಗಂ ದುಗ್ಧೇಶಮಿತಿ ವಿಶ್ರುತಂ ।
ನರ್ಮದಾಯಾಂ ಪ್ರಸಿದ್ಧಂ ತತ್ಸರ್ವಪಾಪಹರಂ ಸ್ಮೃತಂ ॥ ೩೭ ॥

ಓಂಕಾರಜಂ ಚ ಯಲ್ಲಿಂಗಂ ಕರ್ದಮೇಶಮಿತಿ ಶ್ರುತಂ ।
ಪ್ರಸಿದ್ಧಂ ಬಿಂದುಸರಸಿ ಸರ್ವಕಾಮಫಲಪ್ರದಂ ॥ ೩೮ ॥

ಕೇದಾರೇಶ್ವರಸಂಜಾತಂ ಭೂತೇಶಂ ಯಮುನಾತಟೇ ।
ಮಹಾಪಾಪಹರಂ ಪ್ರೋಕ್ತಂ ಪಶ್ಯತಾಮರ್ಚತಾಂ ತಥಾ ॥ ೩೯ ॥

ಭೀಮಶಂಕರಸಂಭೂತಂ ಭೀಮೇಶ್ವರಮಿತಿ ಸ್ಮೃತಂ ।
ಸಹ್ಯಾಚಲೇ ಪ್ರಸಿದ್ಧಂ ತನ್ಮಹಾಬಲವಿವರ್ಧನಂ ॥ ೪೦ ॥

ನಾಗೇಶ್ವರಸಮುದ್ಭೂತಂ ಭೂತೇಶ್ವರಮುದಾಹೃತಂ ।
ಮಲ್ಲಿಕಾಸರಸ್ವತೀತೀರೇ ದರ್ಶನಾತ್ಪಾಪಹಾರಕಂ ॥ ೪೧ ॥

---

೩೭. ನರ್ಮದಾನದಿಯ ದಡದಲ್ಲಿ ಮಹಾಕಾಲನೆಂಬ ಲಿಂಗಕ್ಕೆ ಉಪಲಿಂಗವಾಗಿ ದುಗ್ಧೇಶ್ವರನೆಂಬ ಲಿಂಗವು ಸಮಸ್ತ ಪಾಪನಾಶಕವಾಗಿರುವುದು.

೩೮. ಬಿಂದುಸರೋವರದಲ್ಲಿ ಓಂಕಾರೇಶ್ವರನ ಉಪಲಿಂಗವಾಗಿ ಕರ್ದಮೇಶನೆಂಬ ಲಿಂಗವು ಸಕಲವಾದ ಇಷ್ಟಾರ್ಥಗಳನ್ನೂ ಕೊಡತಕ್ಕದಾಗಿರುವುದು.

೩೯. ಯಮುನಾನದಿಯ ದಡದಲ್ಲಿ ಕೇದಾರೇಶ್ವರನ ಉಪಲಿಂಗವಾದ ಭೂತೇಶಲಿಂಗವು ದರ್ಶನಮಾಡುವವರ ಮತ್ತು ಪೂಜಿಸುವವರ ಪಾಪಪರಿಹಾರಕವಾಗಿರುವುದು.

೪೦. ಸಹ್ಯಪರ್ವತದಲ್ಲಿ ಭೀಮಶಂಕರಲಿಂಗಕ್ಕೆ ಉಪಲಿಂಗವಾಗಿ ಭೀಮೇಶ್ವರಲಿಂಗವು, ಪೂಜಿಸುವವರಿಗೆ ಬಲವನ್ನು ಹೆಚ್ಚಿಸುವುದಾಗಿ ಪ್ರಸಿದ್ಧವಾಗಿರುವುದು.

೪೧. ಮಲ್ಲಿಕಾ ಮತ್ತು ಸರಸ್ವತಿಯ ತೀರದಲ್ಲಿ ದರ್ಶನಮಾಡಿದವರ ಪಾಪವನ್ನು ನಾಶಮಾಡುವ ನಾಗೇಶ್ವರನ ಉಪಲಿಂಗವಾಗಿ ಭೂತೇಶ್ವರನೆಂಬ ಲಿಂಗವಿರುವುದು.

ರಾಮೇಶ್ವರಾಚ್ಚ ಯಜ್ಜಾತಂ ಗುಪ್ತೇಶ್ವರಮಿತಿ ಸ್ಮೃತಂ ।
ಘುಶ್ಮೇಶಾಚ್ಚೈವ ಯಜ್ಜಾತಂ ವ್ಯಾಘ್ರೇಶ್ವರಮಿತಿ ಸ್ಮೃತಂ ॥ ४२ ॥

ಜ್ಯೋತಿರ್ಲಿಂಗೋಪಲಿಂಗಾನಿ ಪ್ರೋಕ್ತಾನೀಹ ಮಯಾ ದ್ವಿಜಾಃ ।
ದರ್ಶನಾತ್ಪಾಪಹಾರೀಣಿ ಸರ್ವಕಾಮಪ್ರದಾನಿ ಚ ॥ ४३ ॥

ಏತಾನಿ ಸುಪ್ರಧಾನಾನಿ ಮುಖ್ಯತಾಂ ಹ ಗತಾನಿ ಚ ।
ಅನ್ಯಾನಿ ಚಾಪಿ ಮುಖ್ಯಾನಿ ಶ್ರೂಯಂತಾಮೃಷಿಸತ್ತಮಾಃ ॥ ॥ ४४ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಜ್ಯೋತಿರ್ಲಿಂಗತದುಪಲಿಂಗಮಾಹಾತ್ಮ್ಯವರ್ಣನಂ ನಾಮ
॥ ಪ್ರಥಮೋಽಧ್ಯಾಯಃ ॥

---

४२. ರಾಮೇಶ್ವರಕ್ಕೆ ಗುಪ್ತೇಶ್ವರನೂ, ಘುಶ್ಮೇಶಲಿಂಗಕ್ಕೆ ವ್ಯಾಘ್ರೇಶ್ವರನೂ ಉಪಲಿಂಗಗಳು.

४३-४४. ಎಲೈ ಬ್ರಾಹ್ಮಣರೇ! ಜ್ಯೋತಿರ್ಲಿಂಗಗಳಿಗೆ ಉಪಲಿಂಗಗಳನ್ನು ನಾನು ಹೇಳಿದೆನು. ಇವುಗಳನ್ನು ದರ್ಶನಮಾಡಿದ ಮಾತ್ರದಿಂದಲೇ ಪಾಪಗಳು ನಾಶವಾಗಿ ಇಷ್ಟಾರ್ಥಗಳು ಪ್ರಾಪ್ತವಾಗುವುವು. ಈ ಲಿಂಗಗಳೇ ಪ್ರಸಿದ್ಧವಾದುವೂ, ಮುಖ್ಯವೂ, ಆದುವುಗಳು. ಇನ್ನೂ ಇತರ ಮುಖ್ಯವಾದ ಲಿಂಗಗಳನ್ನು ಹೇಳುವೆನು, ಕೇಳಿರಿ.

ಇಲ್ಲಿಗೆ ಶಿವಮಹಾಪುರಾದ ನಾಲ್ಕನೆಯದಾದ ಕೋಟಿರುದ್ರಸಂಹಿತೆಯಲ್ಲಿ
ಜ್ಯೋತಿರ್ಲಿಂಗ ಮತ್ತು ಅವುಗಳ ಉಪಲಿಂಗಗಳ ಮಹಾತ್ಮೆಯೆಂಬ
ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ದ್ವಿತೀಯೋಽಧ್ಯಾಯಃ

ಸೂತ ಉವಾಚ

ಗಂಗಾತೀರೇ ಸುಪ್ರಸಿದ್ಧಾ ಕಾಶೀ ಖಲು ವಿಮುಕ್ತಿದಾ ।
ಸಾ ಹಿ ಲಿಂಗಮಯೀ ಜ್ಞೇಯಾ ಶಿವವಾಸಸ್ಥಲೀ ಸ್ಮೃತಾ ॥ ॥ ೧ ॥

ಲಿಂಗಂ ತತ್ರೈವ ಮುಖ್ಯಂ ಚ ಸಂಪ್ರೋಕ್ತಮವಿಮುಕ್ತಕಂ ।
ಕೃತ್ತಿವಾಸೇಶ್ವರಃ ಸಾಕ್ಷಾತ್ತತ್ತುಲ್ಯೋ ವೃದ್ಧಬಾಲಕಃ ॥ ॥ ೨ ॥

## ಎರಡನೆಯ ಅಧ್ಯಾಯವು

೧. ಸೂತನು ಹೇಳಿದನು.—ಗಂಗಾನದಿಯ ದಡದಲ್ಲಿ ಪ್ರಸಿದ್ಧವಾದ ಕಾಶೀ ಕ್ಷೇತ್ರವು ಮುಕ್ತಿಯನ್ನು ಕೊಡತಕ್ಕುದಾಗಿರುವುದು. ಅದು ಅನೇಕ ಲಿಂಗಗಳಿಂದ ಕೂಡಿ ಶಿವನ ವಾಸಸ್ಥಾನವಾಗಿರುವುದು.

೨-೩. ಆ ಕಾಶೀಕ್ಷೇತ್ರದಲ್ಲಿಯೇ ಅವಿಮುಕ್ತಕವೆಂಬ ಮುಖ್ಯವಾದ ಲಿಂಗವಿರುವುದು. ಅದಕ್ಕೆ ಸಮಾನವಾದ ಕೃತ್ತಿವಾಸೇಶ್ವರನೆಂದೂ, ವೃದ್ಧಬಾಲಕೇಶ್ವರ

ತಿಲಭಾಂಡೇಶ್ವರಶ್ಚೈವ ದಶಾಶ್ವಮೇಧ ಏವ ಚ ।
ಗಂಗಾಸಾಗರಸಂಯೋಗೇ ಸಂಗಮೇಶ ಇತಿ ಸ್ಮೃತಃ ॥ ॥ ೩ ॥

ಭೂತೇಶ್ವರೋ ಯಃ ಸಂಪ್ರೋಕ್ತೋ ಭಕ್ತಸರ್ವಾರ್ಥದಃ ಸದಾ ।
ನಾರೀಶ್ವರ ಇತಿ ಖ್ಯಾತಃ ಕೌಶಿಕ್ಯಾಃ ಸ ಸಮೀಪಗಃ ॥ ॥ ೪ ॥

ವರ್ತತೇ ಗಂಡಕೀತೀರೇ ಬಟುಕೇಶ್ವರ ಏವ ಸಃ ।
ಪೂರೇಶ್ವರ ಇತಿ ಖ್ಯಾತಃ ಫಲ್ಗುತೀರೇ ಸುಖಪ್ರದಃ ॥ ॥ ೫ ॥

ಸಿದ್ಧನಾಥೇಶ್ವರಶ್ಚೈವ ದರ್ಶನಾತ್ಸಿದ್ಧಿದೋ ನೃಣಾಂ ।
ದೂರೇಶ್ವರ ಇತಿ ಖ್ಯಾತಃ ಪತ್ತನೇ ಚೋತ್ತರೇ ತಥಾ ॥ ॥ ೬ ॥

ಶೃಂಗೇಶ್ವರಶ್ಚ ನಾಮ್ನಾ ವೈ ವೈದ್ಯನಾಥಸ್ತಥೈವ ಚ ।
ಜಪ್ಯೇಶ್ವರಸ್ತಥಾ ಖ್ಯಾತೋ ಯೋ ದಧೀಚಿರಣಸ್ಥಲೇ ॥ ॥ ೭ ॥

---

ನೆಂದೂ, ತಿಲಭಾಂಡೇಶ್ವರನೆಂದೂ, ದಶಾಶ್ವಮೇಧೇಶ್ವರನೆಂದೂ, ಗಂಗಾಸಾಗರ ಸಂಗಮದಲ್ಲಿ ಸಂಗಮೇಶ್ವರನೆಂದೂ ಲಿಂಗಗಳಿರುವುವು.

೪-೫. ಭಕ್ತರ ಸಕಲೇಷ್ಟಾರ್ಥಗಳನ್ನು ಕೊಡುವ ಭೂತೇಶ್ವರನೂ, ಕೌಶಿಕೀನದಿಯ ಸಮೀಪದಲ್ಲಿ ನಾರೀಶ್ವರನೂ, ಗಂಡಕೀನದಿಯ ತೀರದಲ್ಲಿ ಬಟುಕೇಶ್ವರನೂ, ಪಲ್ಗು ನದೀತೀರದಲ್ಲಿ ಪೂರೇಶ್ವರನೂ ಪ್ರಸಿದ್ಧವಾಗಿರುವ ಲಿಂಗಗಳು.

೬-೭. ಮನುಷ್ಯರಿಗೆ ದರ್ಶನಮಾತ್ರದಿಂದ ಸಿದ್ಧಿಯನ್ನು ಕೊಡುವ ಸಿದ್ಧ ನಾಥೇಶ್ವರನೂ, ಕಾಶೀಪಟ್ಟಣದ ಉತ್ತರಭಾಗದಲ್ಲಿ ದೂರೇಶ್ವರನೂ, ಶೃಂಗೇಶ್ವರನೂ, ವೈದ್ಯನಾಥೇಶ್ವರನೂ, ದಧೀಚಿಯುದ್ಧರಂಗದಲ್ಲಿ ಜಪ್ಯೇಶ್ವರನೂ ಪ್ರಸಿದ್ಧವಾದ ಲಿಂಗಗಳು.

ಗೋಪೇಶ್ವರಃ ಸಮಾಖ್ಯಾತೋ ರಂಗೇಶ್ವರ ಇತಿ ಸ್ಮೃತಃ ।
ವಾಮೇಶ್ವರಶ್ಚ ನಾಗೇಶಃ ಕಾಮೇಶೋ ವಿಮಲೇಶ್ವರಃ ॥ ॥ ೮ ॥

ವ್ಯಾಸೇಶ್ವರಶ್ಚ ವಿಖ್ಯಾತಃ ಸುಕೇಶಶ್ಚ ತಥೈವ ಹಿ ।
ಭಾಂಡೇಶ್ವರಶ್ಚ ವಿಖ್ಯಾತೋ ಹುಂಕಾರೇಶಸ್ತಥೈವ ಚ ॥ ॥ ೯ ॥

ಸುರೋಚನಶ್ಚ ವಿಖ್ಯಾತೋ ಭೂತೇಶ್ವರ ಇತಿ ಸ್ವಯಂ ।
ಸಂಗಮೇಶಸ್ತಥಾ ಪ್ರೋಕ್ತೋ ಮಹಾಪಾತಕನಾಶನಃ ॥ ॥ ೧೦ ॥

ತತಶ್ಚ ತಪ್ತಕಾತೀರೇ ಕುಮಾರೇಶ್ವರ ಏವ ಚ ।
ಸಿದ್ಧೇಶ್ವರಶ್ಚ ವಿಖ್ಯಾತಃ ಸೇನೇಶಶ್ಚ ತಥಾ ಸ್ಮೃತಃ ॥ ॥ ೧೧ ॥

ರಾಮೇಶ್ವರ ಇತಿ ಪ್ರೋಕ್ತೋ ಕುಂಭೇಶಶ್ಚ ಪರೋ ಮತಃ ।
ನಂದೀಶ್ವರಶ್ಚ ಪುಂಜೇಶಃ ಪೂರ್ಣಾಯಾಂ ಪೂರ್ಣಕಸ್ತಥಾ ॥ ॥ ೧೨ ॥

ಬ್ರಹ್ಮೇಶ್ವರಃ ಪ್ರಯಾಗೇ ಚ ಬ್ರಹ್ಮಣಾ ಸ್ಥಾಪಿತಃ ಪುರಾ ।
ದಶಾಶ್ವಮೇಧತೀರ್ಥೇ ಹಿ ಚತುರ್ವರ್ಗಫಲಪ್ರದಃ ॥ ॥ ೧೩ ॥

ತಥಾ ಸೋಮೇಶ್ವರಸ್ತತ್ರ ಸರ್ವಾಪದ್ವಿನಿವಾರಕಃ ।
ಭಾರದ್ವಾಜೇಶ್ವರಶ್ಚೈವ ಬ್ರಹ್ಮವರ್ಚಃಪ್ರವರ್ಧಕಃ ॥ ॥ ೧೪ ॥

---

೮-೧೦. ಗೋಪೇಶ್ವರ, ರಂಗೇಶ್ವರ, ವಾಮೇಶ್ವರ, ನಾಗೇಶ್ವರ, ಕಾಮೇಶ್ವರ, ವಿಮಲೇಶ್ವರ, ವ್ಯಾಸೇಶ್ವರ, ಸುಕೇಶೇಶ್ವರ, ಭಾಂಡೇಶ್ವರ, ಹುಂಕಾರೇಶ್ವರ, ಸುಲೋಚನೇಶ್ವರ, ಭೂತೇಶ್ವರ, ಸಂಗಮೇಶ್ವರ ಎಂಬ ಪ್ರಸಿದ್ಧಲಿಂಗಗಳಿರುವುವು.

೧೧-೧೨. ತಪ್ತಕಾನದಿಯ ತೀರದಲ್ಲಿ ಕುಮಾರೇಶ್ವರನೂ, ಸಿದ್ಧೇಶ್ವರನೂ, ಸೇನೇಶನೂ, ರಾಮೇಶ್ವರನೂ, ಕುಂಭೇಶನೂ, ನಂದೀಶ್ವರನೂ, ಪೂಜೇಶನೂ ಪೂರ್ಣನದಿಯ ದಡದಲ್ಲಿ ಪೂರ್ಣಕೇಶ್ವರನೂ ಪ್ರಸಿದ್ಧ ಲಿಂಗಗಳು.

೧೩-೧೬. ಪ್ರಯಾಗಕ್ಷೇತ್ರದಲ್ಲಿ ಬ್ರಹ್ಮನು ಸ್ಥಾಪಿಸಿದ ಬ್ರಹ್ಮೇಶ್ವರನೂ, ದಶಾಶ್ವಮೇಧತೀರ್ಥದಲ್ಲಿ ಚತುರ್ವಿಧಪುರುಷಾರ್ಥಗಳನ್ನು ಕೊಡುವ, ಸಮಸ್ತ ವಿಪತ್ತು

ಶೂಲಟಂಕೇಶ್ವರಃ ಸಾಕ್ಷಾತ್ಕಾಮನಾಪ್ರದ ಈರಿತಃ ।
ಮಾಧವೇಶಶ್ಚ ತತ್ರೈವ ಭಕ್ತರಕ್ಷಾವಿಧಾಯಕಃ ॥ ॥ ೧೫ ॥

ನಾಗೇಶಾಖ್ಯಃ ಪ್ರಸಿದ್ಧೋ ಹಿ ಸಾಕೇತನಗರೇ ದ್ವಿಜಾಃ ।
ಸೂರ್ಯವಂಶೋದ್ಭವಾನಾಂ ಚ ವಿಶೇಷೇಣ ಸುಖಪ್ರದಃ ॥ ॥ ೧೬ ॥

ಪುರುಷೋತ್ತಮಪುರ್ಯಾಂ ತು ಭುವನೇಶಸ್ಸುಸಿದ್ಧಿದಃ ।
ಲೋಕೇಶಶ್ಚ ಮಹಾಲಿಂಗಃ ಸರ್ವಾನಂದಪ್ರದಾಯಕಃ ॥ ॥ ೧೭ ॥

ಕಾಮೇಶ್ವರಃ ಶಂಭುಲಿಂಗೋ ಗಂಗೇಶಃ ಪರಶುದ್ಧಿಕೃತ್ ।
ಶಕ್ರೇಶ್ವರಃ ಶುಕ್ರಸಿದ್ಧೋ ಲೋಕಾನಾಂ ಹಿತಕಾಮ್ಯಯಾ ॥ ॥ ೧೮ ॥

ತಥಾ ವಟೇಶ್ವರಃ ಖ್ಯಾತಃ ಸರ್ವಕಾಮಫಲಪ್ರದಃ ।
ಸಿಂಧುತೀರೇ ಕಪಾಲೇಶೋ ವಕ್ರೇಶಃ ಸರ್ವಪಾಪಹಾ ॥ ॥ ೧೯ ॥

ಧೌತಪಾಪೇಶ್ವರಃ ಸಾಕ್ಷಾದಂಶೇನ ಪರಮೇಶ್ವರಃ ।
ಭೀಮೇಶ್ವರ ಇತಿ ಪ್ರೋಕ್ತಃ ಸೂರ್ಯೇಶ್ವರ ಇತಿ ಸ್ಮೃತಃ ॥ ॥ ೨೦ ॥

---

ಗಳನ್ನು ನಾಶಮಾಡುವ ಸೋಮೇಶ್ವರನೂ, ಬ್ರಹ್ಮವರ್ಚಸ್ಸನ್ನುಂಟುಮಾಡುವ ಭಾರದ್ವಾಜೇಶ್ವರನೂ, ಇಷ್ಟಾರ್ಥಗಳನ್ನು ಕೊಡುವ ಶೂಲಟಂಕೇಶ್ವರೂ, ಭಕ್ತರನ್ನು ರಕ್ಷಿಸುವ ಮಾಧವೇಶ್ವರನೂ, ಅಯೋಧ್ಯಾನಗರದಲ್ಲಿ ಸೂರ್ಯವಂಶದಲ್ಲಿ ಹುಟ್ಟಿದ ರಾಜರಿಗೆ ವಿಶೇಷವಾಗಿ ಸುಖವನ್ನುಂಟುಮಾಡುವ ನಾಗೇಶನೂ ಪ್ರಸಿದ್ಧವಾದ ಲಿಂಗಗಳು.

೧೭-೨೦. ಪುರುಷೋತ್ತಮಪುರಿಯಲ್ಲಿ ಸಿದ್ಧಿಯನ್ನು ಕೊಡುವ ಭುವನೇಶ್ವರನೂ, ಸಮಸ್ತ ಆನಂದಗಳನ್ನೂ ಉಂಟುಮಾಡುವ ಲೋಕೇಶ್ವರನೂ, ಕಾಮೇಶ್ವರನೂ, ಶಂಭುಲಿಂಗನೂ, ಶುದ್ಧಿಯನ್ನುಂಟುಮಾಡುವ ಗಂಗೇಶನೂ, ಲೋಕಹಿತಕ್ಕಾಗಿ ಶುಕ್ರನಿಗೆ ಸಿದ್ಧಿಯನ್ನು ಕೊಟ್ಟ ಶುಕ್ರೇಶ್ವರನೂ, ಸಕಲವಾದ ಇಷ್ಟಾರ್ಥಗಳನ್ನು ಕೊಡುವ ವಟೇಶ್ವರನೂ, ಸಮುದ್ರತೀರದಲ್ಲಿ ಕಪಾಲೇಶ್ವರನೂ, ಪಾಪಗಳನ್ನೆಲ್ಲ ಪರಿಹರಿಸುವ ವಕ್ರೇಶನೂ ಸಾಕ್ಷಾತ್ಪರಮೇಶ್ವರನ ಅಂಶವಾದ ಧೂತಪಾಪೇಶ್ವರನೂ, ಭೀಮೇಶ್ವರನೂ, ಸೂರ್ಯೇಶ್ವರನೂ ಪ್ರಸಿದ್ಧವಾದ ಲಿಂಗಗಳು.

ನಂದೇಶ್ವರಶ್ಚ ವಿಜ್ಞೇಯೋ ಜ್ಞಾನದೋ ಲೋಕಪೂಜಿತಃ ।
ನಾಕೇಶ್ವರೋ ಮಹಾಪುಣ್ಯಸ್ತಥಾ ರಾಮೇಶ್ವರಃ ಸ್ಮೃತಃ । ॥ ೨೧ ॥

ವಿಮಲೇಶ್ವರನಾಮಾ ವೈ ಕಂಟಕೇಶ್ವರ ಏವ ಚ ।
ಪೂರ್ಣಸಾಗರಸಂಯೋಗೇ ಧರ್ತುಕೇಶಸ್ತಥೈವ ಚ ॥ ॥ ೨೨ ॥

ಚಂದ್ರೇಶ್ವರಶ್ಚ ವಿಜ್ಞೇಯಶ್ಚಂದ್ರಕಾಂತಿಫಲಪ್ರದಃ ।
ಸರ್ವಕಾಮಪ್ರದಶ್ಚೈವ ಸಿದ್ಧೇಶ್ವರ ಇತಿ ಸ್ಮೃತಃ ॥ ॥ ೨೩ ॥

ಬಿಲ್ವೇಶ್ವರಶ್ಚ ವಿಖ್ಯಾತಶ್ಚಾಂಧಕೇಶಸ್ತಥೈವ ಚ ।
ಯತ್ರ ವಾ ಅಂಧಕೋ ದೈತ್ಯಃ ಶಂಕರೇಣ ಹತಃ ಪುರಾ ॥ ॥ ೨೪ ॥

ಅಯಂ ಸ್ವರೂಪಮಂಶೇನ ಧೃತ್ವಾ ಶಂಭುಃ ಪುನಃ ಸ್ಥಿತಃ ।
ಶರಣೇಶ್ವರವಿಖ್ಯಾತೋ ಲೋಕಾನಾಂ ಸುಖದಃ ಸದಾ ॥ ॥ ೨೫ ॥

ಕರ್ದಮೇಶಃ ಪರಃ ಪ್ರೋಕ್ತಃ ಕೋಟೇಶಶ್ಚಾರ್ಬುದಾಚಲೇ ।
ಅಚಲೇಶಶ್ಚ ವಿಖ್ಯಾತೋ ಲೋಕಾನಾಂ ಸುಖದಃ ಸದಾ ॥ ॥ ೨೬ ॥

ನಾಗೇಶ್ವರಸ್ತು ಕೌಶಿಕ್ಯಾಸ್ತೀರೇ ತಿಷ್ಠತಿ ನಿತ್ಯಶಃ ।
ಅನಂತೇಶ್ವರಸಂಜ್ಞಶ್ಚ ಕಲ್ಯಾಣಶುಭಭಾಜನಃ ॥ ॥ ೨೭ ॥

---

೨೧-೨೪. ಜ್ಞಾನವನ್ನು ಕೊಡುವ ಸಮಸ್ತ ಜನರೂ ಪೂಜಿಸುವ ನಂದೇಶ್ವರನೂ, ಮಹಾಪುಣ್ಯಫಲವನ್ನು ಕೊಡುವ ನಾಕೇಶ್ವರನೂ, ರಾಮೇಶ್ವರನೂ, ವಿಮಲೇಶ್ವರನೂ, ಕಂಟಕೇಶ್ವರನೂ, ಪೂರ್ಣನದಿಯು ಸಾಗರಕ್ಕೆ ಸೇರುವ ಸ್ಥಳದಲ್ಲಿ ಧರ್ತುಕೇಶ್ವರನೂ, ಚಂದ್ರನಂತೆ ಕಾಂತಿಯನ್ನುಂಟುಮಾಡುವ ಚಂದ್ರೇಶ್ವರನೂ, ಸಮಸ್ತ ಕಾಮಫಲಗಳನ್ನೂ ಕೊಡುವ ಸಿದ್ಧೇಶ್ವರನೂ, ಬಿಲ್ವೇಶ್ವರನೂ, ಹಿಂದೆ ಶಂಕರನು ಅಂಧಕಾಸುರನನ್ನು ಸಂಹರಿಸಿದ ಸ್ಥಳದಲ್ಲಿರುವ ಅಂಧಕೇಶ್ವರನೂ ಪ್ರಸಿದ್ಧ ಲಿಂಗಗಳು.

೨೫-೨೭. ಪ್ರಪಂಚಕ್ಕೆ ಯಾವಾಗಲೂ ಸುಖವನ್ನುಂಟುಮಾಡುವ ಶರಣೇಶ್ವರನೂ, ಶ್ರೇಷ್ಠನಾದ ಕರ್ದಮೇಶನೂ, ಅರ್ಬುದಾಚಲದಲ್ಲಿ ಕೋಟೇಶನೂ ಲೋಕ ಸುಖವನ್ನುಂಟುಮಾಡುವ ಅಚಲೇಶನೂ, ಕೌಶಿಕೀನದಿಯ ತೀರದಲ್ಲಿ ನಿರಂತರವಾಗಿ

ಯೋಗೇಶ್ವರಶ್ಚ ವಿಖ್ಯಾತೋ ವೈದ್ಯನಾಥೇಶ್ವರಸ್ತಥಾ ।
ಕೋಟೀಶ್ವರಶ್ಚ ವಿಜ್ಞೇಯಃ ಸಪ್ತೇಶ್ವರ ಇತಿ ಸ್ಮೃತಃ ॥ ॥ ೨೮ ॥

ಭದ್ರೇಶ್ವರಶ್ಚ ವಿಖ್ಯಾತೋ ಭದ್ರನಾಮಾ ಹರಃ ಸ್ವಯಂ ।
ಚಂಡೀಶ್ವರಸ್ತಥಾ ಪ್ರೋಕ್ತಃ ಸಂಗಮೇಶ್ವರ ಏವ ಚ ॥ ॥ ೨೯ ॥

ಪೂರ್ವಸ್ಯಾಂ ದಿಶಿ ಜಾತಾನಿ ಶಿವಲಿಂಗಾನಿ ಯಾನಿ ಚ ।
ಸಾಮಾನ್ಯಾನ್ಯಪಿ ಚಾನ್ಯಾನಿ ತಾನೀಹ ಕಥಿತಾನಿ ತೇ ॥ ॥ ೩೦ ॥

ದಕ್ಷಿಣಸ್ಯಾಂ ದಿಶಿ ತಥಾ ಶಿವಲಿಂಗಾನಿ ಯಾನಿ ಚ ।
ಸಂಜಾತಾನಿ ಮುನಿಶ್ರೇಷ್ಠಾ ತಾನಿ ತೇ ಕಥಯಾಮ್ಯಹಂ ॥ ॥ ೩೧ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಶಿವಲಿಂಗಮಾಹಾತ್ಮ್ಯವರ್ಣನಂ ನಾಮ
॥ ದ್ವಿತೀಯೋಽಧ್ಯಾಯಃ ॥

---

ವಾಸಮಾಡುವ ನಾಗೇಶ್ವರನೂ, ಮಂಗಳವನ್ನುಂಟುಮಾಡುವ ಅನಂತೇಶ್ವರನೂ, ಯೋಗೇಶ್ವರನೂ, ವೈದ್ಯನಾಥೇಶ್ವರನೂ, ಕೋಟೀಶ್ವರನೂ, ಸಪ್ತೇಶ್ವರನೂ, ಭದ್ರೇಶ್ವರನೂ, ಚಂಡೀಶ್ವರನೂ, ಸಂಗಮೇಶ್ವರನೂ, ಪ್ರಸಿದ್ಧವಾದ ಲಿಂಗಗಳು.

೩೦. ಕಾಶೀಪಟ್ಟಣದ ಪೂರ್ವದಿಕ್ಕಿನಲ್ಲಿರುವ ಸಾಮಾನ್ಯವಾಗಿ ಪ್ರಸಿದ್ಧವಾದ ಈ ಲಿಂಗಗಳನ್ನೆಲ್ಲಾ ನಿಮಗೆ ಹೇಳಿರುವೆನು.

೩೧. ಇನ್ನು ದಕ್ಷಿಣದಿಕ್ಕಿನಲ್ಲಿರುವ ಲಿಂಗಗಳನ್ನು ನಿಮಗೆ ಹೇಳುವೆನು ಕೇಳಿ.

ಇಲ್ಲಿಗೆ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಶಿವಲಿಂಗಮಹಾತ್ಮ್ಯವರ್ಣನೆಯೆಂಬ ಎರಡನೆಯ
ಅಧ್ಯಾಯವು ಮುಗಿದುದು.

|| ಶ್ರೀ ||

—

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ತೃತೀಯೋಽಧ್ಯಾಯಃ

|| ಸೂತ ಉವಾಚ ||

ಬ್ರಹ್ಮಪುರ್ಯಾಂ ಚಿತ್ರಕೂಟೇ ಲಿಂಗಂ ಮತ್ತಗಜೇಂದ್ರಕಂ ||
ಬ್ರಹ್ಮಣಾ ಸ್ಥಾಪಿತಂ ಪೂರ್ವಂ ಸರ್ವಕಾಮಸಮೃದ್ಧಿದಂ || || ೧ ||

ತತ್ಪೂರ್ವದಿಶಿ ಕೋಟೀಶಂ ಲಿಂಗಂ ಸರ್ವವರಪ್ರದಂ |
ಗೋದಾವರ್ಯಾಃ ಪಶ್ಚಿಮೇ ತಲ್ಲಿಂಗಂ ಪಶುಪತಿನಾಯಕಂ || || ೨ ||

---

## ಮೂರನೆಯ ಅಧ್ಯಾಯವು

೧-೨. ಸೂತನು ಹೇಳಿದನು:—ಬ್ರಹ್ಮಪುರಿಯ ಸಮೀಪದಲ್ಲಿರುವ ಚಿತ್ರಕೂಟವೆಂಬ ಪರ್ವತದಲ್ಲಿ ಮತ್ತಗಜೇಂದ್ರವೆಂಬ ಲಿಂಗವನ್ನು ಬ್ರಹ್ಮನು ಪೂರ್ವದಲ್ಲಿ ಸ್ಥಾಪಿಸಿದನು. ಆ ಲಿಂಗವು ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುದು. ಅದರ ಪೂರ್ವದಿಕ್ಕಿನಲ್ಲಿ ಸಕಲವರಗಳನ್ನು ಕೊಡುವ ಕೋಟೀಶಲಿಂಗವೂ, ಗೋದಾವರೀನದಿಯ ಪಶ್ಚಿಮದಿಕ್ಕಿನಲ್ಲಿ ಪಶುಪತಿನಾಯಕನೆಂಬ ಲಿಂಗವೂ ಪ್ರಸಿದ್ಧವಾಗಿರುವುವು.

ದಕ್ಷಿಣಸ್ಯಾಂ ದಿಶಿ ಕಶ್ಚಿದತ್ರೀಶ್ವರ ಇತಿ ಸ್ವಯಂ ।
ಲೋಕಾನಾಮುಪಕಾರಾರ್ಥಮನಸೂಯಾಸುಖಾಯ ಚ ॥ ॥ ೩ ॥

ಪ್ರಾದುರ್ಭೂತಃ ಸ್ವಯಂ ದೇವೋ ಹ್ಯನಾವೃಷ್ಟ್ಯಾಮಜೀವಯತ್ ।
ಸ ಏವ ಶಂಕರಃ ಸಾಕ್ಷಾದಂಶೇನ ಸ್ವಯಮೇವ ಹಿ ॥ ॥ ೪ ॥

ಋಷಯ ಊಚುಃ

ಸೂತ ಸೂತ ಮಹಾಭಾಗ ಕಥಮತ್ರೀಶ್ವರೋ ಹರಃ ।
ಉತ್ಪನ್ನಃ ಪರಮೋ ದಿವ್ಯಸ್ತತ್ತ್ವಂ ಕಥಯ ಸುವ್ರತ ॥ ॥ ೫ ॥

ಸೂತ ಉವಾಚ

ಸಾಧು ಪೃಷ್ಟಮೃಷಿಶ್ರೇಷ್ಠಾಃ ಕಥಯಾಮಿ ಕಥಾಂ ಶುಭಾಂ ।
ಯಾಂ ಕಥಾಂ ಸತತಂ ಶ್ರುತ್ವಾ ಪಾತಕೈರ್ಮುಚ್ಯತೇ ಧ್ರುವಂ ॥ ॥ ೬ ॥

---

೩-೪. ದಕ್ಷಿಣದಿಕ್ಕಿನಲ್ಲಿ ಪ್ರಪಂಚಕ್ಕೆ ಉಪಕಾರವನ್ನು ಮಾಡಬೇಕೆಂದೂ, ಅನುಸೂಯಾದೇವಿಗೆ ಸುಖವನ್ನುಂಟುಮಾಡಬೇಕೆಂದೂ ಅತ್ರೀಶ್ವರನೆಂಬ ಹೆಸರಿನಿಂದ ಒಂದು ಲಿಂಗವು ತಾನಾಗಿ ವ್ಯಕ್ತವಾಯಿತು. ಅನಾವೃಷ್ಟಿಯಿಂದ ನಾಶವಾಗುವ ಜೀವರುಗಳನ್ನು ತಾನೇ ಬದುಕಿಸುತ್ತ ತನ್ನ ಅಂಶದಿಂದ ಶಿವನು ಆ ಲಿಂಗದಲ್ಲಿ ಪ್ರಕಟವಾದನು.

೫. ಋಷಿಗಳು ಕೇಳಿದರು—ಎಲೈ ಮಹಾಮಹಿಮನಾದ ಸೂತನೇ, ಶಿವನು ಅತ್ರೀಶ್ವರನಾಗಿ ಹೇಗೆ ಹುಟ್ಟಿದನು ? ಅದರ ತತ್ವವನ್ನು ನಮಗೆ ಹೇಳು ಎನ್ನಲು,

೬. ಸೂತನು ಹೇಳಿದನು :—ಮಹಾತ್ಮರಾದ ಮುನಿಗಳೇ ! ನೀವು ಒಳ್ಳೆಯ ಪ್ರಶ್ನೆಯನ್ನು ಕೇಳಿದಿರಿ, ಯಾವ ಕಥೆಯನ್ನು ಕೇಳಿದರೆ ಸಮಸ್ತ ಪಾಪಗಳೂ ಬಿಡುಗಡೆಯಾಗುವುವೋ ಅಂತಹ ಮಂಗಳಕರವಾದ ಕಥೆಯನ್ನು ಹೇಳುವೆನು.

ದಕ್ಷಿಣಸ್ಯಾಂ ದಿಶಿ ಮಹತ್ಕಾಮದಂ ನಾಮ ಯದ್ವನಂ ।
ಚಿತ್ರಕೂಟಸಮೀಪೇಽಸ್ತಿ ತಪಸಾಂ ಹಿತದಂ ಸತಾಂ ॥ ॥ ೭ ॥

ತತ್ರ ಚ ಬ್ರಹ್ಮಣಃ ಪುತ್ರೋ ಹ್ಯತ್ರಿನಾಮಾ ಋಷಿಃ ಸ್ವಯಂ ।
ತಪಸ್ತೇಪೇಽತಿಕಠಿನಮನಸೂಯಾಸಮನ್ವಿತಃ ॥ ॥ ೮ ॥

ಪೂರ್ವಂ ಕದಾಚಿತ್ತತ್ರೈವ ಹ್ಯನಾವೃಷ್ಟಿರಭೂನ್ಮುನೇ ।
ದುಃಖದಾ ಪ್ರಾಣಿನಾಂ ದೈವಾದ್ವಿಕಟಾ ಶತವಾರ್ಷಿಕೀ ॥ ॥ ೯ ॥

ವೃಕ್ಷಾಶ್ಶುಷ್ಕಾಸ್ತದಾ ಸರ್ವೇ ಪಲ್ಲವಾನಿ ಫಲಾನಿ ಚ ।
ನಿತ್ಯಾರ್ಥಂ ನ ಜಲಂ ಕ್ವಾಪಿ ದೃಷ್ಟಮಾಸೀನ್ಮುನೀಶ್ವರಾಃ ॥ ॥ ೧೦ ॥

ಆರ್ದ್ರೀಭಾವೋ ನ ಲಭ್ಯೇತ ಖರಾ ವಾತಾ ದಿಶೋ ದಶ ।
ಹಾಹಾಕಾರೋ ಮಹಾನಾಸೀತ್ಪೃಥಿವ್ಯಾಂ ದುಃಖದೋಽತಿ ಹಿ ॥ ॥ ೧೧ ॥

ಸಂವರ್ತಂ ಚೈವ ಭೂತಾನಾಂ ದೃಷ್ಟ್ವಾಽತ್ರಿಗೃಹಿಣೀ ಪ್ರಿಯಾ ।
ಸಾಧ್ವೀ ಚೈವಾಬ್ರವೀದತ್ರಿಂ ಮಯಾ ದುಃಖಂ ನ ಸಹ್ಯತೇ ॥ ॥ ೧೨ ॥

---

೭-೮. ದಕ್ಷಿಣದಿಕ್ಕಿನಲ್ಲಿ ವಿಸ್ತಾರವಾದ ಕೌಮುದವೆಂಬ ವನವಿರುವುದು. ಅದು ಚಿತ್ರಕೂಟಪರ್ವತದ ಸಮೀಪದಲ್ಲಿ ಸಜ್ಜನರ ತಪಸ್ಸಿಗೆ ಹಿತಕರವಾದ ಸ್ಥಳವಾಗಿರುವುದು. ಅಲ್ಲಿ ಬ್ರಹ್ಮನ ಮಗನಾದ ಅತ್ರಿಯೆಂಬ ಋಷಿಯು ತನ್ನ ಹೆಂಡತಿಯಾದ ಅನುಸೂಯೆಯೊಡನೆ ಕಠಿನವಾದ ತಪಸ್ಸನ್ನು ಮಾಡುತ್ತಿದ್ದನು.

೯-೧೨. ಪೂರ್ವದಲ್ಲಿ ಒಂದಾನೊಂದು ಕಾಲದಲ್ಲಿ ಆ ಅತ್ರಿಮುನಿಯ ಆಶ್ರಮದಲ್ಲಿ ಪ್ರಾಣಿಗಳಿಗೆ ದುಃಖವನ್ನು ಕೊಡುವ ನೂರು ವರ್ಷ ಮಳೆಯಿಲ್ಲದ ಕ್ಷಾಮಕಾಲವು ದೈವಯೋಗದಿಂದ ಪ್ರಾಪ್ತವಾಯಿತು. ಆಗ ಎಲ್ಲಾ ಮರಗಳೂ ಒಣಗಿ ಹೋದುವು. ಅವುಗಳಲ್ಲಿ ಚಿಗುರಾಗಲಿ, ಕಾಯಾಗಲಿ ಹುಟ್ಟಲಿಲ್ಲ. ನಿತ್ಯಕರ್ಮಕ್ಕಾಗಿ ಎಲ್ಲಿಯೂ ನೀರು ಸಿಕ್ಕುತ್ತಿರಲಿಲ್ಲ. ಹತ್ತು ದಿಕ್ಕುಗಳಿಂದಲೂ ತೇವವಿಲ್ಲದ ಬಿಸಿಯಾದ ಗಾಳಿಯು ಬೀಸುತ್ತಿದ್ದಿತು. ಭೂಮಿಯಲ್ಲಿ ಪ್ರಾಣಿಗಳಿಗೆ ಅತ್ಯಂತ ದುಃಖವು ಪ್ರಾಪ್ತವಾಗಿ ಹಾಹಾಕಾರವುಂಟಾಯಿತು. ಪ್ರಾಣಿಗಳ ಪ್ರಳಯವನ್ನು ನೋಡಿ ಪತಿವ್ರತೆಯಾದ ಅತ್ರಿಪತ್ನಿಯು ಪತಿಯನ್ನು ಕುರಿತು ನಾನು ಈ ದುಃಖವನ್ನು ನೋಡಿ ಸಹಿಸಲಾರನೆಂದಳು.

ಸಮಾಧೌ ಚ ವಿಲೀನೋऽಭೂದಾಸನೇ ಸಂಸ್ಥಿತಃ ಸ್ವಯಂ ।
ಪ್ರಾಣಾಯಾಮಂ ತ್ರಿರಾವೃತ್ತ್ಯಾ ಕೃತ್ವಾ ಮುನಿವರಸ್ತದಾ ॥ ॥ ೧೩ ॥

ಧ್ಯಾಯತಿ ಸ್ಮ ಪರಂ ಜ್ಯೋತಿರಾತ್ಮಸ್ಥಮಾತ್ಮನಾ ಚ ಸಃ ।
ಅತ್ರಿರ್ಮುನಿವರೋ ಜ್ಞಾನೀ ಶಂಕರಂ ನಿರ್ವಿಕಾರಕಂ ॥ ॥ ೧೪ ॥

ಸ್ವಾಮಿನಿ ಧ್ಯಾನಲೀನೇ ಚ ಶಿಷ್ಯಾಸ್ತೇ ದೂರಕೋ ಗತಾಃ ।
ಅನ್ನಂ ವಿನಾ ತದಾ ತೇ ತು ಮುಕ್ತ್ವಾ ತಂ ಸ್ವಗುರುಂ ಮುನಿಂ ॥ ॥ ೧೫ ॥

ಏಕಾಕಿನೀ ತದಾ ಜಾತಾ ಹ್ಯಾನಸೂಯಾ ಪತಿವ್ರತಾ ॥ ೧೬ ॥

ಸಿಷೇವೇ ಸಾ ಚ ಸತತಂ ತಂ ಮುದಾ ಮುನಿಸತ್ತಮಂ ।
ಪಾರ್ಥಿವಂ ಸುಂದರಂ ಕೃತ್ವಾ ಮಂತ್ರೇಣ ವಿಧಿಪೂರ್ವಕಂ ॥ ೧೭ ॥

ಮಾನಸೈರುಪಚಾರೈಶ್ಚ ಪೂಜಯಾಮಾಸ ಶಂಕರಂ ।
ತುಷ್ಟಾವ ಶಂಕರಂ ಭಕ್ತ್ಯಾ ಸಂಸೇವಿತ್ವಾ ಮುಹುರ್ಮುಹುಃ ॥ ೧೮ ॥

---

೧೩-೧೪. ಆಗ ಮಹಾಜ್ಞಾನಿಯಾದ ಅತ್ರಿಮಹಾಮುನಿಯು ಆಸನದಲ್ಲಿ ಕುಳಿತು ಮೂರಾವರ್ತಿ ಪ್ರಾಣಾಯಾಮವನ್ನು ಮಾಡಿ ಸಮಾಧಿಲೀನನಾಗಿ ತನ್ನ ಮನಸ್ಸಿನಲ್ಲಿಯೇ ಇರುವ ಪರಮಪ್ರಕಾಶ ಸ್ವರೂಪನೂ, ನಿರ್ವಿಕಾರ ಸ್ವರೂಪನೂ ಆದ ಶಂಕರನನ್ನು ಧ್ಯಾನಮಾಡುತ್ತಿದ್ದನು.

೧೫-೧೮. ತಮ್ಮ ಗುರುವು ಧ್ಯಾನಾಸಕ್ತನಾಗುತ್ತಲೂ ಶಿಷ್ಯರೆಲ್ಲರೂ ಅನ್ನವಿಲ್ಲದೆ ತಮ್ಮ ಗುರುವನ್ನು ಬಿಟ್ಟು ದೂರದೇಶಕ್ಕೆ ಹೊರಟುಹೋದರು. ಪತಿವ್ರತೆಯಾದ ಆ ಅನುಸೂಯೆಯು ಒಬ್ಬಳೇ ಅಲ್ಲಿ ನಿಂತಳು. ಅವಳು. ಆ ಮುನಿಶ್ರೇಷ್ಠನನ್ನು ಯಾವಾಗಲೂ ಸಂತೋಷದಿಂದ ಸೇವಿಸುತ್ತಿದ್ದಳು. ಮಣ್ಣಿನಲ್ಲಿ ಸುಂದರವಾದ ಲಿಂಗವನ್ನು ಮಾಡಿ ವಿಧಿಪೂರ್ವಕವಾಗಿ ಪಂಚಾಕ್ಷರಮಂತ್ರದಿಂದ ಮನಸ್ಸಿನಲ್ಲಿ ಕಲ್ಪಿಸಿದ ಉಪಚಾರಗಳಿಂದ ಶಿವನನ್ನು ಪೂಜಿಸಿದಳು. ಭಕ್ತಿಯಿಂದ ಶಿವನನ್ನು ಅನೇಕಬಾರಿ ಸ್ತೋತ್ರಮಾಡಿದಳು.

ಬದ್ಧಾಂಜಲಿಪುಟಾ ಭೂತ್ವಾ ಪ್ರಕ್ರಮ್ಯ ಸ್ವಾಮಿನಂ ಶಿವಂ ।
ದಂಡವತ್ಪ್ರಣಿಪಾತೇನ ಪ್ರತಿಪ್ರಕ್ರಮಣಂ ತದಾ ೧೯ ॥

ಚಕಾರ ಸುಚರಿತ್ರಾ ಸಾನಸೂಯಾ ಮುನಿಕಾಮಿನೀ ।
ದೈತ್ಯಾಶ್ಚ ದಾನವಾಃ ಸರ್ವೇ ದೃಷ್ಟ್ವಾ ತು ಸುಂದರೀಂ ತದಾ ॥ ೨೦ ॥

ವಿಹ್ವಲಾಶ್ಚಾಭವಂಸ್ತತ್ರ ತೇಜಸಾ ದೂರತಃ ಸ್ಥಿತಾಃ ।
ಅಗ್ನಿಂ ದೃಷ್ಟ್ವಾ ಯಥಾ ದೂರೇ ವರ್ತಂತೇ ತದ್ವದೇವ ಹಿ ॥ ೨೧ ॥

ತಥೈನಾಂ ಚ ತದಾ ದೃಷ್ಟ್ವಾ ನಾಯಾಂತೀಹ ಸಮೀಪಗಾಃ ।
ಅತ್ರೇಶ್ಚ ತಪಸಶ್ಚೈವಾನಸೂಯಾಶಿವಸೇವನಂ ॥ ೨೨ ॥

ವಿಶಿಷ್ಯತೇ ಸ್ಮ ವಿಪ್ರೇಂದ್ರಾ ಮನೋವಾಕ್ಕಾಯಸಂಸ್ಕೃತಂ ।
ತಾವತ್ಕಾಲಂ ತು ಸಾ ದೇವೀ ಪರಿಚರ್ಯಾಂ ಚಕಾರ ಹ ॥ ೨೩ ॥

ಯಾವತ್ಕಾಲಂ ಮುನಿವರಃ ಪ್ರಾಣಾಯಾಮಪರಾಯಣಃ ।
ತೌ ದಂಪತೀ ತದಾ ತತ್ರ ಸ್ವಸ್ವಕಾರ್ಯಪರಾಯಣೌ ॥ ೨೪ ॥

ಸಂಸ್ಥಿತೌ ಮುನಿಶಾರ್ದೂಲ ನಾನ್ಯಃ ಕಶ್ಚಿತ್ಪರಃ ಸ್ಥಿತಃ ।
ಏವಂ ಜಾತೇ ತದಾ ಕಾಲೇ ಹ್ಯತ್ರಿಶ್ಚ ಋಷಿಸತ್ತಮಃ ॥ ೨೫ ॥

---

೧೯-೨೧. ಉತ್ತಮವಾದ ನಡತೆಯುಳ್ಳ ಮುನಿಪತ್ನಿಯಾದ ಆ ಅನುಸೂಯೆಯು ಕೈಗಳನ್ನು ಜೋಡಿಸಿ ಶಿವಲಿಂಗವನ್ನೂ, ತನ್ನ ಪತಿಯನ್ನೂ ಪ್ರದಕ್ಷಿಣೆ ಮಾಡಿ ಸಾಷ್ಟಾಂಗ-ನಮಸ್ಕಾರಗಳನ್ನು ಮಾಡುತ್ತಿದ್ದಳು. ದೈತ್ಯರೂ, ದಾನವರೂ ಸುಂದರಿಯಾದ ಅನುಸೂಯೆಯನ್ನು ನೋಡಿ ಕಾಮಮೋಹಿತರಾಗಿ ಅವಳ ತೇಜಸ್ಸಿಗೆ ಹೆದರಿ, ಬೆಂಕಿಯನ್ನು ಕಂಡು ದೂರದಲ್ಲಿರುವಂತೆ ಅವಳ ಹತ್ತಿರಕ್ಕೆ ಬರದೆ ದೂರ ದಲ್ಲಿರುತ್ತಿದ್ದರು.

೨೨-೨೫. ಅತ್ರಿಯ ತಪಸ್ಸಿನಿಂದಲೂ, ಅನಸೂಯೆಯ ಶಿವಸೇವೆಯಿಂದಲೂ ಅವರ ಮನಸ್ಸು, ಮಾತು, ಶರೀರ ಇವುಗಳ ಸಂಸ್ಕಾರವು ಒಂದು ವಿಶೇಷಸ್ಥಿತಿಯನ್ನು ಪಡೆಯಿತು. ಎಲ್ಲಿಯವರೆಗೂ ಅತ್ರಿಮುನಿಯು ಪ್ರಾಣಾಯಾಮದಲ್ಲಿ ಆಸಕ್ತನಾಗಿ ದ್ದನೋ, ಅಲ್ಲಿಯವರೆಗೂ ಪತಿವ್ರತೆಯಾದ ಆ ಅನುಸೂಯೆಯು ಪತಿಯ ಸಮೀಪ ದಲ್ಲಿಯೇ ಇದ್ದು ಸೇವೆಯನ್ನು ಮಾಡುತ್ತಿದ್ದಳು. ಆ ದಂಪತಿಗಳಿಬ್ಬರೂ ತಮ್ಮತಮ್ಮ ಕಾರ್ಯಾಸಕ್ತರಾಗಿದ್ದಾಗ ಮತ್ತೊಬ್ಬರಾರೂ ಅಲ್ಲಿ ಇರುತ್ತಿರಲಿಲ್ಲ. ಹೀಗಿರುತ್ತಿರಲು ಬಹಳಕಾಲದವರೆಗೂ ಧ್ಯಾನಮಾಡುತ್ತಿದ್ದ ಅತ್ರಿಮುನಿಯು ಬಹಿರ್ಮುಖನಾಗಲಿಲ್ಲ.

ಧ್ಯಾನೇ ಚ ಪರಮೋ ಲೀನೋ ನ ವ್ಯಬುಧ್ಯತ ಕಿಂಚನ ।
ಅನಸೂಯಾಪಿ ಸಾ ಸಾಧ್ವೀ ಸ್ವಾಮಿನಂ ವೈ ಶಿವಂ ತಥಾ ॥ ೨೬ ॥

ಭೇಜೇ ನಾನ್ಯತ್ಪರಂ ಕಿಂಚಿಜ್ಜಾನೀತೇ ಸ್ಮ ಚ ಸಾ ಸತೀ ।
ತಸ್ಯೈವ ತಪಸಾ ಸರ್ವೇ ತಸ್ಯಾಶ್ಚ ಭಜನೇನ ಚ ॥ ೨೭ ॥

ದೇವಾಶ್ಚ ಋಷಯಶ್ಚೈವ ಗಂಗಾದ್ಯಾಸ್ಸರಿತಸ್ತಥಾ ।
ದರ್ಶನಾರ್ಥಂ ತಯೋಃ ಸರ್ವಾಃ ಪರೇ ಪ್ರೀತ್ಯಾ ಸಮಾಯಯುಃ ॥ ೨೮ ॥

ದೃಷ್ಟ್ವಾ ಚ ತತ್ತಪಸ್ಸೇವಾಂ ವಿಸ್ಮಯಂ ಪರಮಂ ಯಯುಃ ।
ತಯೋಸ್ತದದ್ಭುತಂ ದೃಷ್ಟ್ವಾ ಸಮೂಚುರ್ಭಜನಂ ವರಂ ॥ ೨೯ ॥

ಉಭಯೋಃ ಕಿಂ ವಿಶಿಷ್ಟಂ ಚ ತಪಸೋ ಭಜನಸ್ಯ ಚ ।
ಅತ್ರೇಶ್ಚೈವ ತಪಃ ಪ್ರೋಕ್ತಮನಸೂಯಾನುಸೇವನಂ ॥ ೩೦ ॥

ತತ್ಸರ್ವಮುಭಯೋರ್ದೃಷ್ಟ್ವಾ ಸಮೂಚುರ್ಭಜನಂ ವರಂ ।
ಪೂರ್ವೈಶ್ಚ ಋಷಿಭಿಶ್ಚೈವ ದುಷ್ಕರಂ ತು ತಪಃ ಕೃತಂ ॥ ೩೧ ॥

ಏತಾದೃಶಂ ತು ಕೇನಾಪಿ ಕ್ವ ಕೃತಂ ನೈತದಬ್ರುವನ್ ।
ಧನ್ಯೋಽಯಂ ಚ ಮುನಿರ್ಧನ್ಯಾ ತಥೇಯಮನಸೂಯಿಕಾ ॥ ೩೨ ॥

---

೨೬-೨೮. ಪತಿವ್ರತೆಯಾದ ಅನುಸೂಯೆಯು ತನ್ನ ಪತಿಯನ್ನೂ, ಶಿವನನ್ನೂ ಧ್ಯಾನಮಾಡುತ್ತ ಮತ್ತೇನನ್ನೂ ಮನಸ್ಸಿನಲ್ಲಿ ಯೋಚಿಸುತ್ತಿರಲಿಲ್ಲ. ಆ ಪತಿವ್ರತೆಯ ಸೇವೆಗೂ, ಮುನಿಯ ತಪಸ್ಸಿಗೂ ಮೆಚ್ಚಿ ದೇವತೆಗಳೂ, ಋಷಿಗಳೂ, ಗಂಗಾದಿ ನದಿಗಳೂ ಅವರ ದರ್ಶನಕ್ಕಾಗಿ ಪ್ರೀತಿಯಿಂದ ಬಂದು ಸೇರಿದರು.'

೨೯-೩೨. ಅವರು ಋಷಿಯ ತಪಸ್ಸನ್ನೂ, ಅನುಸೂಯೆಯ ಸೇವೆಯನ್ನೂ ನೋಡಿ ಅತ್ಯಂತಾಶ್ಚರ್ಯವನ್ನು ಹೊಂದಿದರು. ಇಬ್ಬರೂ ಮಾಡಿದ ಕಾರ್ಯದಲ್ಲಿ ತಪಸ್ಸು ಹೆಚ್ಚೋ? ಸೇವೆಯು ಹೆಚ್ಚೋ? ಎಂಬ ವಿಚಾರವುಂಟಾಗಲು, ಸೇವೆಯೇ ಹೆಚ್ಚೆಂದು ಕೆಲವರು ಹೇಳಿದರು; ತಪಸ್ಸೇ ಹೆಚ್ಚೆಂದು ಕೆಲವರು ಹೇಳಿದರು. ಹಿಂದೆ ಋಷಿಗಳು ಕಠಿನವಾದ ತಪಸ್ಸನ್ನು ಮಾಡಿದರು. ಇಂತಹ ತಪಸ್ಸನ್ನು ಯಾರು, ಎಲ್ಲಿ ಮಾಡಿದರು? ಎಲ್ಲಿಯೂ ಇಲ್ಲ ಈ ಮುನಿಯು ಕೃತಾರ್ಥನು, ಅನುಸೂಯೆಯೂ ಕೃತಾರ್ಥಳು ಎಂದರು.

ಯದ್ವೈತಾಭ್ಯಾಂ ಪರಪ್ರೀತ್ಯಾ ಕ್ರಿಯತೇ ಸುತಪಃ ಪುನಃ ।
ಏತಾದೃಶಂ ಶುಭಂ ಚೈತತ್ತಪೋ ದುಷ್ಕರಮುತ್ತಮಂ ॥ ೩೩ ॥

ತ್ರಿಲೋಕ್ಯಾಂ ಕ್ರಿಯತೇ ಕೇನ ಸಾಂಪ್ರತಂ ಜ್ಞಾಯತೇ ನ ಹಿ ।
ತಯೋರಿವ ಪ್ರಶಂಸಾಂ ಚ ಕೃತ್ವಾ ತೇ ತು ಯಥಾಗತಂ ॥ ೩೪ ॥

ಗತಾಸ್ತೇ ಚ ತದಾ ತತ್ರ ಗಂಗಾ ನ ಗಿರಿಶಂ ವಿನಾ ।
ಗಂಗಾ ಮದ್ಭಜನಪ್ರೀತಾ ಸಾಧ್ವೀ ಧರ್ಮವಿಮೋಹಿತಾ ॥ ೩೫ ॥

ಕೃತ್ವೋಪಕಾರಮೇತಸ್ಯಾಗಮಿಷ್ಯಾಮೀತ್ಯುವಾಚ ಸಾ ।
ಶಿವೋಽಪಿ ಧ್ಯಾನಸಂಬದ್ಧೋ ಮುನೇರತ್ರೇರ್ಮುನೀಶ್ವರಾಃ ॥ ೩೬ ॥

ಪೂರ್ಣಾಂಶೇನ ಸ್ಥಿತಸ್ತತ್ರ ಕೈಲಾಸಂ ತಂ ಜಗಾಮ ಹ ।
ಪಂಚಾಶಚ್ಚ ತಥಾ ಚಾತ್ರ ಚತ್ವಾರಿ ಋಷಿಸತ್ತಮಾಃ ॥ ೩೭ ॥

ವರ್ಷಾಣಿ ಚ ಗತಾನ್ಯಾಸನ್ವೃಷ್ಟಿರ್ನೈವಾಭವತ್ತದಾ ।
ಯಾವಚ್ಚಾಪ್ಯತ್ರಿಣಾ ಹ್ಯೇವಂ ತಪಸಾ ಧ್ಯಾನಮಾಶ್ರಿತಂ ॥ ೩೮ ॥

---

೩೩-೩೪. ಇವರಿಬ್ಬರೂ ಅತ್ಯಂತ ಪ್ರೀತಿಯಿಂದ ತಪಸ್ಸನ್ನು ಮಾಡುತ್ತಿರುವರು. ಇಂತಹ ಶುಭಕರವಾದ, ಕಠಿನವಾದ ತಪಸ್ಸನ್ನು ಮೂರುಲೋಕದಲ್ಲಿ ಯಾರು ಮಾಡಿರುವರು? ಇದುವರೆಗೂ ನಾವು ತಿಳಿದಿಲ್ಲ, ಎಂದು ಹೇಳಿ ಅವರಿಬ್ಬರನ್ನೂ ಹೊಗಳಿ, ಬಂದಿದ್ದವರು ತಮ್ಮ ಸ್ಥಳಗಳಿಗೆ ಹೊರಟುಹೋದರು.

೩೫-೩೬. ಗಂಗೆಯೂ, ಶಿವನೂ ಹೋಗಲಿಲ್ಲ. ಗಂಗೆಯು, ಅನಸೂಯೆಯು ಮಾಡಿದ ಶಿವನ ಸೇವೆಯಿಂದಲೂ, ಪತಿವ್ರತಾಧರ್ಮದಿಂದಲೂ ಸಂತುಷ್ಟಳಾಗಿ, ಇವಳಿಗೆ ಉಪಕಾರವನ್ನು ಮಾಡಿ, ನಾನು ಹೋಗುತ್ತೇನೆಂದಳು. ಶಿವನು, ಅತ್ರಿಯ ಧ್ಯಾನಕ್ಕೆ ಮೆಚ್ಚಿ ಪೂರ್ಣಾಂಶದಿಂದ ಅಲ್ಲಿಯೇ ನಿಂತನು. ಕೈಲಾಸಕ್ಕೆ ಹೋಗಲಿಲ್ಲ.

೩೭-೩೮. ಋಷಿಶ್ರೇಷ್ಠರೇ, ಕೇಳಿರಿ. ಐವತ್ತನಾಲ್ಕು ವರ್ಷಗಳವರೆಗೆ ಅವರು ತಪಸ್ಸು ಮಾಡುತ್ತಿದ್ದರು. ಅಲ್ಲಿಯವರೆಗೂ ಮಳೆಯು ಆಗಲಿಲ್ಲ. ಅತ್ರಿಯು ಧ್ಯಾನಾಸಕ್ತನಾಗಿಯೇ ಇದ್ದನು. ಅನಸೂಯೆಯು ಆಹಾರಾದಿಗಳನ್ನು ತೆಗೆದುಕೊಳ್ಳದೆ ಸೇವೆಮಾಡುತ್ತಿದ್ದಳು.

ಅನಸೂಯಾ ತದಾ ನೈವ ಗೃಹ್ಣಾಮೀತೀಷಣಾ ಕೃತಾ ।
ಏವಂ ಚ ಕ್ರಿಯಮಾಣೇ ಹಿ ಮುನಿನಾ ತಪಸಿ ಸ್ಥಿತೇ ।
ಅನಸೂಯಾ ಸುಭಜನೇ ಯಜ್ಞಾತಂ ಶ್ರೂಯತಾಮಿತಿ ॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ
ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಮನಸೂಯಾತ್ರಿ
ತಪೋವರ್ಣನಂ ನಾಮ ತೃತೀಯೋಽಧ್ಯಾಯಃ



---

೩೯. ಹೀಗೆ ಅತ್ರಿಮುನಿಯು ತಪಸ್ಸುಮಾಡುತ್ತಿರಲು ಅನಸೂಯೆಯು ಸೇವೆಮಾಡುತ್ತಲೂ ಇರುವಲ್ಲಿ ಮುಂದೆ ಏನಾಯಿತೆಂಬುದನ್ನು ಹೇಳುವೆನು, ಕೇಳಿರಿ.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಅನಸೂಯಾತ್ರಿಗಳ ತಪಸ್ಸಿನ ವರ್ಣನೆಯೆಂಬ
ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ಚತುರ್ಥೋಽಧ್ಯಾಯಃ

---

॥ ಸೂತ ಉವಾಚ ॥

ಕದಾಚಿತ್ಸ ಋಷಿಶ್ರೇಷ್ಠೋ ಹ್ಯತ್ರಿರ್ಬ್ರಹ್ಮವಿದಾಂ ವರಃ ।
ಜಾಗ್ರತಶ್ಚ ಜಲಂ ದೇಹಿ ಪ್ರತ್ಯುವಾಚ ಪ್ರಿಯಾಮಿತಿ ॥ ೧ ॥

ಸಾಪಿ ಸಾಧ್ವೀ ತ್ವವಶ್ಯಂ ಚ ಗೃಹೀತ್ವಾಥ ಕಮಂಡಲುಂ ।
ಜಗಾಮ ವಿಪಿನೇ ತತ್ರ ಜಲಂ ಮೇ ನೀಯತೇ ಕುತಃ ॥ ೨ ॥

ಕಿಂ ಕರೋಮಿ ಕ್ವ ಗಚ್ಛಾಮಿ ಕುತೋ ನೀಯೇತ ವೈ ಜಲಂ ।
ಇತಿ ವಿಸ್ಮಯಮಾಪನ್ನಾ ತಾಂ ಗಂಗಾಂ ಹಿ ದದರ್ಶ ಸಾ ॥ ೩ ॥

---

### ನಾಲ್ಕನೆಯ ಅಧ್ಯಾಯವು.

೧-೩. ಸೂತನು ಹೇಳಿದನು.—ಒಂದಾನೊಂದು ಕಾಲದಲ್ಲಿ, ಜ್ಞಾನಿಗಳಲ್ಲಿ ಶ್ರೇಷ್ಠನಾದ ಅತ್ರಿಮುನಿಯು ಬಹಿರ್ಮುಖನಾಗಿ ತನ್ನ ಪತ್ನಿಯನ್ನು ಕುರಿತು, ಬಹಳ ಬಾಯಾರಿಕೆಯಾಗುವುದು ನೀರನ್ನು ಕೊಡು ಎಂದು ಕೇಳಿದನು. ಆ ಪತಿವ್ರತೆಯಾದ ಅನಸೂಯೆಯು ಕಮಂಡಲುವನ್ನು ತೆಗೆದುಕೊಂಡು ಕಾಡಿಗೆ ಹೋಗಿ ನಾನು ನೀರನ್ನು ಎಲ್ಲಿಂದ ತರಲಿ ? ಏನು ಮಾಡಲಿ ? ಎಲ್ಲಿಗೆ ಹೋಗಲಿ ? ಎಂದು ಯೋಚಿಸುತ್ತಿರಲು ಅಲ್ಲಿ ಗಂಗೆಯನ್ನು ಅವಳು ನೋಡಿದಳು.

ತಾಮನುವ್ರಜತೀ ಯಾವತ್ತಾವಬ್ರವೀಚ್ಚ ತದಾ ಹಿ ತಾಂ ।
ಗಂಗಾ ಸರಿದ್ವರಾ ದೇವೀ ಬಿಭ್ರತೀ ಸುಂದರಾಂ ತನುಂ ॥ ೪ ॥

॥ ಗಂಗೋವಾಚ ॥

ಪ್ರಸನ್ನಾಸ್ಮಿ ಚ ತೇ ದೇವಿ ಕುತ್ರ ಯಾಸಿ ವದಾಧುನಾ ।
ಧನ್ಯಾ ತ್ವಂ ಸುಭಗೇ ಸತ್ಯಂ ತವಾಜ್ಞಾಂ ಚ ಕರೋಮ್ಯಹಂ ॥ ೫ ॥

॥ ಸೂತ ಉವಾಚ ॥

ತದ್ವಚಶ್ಚ ತದಾ ಶ್ರುತ್ವಾ ಋಷಿಪತ್ನೀ ತಪಸ್ವಿನೀ ।
ಪ್ರತ್ಯುವಾಚ ವಚಃ ಪ್ರೀತ್ಯಾ ಸ್ವಯಂ ಸುಚಕಿತಾ ದ್ವಿಜಾಃ ॥ ೬ ॥

॥ ಅನಸೂಯೋವಾಚ ॥

ಕಾ ತ್ವಂ ಕಮಲಪತ್ರಾಕ್ಷಿ ಕುತೋ ವಾ ತ್ವಂ ಸಮಾಗತಾ ।
ತಥ್ಯಂ ಬ್ರೂಹಿ ಕೃಪಾಂ ಕೃತ್ವಾ ಸಾಧ್ವೀ ಸುಪ್ರವದಾ ಸತೀ ॥ ೭ ॥

---

೪. ಅನಸೂಯೆಯು ಅವಳನ್ನೇ ಅನುಸರಿಸಿ ಹೋಗುತ್ತಿರುವಾಗ ನದಿಗಳಲ್ಲಿ ಶ್ರೇಷ್ಠವಾದ ಗಂಗೆಯು ಸುಂದರವಾದ ಶರೀರವನ್ನು ಧರಿಸಿ, ಅನಸೂಯೆಯನ್ನು ಕುರಿತು

೫. ಗಂಗೆಯು ಹೇಳಿದಳು.—ಅನುಸೂಯಾದೇವಿಯೇ, ನಾನು ನಿನ್ನ ವಿಷಯದಲ್ಲಿ ಪ್ರಸನ್ನಳಾಗಿರುವೆನು. ಈಗ ನೀನು ಎಲ್ಲಿಗೆ ಹೋಗುತ್ತಿರುವೆ? ಹೇಳು. ನೀನೇ ಕೃತಾರ್ಥಳು ಮತ್ತು ಸೌಭಾಗ್ಯವತಿಯು. ನಿಜವನ್ನು ಹೇಳು. ನಿನ್ನ ಅಪ್ಪಣೆಯನ್ನು ನಾನು ನೆರವೇರಿಸುವೆನು ಎಂದಳು.

೬. ತಪಸ್ವಿನಿಯೂ, ಋಷಿಪತ್ನಿಯೂ ಆದ ಅನಸೂಯೆಯು ಆಗ ಆ ಮಾತುಗಳನ್ನು ಕೇಳಿ ಪ್ರೀತಿಯಿಂದ ಪ್ರತ್ಯುತ್ತರವನ್ನು ಹೇಳಿದಳು.

೭. ಅನಸೂಯೆಯು ಹೇಳಿದಳು. ಕಮಲದಂತೆ ಕಣ್ಣುಗಳುಳ್ಳ ಓ ಸುಂದರಿಯೇ, ನೀನು ಯಾರು? ಎಲ್ಲಿಂದ ಬಂದಿರುವೆ? ಸಾಧ್ವಿಯಾದ ನೀನು ನನ್ನಲ್ಲಿ ದಯವಿಟ್ಟು ನಿಜವನ್ನು ಹೇಳು ಎಂದಳು.

॥ ಸೂತ ಉವಾಚ ॥

ಇತ್ಯುಕ್ತೇ ಚ ತಯಾ ತತ್ರ ಮುನಿಪತ್ನ್ಯಾ ಮುನೀಶ್ವರಾಃ ।
ಸರಿದ್ವರಾ ದಿವ್ಯರೂಪಾ ಗಂಗಾ ವಾಕ್ಯಮಥಾಬ್ರವೀತ್ ॥ ೮ ॥

॥ ಗಂಗೋವಾಚ ॥

ಸ್ವಾಮಿನಃ ಸೇವನಂ ದೃಷ್ಟ್ವಾ ಶಿವಸ್ಯ ಚ ಪರಾತ್ಮನಃ ।
ಸಾಧ್ವಿ ಧರ್ಮಂ ಚ ತೇ ದೃಷ್ಟ್ವಾ ಸ್ಥಿತಾಸ್ಮಿ ತವ ಸನ್ನಿಧೌ ॥ ೯ ॥

ಅಹಂ ಗಂಗಾ ಸಮಾಯಾತಾ ಭಜನಾತ್ತೇ ಶುಚಿಸ್ಮಿತೇ ।
ವಶೀಭೂತಾ ಹ್ಯಹಂ ಜಾತಾ ಯದಿಚ್ಛಸಿ ವೃಣೀಷ್ವ ತತ್ ॥ ೧೦ ॥

॥ ಸೂತ ಉವಾಚ ॥

ಇತ್ಯುಕ್ತೇ ಗಂಗಯಾ ಸಾಧ್ವೀ ನಮಸ್ಕೃತ್ಯ ಪುರಃ ಸ್ಥಿತಾ ।
ಉವಾಚೇತಿ ಜಲಂ ದೇಹಿ ಚೇತ್ಪ್ರಸನ್ನಾ ಮಮಾಧುನಾ ॥ ೧೧ ॥

---

೮. ಎಲೈ ಋಷಿಶ್ರೇಷ್ಠರೇ, ಕೇಳಿರಿ. ಅತ್ರಿಮುನಿಪತ್ನಿಯು ಹೀಗೆ ಹೇಳುತ್ತಲು, ದಿವ್ಯರೂಪವನ್ನು ಧರಿಸಿದ ನದಿಶ್ರೇಷ್ಠಳಾದ ಗಂಗೆಯು ಇಂತೆಂದಳು.

೯-೧೦. ಗಂಗೆಯು ಹೇಳಿದಳು.—ಎಲೌ ಅನಸೂಯೆಯೇ, ನೀನು ಮಾಡಿದ ಪತಿಸೇವೆಯನ್ನೂ, ಪರಮಾತ್ಮನಾದ ಶಿವನ ಪೂಜೆಯನ್ನೂ, ನಿನ್ನ ಪತಿವ್ರತಾಧರ್ಮವನ್ನೂ ನೋಡಿ ನಿನ್ನ ಸಮೀಪಕ್ಕೆ ಬಂದಿರುವೆನು. ನಾನು ಗಂಗೆಯು. ಸಂತೋಷದಿಂದ ನೀನು ಮಾಡಿದ ಪತಿಸೇವೆಯನ್ನು ಕಂಡು ನಿನ್ನ ಅಧೀನಳಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳು ಎಂದಳು.

೧೧. ಹೀಗೆ ಗಂಗೆಯು ಹೇಳುತ್ತಲು, ಆ ಪತಿವ್ರತೆಯು ನಮಸ್ಕರಿಸಿ ಗಂಗೆಯು ಮುಂದೆ ನಿಂತು, ನೀನು ಪ್ರಸನ್ನಳಾಗಿದ್ದರೆ ನನಗೆಈಗ ನೀರನ್ನು ಕೊಡು ಎಂದಳು.

ಇತ್ಯೇತದ್ವಚನಂ ಶ್ರುತ್ವಾ ಗರ್ತಂ ಕುರ್ವಿತಿ ಸಾಽಬ್ರವೀತ್ ।
ಶೀಘ್ರಂ ಚಾಯಾಚ್ಚ ತತ್ಕೃತ್ವಾ ಸ್ಥಿತಾ ತತ್ಕ್ಷಣಮಾತ್ರತಃ ॥ ೧೨ ॥

ತತ್ರ ಸಾ ಚ ಪ್ರವಿಷ್ಟಾ ಚ ಜಲರೂಪಮಭೂತ್ತದಾ ।
ಆಶ್ಚರ್ಯಂ ಪರಮಂ ಗತ್ವಾ ಗೃಹೀತಂ ಚ ಜಲಂ ತಯಾ ॥ ೧೩ ॥

ಉವಾಚ ವಚನಂ ಚೈತಲ್ಲೋಕಾನಾಂ ಸುಖಹೇತವೇ ।
ಅನಸೂಯಾ ಮುನೇಃ ಪತ್ನೀ ದಿವ್ಯರೂಪಾಂ ಸರಿದ್ವರಾಂ ॥ ೧೪ ॥

॥ ಅನಸೂಯೋವಾಚ ॥

ಯದಿ ತ್ವಂ ಸುಪ್ರಸನ್ನಾ ಮೇ ವರ್ತಸೇ ಚ ಕೃಪಾ ಮಯಿ ।
ಸ್ಥಾತವ್ಯಂ ಚ ತ್ವಯಾ ತಾವನ್ಮತ್ಸ್ವಾಮೀ ಯಾವದಾವ್ರಜೇತ್ ॥ ೧೫ ॥

॥ ಸೂತ ಉವಾಚ ॥

ಇತಿ ಶ್ರುತ್ವಾನಸೂಯಾಯಾ ವಚನಂ ಸುಖದಂ ಸತಾಂ ।
ಗಂಗೋವಾಚ ಪ್ರಸನ್ನಾತಿ ಹ್ಯತ್ರೇರ್ದಾಸ್ಯಸಿ ಮೇಽನಘೇ ॥ ೧೬ ॥

ಇತ್ಯುಕ್ತೇ ಚ ತಯಾ ತತ್ರ ಹ್ಯನಯಾಪಿ ಕೃತಂ ತಥಾ ।
ಸ್ವಾಮಿನೋ ತಜ್ಜಲಂ ದಿವ್ಯಂ ದತ್ವಾ ತತ್ಪುರತಃ ಸ್ಥಿತಾ ॥ ೧೭ ॥

---

೧೨-೧೪. ಈ ಮಾತನ್ನು ಕೇಳಿ ಗಂಗೆಯು ಒಂದು ಹಳ್ಳವನ್ನು ಮಾಡೆಂದಳು. ಅನಸೂಯೆಯು ಬೇಗನೆ ಒಂದು ಹಳ್ಳವನ್ನು ಮಾಡಿ ಬಂದಳು. ಗಂಗೆಯು ಅದರಲ್ಲಿ ಪ್ರವೇಶಿಸಿ ನೀರಿನರೂಪವಾದಳು. ಅನಸೂಯೆಯು ಅತ್ಯಂತಾಶ್ಚರ್ಯದಿಂದ ಆ ನೀರನ್ನು ಕಮಂಡಲುವಿನಲ್ಲಿ ತುಂಬಿಕೊಂಡಳು. ಬಳಿಕ ದಿವ್ಯರೂಪಳಾದ ಆ ಗಂಗೆಯನ್ನು ಕುರಿತು

೧೫. ಅನಸೂಯೆಯು ಹೇಳಿದಳು.—ನೀನು ಪ್ರಸನ್ನಳಾಗಿ ನನ್ನಲ್ಲಿ ದಯೆಯುಳ್ಳವಳಾಗಿದ್ದರೆ, ನನ್ನ ಪತಿಯು ಇಲ್ಲಿಗೆ ಬರುವವರೆಗೂ ನೀನು ಇಲ್ಲಿಯೇ ಇರಬೇಕು ಎಂದಳು.

೧೬-೧೭. ಸಜ್ಜನರಿಗೆ ಸಂತೋಷವನ್ನುಂಟುಮಾಡುವ ಅನಸೂಯೆಯ ಮಾತನ್ನು ಕೇಳಿ ಗಂಗೆಯು ಸಂತೋಷದಿಂದ, ಎಲೈ ಪಾಪರಹಿತಳಾದ ಅನಸೂಯೆಯೇ, ನನ್ನನ್ನು (ನೀರನ್ನು) ಅತ್ರಿಮುನಿಗೆ ಕೊಡು, ಎಂದಳು.

ಸ ಋಷಿಶ್ಚಾಪಿ ಸುಪ್ರೀತ್ವಾ ಸ್ವಾಚಮ್ಯ ವಿಧಿಪೂರ್ವಕಂ ।
ಪಪೌ ದಿವ್ಯಂ ಜಲಂ ತಚ್ಚ ಪೀತ್ವಾ ಸುಖಮವಾಪ ಹ ॥ ೧೮ ॥

ಅಹೋ ನಿತ್ಯಂ ಜಲಂ ಯಚ್ಚ ಪೀಯತೇ ತಜ್ಜಲಂ ನ ಹಿ ।
ವಿಚಾರ್ಯೇತಿ ಚ ತೇನಾಶು ಪರಿತಶ್ಚಾವಲೋಕಿತಂ ॥ ೧೯ ॥

ಶುಷ್ಕಾನ್ವೃಕ್ಷಾನ್ಸಮಾಲೋಕ್ಯ ದಿಶೋ ರೂಕ್ಷತರಾಸ್ತಥಾ ।
ಉವಾಚ ತಾನ್ಯೃಷಿಶ್ರೇಷ್ಠೋ ನ ಜಾತಂ ವರ್ಷಣಂ ಪುನಃ ॥ ೨೦ ॥

ತದುಕ್ತಂ ತತ್ಸಮಾಕರ್ಣ್ಯ ನೇತಿ ನೇತಿ ಪ್ರಿಯಾಂ ತದಾ ।
ತಾಮುವಾಚ ಪುನಃ ಸೋಽಪಿ ಜಲಂ ನೀತಂ ಕುತಸ್ತ್ವಯಾ ॥ ೨೧ ॥

ಇತ್ಯುಕ್ತೇ ತು ತದಾ ತೇನ ವಿಸ್ಮಯಂ ಪರಮಂ ಗತಾ ।
ಅನಸೂಯಾ ಸ್ವಮನಸಿ ಸಚಿಂತಾ ತು ಮುನೀಶ್ವರಾಃ ॥ ೨೨ ॥

ನಿವೇದ್ಯತೇ ಮಯಾ ಚೇದ್ವೈ ತದೋತ್ಕರ್ಷೋ ಭವೇನ್ಮಮ ।
ನಿವೇದ್ಯತೇ ಯದಾ ನೈವ ವ್ರತಭಂಗೋ ಭವೇನ್ಮಮ ॥ ೨೩ ॥

---

ಅನಸೂಯೆಯು ಹಾಗೆಯೇ ಆಗಲೆಂದು ತನ್ನ ಪತಿಗೆ ದಿವ್ಯವಾದ ಆ ನೀರನ್ನು ಕೊಟ್ಟು ಅವನ ಮುಂದೆ ನಿಂತಿರಲು, ಆ ಮುನಿಯು ಪ್ರೀತಿಯಿಂದ ವಿಧ್ಯುಕ್ತವಾಗಿ ಆಚಮನವನ್ನು ಮಾಡಿ ಆ ದಿವ್ಯವಾದ ನೀರನ್ನು ಕುಡಿದು ಸುಖವನ್ನು ಹೊಂದಿದನು.

೧೯-೨೦. ಆ ಮುನಿಯು ಆಶ್ಚರ್ಯವನ್ನು ಹೊಂದಿ, ನಾನು ನಿತ್ಯವೂ ಕುಡಿಯುವ ನೀರಿನಂತೆ ಈ ನೀರು ಇಲ್ಲ, ಎಂದು ವಿಚಾರಮಾಡಿ ಸುತ್ತಲೂ ನೋಡಿದನು. ಒಣಗಿದ ಮರಗಳನ್ನೂ ದಿಕ್ಕುಗಳಲ್ಲಿರುವ ಭೂಮಿಯು ಗಟ್ಟಿಯಾಗಿರುವುದನ್ನೂ ಕಂಡು ಪತ್ನಿಯನ್ನು ಕುರಿತು, ಪುನಃ ಮಳೆಯಾಯಿತೆ? ಎಂದು ಕೇಳಿದನು.

೨೧-೨೩. ಈ ಮಾತನ್ನು ಕೇಳಿ ಅನಸೂಯೆಯು, ಇಲ್ಲವೆಂದು ಹೇಳಿದಳು. ಹಾಗಾದರೆ ನೀರನ್ನು ಎಲ್ಲಿಂದ ತಂದೆ? ಎಂದು ಪ್ರಶ್ನೆಮಾಡಿದನು. ಎಲೈ ಮುನಿಗಳೇ, ಕೇಳಿರಿ. ಈ ಮಾತನ್ನು ಕೇಳಿ ಅನಸೂಯೆಯು ತನ್ನಲ್ಲಿ ಹೀಗೆ ಆಲೋಚಿಸಿದಳು. ನಾನು ಈ ಪ್ರಶ್ನೆಗೆ ಉತ್ತರವನ್ನು ಹೇಳಿದರೆ ನನಗೆ ಶ್ರೇಷ್ಠತೆಯು ಬರುವುದು. ಹೇಳದಿದ್ದರೆ ವ್ರತಭಂಗವಾಗುವುದು. ಈ ಎರಡು

ನೋಭಯಂ ಚ ತಥಾ ಸ್ಯಾದ್ವೈ ನಿವೇದ್ಯಂ ತತ್ತಥಾ ಮಮ ।
ಇತಿ ಯಾವದ್ವಿಚಾರ್ಯೇತ ತಾವತ್ಪೃಷ್ಟಾ ಪುನಃ ಪುನಃ ॥ ೨೪ ॥

ಅಥಾನುಗ್ರಹತಃ ಶಂಭೋಃ ಪ್ರಾಪ್ತಬುದ್ಧಿಃ ಪತಿವ್ರತಾ ।
ಉವಾಚ ಶ್ರೂಯತಾಂ ಸ್ವಾಮಿನ್ಯಜ್ಞಾತಂ ಕಥಯಾಮಿ ತೇ ॥ ೨೫ ॥

॥ ಅನಸೂಯೋವಾಚ ॥

ಶಂಕರಸ್ಯ ಪ್ರತಾಪಾಚ್ಚ ತವೈವ ಸುಕೃತೈಸ್ತಥಾ ।
ಗಂಗಾ ಸಮಾಗತಾತ್ರೈವ ತದೀಯಂ ಸಲಿಲಂ ತ್ವಿದಂ ॥ ೨೬ ॥

॥ ಸೂತ ಉವಾಚ ॥

ಏವಂ ವಚಸ್ತದಾ ಶ್ರುತ್ವಾ ಮುನಿರ್ವಿಸ್ಮಯಮಾನಸಃ ।
ಪ್ರಿಯಾಮುವಾಚ ಸುಪ್ರೀತ್ಯಾ ಶಂಕರಂ ಮನಸಾ ಸ್ಮರನ್ ॥ ೨೭ ॥

॥ ಅತ್ರಿರುವಾಚ ॥

ಪ್ರಿಯೇ ಸುಂದರಿ ತ್ವಂ ಸತ್ಯಮಥ ವಾಚಂ ವ್ಯಲೀಕಕಾಂ ।
ಬ್ರವೀಷಿ ಚ ಯಥಾರ್ಥಂ ತ್ವಂ ನ ಮನ್ಯೇ ದುರ್ಲಭಂ ತ್ವಿದಂ ॥ ೨೮ ॥

---

ದೋಷವೂ ಬರದಂತೆ ಏನು ಉತ್ತರವನ್ನು ಹೇಳಲಿ ಎಂದು ಯೋಚಿಸುತ್ತಿರಲು, ಪತಿಯು ಮತ್ತೆ ಮತ್ತೆ ಪ್ರಶ್ನೆಮಾಡಿದನು. ಈ ಸಮಯದಲ್ಲಿ ಶಿವನ ಅನುಗ್ರಹದಿಂದ ಬುದ್ಧಿಯನ್ನು ಪಡೆದ ಪತಿವ್ರತೆಯಾದ ಅನಸೂಯೆಯು, ಎಲೈ ಸ್ವಾಮಿಯೇ, ನಡೆದ ಸಂಗತಿಯನ್ನು ಹೇಳುವೆನು ಎಂದಳು.

೨೬. ಅನಸೂಯೆಯು ಹೇಳಿದಳು.—ಶಿವನ ಮಹಿಮೆಯಿಂದಲೂ, ನಿಮ್ಮ ಪುಣ್ಯದಿಂದಲೂ ಗಂಗೆಯು ಇಲ್ಲಿಗೇ ಬಂದಿರುವಳು. ಇದು ಆ ಗಂಗೆಯ ನೀರು, ಎಂದಳು.

೨೭. ಈ ಮಾತನ್ನು ಕೇಳಿ ಅತ್ರಿಮುನಿಯು ಆಶ್ಚರ್ಯಪಡುತ್ತ ಶಿವನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತ ತನ್ನ ಪತ್ನಿಯನ್ನು ಕುರಿತು

೨೮-೩೦. ಅತ್ರಿಯು ಹೇಳಿದನು.—ಸುಂದರಿಯೂ ಪ್ರೀತಿಪಾತ್ರಳೂ ಆದ ಪತ್ನಿಯೇ, ನೀನು ನಿಜವನ್ನು ಹೇಳುವೆಯೋ? ಸುಳ್ಳನ್ನು ಹೇಳುವೆಯೋ? ನಾನು ಕಾಣೆನು. ನೀನು ಕೊಟ್ಟ ಗಂಗೋದಕವು ದೇವತೆಗಳಿಗೂ ಯೋಗಿಗಳಿಗೂ ದೊರೆಯ

ಅಸಾಧ್ಯಂ ಯೋಗಿಭಿರ್ಯಚ್ಚ ದೇವೈರಪಿ ಸದಾ ಶುಭೇ ।
ತಚ್ಚೈವಾದ್ಯ ಕಥಂ ಜಾತಂ ವಿಸ್ಮಯಃ ಪರಮೋ ಮಮ ॥ ೨೯ ॥

ಯದ್ಯೇವಂ ದೃಶ್ಯತೇ ಚೇದ್ವೈ ತನ್ಮನ್ಯೇಽಹಂ ನ ಚಾನ್ಯಥಾ ।
ಇತಿ ತದ್ವಚನಂ ಶ್ರುತ್ವಾ ಪ್ರತ್ಯುವಾಚ ಪತಿಂ ಪ್ರಿಯಾ ॥ ೩೦ ॥

॥ ಅನಸೂಯೋವಾಚ ॥

ಆಗಮ್ಯತಾಂ ಮಯಾ ಸಾರ್ಧಂ ತ್ವಯಾ ನಾಥ ಮಹಾಮುನೇ ।
ಸರಿದ್ವರಾಯಾ ಗಂಗಾಯಾ ದ್ರಷ್ಟುಮಿಚ್ಛಾ ಭವೇದ್ಯದಿ ॥ ೩೧ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ತು ಸಮಾದಾಯ ಪತಿಂ ತಂ ಸಾ ಪತಿವ್ರತಾ ।
ಗತಾ ದ್ರುತಂ ಶಿವಂ ಸ್ಮೃತ್ವಾ ಯತ್ರ ಗಂಗಾ ಸರಿದ್ವರಾ ॥ ೩೨ ॥

ದರ್ಶಯಾಮಾಸ ತಾಂ ತತ್ರ ಗಂಗಾಂ ಪತ್ಯೇ ಪತಿವ್ರತಾ ।
ಗರ್ತೇ ಚ ಸಂಸ್ಥಿತಾಂ ತತ್ರ ಸ್ವಯಂ ದಿವ್ಯಸ್ವರೂಪಿಣೀಂ ॥ ೩೩ ॥

---

ತಕ್ಕದಲ್ಲ. ಎಲೈ ಮಂಗಳಸ್ವರೂಪಳೆ, ಅಂತಹ ಪುಣ್ಯವು ನಮಗೆ ಹೇಗೆ ಉಂಟಾಯಿತು? ನನಗೆ ಅತ್ಯಂತ ಆಶ್ಚರ್ಯವಾಗಿರುವುದು. ಇದನ್ನು ಪ್ರತ್ಯಕ್ಷವಾಗಿ ನೋಡಿದರೆ ನಾನು ನಿಜವೆಂದು ನಂಬುವೆನು. ಇಲ್ಲದಿದ್ದರೆ ಹಾಗೆ ತಿಳಿಯಲು ಸಾಧ್ಯವಿಲ್ಲ, ಎಂದು ಹೇಳಲು ಅನಸೂಯೆಯು ಪತಿಯನ್ನು ಕುರಿತು ಮತ್ತೆ ಹೇಳಿದಳು.

೩೧. ಅನಸೂಯೆಯು ಹೇಳಿದಳು.—ಮಹರ್ಷಿಯಾದ ಪತಿಯೇ, ನದಿಗಳಲ್ಲಿ ಶ್ರೇಷ್ಠಳಾದ ಗಂಗೆಯನ್ನು ನೋಡಬೇಕೆಂಬ ಆಸೆಯಿದ್ದರೆ ನನ್ನ ಜತೆಯಲ್ಲಿ ಬಂದರೆ ತೋರಿಸುವೆನು ಎಂದಳು.

೩೨-೩೩. ಸೂತನು ಹೇಳಿದನು.—ಹೀಗೆಂದು ಹೇಳಿ ಆ ಪತಿವ್ರತೆಯು ಪತಿಯನ್ನು ಕರೆದುಕೊಂಡು ಶಿವನನ್ನು ಧ್ಯಾನಿಸುತ್ತ ನದೀಶ್ರೇಷ್ಠಳಾದ ಗಂಗೆಯು ಇದ್ದಲ್ಲಿಗೆ ಹೋಗಿ ಆ ಹಳ್ಳದಲ್ಲಿದ್ದ ದಿವ್ಯವಾದ ಗಂಗೆಯನ್ನು ಪತಿಗೆ ತೋರಿಸಿದಳು.

ತತ್ರ ಗತ್ವಾ ಋಷಿಶ್ರೇಷ್ಠೋ ಗರ್ತಂ ಚ ಜಲಪೂರಿತಂ ।
ಆಕಂಠಂ ಸುಂದರಂ ದೃಷ್ಟ್ವಾ ಧನ್ಯೇಯಮಿತಿ ಚಾಬ್ರವೀತ್ ॥ ೩೪ ॥

ಕಿಂ ಮದೀಯಂ ತಪಶ್ಚೈವ ಕಿಮನ್ಯೇಷಾಂ ಪುನಸ್ತದಾ ।
ಇತ್ಯುಕ್ತ್ವೋ ಮುನಿಶಾರ್ದೂಲೋ ಭಕ್ತ್ಯಾ ತುಷ್ಟಾವ ತಾಂ ತದಾ ॥ ೩೫ ॥

ತತೋ ಹಿ ಸ ಮುನಿಸ್ತತ್ರ ಸುಸ್ನಾತಃ ಸುಭಗೇ ಜಲೇ ।
ಆಚಮ್ಯ ಪುನರೇವಾತ್ರ ಸ್ತುತಿಂ ಚಕ್ರೇ ಪುನಃ ಪುನಃ ॥ ೩೬ ॥

ಅನುಸೂಯಾಪಿ ಸಂಸ್ನಾತಾ ಸುಂದರೇ ತಜ್ಜಲೇ ತದಾ ।
ನಿತ್ಯಂ ಚಕ್ರೇ ಮುನಿಃ ಕರ್ಮ ಸಾನಸೂಯಾಪಿ ಸುವ್ರತಾ ॥ ॥ ೩೭ ॥

ತತಸ್ಸೋವಾಚ ತಾಂ ಗಂಗಾ ಗಮ್ಯತೇ ಸ್ವಸ್ಥಲಂ ಮಯಾ ।
ಇತ್ಯುಕ್ತೇ ಚ ಪುನಃ ಸಾಧ್ವೀ ತಾಮುವಾಚ ಸರಿದ್ವರಾಂ ॥ ॥ ೩೮ ॥

॥ ಅನಸೂಯೋವಾಚ ॥

ಯದಿ ಪ್ರಸನ್ನಾ ದೇವೇಶಿ ಯದ್ಯಸ್ತಿ ಚ ಕೃಪಾ ಮಯಿ ।
ತ್ವಯಾ ಸ್ಥೇಯಂ ನಿಶ್ಚಲತ್ವಾದಸ್ಮಿನ್ದೇವಿ ತಪೋವನೇ ॥ ॥ ೩೯ ॥

---

೩೪-೩೫. ಋಷಿಶ್ರೇಷ್ಠನಾದ ಅತ್ರಿಯು ಆ ಹಳ್ಳದಲ್ಲಿ ಕುತ್ತಿಗೆಯ ಉದ್ದವಾಗಿ ನೀರು ತುಂಬಿಕೊಂಡು ಸುಂದರವಾಗಿರುವುದನ್ನು ನೋಡಿ, ಈ ಗಂಗೆಯು ಮಹಾ ಮಹಿಮೆಯುಳ್ಳವಳೆಂದು ಹೇಳಿ, ಇದು ನನ್ನ ತಪಸ್ಸಿನ ಮಹಿಮೆಯೋ ಅಥವಾ ಮತ್ತೊಬ್ಬರ ತಪಸ್ಸಿನ ಮಹಿಮೆಯೋ ಎಂದು ಭಕ್ತಿಯಿಂದ ಆ ಗಂಗೆಯನ್ನು ಸ್ತೋತ್ರಮಾಡಿದನು.

೩೬-೩೭. ಆ ಬಳಿಕ ಅತ್ರಿಮುನಿಯು ಪರಿಶುದ್ಧವಾದ ಆ ನೀರಿನಲ್ಲಿ ಸ್ನಾನವನ್ನೂ ಆಚಮನವನ್ನೂ ಮಾಡಿ ಮತ್ತೆ ಸ್ತೋತ್ರಮಾಡಿದನು. ಪ್ರತಿದಿನವೂ ಅವರಿಬ್ಬರೂ ಆ ನೀರಿನಲ್ಲಿಯೇ ತಮ್ಮ ನಿತ್ಯಕರ್ಮಗಳನ್ನು ಮಾಡುತ್ತಿದ್ದರು.

೩೮. ಆ ಬಳಿಕ, ಗಂಗೆಯು ಅನಸೂಯೆಯನ್ನು ಕುರಿತು ಇನ್ನು ನಾನು ನನ್ನ ಸ್ಥಳಕ್ಕೆ ಹೋಗುವೆನು ಎಂದಳು. ಈ ಮಾತನ್ನು ಕೇಳಿ ಪತಿವ್ರತೆಯಾದ ಅನಸೂಯೆಯು ಗಂಗೆಯನ್ನು ಕುರಿತು

೩೯-೪೨. ಎಲೈ ಗಂಗಾದೇವಿಯೇ, ನೀನು ನನಗೆ ಪ್ರಸನ್ನಳಾಗಿದ್ದರೆ ನನ್ನಲ್ಲಿ ಕೃಪೆಯಿಟ್ಟು ಈ ತಪೋವನದಲ್ಲಿ ನೀನು ಶಾಶ್ವತವಾಗಿ ಇರಬೇಕು.

ಮಹತಾಂ ಚ ಸ್ವಭಾವಶ್ಚ ನಾಂಗೀಕೃತ್ಯ ಪರಿತ್ಯಜೇತ್ ।
ಇತ್ಯುಕ್ತ್ವಾ ಚ ಕರೌ ಬಧ್ವಾ ತಾಂ ತುಷ್ಟಾವ ಪುನಃ ಪುನಃ ॥ ॥ ೪೦ ॥

ಋಷಿಶ್ಚಾಪಿ ತಥೋವಾಚ ತ್ವಯಾ ಸ್ಥೇಯಂ ಸರಿದ್ವರೇ ।
ಸಾನುಕೂಲಾ ಭವ ತ್ವಂ ಹಿ ಸಾನಾಥಾನ್ದೇವಿ ನಃ ಕುರು ॥ ೪೧ ॥

ತದೀಯಂ ತದ್ವಚಃ ಶ್ರುತ್ವಾ ರಮ್ಯಂ ಗಂಗಾ ಸರಿದ್ವರಾ ।
ಪ್ರಸನ್ನಮನಸಾ ಗಂಗಾಽನಸೂಯಾಂ ವಾಕ್ಯಮಬ್ರವೀತ್ ॥ ೪೨ ॥

॥ ಗಂಗೋವಾಚ ॥

ಶಂಕರಾರ್ಚನಸಂಭೂತಫಲಂ ವರ್ಷಸ್ಯ ಯಚ್ಛಸಿ ।
ಸ್ವಾಮಿನಶ್ಚ ತದಾ ಸ್ಥಾಸ್ಯೇ ದೇವಾನಾಮುಪಕಾರಣಾತ್ ॥ ೪೩ ॥

ತಥಾ ದಾನೈರ್ನ ಮೇ ತುಷ್ಟಿಸ್ತೀರ್ಥಸ್ನಾನೈಸ್ತಥಾ ಚ ನೈ ।
ಯಜ್ಞೈಸ್ತಥಾಥವಾ ಯೋಗೈರ್ಯಥಾ ಪಾತಿವ್ರತೇನ ಚ ॥ ೪೪ ॥

---

ಮಹಾತ್ಮರು ಸ್ವಭಾವವಾಗಿ ತಾವು ಒಪ್ಪಿಕೊಂಡುದನ್ನು ಎಂದಿಗೂ ಮಾಡದೆ ಬಿಡರು, ಎಂದು ಹೇಳಿ ಕೈಮುಗಿದುಕೊಂಡು ಮತ್ತೆ ಮತ್ತೆ ಸ್ತೋತ್ರಮಾಡಿದಳು. ಅತ್ರಿಮುನಿಯು ಕೂಡ ನದೀಶ್ರೇಷ್ಠಳಾದ ಗಂಗೆಯೇ, ನಮ್ಮನ್ನು ಅನಾಥರನ್ನಾಗಿ ಮಾಡದೆ ಅನುಕೂಲಳಾಗಿ ನೀನು ಈ ಸ್ಥಳದಲ್ಲಿಯೇ ಇರಬೇಕು, ಎಂದನು. ಮನೋಹರವಾದ ಅವನ ಮಾತನ್ನು ಕೇಳಿ ಗಂಗೆಯು ಸಂತೋಷಚಿತ್ತಳಾಗಿ ಅನಸೂಯೆಯನ್ನು ಕುರಿತು

೪೩. ಗಂಗೆಯು ಹೇಳಿದಳು.—ಎಲೈ ಅನಸೂಯೆಯೇ, ಒಂದು ವರ್ಷದ ವರೆಗೆ ಶಿವಪೂಜೆಯನ್ನೂ, ಪತಿಗೆ ಸೇವೆಯನ್ನೂ ಮಾಡಿದ ಫಲವನ್ನು ಕೊಟ್ಟರೆ ದೇವತೆಗಳ ಉಪಕಾರಕ್ಕಾಗಿ ನಾನು ಇಲ್ಲಿರುವೆನು.

೪೪. ಪತಿಭಕ್ತಿಯಿಂದ ನನಗೆ ಸಂತೋಷವುಂಟಾಗುವಂತೆ ದಾನಗಳಿಂದಲೂ, ತೀರ್ಥಗಳ ಸೇವನೆಯಿಂದಲೂ, ಯಜ್ಞಗಳಿಂದಲೂ, ಯೋಗಾಭ್ಯಾಸಗಳಿಂದಲೂ ನನಗೆ ಸಂತೋಷವುಂಟಾಗುವುದಿಲ್ಲ.

ಪತಿವ್ರತಾಂ ಯಥಾ ದೃಷ್ಟ್ವಾ ಮನಸಃ ಪ್ರೀಣನಂ ಭವೇತ್ ।
ತಥಾ ನಾನ್ಯೈರುಪಾಯೈಶ್ಚ ಸತ್ಯಂ ಮೇ ವ್ಯಾಹೃತಂ ಸತಿ ॥ ೪೫ ॥

ಪತಿವ್ರತಾಂ ಸ್ತ್ರಿಯಂ ದೃಷ್ಟ್ವಾ ಪಾಪನಾಶೋ ಭವೇನ್ಮಮ ।
ಶುದ್ಧಾ ಜಾತಾ ವಿಶೇಷೇಣ ಗೌರೀತುಲ್ಯಾ ಪತಿವ್ರತಾ ॥ ೪೬ ॥

ತಸ್ಮಾಚ್ಚ ಯದಿ ಲೋಕಸ್ಯ ಹಿತಾಯ ತತ್ಪ್ರಯಚ್ಛಸಿ ।
ತರ್ಹ್ಯಹಂ ಸ್ಥಿರತಾಂ ಯಾಸ್ಯೇ ಯದಿ ಕಲ್ಯಾಣಮಿಚ್ಛಸಿ ॥ ೪೭ ॥

॥ ಸೂತ ಉವಾಚ ॥

ಇತ್ಯೇವಂ ವಚನಂ ಶ್ರುತ್ವಾಽನಸೂಯಾ ಸಾ ಪತಿವ್ರತಾ ।
ಗಂಗಾಯೈ ಪ್ರದದೌ ಪುಣ್ಯಂ ಸರ್ವಂ ತದ್ವರ್ಷಸಂಭವಂ ॥ ೪೮ ॥

ಮಹತಾಂ ಚ ಸ್ವಭಾವೋ ಹಿ ಪರೇಷಾಂ ಹಿತಮಾವಹೇತ್ ।
ಸುವರ್ಣಂ ಚಂದನಂ ಚೇಕ್ಷುರಸಸ್ತತ್ರ ನಿದರ್ಶನಂ ॥ ೪೯ ॥

---

೪೫-೪೭. ಪತಿವ್ರತೆಯನ್ನು ನೋಡಿ ನನಗೆ ಸಂತೋಷವುಂಟಾಗುವಂತೆ ಮತ್ತಾವ ಉಪಾಯದಿಂದಲೂ ಸಂತೋಷವಾಗದು. ಪತಿವ್ರತೆಯನ್ನು ನೋಡಿದರೆ ನನ್ನ ಪಾಪನಾಶವಾಗುವುದು. ಪತಿವ್ರತೆಯು ಗೌರೀದೇವಿಗೆ ಸಮಾನಳು. ಲೋಕ ಹಿತಕ್ಕಾಗಿ ನಿನಗೆ ಶುಭವನ್ನು ಮಾಡಬೇಕೆಂಬ ಅಪೇಕ್ಷೆಯಿದ್ದಲ್ಲಿ ನೀನು ಆ ಫಲವನ್ನು ಕೊಡುವುದಾದರೆ ನಾನು ಇಲ್ಲಿ ಸ್ಥಿರವಾಗಿ ನಿಲ್ಲುವೆನು ಎಂದಳು.

೪೮. ಸೂತನು ಹೇಳಿದನು.—ಆ ಪತಿವ್ರತೆಯಾದ ಅನಸೂಯೆಯು ಈ ಮಾತನ್ನು ಕೇಳಿ ಗಂಗೆಗೆ ಒಂದು ವರ್ಷದ ಆ ಪುಣ್ಯವನ್ನೆಲ್ಲ ಕೊಟ್ಟಳು.

೪೯. ಮಹಾತ್ಮರು ಪರರಿಗೆ ಹಿತವನ್ನೇ ಮಾಡುವ ಸ್ವಭಾವದವರು. ಚಿನ್ನ, ಶ್ರೀಗಂಧ, ಕಬ್ಬಿನಹಾಲು ಇವು ಈ ವಿಷಯದಲ್ಲಿ ನಿದರ್ಶನವಾಗಿರುವುವು. ಇವುಗಳನ್ನು ಕ್ರಮವಾಗಿ ಕಾಯಿಸಿ, ತೇದು, ಹಿಂಡಿದರೆ ಪ್ರಕಾಶವನ್ನೂ, ಸುವಾಸನೆಯನ್ನೂ, ಮಾಧುರ್ಯವನ್ನೂ ಕೊಡುವುವು.

ಏತದ್ದೃಷ್ಟ್ವಾನಸೂಯಂ ತತ್ಕರ್ಮ ಪಾತಿವ್ರತಂ ಮಹತ್ ।
ಪ್ರಸನ್ನೋಽಭೂನ್ಮಹಾದೇವಃ ಪಾರ್ಥಿವಾದಾವಿರಾಶು ವೈ ॥ ೫೦ ॥

॥ ಶಂಭುರುವಾಚ ॥
ದೃಷ್ಟ್ವಾ ತೇ ಕರ್ಮ ಸಾಧ್ವ್ಯೇತತ್ಪ್ರಸನ್ನೋಽಸ್ಮಿ ಪತಿವ್ರತೇ ।
ವರಂ ಬ್ರೂಹಿ ಪ್ರಿಯೇ ಮತ್ತೋ ಯತಃ ಪ್ರಿಯತರಾಸಿ ಮೇ ॥ ೫೧ ॥

ಅಥ ತೌ ದಂಪತೀ ಶಂಭುಮಭೂತಾಂ ಸುಂದರಾಕೃತಿಂ ।
ಪಂಚವಕ್ತ್ರಾದಿಸಂಯುಕ್ತಂ ಹರಂ ಪ್ರೇಕ್ಷ್ಯ ಸುವಿಸ್ಮಿತೌ ॥ ೫೨ ॥

ನತ್ವಾ ಸ್ತುತ್ವಾ ಕರೌ ಬಧ್ವಾ ಮಹಾಭಕ್ತಿಸಮನ್ವಿತೌ ।
ಅವೋಚೇತಾಂ ಸಮಭ್ಯರ್ಚ್ಯ ಶಂಕರಂ ಲೋಕಶಂಕರಂ ॥ ೫೩ ॥

॥ ದಂಪತೀ ಊಚತುಃ ॥
ಯದಿ ಪ್ರಸನ್ನೋ ದೇವೇಶ ಪ್ರಸನ್ನಾ ಜಗದಂಬಿಕಾ ।
ಅಸ್ಮಿಂಸ್ತಪೋವನೇ ತಿಷ್ಠ ಲೋಕಾನಾಂ ಸುಖದೋ ಭವ ॥ ೫೪ ॥

---

೫೦. ಅನಸೂಯೆಯು ಮಾಡಿದ ಈ ಕೆಲಸಗಳನ್ನೂ, ಅವಳ ಪಾತಿವ್ರತ್ಯದ ಮಹಿಮೆಯನ್ನೂ ಕಂಡು ಶಿವನು ಸಂತೋಷದಿಂದ ಅನಸೂಯೆಯು ಪೂಜೆಮಾಡುತ್ತಿದ್ದ ಪಾರ್ಥಿವಲಿಂಗದಲ್ಲಿ ವ್ಯಕ್ತ(ಪ್ರತ್ಯಕ್ಷ)ನಾದನು.

೫೧. ಶಿವನು ಹೇಳಿದನು.—ಎಲೈ ಪತಿವ್ರತೆಯೇ! ನೀನು ಮಾಡಿದ ಈ ಕಾರ್ಯಗಳನ್ನು ನೋಡಿ ಸಂತೋಷಗೊಂಡಿರುವೆನು. ನಿನಗೆ ಇಷ್ಟವಾದ ವರವನ್ನು ಕೇಳಿಕೋ, ಎಂದನು.

೫೨-೫೩. ಆಮೇಲೆ ಆ ದಂಪತಿಗಳು ಐದು ಮುಖಗಳೇ ಮೊಂತಾದುವುಗಳಿಂದ ಕೂಡಿದ ಸುಂದರಾಕಾರನಾಗಿರುವ ಶಿವನನ್ನು ನೋಡಿ ಆಶ್ಚರ್ಯಪಟ್ಟರು. ನಮಸ್ಕಾರಮಾಡಿ, ಸ್ತೋತ್ರಮಾಡಿ, ಕೈಮುಗಿದುಕೊಂಡು, ಮಹಾಭಕ್ತಿಯಿಂದ ಲೋಕಕ್ಕೆ ಸುಖವನ್ನುಂಟುಮಾಡುವ ಶಿವನನ್ನು ಪೂಜಿಸಿ

೫೪. ದಂಪತಿಗಳು ಹೇಳಿದರು.—ದೇವತೆಗಳಿಗೆಲ್ಲ ಸ್ವಾಮಿಯಾದ ಶಿವನೇ, ನೀನು ಪ್ರಸನ್ನನಾಗಿದ್ದರೂ ಜಗದಂಬೆಯಾದ ಪಾರ್ವತಿಯು ಪ್ರಸನ್ನಳಾಗಿದ್ದರೂ ನೀವಿಬ್ಬರೂ ಈ ತಪೋವನದಲ್ಲಿದ್ದು ಲೋಕಕ್ಕೆ ಸುಖವನ್ನುಂಟುಮಾಡಬೇಕು, ಎಂದರು.

ಪ್ರಸನ್ನಾ ಚ ತದಾ ಗಂಗಾ ಪ್ರಸನ್ನಶ್ಚ ಶಿವಸ್ತದಾ ।
ಉಭೌ ತೌ ಚ ಸ್ಥಿತೌ ತತ್ರ ಯತ್ರಾಸೀದೃಷಿಸತ್ತಮಃ ॥ ೫೫ ॥

ಅತ್ರೀಶ್ವರಶ್ಚ ನಾಮ್ನಾಸೀದೀಶ್ವರಃ ಪರದುಃಖಹಾ ।
ಗಂಗಾ ಸಾಪಿ ಸ್ಥಿತಾ ತತ್ರ ತದಾ ಗರ್ತೇಽಥ ಮಾಯಯಾ ॥ ೫೬ ॥

ತದ್ದಿನಂ ಹಿ ಸಮಾರಭ್ಯ ತತ್ರಾಕ್ಷಯ್ಯಜಲಂ ಸದಾ ।
ಹಸ್ತಮಾತ್ರೇ ಹಿ ತದ್ಗರ್ತೇ ಗಂಗಾ ಮಂದಾಕಿನೀ ಹ್ಯಭೂತ್ ॥ ೫೭ ॥

ತತ್ರೈವ ಋಷಯೋ ದಿವ್ಯಾಃ ಸಮಾಜಗ್ಮುಸ್ಸಹಾಂಗನಾಃ ।
ತೀರ್ಥಾತ್ತೀರ್ಥಾಚ್ಚ ತೇ ಸರ್ವೇ ಯೇ ಪುರಾ ನಿರ್ಗತಾ ದ್ವಿಜಾಃ ॥ ೫೮ ॥

ಯವಾಶ್ಚ ವ್ರೀಹಯಶ್ಚೈವ ಯಜ್ಞಯಾಗಪರಾಯಣಾಃ ।
ಯುಕ್ತಾ ಋಷಿವರ್ಯೈಸ್ತೈಶ್ಚ ಹೋಮಂ ಚಕ್ರುಶ್ಚ ತೇ ಜನಾಃ ॥ ೫೯ ॥

ಕರ್ಮಭಿಸ್ತೈಶ್ಚ ಸಂತುಷ್ಟಾ ವೃಷ್ಟಿಂ ಚಕ್ರುರ್ಘನಾಸ್ತದಾ ।
ಆನಂದಃ ಪರಮೋ ಲೋಕೇ ಬಭೂವಾತಿ ಮುನೀಶ್ವರಾಃ ॥ ೬೦ ॥

---

೫೫-೫೭. ಆಗ ಗಂಗೆಯೂ, ಶಿವನೂ ಸಂತೋಷವನ್ನು ಹೊಂದಿ ಆ ಅತ್ರಿ ಮುನಿಯ ಆಶ್ರಮದಲ್ಲಿದ್ದರು. ಶಿವನು ಅತ್ರೀಶ್ವರನೆಂಬ ಹೆಸರಿನಿಂದ ಪರರ ದುಃಖವನ್ನು ನಾಶಮಾಡುತ್ತಿದ್ದನು. ಗಂಗೆಯೂ ಮಾಯಾಮಯವಾದ ತನ್ನ ಬೇರೊಂದು ರೂಪಿನಿಂದ ಆ ಹಳ್ಳದಲ್ಲಿದ್ದಳು. ಆ ದಿನ ಮೊದಲುಗೊಂಡು ಒಂದು ಮೊಳ ದುದ್ದದ ಹಳ್ಳದಲ್ಲಿ ಮಂದಾಕಿನೀ ಎಂಬ ಹೆಸರುಳ್ಳ ಗಂಗೆಯು ಮುಗಿಯದಷ್ಟು ನೀರನ್ನು ಕೊಡುತ್ತಿದ್ದಳು.

೫೮. ಹಿಂದೆ ಆ ಆಶ್ರಮದಿಂದ ಹೊರಟುಹೋಗಿದ್ದ ಋಷಿಗಳೂ, ಅವರ ಪತ್ನಿಯರೂ ಅನೇಕ ತೀರ್ಥಯಾತ್ರೆಗಳನ್ನು ಮಾಡಿಕೊಂಡು ಅಲ್ಲಿಗೆ ಬಂದರು.

೫೯. ಗೋಧಿ, ಭತ್ತ ಮುಂತಾದ ಧಾನ್ಯಗಳು ಅಲ್ಲಿ ಬೆಳೆದು, ಅಲ್ಲಿದ್ದ ಋಷಿಗಳೆಲ್ಲರೂ ಯಜ್ಞಯಾಗಗಳಲ್ಲಿ ಆಸಕ್ತರಾಗಿ ಹೋಮಗಳನ್ನು ಮಾಡಿದರು.

೬೦. ಎಲೈ ಋಷಿಗಳೇ, ಕೇಳಿರಿ. ಆ ಋಷಿಗಳು ಮಾಡಿದ ಕರ್ಮಗಳಿಂದ ತೃಪ್ತಿಯನ್ನು ಹೊಂದಿದ ಮೇಘರೂಪರಾದ ದೇವತೆಗಳು ವಿಶೇಷವಾದ ಮಳೆಯನ್ನು ಸುರಿಸಿದರು. ಲೋಕಗಳಲ್ಲೆಲ್ಲ ವಿಶೇಷವಾದ ಆನಂದವುಂಟಾಯಿತು.

ಅತ್ರೀಶ್ವರಸ್ಯ ಮಾಹಾತ್ಮ್ಯಮಿತ್ಯುಕ್ತಂ ವಃ ಸುಖಾವಹಂ ।
ಭುಕ್ತಿಮುಕ್ತಿಪ್ರದಂ ಸರ್ವಕಾಮದಂ ಭಕ್ತಿವರ್ಧನಂ ॥ ೬೧ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾ-
ಯಾಮತ್ರೀಶ್ವರ ಮಾಹಾತ್ಮ್ಯವರ್ಣನಂ ನಾಮ
ಚತುರ್ಥೋಽಧ್ಯಾಯಃ



---

೬೧. ಭುಕ್ತಿಯನ್ನೂ, ಮುಕ್ತಿಯನ್ನೂ, ಸಮಸ್ತ ಇಷ್ಟಾರ್ಥಗಳನ್ನೂ ಕೊಡ ತಕ್ಕ, ಭಕ್ತಿಯನ್ನು ಹೆಚ್ಚಿಸುವ, ನಿಮಗೆಲ್ಲ ಸುಖವನ್ನುಂಟುಮಾಡುವ ಅತ್ರೀಶ್ವರನ ಮಹಿಮೆಯನ್ನು ಈರೀತಿ ಹೇಳಿರುವೆನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಅತ್ರೀಶ್ವರ ಮಹಾತ್ಮ್ಯವರ್ಣನೆಯೆಂಬ
ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಪಂಚಮೋಽಧ್ಯಾಯಃ



॥ ಸೂತ ಉವಾಚ ॥

ಕಾಲಂಜರೇ ಗಿರೌ ದಿವ್ಯೇ ನೀಲಕಂಠೋ ಮಹೇಶ್ವರಃ ।
ಲಿಂಗರೂಪಸ್ಸದಾ ಚೈವ ಭಕ್ತಾನಂದಪ್ರದಃ ಸದಾ ॥ ೧ ॥

ಮಹಿಮಾ ತಸ್ಯ ದಿವ್ಯೋಽಸ್ತಿ ಶ್ರುತಿಸ್ಮೃತಿಪ್ರಕೀರ್ತಿತಃ ।
ತೀರ್ಥಂ ತದಾಖ್ಯಯಾ ತತ್ರ ಸ್ನಾನಾತ್ಪಾತಕನಾಶಕೃತ್ ॥ ೨ ॥

---

## ಐದನೆಯ ಅಧ್ಯಾಯವು.

೧-೨. ಸೂತನು ಹೇಳಿದನು.—ಕಾಲಂಜರವೆಂಬ ಪರ್ವತದಲ್ಲಿ ನೀಲಕಂಠನಾದ ಶಿವನು ಲಿಂಗರೂಪವಾಗಿ ಯಾವಾಗಲೂ ಭಕ್ತರಿಗೆ ಆನಂದವನ್ನುಂಟುಮಾಡುತ್ತಿರುವನು. ಅವನ ದಿವ್ಯವಾದ ಮಹಿಮೆಯು ವೇದಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ಹೇಳಿರುವುದು. ಅಲ್ಲಿರುವ ತೀರ್ಥವೂ ಶಿವನ ಹೆಸರಿನಿಂದಲೇ ಪ್ರಸಿದ್ಧವಾಗಿ ಅದರಲ್ಲಿ ಸ್ನಾನಮಾಡಿದವರ ಪಾಪಗಳನ್ನು ನಾಶಮಾಡತಕ್ಕುದಾಗಿರುವುದು.

ರೇವಾತೀರೇ ಯಾನಿ ಸಂತಿ ಶಿವಲಿಂಗಾನಿ ಸುವ್ರತಾಃ ।
ಸರ್ವಸೌಖ್ಯಕರಾಣೀಹ ತೇಷಾಂ ಸಂಖ್ಯಾ ನ ವಿದ್ಯತೇ ॥ ೩ ॥

ಸಾ ಚ ರುದ್ರಸ್ವರೂಪಾ ಹಿ ದರ್ಶನಾತ್ಪಾಪಹಾರಿಕಾ ।
ತಸ್ಯಾಂ ಸ್ಥಿತಾಶ್ಚ ಯೇ ಕೇಚಿತ್ಪಾಷಾಣಾಃ ಶಿವರೂಪಿಣಃ ॥ ೪ ॥

ತಥಾಪಿ ಚ ಪ್ರವಕ್ಷ್ಯಾಮಿ ಯಥಾನ್ಯಾನಿ ಮುನೀಶ್ವರಾಃ ।
ಪ್ರಧಾನಶಿವಲಿಂಗಾನಿ ಭುಕ್ತಿಮುಕ್ತಿಪ್ರದಾನಿ ಚ ॥ ೫ ॥

ಆರ್ತೇಶ್ವರಸುನಾಮಾ ಹಿ ವರ್ತತೇ ಪಾಪಹಾರಕಃ ।
ಪರಮೇಶ್ವರ ಇತಿ ಖ್ಯಾತಃ ಸಿಂಹೇಶ್ವರ ಇತಿ ಸ್ಮೃತಃ ॥ ೬ ॥

ಶರ್ಮೇಶಶ್ಚ ತಥಾ ಚಾತ್ರ ಕುಮಾರೇಶ್ವರ ಏವ ಚ ।
ಪುಂಡರೀಕೇಶ್ವರಃ ಖ್ಯಾತೋ ಮಂಡಪೇಶ್ವರ ಏವ ಚ ॥ ೭ ॥

ತೀಕ್ಷ್ಣೇಶನಾಮಾ ತತ್ರಾಸೀದ್ದರ್ಶನಾತ್ಪಾಪಹಾರಕಃ ।
ಧುಂಧುರೇಶ್ವರನಾಮಾಸೀತ್ಪಾಪಹಾ ನರ್ಮದಾತಟೇ ॥ ೮ ॥

---

೩-೫. ಎಲೈ ಋಷಿಗಳೇ, ರೇವಾನದಿಯ ತೀರದಲ್ಲಿ ಯಾವ ಶಿವಲಿಂಗಗಳಿರುವುವೋ ಅವು ಸಮಸ್ತ ಸೌಖ್ಯಗಳನ್ನೂ ಕೊಡತಕ್ಕವುಗಳಾಗಿ ಲೆಕ್ಕವಿಲ್ಲದಷ್ಟು ಇರುವುವು. ಆ ರೇವಾನದಿಯೂ ಶಿವಸ್ವರೂಪವಾಗಿ ದರ್ಶನಮಾಡುವುದರಿಂದಲೇ ಪಾಪಗಳನ್ನು ನಾಶಮಾಡತಕ್ಕುದಾಗಿರುವುದು. ಆ ನದಿಯಲ್ಲಿರುವ ಕಲ್ಲುಗಳೆಲ್ಲವೂ ಶಿವಸ್ವರೂಪವಾದುವುಗಳು. ಓ ಮುನಿಶ್ರೇಷ್ಠರೇ, ಹಾಗಾದರೂ ಮುಖ್ಯವಾದ ಭುಕ್ತಿಮುಕ್ತಿಫಲವನ್ನು ಕೊಡುವ ಬೇರೆ ಶಿವಲಿಂಗಗಳನ್ನು ಹೇಳುವೆನು, ಕೇಳಿ.

೬-೭. ಪಾಪಪರಿಹಾರವನ್ನು ಮಾಡುವ ಆರ್ತೇಶ್ವರನೂ, ಪರಮೇಶ್ವರನೂ, ಸಿಂಹೇಶ್ವರನೂ ಪ್ರಸಿದ್ಧರು. ಶರ್ಮೇಶ್ವರ, ಕುಮಾರೇಶ್ವರ, ಪುಂಡರೀಕೇಶ್ವರ, ಮಂಡಕೇಶ್ವರ, ತೀಕ್ಷ್ಣೇಶ್ವರರೂ ಪ್ರಸಿದ್ಧರು—ಮತ್ತು ಪಾಪಗಳನ್ನು ಪರಿಹರಿಸ ತಕ್ಕವರು.

೮-೯. ನರ್ಮದಾನದಿಯ ದಡದಲ್ಲಿ ಪಾಪಪರಿಹಾರಕನಾದ ಧುಂಧುರೇಶ್ವರ

ಶೂಲೇಶ್ವರ ಇತಿ ಖ್ಯಾತಸ್ತಥಾ ಕುಂಭೇಶ್ವರಃ ಸ್ಮೃತಃ ।
ಕುಬೇರೇಶ್ವರನಾಮಾಪಿ ತಥಾ ಸೋಮೇಶ್ವರಃ ಸ್ಮೃತಃ ॥ ೯ ॥

ನೀಲಕಂಠೋ ಮಂಗಲೇಶೋ ಮಂಗಲಾಯತನೋ ಮಹಾನ್ ।
ಮಹಾಕಪೀಶ್ವರೋ ದೇವಃ ಸ್ಥಾಪಿತೋ ಹಿ ಹನೂಮತಾ ॥ ೧೦ ॥

ತತಶ್ಚ ನಂದಿಕೋ ದೇವೋ ಹತ್ಯಾಕೋಟಿನಿವಾರಕಃ ।
ಸರ್ವಕಾಮಾರ್ಥದಶ್ಚೈವ ಮೋಕ್ಷದೋ ಹಿ ಪ್ರಕೀರ್ತಿತಃ ॥ ೧೧ ॥

ನಂದಿಕೇಶಂ ಚ ಯಶ್ಚೈವ ಪೂಜಯೇತ್ತ್ವರಯಾ ಮುದಾ ।
ನಿತ್ಯಂ ತಸ್ಯಾಖಿಲಾ ಸಿದ್ಧಿರ್ಭವಿಷ್ಯತಿ ನ ಸಂಶಯಃ ॥ ೧೨ ॥

ತತ್ರ ತೀರೇ ಚ ಯಃ ಸ್ನಾತಿ ರೇವಾಯಾಂ ಮುನಿಸತ್ತಮಾಃ ।
ತಸ್ಯ ಕಾಮಾಶ್ಚ ಸಿಧ್ಯಂತಿ ಸರ್ವಂ ಪಾಪಂ ವಿನಶ್ಯತಿ ॥ ೧೩ ॥

॥ ಋಷಯ ಊಚುಃ ॥

ಏವಂ ತಸ್ಯ ಚ ಮಾಹಾತ್ಮ್ಯಂ ಕಥಂ ತತ್ರ ಮಹಾಮತೇ ।
ನಂದಿಕೇಶಸ್ಯ ಕೃಪಯಾ ಕಥ್ಯತಾಂ ಚ ತ್ವಯಾಧುನಾ ॥ ೧೪ ॥

---

ನಿರುವನು. ಶೂಲೇಶ್ವರ, ಕುಂಭೇಶ್ವರ, ಕುಬೇರೇಶ್ವರ, ಸೋಮೇಶ್ವರ, ನೀಲಕಂಠ, ಮಂಗಳೇಶ ಇವರೂ ಇರುವರು.

೧೦-೧೧. ಹನುಮಂತನು ಸ್ಥಾಪಿಸಿದ ಮಹಾಕಪೀಶ್ವರಲಿಂಗವೂ ಇರುವುದು. ನಂದೀಶ್ವರನು ಕೋಟಿ ಬ್ರಹ್ಮಹತ್ಯಾದಿಗಳನ್ನು ನಿವಾರಣೆಮಾಡುವನು. ಸಮಸ್ತ ಇಷ್ಟಾರ್ಥಗಳನ್ನೂ ಕೊಟ್ಟು ಮೋಕ್ಷವನ್ನೂ ಕೊಡುವನು.

೧೨-೧೩. ನಂದಿಕೇಶ್ವರನನ್ನು ಯಾರು। ಪ್ರೀತಿಯಿಂದ ಪ್ರತಿದಿನವೂ ಪೂಜಿಸುವರೋ ಅವರಿಗೆ ಸಮಸ್ತ-ಸಿದ್ಧಿಗಳೂ ಉಂಟಾಗುವುದರಲ್ಲಿ ಸಂದೇಹವಿಲ್ಲ. ಆ ಸ್ಥಳದಲ್ಲಿ ರೇವಾನದಿಯಲ್ಲಿ ಸ್ನಾನಮಾಡಿದವರ ಪಾಪಗಳು ನಾಶವಾಗಿ ಅವರ ಇಷ್ಟಾರ್ಥ ಸಿದ್ಧಿಯಾಗುವುದು.

೧೪. ಋಷಿಗಳು ಕೇಳಿದರು.—ಮಹಾಬುದ್ಧಿಶಾಲಿಯಾದ ಓ ಸೂತನೇ, ದಯೆಯಿಟ್ಟು ಆ ನಂದಿಕೇಶ್ವರನ ಮಹಿಮೆಯನ್ನು ನಮಗೆ ಹೇಳಬೇಕು ಎನ್ನಲು,

॥ ಸೂತ ಉವಾಚ ॥

ಸಮ್ಯಕ್ಪೃಷ್ಟಂ ಭವದ್ಭಿಶ್ಚ ಕಥಯಾಮಿ ಯಥಾಶ್ರುತಂ ।
ಶೌನಕಾದ್ಯಾಶ್ಚ ಮುನಯಃ ಸರ್ವೇ ಹಿ ಶೃಣುತಾದರಾತ್ ॥ ೧೫ ॥

ಪುರಾ ಯುಧಿಷ್ಠಿರೇಣೈವಂ ಪೃಷ್ಟಶ್ಚ ಋಷಿಸತ್ತಮಃ ।
ಯಥೋವಾಚ ತಥಾ ವಚ್ಮಿ ಭವತ್ಸ್ನೇಹಾನುಸಾರತಃ ॥ ೧೬ ॥

ರೇವಾಯಾಃ ಪಶ್ಚಿಮೇ ತೀರೇ ಕರ್ಣಿಕೀ ನಾಮ ವೈ ಪುರೀ ।
ವಿರಾಜತೇ ಸುಶೋಭಾಢ್ಯಾ ಚತುರ್ವರ್ಣಸಮಾಕುಲಾ ॥ ೧೭ ॥

ತತ್ರ ದ್ವಿಜವರಃ ಕಶ್ಚಿದುತ್ತರಸ್ಯ ಕುಲಸಂಭವಃ
ಕಾಶ್ಯಾಂ ಗತಶ್ಚ ಪುತ್ರಾಭ್ಯಾಮರ್ಪಯಿತ್ವಾ ಸ್ವಪತ್ನಿಕಾಂ ॥ ೧೮ ॥

ತತ್ರೈವ ಸ ಮೃತೋ ವಿಪ್ರಃ ಪುತ್ರಾಭ್ಯಾಂ ಚ ಶ್ರುತಂ ತದಾ ।
ತದೀಯಂ ಚೈವ ತತ್ಕೃತ್ಯಂ ಚಕ್ರಾತೇ ಪುತ್ರಕಾವುಭೌ ॥ ೧೯ ॥

---

೧೫. ಸೂತನು ಹೇಳಿದನು.—ಶೌನಕಾದಿ ಋಷಿಗಳೇ, ನೀವು ಒಳ್ಳೆಯ ಪ್ರಶ್ನೆಯನ್ನು ಮಾಡಿದಿರಿ. ನಾನು ಕೇಳಿರುವಂತೆ ನಂದಿಕೇಶ್ವರನ ಮಹಿಮೆಯನ್ನು ಹೇಳುವೆನು, ಪ್ರೀತಿಯಿಂದ ಕೇಳಿರಿ.

೧೬. ಹಿಂದೆ ಧರ್ಮರಾಯನು ಮಾರ್ಕಂಡೇಯಋಷಿಯನ್ನು ಈವಿಚಾರದಲ್ಲಿ ಪ್ರಶ್ನೆಮಾಡಿದನು. ಆ ಋಷಿಯು ಹೇಳಿದ ಉತ್ತರವನ್ನೇ ನಿಮಗೆ ಪ್ರೀತಿಯಿಂದ ಹೇಳುವೆನು.

೧೭. ರೇವಾನದಿಯ ಪಶ್ಚಿಮದಿಕ್ಕಿನ ದಡದಲ್ಲಿ ಕರ್ಣಿಕೀ ಎಂಬ ಪಟ್ಟಣವು ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದ ಜನರಿಂದ ತುಂಬಿ ಶೋಭಿಸುತ್ತಿರುವುದು.

೧೮-೨೨. ಆ ಪಟ್ಟಣದಲ್ಲಿ ಉತ್ತರವೆಂಬ ವಂಶದಲ್ಲಿ ಹುಟ್ಟಿದ ಒಬ್ಬ ಬ್ರಾಹ್ಮಣನು ತನ್ನ ಪತ್ನಿಯನ್ನು ತನ್ನಿಬ್ಬರು ಮಕ್ಕಳ ವಶಕ್ಕೆ ಬಿಟ್ಟು ಕಾಶಿಗೆ ಹೋದನು. ಆ ಬ್ರಾಹ್ಮಣನು ಅಲ್ಲಿಯೇ ಮರಣವನ್ನು ಹೊಂದಿದನು. ಮಕ್ಕಳಿಬ್ಬರೂ ಇದನ್ನು

ಪತ್ನೀ ಚ ಪಾಲಯಾಮಾಸ ಪುತ್ರೌ ಪುತ್ರಹಿತೈಷಿಣೀ ।
ಪುತ್ರೌ ಚ ವರ್ಜಯಿತ್ವಾ ಚ ವಿಭಕ್ತಂ ವೈ ಧನಂ ತಯಾ ॥ ೨೦ ॥

ಸ್ವೀಯಂ ಚ ರಕ್ಷಿತಂ ಕಿಂಚಿದ್ಧನಂ ಮರಣಹೇತವೇ ॥
ತತಶ್ಚ ದ್ವಿಜಪತ್ನೀ ಹಿ ಕಿಯತ್ಕಾಲಂ ಮೃತಾ ಚ ಸಾ ॥ ೨೧ ॥

ಕಚಾಚಿತ್ಕ್ರಿಯಮಾಣಾ ಸಾ ವಿವಿಧಂ ಪುಣ್ಯಮಾಚರತ್ ।
ನ ಮೃತಾ ದೈವಯೋಗೇನ ದ್ವಿಜಪತ್ನೀ ಚ ಸಾ ದ್ವಿಜಾಃ ॥ ೨೨ ॥

ಯದಾ ಪ್ರಾಣಾನ್ನ ಮುಮುಚೇ ಮಾತಾ ದೈನಾರ್ತಯೋಶ್ಚ ಸಾ ।
ತದ್ದೃಷ್ಟ್ವಾ ಜನನೀಕಷ್ಟಂ ಪುತ್ರಕಾವೂಚತುಸ್ತದಾ ॥ ೨೩ ॥

॥ ಪುತ್ರಾವೂಚತುಃ ॥

ಕಿಂ ನ್ಯೂನಂ ವಿದ್ಯತೇ ಮಾತಃ ಕಷ್ಟಂ ಯದ್ವಿದ್ಯತೇ ಮಹತ್ ।
ಪ್ರಿಯತಾಂ ತದ್ದ್ರುತಂ ಪ್ರೀತ್ಯಾ ತದಾವಾಂ ಕಾರವಾವಹೇ ॥ ೨೪ ॥

॥ ಸೂತ ಉವಾಚ ॥

ತಚ್ಛ್ರುತ್ವೋಕ್ತಂ ತಯಾ ತತ್ರ ನ್ಯೂನಂ ಮೇ ವಿದ್ಯತೇ ಬಹು ।
ತದೇವ ಕ್ರಿಯತೇ ಚೇದ್ವೈ ಸುಖೇನ ಮರಣಂ ಭವೇತ್ ॥ ॥ ೨೫ ॥

---

ಕೇಳಿ ಅವನ ಉತ್ತರಕ್ರಿಯೆಗಳನ್ನು ಮಾಡಿದರು. ಮಕ್ಕಳಲ್ಲಿ ಪ್ರೀತಿಯುಳ್ಳ ಆ ಬ್ರಾಹ್ಮಣನ ಪತ್ನಿಯು ಆ ಇಬ್ಬರು ಮಕ್ಕಳನ್ನು ಕಾಪಾಡುತ್ತಿದ್ದಳು. ಆಮೇಲೆ ಬ್ರಾಹ್ಮಣನ ಪತ್ನಿಯು ಮಕ್ಕಳನ್ನು ಬಿಟ್ಟು ಬೇರೆಯಾಗಿ ತನ್ನ ಗಂಡನು ಸಂಪಾದಿಸಿದ ಧನವನ್ನು ಅವರಿಗೆ ಹಂಚಿಕೊಟ್ಟು ತನ್ನ ಮರಣಕಾಲದವರೆಗೆ ತನಗೆ ಬೇಕಾದುದನ್ನು ಇಟ್ಟುಕೊಂಡು ಅನೇಕ ಪುಣ್ಯಕಾರ್ಯಗಳನ್ನು ಮಾಡಿದಳು. ಅದೃಷ್ಟವಶದಿಂದ ಅವಳಿಗೆ ಮರಣವು ಸುಖಕರವಾಗಲಿಲ್ಲ.

೨೩-೨೪. ಮಕ್ಕಳಿಬ್ಬರೂ ಪ್ರಾಣವನ್ನು ಬಿಡದೆ ಕಷ್ಟಪಡುತ್ತಿದ್ದ ತಾಯಿಯ ಕಷ್ಟವನ್ನು ನೋಡಿ ಎಲೈ ತಾಯೇ, ನಿನಗೆ ಏನು ಕಡಿಮೆಯಾಗಿದೆ? ಬಹಳ ಕಷ್ಟ ಪಡುತ್ತಿರುವೆಯಲ್ಲಾ. ನಿನ್ನ ಇಷ್ಟವನ್ನು ಪ್ರೀತಿಯಿಂದ ಹೇಳು. ನಾವಿಬ್ಬರೂ ಅದನ್ನು ಮಾಡುವೆವು, ಎಂದು ಹೇಳಿದರು.

೨೫-೨೬. ಆ ಬ್ರಾಹ್ಮಣಪತ್ನಿಯು, ನನ್ನ ಆಸೆಯು ಬಹಳವಾಗಿದೆ. ಆ ಕೆಲಸವನ್ನೇ ನೀವು ಮಾಡಿದರೆ ನನ್ನ ಪ್ರಾಣವು ಸುಖವಾಗಿ ಹೋಗುವುದು, ಎನ್ನಲು,

ಜ್ಯೇಷ್ಠಪುತ್ರಶ್ಚ ಯಸ್ತಸ್ಯಾಸ್ತೇನೋಕ್ತಂ ಕಥ್ಯತಾಂ ತ್ವಯಾ ।
ಕರಿಷ್ಯಾಮಿ ತದೇತದ್ಧಿ ತಯಾ ಚ ಕಥಿತಂ ತದಾ ॥ ೨೬ ॥

॥ ದ್ವಿಜಪತ್ನ್ಯುವಾಚ ॥

ಶೃಣು ಪುತ್ರ ವಚಃ ಪ್ರೀತ್ಯಾ ಪುರಾಸೀನ್ಮೇ ಮನಃಸ್ಪೃಹಾ ।
ಕಾಶ್ಯಾಂ ಗಂತುಂ ತಥಾ ನಾಸೀದಿದಾನೀಂ ಮ್ರಿಯತೇ ಪುನಃ ॥ ೨೭ ॥

ಮಮಾಸ್ಥೀನಿ ತ್ವಯಾ ಪುತ್ರ ಕ್ಷೇಪಣೀಯಾನ್ಯತಂದ್ರಿತಂ ।
ಗಂಗಾಜಲೇ ಶುಭಂ ತೇಽದ್ಯ ಭವಿಷ್ಯತಿ ನ ಸಂಶಯಃ ॥ ೨೮ ॥

॥ ಸೂತ ಉವಾಚ ॥

ಇತ್ಯುಕ್ತೇ ಚ ತಯಾ ಮಾತ್ರಾ ಸ ಜ್ಯೇಷ್ಠತನಯೋಽಬ್ರವೀತ್ ।
ಮಾತರಂ ಮಾತೃಭಕ್ತಿಸ್ತು ಸುವ್ರತಾಂ ಮರಣೋನ್ಮುಖೀಂ ॥ ೨೯ ॥

॥ ಪುತ್ರ ಉವಾಚ ॥

ಮಾತಸ್ತ್ವಯಾ ಸುಖೇನೈವ ಪ್ರಾಣಾಸ್ತ್ಯಾಜ್ಯಾ ನ ಸಂಶಯಃ ।
ತವ ಕಾರ್ಯಂ ಪುರಾ ಕೃತ್ವಾ ಪಶ್ಚಾತ್ಕಾರ್ಯಂ ಮದೀಯಕಂ ॥ ೩೦ ॥

---

ಹಿರಿಯಮಗನು ನಾನು ಮಾಡುವೆನು ಹೇಳಮ್ಮಾ, ಎಂದನು. ಆಗಲಾಕೆಯು ಹೇಳಿದಳು.

೨೭-೨೯. ಮಗನೇ, ಕೇಳು. ಕಾಶಿಗೆ ಹೋಗಬೇಕೆಂಬ ಆಸೆಯು ಹಿಂದೆ ನನಗೆ ಬಹಳವಾಗಿದ್ದಿತು. ಹೋಗುವುದಕ್ಕಾಗಲಿಲ್ಲ. ಈಗ ಮರಣಕಾಲವು ಬಂದಿತು. ನನ್ನ ಮೂಳೆಗಳನ್ನು ಗಂಗೆಯ ನೀರಿನಲ್ಲಿ ತಪ್ಪದೆ ಹಾಕುತ್ತೇನೆಂದರೆ, ನಿನಗೆ ಒಳ್ಳೆಯದಾಗುವುದು, ಎಂದಳು. ಹೀಗೆಂದು ತಾಯಿಯು ಹೇಳುತ್ತಲು ಮಾತೃ ಭಕ್ತಿಯುಳ್ಳ ಹಿರಿಯಮಗನು, ಅನೇಕ ವ್ರತಗಳನ್ನು ಮಾಡಿ, ಮರಣಕಾಲವು ಸಮೀಪಿಸಿದ ತಾಯಿಗೆ ಹೇಳಿದನು.

೩೦-೩೨. ಅಮ್ಮಾ, ನೀನು ಸಂದೇಹಪಡಬೇಡ. ಸುಖವಾಗಿ ಪ್ರಾಣವನ್ನು ಬಿಡು. ನಿನ್ನ ಕೆಲಸವನ್ನು ಮೊದಲು ಮಾಡಿ, ಆಮೇಲೆ ನನ್ನ ಕೆಲಸವನ್ನು ಮಾಡುವೆನು, ಎಂದು ಹೇಳಿ ತಾಯಿಯ ಕೈಗೆ ನೀರನ್ನು ಹಾಕಿದನು. ಆ ಮಗನು

ಇತಿ ಹಸ್ತೇ ಜಲಂ ದತ್ವಾ ಯಾವತ್ಪುತ್ರೋ ಗೃಹಂ ಗತಃ ।
ತಾವತ್ಸಾ ಚ ಮೃತಾ ತತ್ರ ಹರಸ್ಮರಣತತ್ಪರಾ ॥ ೩೧ ॥

ತಸ್ಯಾಶ್ಚೈವ ತು ಯತ್ಕೃತ್ಯಂ ತತ್ಸರ್ವಂ ಸಂವಿಧಾಯ ಸಃ ।
ಮಾಸಿಕಂ ಕರ್ಮ ಕೃತ್ವಾ ತು ಗಮನಾಯ ಪ್ರಚಕ್ರಮೇ ॥ ೩೨ ॥

ದ್ವಯೋಃ ಶ್ರೇಷ್ಠತಮೋ ಯೋ ವೈ ಸುವಾದೋ ನಾಮ ವಿಶ್ರುತಃ ।
ತದಸ್ಥೀನಿ ಸಮಾದಾಯ ನಿಸ್ಸೃತಸ್ತೀರ್ಥಕಾಮ್ಯಯಾ ॥ ೩೩ ॥

ಸಂಗೃಹ್ಯ ಸೇವಕಂ ಕಂಚಿತ್ತೇನೈವ ಸಹಿತಸ್ತದಾ ।
ಆಶ್ವಾಸ್ಯ ಭಾರ್ಯಾಪುತ್ರಾಂಶ್ಚ ಮಾತುಃ ಪ್ರಿಯಚಿಕೀರ್ಷಯಾ ॥ ೩೪ ॥

ಶ್ರಾದ್ಧದಾನಾದಿಕಂ ಭೋಜ್ಯಂ ಕೃತ್ವಾ ವಿಧಿಮನುತ್ತಮಂ ।
ಮಂಗಲಸ್ಮರಣಂ ಕೃತ್ವಾ ನಿರ್ಜಗಾಮ ಗೃಹಾದ್ದ್ವಿಜಃ ॥ ೩೫ ॥

ತದ್ದಿನೇ ಯೋಜನಂ ಗತ್ವಾ ವಿಂಶತಿಗ್ರಾಮಕೇ ಶುಭೇ ।
ಉವಾಸಾಸ್ತಂ ಗತೇ ಭಾನೌ ಗೃಹೇ ವಿಪ್ರಸ್ಯ ಕಸ್ಯಚಿತ್ ॥ ೩೬ ॥

---

ಮನೆಯೊಳಕ್ಕೆ ಹೋಗಿ ಬರುವುದರೊಳಗಾಗಿ ತಾಯಿಯು ಶಿವನ ಸ್ಮರಣೆಯನ್ನು ಮಾಡುತ್ತ ಪ್ರಾಣವನ್ನು ಬಿಟ್ಟಳು. ಆ ಹಿರಿಯಮಗನು ತಾಯಿಯ ಉತ್ತರಕ್ರಿಯೆಗಳನ್ನೆಲ್ಲ ವಿಧಿಗನುಸಾರವಾಗಿ ನೆರವೇರಿಸಿ ಮಾಸಿಕವನ್ನೂ ಮಾಡಿ, ಕಾಶಿಗೆ ಪ್ರಯಾಣ ಮಾಡಲು ಸಿದ್ಧವಾದನು.

೩೩-೩೫. ಆ ಇಬ್ಬರು ಮಕ್ಕಳಲ್ಲಿ ಸುವಾದನೆಂಬ ಹಿರಿಯಮಗನು ತನ್ನ ತಾಯಿಯ ಮೂಳೆಗಳನ್ನು ತೆಗೆದುಕೊಂಡು ತೀರ್ಥಯಾತ್ರೆಗೆ ಹೊರಟು, ತನ್ನ ಜತೆಯಲ್ಲಿ ಒಬ್ಬ ಆಳನ್ನು ಕರೆದುಕೊಂಡು, ಹೆಂಡತಿ ಮಕ್ಕಳಿಗೆ ಸಮಾಧಾನವಾದ ಮಾತುಗಳನ್ನು ಹೇಳಿ ತಾಯಿಗೆ ಹಿತಮಾಡಬೇಕೆಂಬ ಉದ್ದೇಶದಿಂದ ಶ್ರಾದ್ಧಗಳನ್ನೂ ದಾನಗಳನ್ನೂ ಸಂತರ್ಪಣೆಗಳನ್ನೂ ಮಾಡಿ, ಮಂಗಳಕರವಾದ ಸ್ತೋತ್ರಗಳನ್ನು ಹೇಳುತ್ತ ಮನೆಯಿಂದ ಹೊರಟನು.

೩೬. ಆ ದಿವಸ ಒಂದು ಗಾವುದ ದೂರ ಪ್ರಯಾಣಮಾಡಿ ವಿಂಶತಿಗ್ರಾಮವೆಂಬ ಶುಭಕರವಾದ ಊರಿನಲ್ಲಿ ಸೂರ್ಯಾಸ್ತಮಾನವಾಗುತ್ತಲು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇಳಿದುಕೊಂಡನು.

ಚಕ್ರೇ ಸಂಧ್ಯಾದಿ ಸತ್ಕರ್ಮ ಸ ದ್ವಿಜೋ ವಿಧಿಪೂರ್ವಕಂ ।
ಸ್ತವಾದಿ ಕೃತವಾಂಸ್ತತ್ರ ಶಂಭೋರದ್ಭುತಕರ್ಮಣಃ ॥ ೩೭ ॥

ಸೇವಕೇನ ತದಾ ಯುಕ್ತೋ ಬ್ರಾಹ್ಮಣಃ ಸಂಸ್ಥಿತಸ್ತದಾ ।
ಯಾಮಿನೀ ಚ ಗತಾ ತತ್ರ ಮುಹೂರ್ತದ್ವಯಸಂಮಿತಾ ॥ ೩೮ ॥

ಏತಸ್ಮಿನ್ನಂತರೇ ತತ್ರೈಕವರ್ಮಾಶ್ಚರ್ಯಮಭೂತ್ತದಾ ।
ಶೃಣುತಾದರತಸ್ತಚ್ಚ ಮುನಯೋ ವೋ ವದಾಮ್ಯಹಂ ॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ನಂದಿಕೇಶ್ವರಮಾಹಾತ್ಮ್ಯೇ ಬ್ರಾಹ್ಮಣೀಮರಣವರ್ಣನಂ
ನಾಮ ಪಂಚಮೋಽಧ್ಯಾಯಃ

---

೩೭-೩೮. ಆ ಬ್ರಾಹ್ಮಣನು ವಿಧಿಗನುಸಾರವಾಗಿ ಸಂಧ್ಯಾವಂದನಾದಿ ಕರ್ಮಗಳನ್ನು ನೆರವೇರಿಸಿ, ಶಿವನ ಸ್ತೋತ್ರಗಳನ್ನು ಮಾಡಿದನು. ಈ ರೀತಿ ಸೇವಕನೊಡನೆ ಆ ಮನೆಯಲ್ಲಿ ಎರಡು ಮುಹೂರ್ತಗಳನ್ನು, ಅಂದರೆ ಒಂದು ಯಾಮವನ್ನು ಕಳೆದನು.

೩೯. ಈ ಸಂದರ್ಭದಲ್ಲಿ ಅಲ್ಲಿ ಒಂದು ಆಶ್ಚರ್ಯಕರವಾದ ಸಂಗತಿಯು ನಡೆಯಿತು. ಎಲೈ ಮುನಿಗಳೇ, ಪ್ರೀತಿಯಿಂದ ಕೇಳಿರಿ. ಅದನ್ನು ನಿಮಗೆ ಹೇಳುವೆನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ನಂದಿಕೇಶ್ವರ ಮಹಾತ್ಮ್ಯೆಯಲ್ಲಿ ಬ್ರಾಹ್ಮಣಸ್ತ್ರೀಯ ಮರಣ ವರ್ಣನೆ
ಯೆಂಬ ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಷಷ್ಠೋಽಧ್ಯಾಯಃ

---

॥ ಸೂತ ಉವಾಚ ॥

ಗೌಶ್ಚೈಕಾಪ್ಯಭವತ್ತತ್ರ ಹ್ಯಂಗಣೇ ಬಂಧಿತಾ ಶುಭಾ ।
ತದೈವ ಬ್ರಾಹ್ಮಣೋ ರಾತ್ರಾವಾಜಗಾಮ ಬಹಿರ್ಗತಃ ॥ ೧ ॥

ಸ ಉವಾಚ ಪ್ರಿಯಾಂ ಸ್ತ್ರೀಯಾಂ ದೃಷ್ಟ್ವಾ ಗಾಮಂಗಣೇ ಸ್ಥಿತಾಂ ।
ಅದುಗ್ಧಾಂ ಖೇದನಿರ್ವಿಣ್ಣೋ ದೋಗ್ಧುಕಾಮೋ ಮುನೀಶ್ವರಾಃ ॥ ೨ ॥

ಗೌಃ ಪ್ರಿಯೇ ನೈವ ದುಗ್ಧಾ ತೇ ಸೇತ್ಯುಕ್ತ್ವಾ ವತ್ಸಮಾನಯತ್ ।
ದೋಹನಾರ್ಥಂ ಸಮಾಹೂಯ ಸ್ತ್ರಿಯಂ ಶೀಘ್ರತರಂ ತದಾ ॥ ೩ ॥

---

## ಆರನೆಯ ಅಧ್ಯಾಯವು.

೧-೫. ಸೂತನು ಹೇಳಿದನು.—ಆ ಮನೆಯ ಅಂಗಳದಲ್ಲಿ ಮಂಗಳಕರವಾದ ಒಂದು ಹಸುವನ್ನು ಕಟ್ಟಿದ್ದಿತು. ಹೊರಗೆ ಹೋಗಿದ್ದ ಮನೆಯ ಯಜಮಾನನಾದ ಬ್ರಾಹ್ಮಣನು ಆಗ-ತಾನೆ ಮನೆಗೆ ಬಂದು, ತನ್ನ ಹೆಂಡತಿಯನ್ನೂ ಹಸುವನ್ನೂ ನೋಡಿ ಇನ್ನೂ ಹಾಲು ಕರೆಯದೆ ಇದ್ದುದರಿಂದ, ಇನ್ನೂ ಏಕೆ ಹಾಲನ್ನು ಕರೆಯಲಿಲ್ಲವೆಂದು ಕರುವನ್ನು ಹೊಡೆದು-ತಂದನು. ಹಾಲು ಕರೆವುದಕ್ಕಾಗಿ ಹೆಂಡತಿಯನ್ನು ಬೇಗ ಬರುವಂತೆ ಹೇಳಿ ಕರುವನ್ನು ಗೂಟಕ್ಕೆ ತಾನೇ ಕಟ್ಟಿ

ವತ್ಸಂ ಕೀಲೇ ಸ್ವಯಂ ಬದ್ಧ್ವಂ ಯತ್ನಂ ಚೈವಾಕರೋತ್ತದಾ ।
ಬ್ರಾಹ್ಮಣಸ್ಸ ಗೃಹಸ್ವಾಮೀ ಮುನಯೋ ದುಗ್ಧಲಾಲಸಃ ॥ ೪ ॥

ವತ್ಸೋಽಪಿ ಕರ್ಷಮಾಣಶ್ಚ ಪಾದೇ ವೈ ಪಾದಪೀಡನಂ ।
ಚಕಾರ ಬ್ರಾಹ್ಮಣಶ್ಚೈವ ಕಷ್ಟಂ ಪ್ರಾಪ್ತಶ್ಚ ಸುವ್ರತಾಃ ॥ ೫ ॥

ತೇನ ಪಾದಪ್ರಹಾರೇಣ ಸ ದ್ವಿಜಃ ಕ್ರೋಧಮೂರ್ಛಿತಃ ।
ವತ್ಸಂ ಚ ತಾಡಯಾಮಾಸ ಕೂಪೈರ್ದೃಢತರಂ ತದಾ ॥ ೬ ॥

ವತ್ಸೋಽಪಿ ಪೀಡಿತಸ್ತೇನ ಶ್ರಾಂತಶ್ಚೈವಾಭವತ್ತದಾ ।
ದುಗ್ಧಾ ಗೌರ್ನೋಚಿತೋ ವತ್ಸೋ ನ ಕ್ರೋಧೇನ ದ್ವಿಜನ್ಮನಾ ॥ ೭ ॥

ಗೌರ್ದುಗ್ಧಂ ಚ ಮಹತ್ಪ್ರೀತ್ಯಾ ರೋದನಂ ಚಾಕರೋತ್ತದಾ ।
ದೃಷ್ಟ್ವಾ ಚ ರೋದನಂ ತಸ್ಯಾ ವತ್ಸೋ ವಾಕ್ಯಮಥಾಬ್ರವೀತ್ ॥ ೮ ॥

॥ ವತ್ಸ ಉವಾಚ ॥

ಕಥಂ ಚ ರುದ್ಯತೇ ಮಾತಃ ಕಿಂ ತೇ ದುಃಖಮುಪಸ್ಥಿತಂ ।
ತನ್ನಿವೇದಯ ಮೇ ಪ್ರೀತ್ಯಾ ತಚ್ಛೃತ್ವಾ ಗೌರವೋಚತ ॥ ೯ ॥

---

ಹಾಕಲು ಪ್ರಯತ ಮಾಡಿದನು. ಎಲೈ ಬ್ರಾಹ್ಮಣರೇ, ಕೇಳಿರಿ. ಆ ಬ್ರಾಹ್ಮಣನು ಹಾಲಿನ ಆಸೆಯಿಂದ ಕರುವನ್ನು ಎಳೆಯುತ್ತಿದ್ದನು. ಎಳೆನುಕೊಂಡು ಹೋಗುತ್ತಿರುವಾಗ ಕರುವು ಬ್ರಾಹ್ಮಣನ ಕಾಲನ್ನು ತುಳಿಯಿತು.ಬ್ರಾಹ್ಮಣನಿಗೆ ನೋವಾಯಿತು.

೬-೮. ತನ್ನ ಕಾಲಿಗೆ ನೋವಾದುದರಿಂದ ಬ್ರಾಹ್ಮಣನು ಕೋಪಗೊಂಡು ಕರುವನ್ನು ಮರದಗೂಟದ ತುಂಡಿನಿಂದ ಗಟ್ಟಿಯಾಗಿ ಹೊಡೆದನು. ಕರುವೂ ಏಟಿನಿಂದ ಆಯಾಸವನ್ನು ಹೊಂದಿತು. ಹಾಲನ್ನು ಕರೆದಾಯಿತು. ಬ್ರಾಹ್ಮಣನು ಕೋಪದಿಂದ ಕರುವನ್ನು ಬಿಡಲಿಲ್ಲ. ಹಸುವು ಕರುವಿಗೆ ಹಾಲನ್ನು ಕೊಡಬೇಕೆಂಬ ಪ್ರೀತಿಯಿಂದ ಅಳುತ್ತಿದ್ದಿತು. ಅದರ ಅಳುವನ್ನು ಕಂಡು ಕರುವು ಮಾತಾಡಿತು. ಇದನ್ನು ಆ ಬ್ರಾಹ್ಮಣನು ಮಾತೃಭಕ್ತಿಯ ಮಹಿಮೆಯಿಂದ ತಿಳಿಯುತ್ತಿದ್ದನು.

೯-೧೦. ಕರುವು, ಅಮ್ಮಾ! ಏತಕ್ಕೆ ಅಳುವೆ? ನಿನಗೇಕೆ ದುಃಖವುಂಟಾಯಿತು? ಅದನ್ನು ನನಗೆ ಹೇಳು, ಎಂದಿತು. ಆ ಮಾತನ್ನು ಕೇಳಿ ಹಸುವು,

ಶ್ರೂಯತಾಂ ಪುತ್ರ ಮೇ ದುಃಖಂ ವಕ್ತುಂ ಶಕ್ನೋಮ್ಯಹಂ ನ ಹಿ ।
ದುಷ್ಟೇನ ತಾಡಿತಸ್ತ್ವಂ ಚ ತೇನ ದುಃಖಂ ಮಮಾಪ್ಯಭೂತ್ ॥ ೧೦ ॥

॥ ಸೂತ ಉವಾಚ ॥

ಸ್ವಮಾತುರ್ವಚನಂ ಶ್ರುತ್ವಾ ಸ ವತ್ಸಃ ಪ್ರತ್ಯಬೋಧಯತ್ ।
ಪ್ರತ್ಯುವಾಚ ಸ್ವಜನನೀಂ ಪ್ರಾರಬ್ಧಪರಿನಿಶ್ಚಿತಃ ॥ ೧೧ ॥

ಕಿಂ ಕರ್ತವ್ಯಂ ಕ್ವ ಗಂತವ್ಯಂ ಕರ್ಮಬದ್ಧಾ ವಯಂ ಯತಃ ।
ಕೃತಂ ಚೈವ ಯಥಾ ಪೂರ್ವಂ ಭುಜ್ಯತೇ ಚ ತಥಾಧುನಾ ॥ ೧೨ ॥

ಹಸತಾ ಕ್ರಿಯತೇ ಕರ್ಮ ರುದತಾ ಪರಿಭುಜ್ಯತೇ ।
ದುಃಖದಾತಾ ನ ಕೋಽಪ್ಯಸ್ತಿ ಸುಖದಾತಾ ನ ಕಶ್ಚನ ॥ ೧೩ ॥

ಸುಖದುಃಖೇ ಪರೋ ದತ್ತ ಇತ್ಯೇಷಾ ಕುಮತಿರ್ಮತಾ ।
ಅಹಂ ಚಾಪಿ ಕರೋಮ್ಯತ್ರ ಮಿಥ್ಯಾಜ್ಞಾನಂ ತದೋಚ್ಯತೇ ॥ ೧೪ ॥

---

ಎಲೈ ಮಗುವೆ! ನನ್ನ ದುಃಖವನ್ನು ಹೇಳಲು ನನ್ನ ಕೈಲಾಗದು. ಆ ಕೆಟ್ಟ ಬ್ರಾಹ್ಮಣನು ನಿನ್ನನ್ನು ಹೊಡೆದನು. ಅದರಿಂದ ನನಗೆ ದುಃಖವಾಯಿತು, ಎಂದು ಹೇಳಿತು.

೧೧-೧೩. ತನ್ನ ತಾಯಿಯು ಹೇಳಿದ ಮಾತನ್ನು ಕೇಳಿದ ಕರುವು ಪ್ರಾರಬ್ಧ ಕರ್ಮದ ಸ್ವರೂಪವನ್ನು ತಿಳಿದಿದ್ದುದರಿಂದ ತಾಯಿಯನ್ನು ಕುರಿತು, ಏನು ಮಾಡೋಣ? ಎಲ್ಲಿಗೆ ಹೋಗೋಣ? ನಾವೆಲ್ಲ ಕರ್ಮದ ಕಟ್ಟಿಗೆ ಸಿಕ್ಕಿದವರು. ಹಿಂದೆ ಹೇಗೆ ಕರ್ಮಮಾಡಿರುವೆವೋ ಈಗ ಅದರ ಫಲವನ್ನು ಅನುಭವಿಸುವೆವು. ನಗುತ್ತ ಕರ್ಮವನ್ನು ಮಾಡುವೆವು. ಅಳುತ್ತ ಫಲವನ್ನು ಅನುಭವಿಸುವೆವು. ದುಃಖವನ್ನೂ, ಸುಖವನ್ನೂ ಕೊಡತಕ್ಕವರು ಮತ್ತೊಬ್ಬರಾರೂ ಇರುವುದಿಲ್ಲ.

೧೪-೧೬. ಸುಖದುಃಖಗಳನ್ನು ಪರರು ಕೊಡುವರು ಎಂದು ಬುದ್ಧಿಯಿಲ್ಲದ ದಡ್ಡರು ಹೇಳುವರು. ನಾನು ಎಲ್ಲವನ್ನೂ ಮಾಡುವೆನು ಎಂದು ಹೇಳುವುದು ಮಿಥ್ಯಾ (ಭ್ರಾಂತಿ) ಜ್ಞಾನವೆನಿಸುವುದು. ತಾನು ಮಾಡಿದ ಕರ್ಮದಿಂದಲೇ

ಸ್ವಕರ್ಮಣಾ ಭವೇದ್ದುಃಖಂ ಸುಖಂ ತೇನೈವ ಕರ್ಮಣಾ ।
ತಸ್ಮಾಚ್ಚ ಪೂಜ್ಯತೇ ಕರ್ಮ ಸರ್ವಂ ಕರ್ಮಣಿ ಸಂಸ್ಥಿತಂ ॥ ೧೫ ॥

ತ್ವಂ ಚೈವಾಹಂ ಚ ಜನನೀ ಇಮೇ ಜೀವಾದಯಶ್ಚ ಯೇ ।
ತೇ ಸರ್ವೇ ಕರ್ಮಣಾ ಬದ್ಧಾ ನ ಶೋಚ್ಯಾಃ ಕರ್ಹಿಚಿತ್ತ್ವಯಾ ॥ ೧೬ ॥

॥ ಸೂತ ಉವಾಚ ॥

ಏವಂ ಶ್ರುತ್ವಾ ಸ್ವಪುತ್ರಸ್ಯ ವಚನಂ ಜ್ಞಾನಗರ್ಭಿತಂ ।
ಪುತ್ರಶೋಕಾನ್ವಿತಾ ದೀನಾ ಸಾ ಚ ಗೌರಬ್ರವೀದಿದಂ ॥ ೧೭ ॥

॥ ಗೌರುವಾಚ ॥

ವತ್ಸ ಸರ್ವಂ ವಿಜಾನಾಮಿ ಕರ್ಮಾಧೀನಾಃ ಪ್ರಜಾ ಇತಿ ।
ತಥಾಪಿ ಮಾಯಯಾ ಗ್ರಸ್ತಾ ದುಃಖಂ ಪ್ರಾಪ್ನೋಮ್ಯಹಂ ಪುನಃ ॥ ೧೮ ॥

ರೋದನಂ ಚ ಕೃತಂ ಭೂರಿ ದುಃಖಶಾಂತಿರ್ಭವೇನ್ನ ಹಿ ।
ಇತ್ಯೇತದ್ವಚನಂ ಶ್ರುತ್ವಾ ಪ್ರಸೂಂ ವತ್ಸೋಽಬ್ರವೀದಿದಂ ॥ ೧೯ ॥

---

ದುಃಖವೂ ಸುಖವೂ ಉಂಟಾಗುವುದು. ಆದುದರಿಂದಲೇ ಕರ್ಮಕ್ಕೆ ಪೂಜ್ಯತೆಯು ಬಂದಿರುವುದು. ಎಲ್ಲವೂ ಕರ್ಮಾಧೀನವಾಗಿರುವುದು. ತಾಯಿಯಾದ ನೀನೂ, ನಾನೂ, ಈ ಸಮಸ್ತ ಪ್ರಾಣಿಗಳೂ ಎಲ್ಲರೂ ಕರ್ಮದ ಕಟ್ಟಿಗೆ ಸಿಕ್ಕಿದವರು. ಹೇಗಾದರೂ ನೀನು ದುಃಖವನ್ನು ಪಡಬಾರದು ಎಂದಿತು.

೧೭. ಸೂತನು ಹೇಳಿದನು.—ಈ ರೀತಿಯಲ್ಲಿ ಜ್ಞಾನದಿಂದ ಕೂಡಿದ ಮಾತನ್ನು ಕರುವು ಹೇಳುತ್ತಲೂ, ತನ್ನ ಮಗುವಿನ ಕಷ್ಟವನ್ನು ನೋಡಿ ದುಃಖ ಪಡುತ್ತಿರುವ ಹಸುವು ಇಂತೆಂದಿತು.

೧೮-೧೯. ಹಸುವು ಹೇಳಿತು.—ಎಲೈ ಮಗುವೇ, ಪ್ರಜೆಗಳೆಲ್ಲರೂ ಕರ್ಮಾಧೀನರೆಂಬುದನ್ನು ನಾನು ತಿಳಿದಿರುವೆನು. ಹಾಗಾದರೂ ಮಾಯೆಗೆ ಅಧೀನವಾಗಿ ಪುನಃ ದುಃಖವನ್ನು ಹೊಂದುವೆನು. ಬಹಳವಾಗಿ ಅತ್ತೆನು. ಆದರೂ ದುಃಖ ಶಾಂತಿಯಾಗಲಿಲ್ಲ, ಎನ್ನಲು ಆ ಮಾತನ್ನು ಕೇಳಿ ಕರುವು ತಾಯಿಯನ್ನು ಕುರಿತು,

॥ ವತ್ಸ ಉವಾಚ ॥
ಯದ್ಯೇವಂ ಚ ವಿಜಾನಾಸಿ ಪುನಶ್ಚ ರುದನಂ ಕುತಃ ।
ಕೃತ್ವಾ ಚ ಸಾಧ್ಯತೇ ಕಿಂಚಿತ್ತಸ್ಮಾದ್ದುಃಖಂ ತ್ಯಜಾಧುನಾ ॥ ೨೦ ॥

॥ ಸೂತ ಉವಾಚ ॥
ಏವಂ ಪುತ್ರವಚಃ ಶ್ರುತ್ವಾ ತನ್ಮಾತಾ ದುಃಖಸಂಯುತಾ ।
ನಿಃಶ್ವಸ್ಯಾತಿ ತದಾ ಧೇನುರ್ವತ್ಸಂ ವಚನಮಬ್ರವೀತ್ ॥ ೨೧ ॥

॥ ಗೌರುವಾಚ ॥
ಮಮ ದುಃಖಂ ತದಾ ಗಚ್ಛೇದ್ಯಥಾ ದುಃಖಂ ತಥಾವಿಧಂ ।
ಭವೇದ್ಧಿ ಬ್ರಾಹ್ಮಣಸ್ಯಾಪಿ ಸತ್ಯಮೇತದ್ಬ್ರವೀಮ್ಯಹಂ ॥ ॥ ೨೨ ॥

ಪ್ರಾತಶ್ಚೈವ ಮಯಾ ಪುತ್ರ ಶೃಂಗಾಭ್ಯಾಂ ಹಿ ಹನಿಷ್ಯತೇ ।
ಹತಶ್ಚ ಜೀವಿತಂ ಸದ್ಯೋ ಯಾಸ್ಯತ್ಯಸ್ಯ ನ ಸಂಶಯಃ ॥ ೨೩ ॥

॥ ವತ್ಸ ಉವಾಚ ॥
ಪ್ರಥಮಂ ಯತ್ಕೃತಂ ಕರ್ಮ ತತ್ಫಲಂ ಭುಜ್ಯತೇಽಧುನಾ ।
ಅಸ್ಯಾಶ್ಚ ಬ್ರಹ್ಮಹತ್ಯಾಯಾ ಮಾತಃ ಕಿಂ ಫಲಮಾಪ್ಸ್ಯಸೇ ॥ ೨೪ ॥

---

೨೦-೨೧. ನೀನು ಇದನ್ನು ತಿಳಿದಮೇಲೆ ಮತ್ತೆ ಏಕೆ ಅಳುವೆ? ಅತ್ತು ಪ್ರಯೋಜನವೇನು ? ಆದುದರಿಂದ ದುಃಖವನ್ನು ಬಿಡು, ಎಂದು ಹೇಳಿತು. ಕರುವಿನ ಮಾತನ್ನು ಕೇಳಿ ಹಸುವು ದುಃಖದಿಂದ ನಿಟ್ಟುಸಿರನ್ನು ಬಿಟ್ಟು ಕರುವನ್ನು ಕುರಿತು ಇಂತೆಂದಿತು.

೨೨-೨೩. ನನ್ನ ದುಃಖವು ಎಂಥದೋ ಅಂತಹ ದುಃಖವೇ ಬ್ರಾಹ್ಮಣನಿಗೂ ಆದರೆ ಆಗ ನಿಜವಾಗಿ ನನ್ನ ದುಃಖವು ನಿವಾರಣೆಯಾಗುವುದು. ಎಲೈ ಮಗುವೇ, ನಾಳೆಯದಿನ ಪ್ರಾತಃಕಾಲದಲ್ಲಿಯೇ ಅವನ ಮಗನನ್ನು ಕೊಂಬುಗಳಿಂದ ತಿವಿಯುವೆನು. ನಾನು ತಿವಿಯುತ್ತಲು ಅವನು ಪ್ರಾಣವನ್ನು ಬಿಡುವನು. ಈ ವಿಷಯದಲ್ಲಿ ಸಂದೇಹವಿಲ್ಲ ಎಂದಿತು. ಈ ಮಾತನ್ನು ಕೇಳಿ ಕರುವು

೨೪-೨೬. ಅಮ್ಮಾ, ಹಿಂದೆ ಮಾಡಿದ ಕರ್ಮಫಲವನ್ನು ಈಗ ಅನುಭವಿಸುತ್ತಿರುವೆವು. ಈ ಬ್ರಹ್ಮಹತ್ಯೆಗೆ ಯಾವ ಫಲವು ನಿನಗೆ ಬರುವುದೋ? ಪುಣ್ಯ

ಸಮಾಭ್ಯಾಂ ಪುಣ್ಯಪಾಪಾಭ್ಯಾಂ ಭವೇಜ್ಜನ್ಮ ಚ ಭಾರತೇ ।
ತಯೋಃ ಕ್ಷಯೇ ಚ ಭೋಗೇನ ಮಾತರ್ಮುಕ್ತಿರವಾಪ್ಯತೇ ॥ ೨೫ ॥

ಕದಾಪಿ ಕರ್ಮಣೋ ನಾಶಃ ಕದಾ ಭೋಗಃ ಪ್ರಜಾಯತೇ ।
ತಸ್ಮಾಚ್ಚ ಪುನರೇವಂ ತ್ವಂ ಕರ್ಮ ಮಾ ಕರ್ತುಮುದ್ಯತಾ ॥ ೨೬ ॥

ಅಹಂ ಕುತಸ್ತೇ ಪುತ್ರೋಽದ್ಯ ತ್ವಂ ಮಾತಾ ಕುತ ಏವ ಚ ।
ವೃಥಾಭಿಮಾನಃ ಪುತ್ರತ್ವೇ ಮಾತೃತ್ವೇ ಚ ವಿಚಾರ್ಯತಾಂ ॥ ೨೭ ॥

ಕ್ವ ಮಾತಾ ಕ್ವ ಪಿತಾ ವಿದ್ಧಿ ಕ್ವ ಸ್ವಾಮೀ ಕ್ವ ಕಲತ್ರಕಂ ।
ನ ಕೋಽಪಿ ಕಸ್ಯ ಚಾಸ್ತೀಹ ಸರ್ವೇಽಪಿ ಸ್ವಕೃತಂಭುಜಃ ॥ ೨೮ ॥

ಏವಂ ಜ್ಞಾತ್ವಾ ತ್ವಯಾ ಮಾತರ್ದುಃಖಂ ತ್ಯಾಜ್ಯಂ ಸುಯತ್ನತಃ ।
ಸುಭಗಾಚರಣಂ ಕಾರ್ಯಂ ಪರಲೋಕಸುಖೇಪ್ಸಯಾ ॥ ೨೯ ॥

---

ಪಾಪಗಳೆರಡೂ ಸಮನಾಗಿದ್ದರೆ ಈ ಭರತಖಂಡದಲ್ಲಿ ಜೀವರು ಹುಟ್ಟುವರು. ಅವುಗಳ ಫಲವನ್ನನುಭವಿಸಿದ-ಮೇಲೆ ಕರ್ಮಗಳೆಲ್ಲ ನಾಶವಾಗಲು ಮೋಕ್ಷವು ಬರುವುದು. ಕರ್ಮಗಳಿಗೆ ಫಲಾನುಭವಕಾಲವು ಯಾವಾಗಲೋ ಉಂಟಾಗುವುದು. ಕರ್ಮ ನಾಶವೂ ಯಾವಕಾಲಕ್ಕೋ ಉಂಟಾಗುವುದು. ಆದುದರಿಂದ ನೀನು ಇಂತಹ ಕರ್ಮವನ್ನು ಮತ್ತೆ ಮಾಡಬೇಡ.

೨೭-೨೯. ನಾನು ನಿನಗೆ ಮಗುವಾಗಿ ಏಕೆ ಹುಟ್ಟಿದೆನು? ನೀನು ನನಗೆ ಏಕೆ ತಾಯಿಯಾದೆ? ಮಗು-ತಾಯಿ ಎಂಬುದು ವ್ಯರ್ಥವಾದ ಅಭಿಮಾನವೆಂಬುದನ್ನು ವಿಚಾರಮಾಡಿ ತಿಳಿ. ತಾಯಿ ಎಂದರೇನು? ತಂದೆಯಾರು? ಒಡೆಯನಾರು? ಹೆಂಡತಿಯಾರು? ಯಾರೂ ಒಬ್ಬರಿಗೊಬ್ಬರು ಸಹಾಯಕರಲ್ಲ. ಈ ಲೋಕದಲ್ಲಿ ಎಲ್ಲರೂ ತಂತಮ್ಮ ಕರ್ಮಫಲಗಳನ್ನು ಅನುಭವಿಸುವವರಾಗಿರುವರು. ಅಮ್ಮಾ, ಇದನ್ನು ತಿಳಿದು ನಿನ್ನ ದುಃಖವನ್ನು ಪ್ರಯತ್ನಪೂರ್ವಕವಾಗಿ ಬಿಡು. ಪರಲೋಕದಲ್ಲಿ ಸುಖಾಪೇಕ್ಷೆಯಿಂದ ಒಳ್ಳೆಯ ಕೆಲಸಗಳನ್ನೇ ಮಾಡಬೇಕು, ಎಂದಿತು.

॥ ಗೌರುವಾಚ ॥

ಏವಂ ಜಾನಾಮ್ಯಹಂ ಪುತ್ರ ಮಾಯಾ ಮಾಂ ನ ಜಹಾತ್ಯಸೌ ।
ತ್ವದ್ದುಃಖೇನ ಸುದುಃಖಂ ಮೇ ತಸ್ಮೈ ದಾಸ್ಯೇ ತದೇವ ಹಿ ॥ ೩೦ ॥

ಪುನಶ್ಚ ಬ್ರಹ್ಮಹತ್ಯಾಯಾ ನಾಶೋ ಯತ್ರ ಭವೇದಿಹ ।
ತತ್ಸ್ಥಲಂ ಚ ಮಯಾ ದೃಷ್ಟಂ ಹತ್ಯಾ ಮೇ ಹಿ ಗಮಿಷ್ಯತಿ ॥ ೩೧ ॥

॥ ಸೂತ ಉವಾಚ ॥

ಇತ್ಯೇತದ್ವಚನಂ ಶ್ರುತ್ವಾ ಸ್ವಮಾತುರ್ಗೋರ್ದ್ವಿಜೋತ್ತಮಾಃ ।
ಮೌನತ್ವಂ ಸ್ವೀಕೃತಂ ತತ್ರ ವತ್ಸೇನೋಕ್ತಂ ನ ಕಿಂಚನ ॥ ೩೨ ॥

ತಯೋಸ್ತದದ್ಭುತಂ ವೃತ್ತಂ ಶ್ರುತ್ವಾ ಪಾಂಥೋ ದ್ವಿಜಸ್ತದಾ ।
ಹೃದಾ ವಿಚಾರಯಾಮಾಸ ವಿಸ್ಮಿತೋ ಹಿ ಮುನೀಶ್ವರಾಃ ॥ ೩೩ ॥

ಇದಮತ್ಯದ್ಭುತಂ ವೃತ್ತಂ ದೃಷ್ಟ್ವಾ ಪ್ರಾತರ್ಮಯಾ ಖಲು ।
ಗಂತವ್ಯಂ ಪುನರೇವಾತೋ ಗಂತವ್ಯಂ ತತ್ಸ್ಥಲಂ ಪುನಃ ॥ ೩೪ ॥

---

೩೦-೩೧. ಹಸುವು ಹೇಳಿತು.—ಎಲೈ ಮಗುವೇ, ಇದನ್ನೂ ನಾನು ಬಲ್ಲೆನು. ಈ ಅಜ್ಞಾನವು ನನ್ನನ್ನು ಬಿಡುವುದಿಲ್ಲ. ನಿನ್ನ ದುಃಖವನ್ನು ನೋಡಿ ನನಗೆ ಹೆಚ್ಚು ದುಃಖವಾಗಿರುವುದು. ಅದಕ್ಕೆ ಇದೇ ಪ್ರತಿಕ್ರಿಯೆಯು. ಈ ಲೋಕದಲ್ಲಿ ಬ್ರಹ್ಮಹತ್ಯೆಯು ಎಲ್ಲಿ ನಾಶವಾಗುವುದೋ ಆ ಸ್ಥಳವನ್ನು ನಾನು ಕಂಡಿರುವೆನು. ನನ್ನ ಬ್ರಹ್ಮಹತ್ಯೆಯು ನಿವಾರಣೆಯಾಗುವುದು, ಎಂದಿತು.

೩೨. ಸೂತನು ಹೇಳಿದನು.—ಎಲೈ ಬ್ರಾಹ್ಮಣಶ್ರೇಷ್ಠರೇ, ಹೀಗೆಂದು ತನ್ನ ತಾಯಿಯು ಹೇಳಿದ ಮಾತನ್ನು ಕರುವು ಕೇಳಿ ಸುಮ್ಮನಾಯಿತು. ಮತ್ತೆ ಏನನ್ನೂ ಹೇಳಲಿಲ್ಲ.

೩೩-೩೪. ಮಾರ್ಗಸ್ಥನಾದ ಬ್ರಾಹ್ಮಣನು ಹಸು ಮತ್ತು ಕರುಗಳ ಆಶ್ಚರ್ಯಕರವಾದ ನಡತೆಯನ್ನು ತನ್ನ ಮನಸ್ಸಿನಲ್ಲಿಯೇ ವಿಚಾರಮಾಡಿದನು. ತಾನೂ ಆಶ್ಚರ್ಯಪಟ್ಟು ನಾಳೆಯ ಪ್ರಾತಃಕಾಲದಲ್ಲಿ ಇವುಗಳ ಅದ್ಭುತಕಾರ್ಯಗಳನ್ನು ನೋಡಿ ಪ್ರಯಾಣಮಾಡಬೇಕು. ಆ ಬ್ರಹ್ಮಹತ್ಯೆಯು ನಾಶವಾಗತಕ್ಕ ಸ್ಥಳಕ್ಕೂ ನಾನು ಹೋಗಬೇಕು, ಎಂದು ನಿಶ್ಚಯಿಸಿದನು.

॥ ಸೂತ ಉವಾಚ ॥

ವಿಚಾರ್ಯೇತಿ ಹೃದಾ ವಿಪ್ರಃ ಸ ದ್ವಿಜಾಃ ಸೇವಕೇನ ಚ ।
ಸುಷ್ವಾಪ ತತ್ರ ಜನನೀಭಕ್ತಃ ಪರಮವಿಸ್ಮಿತಃ ॥ ೩೫ ॥

ಪ್ರಾತಃಕಾಲೇ ತದಾ ಜಾತೇ ಗೃಹಸ್ವಾಮೀ ಸಮುತ್ಥಿತಃ ।
ಬೋಧಯಾಮಾಸ ತಂ ಪಾಂಥಂ ವಚನಂ ಚೇದಮಬ್ರವೀತ್ ॥ ೩೬ ॥

॥ ದ್ವಿಜ ಉವಾಚ ॥

ಸ್ವಪಿಷಿ ತ್ವಂ ಕಿಮರ್ಥಂ ಹಿ ಪ್ರಾತಃಕಾಲೋಭವತ್ಖಲಂ ।
ಸ್ವಯಾತ್ರಾಂ ಕುರು ತಂ ದೇಶಂ ಗಮನೇಚ್ಛಾ ಚ ಯತ್ರ ಹ ॥ ೩೭ ॥

ತೇನೋಕ್ತಂ ಶ್ರೂಯತಾಂ ಬ್ರಹ್ಮನ್ಶರೀರೇ ಸೇವಕಸ್ಯ ಮೇ ।
ವರ್ತತೇ ಹಿ ವ್ಯಥಾ ಸ್ಥಿತ್ವಾ ಮುಹೂರ್ತಂ ಗಮ್ಯತೇ ತತಃ ॥ ೩೮ ॥

॥ ಸೂತ ಉವಾಚ ॥

ಇತ್ಯೇವಂ ಚ ಮಿಷಂ ಕೃತ್ವಾ ಸುಷ್ವಾಪ ಪುರುಷಸ್ತದಾ ।
ತದ್ವೃತ್ತಮಖಿಲಂ ಜ್ಞಾತುಮದ್ಭುತಂ ವಿಸ್ಮಯಾವಹಂ ॥ ೩೯ ॥

---

೩೫-೩೬. ಆ ಬ್ರಾಹ್ಮಣನು ತನ್ನ ಮನಸ್ಸಿನಲ್ಲಿ ಹೀಗೆ ಆಲೋಚಿಸಿ, ಅತ್ಯಾಶ್ಚರ್ಯಪಡುತ್ತ ತನ್ನ ಸೇವಕನೊಡನೆ ಅಲ್ಲಿಯೇ ಮಲಗಿಕೊಂಡನು. ಪ್ರಾತಃಕಾಲವಾದಮೇಲೆ ಮನೆಯ ಯಜಮಾನನು ಎದ್ದು, ಆ ದಾರಿಗನಾದ ಬ್ರಾಹ್ಮಣನನ್ನು ಎಬ್ಬಿಸುವುದಕ್ಕಾಗಿ ಅವನನ್ನು ಕುರಿತು,

೩೭. ಎಲೈ ಬ್ರಾಹ್ಮಣನೇ, ಬೆಳಗಾಯಿತಲ್ಲವೇ? ಇನ್ನೂ ಏಕೆ ಮಲಗಿರುವೆ? ನೀನು ಎಲ್ಲಿಗೆ ಹೋಗಬೇಕೋ ಅಲ್ಲಿಗೆ ಪ್ರಯಾಣಮಾಡಬಹುದು ಎಂದನು.

೩೮. ಅದಕ್ಕೆ ಆ ಬ್ರಾಹ್ಮಣನು, ಎಲೈ ದ್ವಿಜನೇ, ನನ್ನ ಸೇವಕನ ಶರೀರಕ್ಕೆ ಸೌಖ್ಯವಿಲ್ಲ. ಆದುದರಿಂದ ಒಂದು ಮುಹೂರ್ತದವರೆಗೆ ಇದ್ದು ಅನಂತರ ಪ್ರಯಾಣ ಮಾಡುವೆನು ಎಂದನು.

೩೯. ಹೀಗೆಂದು ನೆಪವನ್ನು ಮಾಡಿಕೊಂಡು ಆಶ್ಚರ್ಯಕರವಾದ ಮುಂದಿನ ನಡೆವಳಿಕೆಯನ್ನು ತಿಳಿಯಲು ಅಲ್ಲಿಯೇ ಮಲಗಿಕೊಂಡನು.

ದೋಹನಸ್ಯ ತದಾ ಕಾಲೇ ಬ್ರಾಹ್ಮಣಃ ಸ್ವಸುತಂ ಪ್ರತಿ ।
ಉವಾಚ ಗಂತುಕಾಮಶ್ಚ ಕಾರ್ಯಾರ್ಥಂ ಕುತ್ರಚಿಚ್ಚ ಸಃ ॥ ೪೦ ॥

॥ ಪಿತೋವಾಚ ॥

ಮಯಾ ತು ಗಮ್ಯತೇ ಪುತ್ರ ಕಾರ್ಯಾರ್ಥಂ ಕುತ್ರಚಿತ್ಪುನಃ ।
ಧೇನುರ್ದೋಹ್ಯಾ ತ್ವಯಾ ವತ್ಸ ಸಾವಧಾನಾದಿಯಂ ನಿಜಾ ॥ ೪೧ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಬ್ರಾಹ್ಮಣವರಸ್ಸ ಜಗಾಮ ಚ ಕುತ್ರಚಿತ್ ।
ಪುತ್ರಃ ಸಮುತ್ಥಿತಸ್ತತ್ರ ವತ್ಸಂ ಚ ಮುಕ್ತವಾಂಸ್ತದಾ ॥ ೪೨ ॥

ಮಾತಾ ಚ ತಸ್ಯ ದೋಹಾರ್ಥಮಾಜಗಾಮ ಸ್ವಯಂ ತದಾ ।
ದ್ವಿಜಪುತ್ರಸ್ತದಾ ವತ್ಸಂ ಖಿನ್ನಂ ಕೀಲೇನ ತಾಡಿತಂ ॥ ೪೩ ॥

ಬಂಧನಾರ್ಥಂ ಹಿ ಗೋಃ ಪಾರ್ಶ್ವಮನಯದ್ದುಗ್ಧಲಾಲಸಃ ।
ಪುನರ್ಗೌಶ್ಚ ತದಾ ಕ್ರುದ್ಧಾ ಶೃಂಗೇನಾತಾಡಯಚ್ಚ ತಂ ॥ ೪೪ ॥

ಪಪಾತ ಮೂರ್ಛಾಂ ಸಂಪ್ರಾಪ್ಯ ಸೋಽಪಿ ಮರ್ಮಣಿ ತಾಡಿತಃ ।
ಲೋಕಾಶ್ಚ ಮಿಲಿತಾಸ್ತತ್ರ ಗವಾ ಬಾಲೋ ವಿಹಿಂಸಿತಃ ॥ ೪೫ ॥

---

೪೦. ಹಸುವಿನ ಹಾಲನ್ನು ಕರೆಯುವ ಹೊತ್ತಿಗೆ ಬ್ರಾಹ್ಮಣನು ತನ್ನ ಮಗನನ್ನು ಕರೆದು, ತಾನು ಯಾವುದೋ ಕೆಲಸಕ್ಕೆ ಹೋಗಬೇಕಾಗಿದ್ದುದರಿಂದ

೪೧-೪೪. ಎಲೈ ಮಗನೇ, ನಾನು ಯಾವುದೋ ಕೆಲಸಕ್ಕಾಗಿ ಹೋಗಬೇಕಾಗಿದೆ. ನೀನು ಸಾವಧಾನವಾಗಿ ಈ ನಮ್ಮ ಹಸುವನ್ನು ಹಾಲನ್ನು ಕರೆಸು ಎಂದು ಹೇಳಿ ಬ್ರಾಹ್ಮಣನು ಹೊರಟುಹೋದನು. ಬ್ರಾಹ್ಮಣಪುತ್ರನು ಎದ್ದು ಕರುವನ್ನು ಬಿಟ್ಟನು. ಅವನ ತಾಯಿಯು ಹಾಲನ್ನು ಕರೆಯುವುದಕ್ಕೆ ಬಂದಳು. ಬ್ರಾಹ್ಮಣಪುತ್ರನು ಆಗ ಗೂಟದ ಏಟನ್ನುತಿಂದು ನೋವಿನಿಂದ ನರಳುತ್ತಿದ್ದ ಕರುವನ್ನು ಕಟ್ಟುವುದಕ್ಕಾಗಿ ಹಸುವಿನ ಹತ್ತಿರಕ್ಕೆ ಹೋದನು. ಹಸುವು ಕೋಪದಿಂದ ಅವನನ್ನು ಕೊಂಬಿನಿಂದ ತಿವಿಯಿತು.

೪೫-೪೮. ಅಪಾಯಸ್ಥಾನಕ್ಕೆ ಏಟು ಬಿದ್ದುದರಿಂದ ಬ್ರಾಹ್ಮಣಪುತ್ರನು ಮೂರ್ಛೆಹೊಂದಿ ಬಿದ್ದುಬಿಟ್ಟನು. ಜನರೆಲ್ಲ ಅಲ್ಲಿ ಗುಂಪುಗೂಡಿ ಹಸುವು ಹುಡುಗ

ಜಲಂ ಜಲಂ ವದಂತಸ್ತೇ ಪಿತ್ರಾದ್ಯಾ ಯತ್ರ ಸಂಸ್ಥಿತಾಃ ।
ಯತ್ನಶ್ಚ ಕ್ರಿಯತೇ ಯಾವತ್ತಾವದ್ಬಾಲೋ ಮೃತಸ್ತದಾ ॥ ೪೬ ॥

ಮೃತೇ ಚ ಬಾಲಕೇ ತತ್ರ ಹಾಹಾಕಾರೋ ಮಹಾನಭೂತ್ ।
ತನ್ಮಾತಾ ದುಃಖಿತಾ ಹ್ಯಾಸೀದ್ರುರೋದ ಚ ಪುನಃ ಪುನಃ ॥ ೪೭ ॥

ಕಿಂ ಕರೋಮಿ ಕ್ವ ಗಚ್ಛಾಮಿ ಕೋ ಮೇ ದುಃಖಂ ವ್ಯಪೋಹತಿ ।
ರುದಿತ್ವೇತಿ ತದಾ ಗಾಂ ಚ ತಾಡಯಿತ್ವಾ ವ್ಯಮೋಚಯತ್ ॥ ೪೮ ॥

ಶ್ವೇತವರ್ಣಾ ತದಾ ಸಾ ಗೌರ್ದ್ರುತಂ ಶ್ಯಾಮಾ ವ್ಯದೃಶ್ಯತ ।
ಅಹೋ ಚ ದೃಶ್ಯತಾಂ ಲೋಕಾಶ್ಚುಕ್ರುಶುಶ್ಚ ಪರಸ್ಪರಂ ॥ ೪೯ ॥

ಬ್ರಾಹ್ಮಣಶ್ಚ ತದಾ ಪಾಂಥೋ ದೃಷ್ಟ್ವಾಶ್ಚರ್ಯಂ ವಿನಿರ್ಗತಃ ।
ಯತ್ರ ಗೌಶ್ಚ ಗತಸ್ತತ್ರ ತಾಮನು ಬ್ರಾಹ್ಮಣೋ ಗತಃ ॥ ೫೦ ॥

ಊರ್ಧ್ವಪುಚ್ಛಂ ತದಾ ಕೃತ್ವಾ ಶೀಘ್ರಂ ಗೌರ್ನರ್ಮದಾಂ ಪ್ರತಿ ।
ಆಗತ್ಯ ನಂದಿಕಸ್ಯಾಸ್ಯ ಸಮೀಪೇ ನರ್ಮದಾಜಲೇ ॥ ೫೧ ॥

---

ನನ್ನು ತಿವಿಯಿತು. ಬೇಗ ನೀರುತನ್ನಿ ಎಂದು ಕೂಗುತ್ತ, ಹುಡುಗನನ್ನು ಉಪಚರಿಸುತ್ತಿದ್ದರು. ತಂದೆ ಮುಂತಾದವರೆಲ್ಲರೂ ಮಾಡಿದ ಪ್ರಯತ್ನವು ಫಲವಾಗದೆ ಹುಡುಗನು ಮರಣಹೊಂದಿದನು. ಹುಡುಗನು ಸತ್ತನೆಂಬುದು ತಿಳಿಯಲು ಜನರಲ್ಲಿ ಹಾಹಾಕಾರವುಂಟಾಯಿತು. ಆ ಹುಡುಗನ ತಾಯಿಯು ದುಃಖದಿಂದ ವಿಶೇಷವಾಗಿ ಅಳುತ್ತ, ನಾನೇನು ಮಾಡಲಿ ? ಎಲ್ಲಿಗೆ ಹೋಗಲಿ ? ನನ್ನ ದುಃಖವನ್ನು ಪರಿಹರಿಸುವವರಾರು ? ಎಂದು ಅಳುತ್ತ, ಹಸುವನ್ನು ಹೊಡೆದು ಹಗ್ಗವನ್ನು ಬಿಚ್ಚಿಬಿಟ್ಟಳು.

೪೯-೫೨. ಬ್ರಹ್ಮಹತ್ಯಾದೋಷದಿಂದ ಬಿಳಿಯಬಣ್ಣದ ಹಸುವು ಅಷ್ಟು ಬೇಗ ಕರಿಯದಾಗಿ ಕಾಣಿಸಿಕೊಂಡಿತು. ಅದನ್ನು ನೋಡಿ ಜನರೆಲ್ಲರೂ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು. ಮಾರ್ಗಸ್ಥನಾದ ಬ್ರಾಹ್ಮಣನು ಆಶ್ಚರ್ಯಪಡುತ್ತ ಆ ಹಸುವನ್ನು ಅನುಸರಿಸಿ ಅದರ ಹಿಂದೆಯೇ ಹೋದನು. ಹಸುವು ಬಾಲವನ್ನೆತ್ತಿಕೊಂಡು ಬೇಗನೆ ನರ್ಮದಾನದಿಯ ದಡದಲ್ಲಿರುವ ನಂದಿಕೇಶ್ವರನ ಸಮೀಪಕ್ಕೆ

ಸಂನಿಮಜ್ಜ್ಯ ತ್ರಿವಾರಂ ತು ಶ್ವೇತತ್ವಂ ಚ ಗತಾ ಹಿ ಸಾ ।
ಯಥಾಗತಂ ಗತಾ ಸಾ ಚ ಬ್ರಾಹ್ಮಣೋ ವಿಸ್ಮಯಂ ಗತಃ ॥ ೫೨ ॥

ಅಹೋ ಧನ್ಯತಮಂ ತೀರ್ಥಂ ಬ್ರಹ್ಮಹತ್ಯಾನಿವಾರಣಂ ।
ಸ್ವಯಂ ಚ ಮಜ್ಜಿತಸ್ತತ್ರ ಬ್ರಾಹ್ಮಣಸ್ಸೇವಕಸ್ತಥಾ ॥ ೫೩ ॥

ನಿಮಜ್ಜ್ಯ ಹಿ ಗತೌ ತೌ ಚ ಪ್ರಶಂಸಂತೌ ನದೀಂ ಚ ತಾಂ ।
ಮಾರ್ಗೇ ಚ ಮಿಲಿತಾ ಕಾಚಿತ್ಸುಂದರೀ ಭೂಷಣಾನ್ವಿತಾ ॥ ೫೪ ॥

ತಯೋಕ್ತಂ ತಂ ಚ ಭೋಃ ಪಾಂಥ ಕುತೋ ಯಾಸಿ ಸುವಿಸ್ಮಿತಃ ।
ಸತ್ಯಂ ಬ್ರೂಹಿ ಚ್ಛಲಂ ತ್ಯಕ್ತ್ವಾ ವಿಪ್ರವರ್ಯ ಮಮಾಗ್ರತಃ ॥ ೫೫ ॥

॥ ಸೂತ ಉವಾಚ ॥

ಏವಂ ವಚಸ್ತದಾ ಶ್ರುತ್ವಾ ದ್ವಿಜೋಽನೋಕ್ತಂ ಯಥಾತಥಂ ।
ಪುನಶ್ಚಾಯಂ ದ್ವಿಜಸ್ತತ್ರ ಸ್ತ್ರಿಯೋಕ್ತಃ ಸ್ಥೀಯತಾಂ ತ್ವಯಾ ॥ ೫೬ ॥

ತಯೋಕ್ತಂ ಚ ಸಮಾಕರ್ಣ್ಯ ಸ್ಥಿತಸ್ಸ ಬ್ರಾಹ್ಮಣಸ್ತತಃ ।
ಪ್ರತ್ಯುವಾಚ ವಿನೀತಾತ್ಮಾ ಕಥ್ಯತೇ ಕಿಂ ವದೇತಿ ಚ ॥ ೫೭ ॥

---

ಹೋಗಿ ಆ ನರ್ಮದಾನದಿಯ ನೀರಿನಲ್ಲಿ ಮೂರಾವರ್ತಿ ಸ್ನಾನವನ್ನು ಮಾಡಿ, ಮತ್ತೆ ಬಿಳಿಯ ಬಣ್ಣವನ್ನು ಪಡೆದು ಹೊರಟುಹೋಯಿತು. ಇದನ್ನು ನೋಡಿ ಬ್ರಾಹ್ಮಣನು ಆಶ್ಚರ್ಯಪಟ್ಟನು.

೫೩-೫೫. ಆ ತೀರ್ಥವು ಮಹಾಪವಿತ್ರವಾದುದು. ಬ್ರಹ್ಮಹತ್ಯೆಯನ್ನು ನಾಶಮಾಡುವುದು ಎಂದು ಬ್ರಾಹ್ಮಣನೂ, ಅವನ ಸೇವಕನೂ ಅಲ್ಲಿ ಸ್ನಾನವನ್ನು ಮಾಡಿ ಆ ತೀರ್ಥವನ್ನು ಹೊಗಳುತ್ತ ಮುಂದಕ್ಕೆ ಹೊರಟರು. ದಾರಿಯಲ್ಲಿ ಒಬ್ಬ ಸುಂದರಸ್ತ್ರೀಯು ಸಕಲಾಭರಣಭೂಷಿತೆಯಾಗಿ ಬ್ರಾಹ್ಮಣನಿಗೆ ಕಾಣಿಸಿಕೊಂಡು, "ಎಲೈ ಬ್ರಾಹ್ಮಣನೇ! ಆಶ್ಚರ್ಯಪಡುತ್ತ ಎಲ್ಲಿಗೆ ಹೋಗುತ್ತಿರುವೆ, ನಿಜವನ್ನು ಹೇಳು" ಎಂದಳು.

೫೬-೫೭. ಬ್ರಾಹ್ಮಣನು ಹೇಳಿದ ಮಾತನ್ನು ಕೇಳಿ ಆ ಸ್ತ್ರೀಯು, ಇಲ್ಲಿಯೇ ಇರು ಎಂದಳು. ಅವಳ ಮಾತನ್ನು ಕೇಳಿ ಆ ಬ್ರಾಹ್ಮಣನು ಅಲ್ಲಿಯೇ ನಿಂತು ಅವಳನ್ನು ಪ್ರಶ್ನೆಮಾಡಲು, ಆಕೆಯು ಮತ್ತೆ ಉತ್ತರವನ್ನು ಹೇಳುತ್ತ, ನೀನು

ಸಾ ಚಾಹ ಪುನರೇವಾತ್ರ ತ್ವಯಾ ದೃಷ್ಟಂ ಸ್ಥಲಂ ಚ ಯತ್ ।
ತತ್ರಾಧುನಾ ಕ್ಷಿಪಾಸ್ಥೀನಿ ಮಾತುಃ ಕಿಂ ಗಮ್ಯತೇಽನ್ಯತಃ ॥ ೫೮ ॥

ತವ ಮಾತಾ ಪಾಂಥವರ್ಯ ಸಾಕ್ಷಾದ್ದಿವ್ಯಮಯಂ ವರಂ ।
ದೇಹಂ ಧೃತ್ವಾ ದ್ರುತಂ ಸಾಕ್ಷಾಚ್ಛಂಭೋರ್ಯಾಸ್ಯತಿ ಸದ್ಗತಿಂ ॥ ೫೯ ॥

ವೈಶಾಖೇ ಚೈವ ಸಂಪ್ರಾಪ್ತೇ ಸಪ್ತಮ್ಯಾಂ ಚ ದಿನೇ ಶುಭೇ ।
ಸಿತೇ ಪಕ್ಷೇ ಸದಾ ಗಂಗಾ ಹ್ಯಾಯಾತಿ ದ್ವಿಜಸತ್ತಮ ॥ ೬೦ ॥

ಅದ್ಯೈವ ಸಪ್ತಮೀ ಯಾ ಸಾ ಗಂಗಾರೂಪಾಸ್ತಿ ತತ್ರ ವೈ ।
ಇತ್ಯುಕ್ತ್ವಾಂತರ್ದಧೇ ದೇವೀ ಸಾ ಗಂಗಾ ಮುನಿಸತ್ತಮಾಃ ॥ ೬೧ ॥

ನಿವೃತ್ತಶ್ಚ ದ್ವಿಜಃ ಸೋಽಪಿ ಮಾತ್ರಸ್ಥ್ಯರ್ಧಂ ಸ್ವವಸ್ತ್ರತಃ ।
ಕ್ಷಿಪೇದ್ಯಾವತ್ತತ್ರ ತೀರ್ಥೇ ತಾವಚ್ಚಿತ್ರಮಭೂತ್ತದಾ ॥ ೬೨ ॥

ದಿವ್ಯದೇಹತ್ವಮಾಪನ್ನಾ ಸ್ವಮಾತಾ ಚ ವ್ಯದೃಶ್ಯತ ।
ಧನ್ಯೋಽಸಿ ಕೃತಕೃತ್ಯೋಽಸಿ ಪವಿತ್ರಂ ಚ ಕುಲಂ ತ್ವಯಾ ॥ ೬೩ ॥

---

ನೋಡಿದ ಈ ಸ್ಥಳದಲ್ಲಿಯೇ ನಿನ್ನ ತಾಯಿಯ ಮೂಳೆಗಳನ್ನು ಹಾಕು. ಬೇರೆ ಕಡೆಗೆ ಏಕೆ ಹೋಗುವೆ? ಎಲೈ ಮಾರ್ಗಸ್ಥನಾದ ಬ್ರಾಹ್ಮಣಶ್ರೇಷ್ಠನೇ, ನಿನ್ನ ತಾಯಿಯು ಸಾಕ್ಷಾತ್ ದೇವಯೋಗ್ಯವಾದ ಶರೀರವನ್ನು ಪಡೆದು ಶಿವಲೋಕದಲ್ಲಿ ಸದ್ಗತಿಯನ್ನು ಪಡೆಯುವಳು.

೬೦-೬೧. ವೈಶಾಖಮಾಸದ ಶುಕ್ಲಪಕ್ಷದ ಸಪ್ತಮಿಯ ದಿನ ಗಂಗೆಯು ಈ ತೀರ್ಥಕ್ಕೆ ಬರುವಳು. ಈ ದಿನವೇ ಸಪ್ತಮೀ ತಿಥಿಯು. ಗಂಗೆಯು ಈಗ ಈ ತೀರ್ಥದಲ್ಲಿರುವಳು ಎಂದು ಹೇಳಿ ಆ ಸ್ತ್ರೀಯು ಮರೆಯಾದಳು. ಓ ಮುನಿ ಶ್ರೇಷ್ಠರೇ, ಈರೀತಿ ಹೇಳಿದ ಅವಳೇ ಗಂಗೆಯು.

೬೨. ಆ ಬ್ರಾಹ್ಮಣನು ಹಿಂದಿರುಗಿ ತನ್ನ ಬಟ್ಟೆಯ ಗಂಟಿನಲ್ಲಿದ್ದ ತಾಯಿಯ ಮೂಳೆಗಳಲ್ಲಿ ಅರ್ಧವನ್ನು ಆ ತೀರ್ಥದಲ್ಲಿ ಹಾಕಿದೊಡನೆಯೇ ಒಂದು ಆಶ್ಚರ್ಯ ವುಂಟಾಯಿತು.

೬೩-೬೪. ಆ ಬ್ರಾಹ್ಮಣನ ತಾಯಿಯು ದಿವ್ಯಶರೀರವನ್ನು ಹೊಂದಿ ಅವನ ಕಣ್ಣಿಗೆ ಕಾಣಿಸಿಕೊಂಡು, ಎಲೈ ಪುತ್ರನೇ! ನೀನೇ ಕೃತಾರ್ಥನು. ಪುಣ್ಯವಂತನು.

ಧನಂ ಧಾನ್ಯಂ ತಥಾ ಚಾಯುರ್ವಂಶೋ ವೈ ವರ್ಧತಾಂ ತವ ।
ಇತ್ಯಾಶಿಷಂ ಮುಹುರ್ದತ್ತ್ವಾ ಸ್ವಪುತ್ರಾಯ ದಿವಂ ಗತಾ ॥ ೬೪ ॥

ತತ್ರ ಭುಕ್ತ್ವಾ ಸುಖಂ ಭೂರಿ ಚಿರಕಾಲಂ ಮಹೋತ್ತಮಂ ।
ಶಂಕರಸ್ಯ ಪ್ರಸಾದೇನ ಗತಾ ಸಾ ಹ್ಯುತ್ತಮಾಂ ಗತಿಂ ॥ ೬೫ ॥

ಬ್ರಾಹ್ಮಣಶ್ಚ ಸುತಸ್ತಸ್ಯಾಃ ಕ್ಷಿಪ್ತ್ವಾಸ್ಥೀನಿ ಪುನಸ್ತತಃ ।
ಪ್ರಸನ್ನಮಾನಸೋಽಭೂತ್ಸ ಶುದ್ಧಾತ್ಮಾ ಸ್ವಗೃಹಂ ಗತಃ ॥ ೬೬ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ನಂದಿಕೇಶ್ವರಲಿಂಗಮಾಹಾತ್ಮ್ಯವರ್ಣನೇ ಬ್ರಾಹ್ಮಣೀಸ್ವರ್ಗತಿ
ವರ್ಣನಂ ನಾಮ ಷಷ್ಠೋಽಧ್ಯಾಯಃ

---

ನಿನ್ನಿಂದ ನಮ್ಮ ವಂಶವು ಪಾವನವಾಯಿತು. ನಿನಗೆ ಧನ, ಧಾನ್ಯ, ಆಯುಸ್ಸು, ವಂಶ ಇವು ಅಭಿವೃದ್ಧಿಯಾಗಲಿ. ಹೀಗೆಂದು ತನ್ನ ಮಗನಿಗೆ ಪುನಃ ಪುನಃ ಆಶೀರ್ವಾದವನ್ನು ಮಾಡುತ್ತ ಸ್ವರ್ಗಕ್ಕೆ ಹೋದಳು.

೬೫. ಅಲ್ಲಿ ವಿಶೇಷವಾಗಿ ಬಹುಕಾಲ ಉತ್ತಮ ಸುಖವನ್ನನುಭವಿಸಿ ಶಿವನ ಅನುಗ್ರಹದಿಂದ ಉತ್ತಮಗತಿಯನ್ನು ಹೊಂದಿದಳು.

೬೬. ಆಕೆಯ ಮಗನಾದ ಬ್ರಾಹ್ಮಣನು ಮತ್ತೆ ಮಿಕ್ಕ ಮೂಳೆಗಳನ್ನು ಅಲ್ಲಿಯೇ ಹಾಕಿ ಶುದ್ಧಚಿತ್ತನಾಗಿ ತನ್ನ ಮನೆಗೆ ಹಿಂತಿರುಗಿ ಹೋದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ನಂದಿಕೇಶ್ವರಲಿಂಗಮಹಾತ್ಮ್ಯ ವರ್ಣನೆಯಲ್ಲಿ
ಬ್ರಾಹ್ಮಣಸ್ತ್ರೀಯ ಸ್ವರ್ಗಗತಿವರ್ಣನೆಯೆಂಬ
ಆರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಸಪ್ತಮೋಽಧ್ಯಾಯಃ

|| ಋಷಯ ಊಚುಃ ||

ಕಥಂ ಗಂಗಾ ಸಮಾಯಾತಾ ವೈಶಾಖೇ ಸಪ್ತಮೀದಿನೇ ।
ನರ್ಮದಾಯಾಂ ವಿಶೇಷೇಣ ಸೂತ್ರೈತದ್ವರ್ಣಯ ಪ್ರಭೋ || ೧ ||

ಈಶ್ವರಶ್ಚ ಕಥಂ ಜಾತೋ ನಂದಿಕೇಶೋ ಹಿ ನಾಮತಃ ।
ವೃತ್ತಂ ತದಪಿ ಸುಪ್ರೀತ್ಯಾ ಕಥಯ ತ್ವಂ ಮಹಾಮತೇ || ೨ ||

---

## ಏಳನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು.—ಮಹಾಬುದ್ಧಿವಂತನಾದ ಎಲೈ ಸೂತನೇ ವೈಶಾಖ ಶುದ್ಧ ಸಪ್ತಮಿಯ ದಿನ ನರ್ಮದಾನದಿಗೆ ಗಂಗೆಯು ಹೇಗೆ ಬಂದಳು? ಈಶ್ವರನು ನಂದಿಕೇಶ್ವರನೆಂಬ ಹೆಸರನ್ನು ಹೇಗೆ ಹೊಂದಿದನು? ಇವುಗಳನ್ನು ನಮಗೆ ಪ್ರೀತಿಯಿಂದ ಹೇಳಬೇಕು ಎನ್ನಲು,

॥ ಸೂತ ಉವಾಚ ॥

ಸಾಧು ಪೃಷ್ಟಮೃಷಿಶ್ರೇಷ್ಠಾ ನಂದಿಕೇಶಾಶ್ರಿತಂ ವಚಃ ।
ತದಹಂ ಕಥಯಾಮ್ಯದ್ಯ ಶ್ರವಣಾತ್ಪುಣ್ಯವರ್ಧನಂ ॥ ೩ ॥

ಬ್ರಾಹ್ಮಣೀ ಋಷಿಕಾ ನಾಮ್ನಾ ಕಸ್ಯಚಿಚ್ಚ ದ್ವಿಜನ್ಮನಃ ।
ಸುತಾ ವಿವಾಹಿತಾ ಕಸ್ಮೈಚಿದ್ವಿಜಾಯ ವಿಧಾನತಃ ॥ ೪ ॥

ಪೂರ್ವಕರ್ಮಪ್ರಭಾವೇಣ ಪತ್ನೀ ಸಾ ಹಿ ದ್ವಿಜನ್ಮನಃ ।
ಸುವ್ರತಾಪಿ ಚ ವಿಪ್ರೇಂದ್ರಾ ಬಾಲವೈಧವ್ಯಮಾಗತಾ ॥ ೫ ॥

ಅಥ ಸಾ ದ್ವಿಜಪತ್ನೀ ಹಿ ಬ್ರಹ್ಮಚರ್ಯವ್ರತಾನ್ವಿತಾ ।
ಪಾರ್ಥಿವಾರ್ಚನಪೂರ್ವಂ ಹಿ ತಪಸ್ತೇಪೇ ಸುದಾರಣಂ ॥ ೬ ॥

ತಸ್ಮಿನ್ನವಸರೇ ದುಷ್ಟೋ ಮೂಢನಾಮಾಸುರೋ ಬಲೀ ।
ಯಯೌ ತತ್ರ ಮಹಾಮಾಯೀ ಕಾಮಬಾಣೇನ ತಾಡಿತಃ ॥ ೭ ॥

ತಪಂತೀಂ ತಾಂ ಸಮಾಲೋಕ್ಯ ಸುಂದರೀಮತಿಕಾಮಿನೀಂ ।
ತಯಾ ಭೋಗಂ ಯಯಾಚೇ ಸ ನಾನಾಲೋಭಂ ಪ್ರದರ್ಶಯನ್ ॥ ೮ ॥

---

೩. ಸೂತನು ಹೇಳಿದನು.—ಓ ಋಷಿಶ್ರೇಷ್ಠರೇ, ನಂದಿಕೇಶ್ವರನ ವಿಷಯವಾಗಿ ಉತ್ತಮವಾದ ಪ್ರಶ್ನೆಯನ್ನು ಮಾಡಿದಿರಿ. ಕೇಳಿದರೆ ಪುಣ್ಯವನ್ನು ಹೆಚ್ಚಿಸುವ ಆ ಕಥೆಯನ್ನು ಈಗ ಹೇಳುವೆನು.

೪-೫. ಹಿಂದೆ ಋಷಿಕೆ ಎಂಬ ಒಬ್ಬ ಬ್ರಾಹ್ಮಣಪುತ್ರಿ ಇದ್ದಳು. ಅವಳನ್ನು ತಂದೆಯು ಒಬ್ಬ ಬ್ರಾಹ್ಮಣನಿಗೆ ವಿಧಿಗನುಸಾರವಾಗಿ ವಿವಾಹ-ಮಾಡಿಕೊಟ್ಟಿದ್ದನು. ಆಕೆಯು ಒಳ್ಳೆಯ ವ್ರತಗಳನ್ನು ಮಾಡತಕ್ಕವಳಾದರೂ ಪೂರ್ವಕರ್ಮಫಲದಿಂದ ಬಾಲ್ಯದಲ್ಲಿಯೇ ವಿಧವೆಯಾದಳು.

೬-೧೦. ಆಮೇಲೆ ಆ ಬ್ರಾಹ್ಮಣಪತ್ನಿಯು ಬ್ರಹ್ಮಚರ್ಯವ್ರತದಿಂದ ಪಾರ್ಥಿವ ಲಿಂಗವನ್ನು ಪೂಜಿಸುತ್ತ ಕಠಿನವಾದ ತಪಸ್ಸನ್ನು ಮಾಡಿದಳು. ಆ ಸಮಯದಲ್ಲಿ ಮೂಢನೆಂಬ ದುಷ್ಟನೂ ಬಲಶಾಲಿಯೂ ಆದ ರಾಕ್ಷಸನು ಆಕೆಯನ್ನು ನೋಡಿ ಕಾಮ ಪೀಡಿತನಾಗಿ ಅಲ್ಲಿಗೆ ಬಂದು ತಪಸ್ಸುಮಾಡುತ್ತಿರುವ ಸುಂದರಿಯಾದ ಆಕೆಯನ್ನು

ಅಥ ಸಾ ಸುವ್ರತಾ ನಾರೀ ಶಿವಧ್ಯಾನಪರಾಯಣಾ ।
ತಸ್ಮಿನ್ದೃಷ್ಟಿಂ ದಧೌ ನೈವ ಕಾಮದೃಷ್ಟ್ಯಾ ಮುನೀಶ್ವರಾಃ ॥ ೯ ॥

ನ ಮಾನಿತವತೀ ತಂ ಚ ಬ್ರಾಹ್ಮಣೀ ಸಾ ತಪೋರತಾ ।
ಅತೀವ ಹಿ ತಪೋನಿಷ್ಠಾಸೀಚ್ಛಿವಧ್ಯಾನಮಾಶ್ರಿತಾ ॥ ೧೦ ॥

ಅಥ ಮೂಢಃ ಸ ದೈತ್ಯೇಂದ್ರಃ ತಯಾ ತನ್ವ್ಯಾ ತಿರಸ್ಕೃತಃ ।
ಚುಕ್ರೋಧ ವಿಕಟಂ ತಸ್ಯೈ ಪಶ್ಚಾದ್ರೂಪಮದರ್ಶಯತ್ ॥ ೧೧ ॥

ಅಥ ಪ್ರೋವಾಚ ದುಷ್ಟಾತ್ಮಾ ದುರ್ವಚೋ ಭಯಕಾರಕಂ ।
ತ್ರಾಸಯಾಮಾಸ ಬಹುಶಸ್ತಾಂ ಚ ಪತ್ನೀಂ ದ್ವಿಜನ್ಮನಃ ॥ ೧೨ ॥

ತದಾ ಸಾ ಭಯಸಂತ್ರಸ್ತಾ ಬಹುವಾರಂ ಶಿವೇತಿ ಚ ।
ಬಭಾಷೇ ಸ್ನೇಹತಸ್ತನ್ವೀ ದ್ವಿಜಪತ್ನೀ ಶಿವಾಶ್ರಯಾ ॥ ೧೩ ॥

ವಿಹ್ವಲಾತೀವ ಸಾ ನಾರೀ ಶಿವನಾಮಪ್ರಭಾಷಿಣೀ ।
ಜಗಾಮ ಶರಣಂ ಶಂಭೋಃ ಸ್ವಧರ್ಮಾವನಹೇತವೇ ॥ ೧೪ ॥

---

ನೋಡಿ ಅವಳಿಗೆ ಅನೇಕ ಆಸೆಗಳನ್ನು ತೋರಿಸುತ್ತ ಅವಳೊಡನೆ ಕಾಮಭೋಗವನ್ನ ಪೇಕ್ಷಿಸಿದನು. ಒಳ್ಳೆಯ ವ್ರತನಿಷ್ಠಳಾದ ಆ ಸ್ತ್ರೀಯು ಶಿವಧ್ಯಾನಾಸಕ್ತಳಾಗಿದ್ದುದರಿಂದ ಆ ರಾಕ್ಷಸನನ್ನು ನೋಡಲೇಯಿಲ್ಲ. ತಪಸ್ಸಿನಲ್ಲಾಸಕ್ತಳಾದ ಅವಳು ಶಿವಧ್ಯಾನವನ್ನೇ ಆಶ್ರಯಿಸಿ ಆ ರಾಕ್ಷಸನಿಗೆ ಮರ್ಯಾದೆಯನ್ನೂ ಮಾಡಲಿಲ್ಲ.

೧೧-೧೪. ತಿರಸ್ಕಾರವನ್ನು ಹೊಂದಿದ ಆ ಮೂಢನು ಕ್ರೂರವಾಗಿ ಕೋಪಗೊಂಡು ತನ್ನ ದೈತ್ಯೇಂದ್ರನ ರೂಪವನ್ನು ತೋರಿಸಿದನು, ಬಳಿಕ ಕೆಟ್ಟಮಾತುಗಳನ್ನಾಡುತ್ತ ಅನೇಕ ಬಗೆಯಲ್ಲಿ ಆ ಬ್ರಾಹ್ಮಣಪತ್ನಿಯನ್ನು ಹೆದರಿಸಿದನು. ಆಗ ಭಯವನ್ನು ಹೊಂದಿದ ಆಕೆಯು ಅನೇಕಬಾರಿ ಶಿವನಾಮವನ್ನು ಉಚ್ಚರಿಸುತ್ತ ಶಿವನನ್ನು ಶರಣುಹೊಂದಿ ತನ್ನ ಧರ್ಮವನ್ನು ರಕ್ಷಿಸಬೇಕೆಂದು ಬೇಡಿಕೊಂಡಳು.

ಶರಣಾಗತರಕ್ಷಾರ್ಥಂ ಕಿಂತು ಸದ್ವೃತ್ತಮಾಹಿತಂ ।
ಆನಂದಾರ್ಥಂ ಹಿ ತಸ್ಯಾಸ್ತು ಶಿವ ಆವಿರ್ಬಭೂವ ಹ ॥ ೧೫ ॥

ಅಥ ತಂ ಮೂಢನಾಮಾನಂ ದೈತ್ಯೇಂದ್ರಂ ಕಾಮುವಿಹ್ವಲಂ ।
ಚಕಾರ ಭಸ್ಮಸಾತ್ಸದ್ಯಃ ಶಂಕರೋ ಭಕ್ತವತ್ಸಲಃ ॥ ೧೬ ॥

ತತಶ್ಚ ಪರಮೇಶಾನೋ ಕೃಪಾದೃಷ್ಟ್ಯಾ ವಿಲೋಕ್ಯ ತಾಂ ।
ವರಂ ಬ್ರೂಹೀತಿ ಚೋವಾಚ ಭಕ್ತರಕ್ಷಣದಕ್ಷಧೀಃ ॥ ೧೭ ॥

ಶ್ರುತ್ವಾ ಮಹೇಶವಚನಂ ಸಾ ಸಾಧ್ವೀ ದ್ವಿಜಕಾಮಿನೀ ।
ದದರ್ಶ ಶಾಂಕರಂ ರೂಪಮಾನಂದಜನಕಂ ಶುಭಂ ॥ ೧೮ ॥

ತತಃ ಪ್ರಣಮ್ಯ ತಂ ಶಂಭುಂ ಪರಮೇಶಂ ಸುಖಾವಹಂ ।
ತುಷ್ಟಾವ ಸಾಂಜಲಿಃ ಸಾಧ್ವೀ ನತಸ್ಕಂಧಾ ಶುಭಾಶಯಾ ॥ ೧೯ ॥

॥ ಋಷಿಕೋವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ದೀನಬಂಧುಸ್ತ್ವಮೀಶಾನೋ ಭಕ್ತರಕ್ಷಾಕರಃ ಸದಾ ॥ ೨೦ ॥

---

೧೫-೧೬. ಶರಣಾಗತರನ್ನು ಕಾಪಾಡುವುದಕ್ಕಾಗಿಯೂ ಆಕೆಯನ್ನು ಸಂತೋಷಪಡಿಸುವುದಕ್ಕಾಗಿಯೂ ಶಿವನು ಆ ಜಾಗದಲ್ಲಿ ಕೂಡಲೇ ಆವಿರ್ಭವಿಸಿದನು. ಆಮೇಲೆ ಕಾಮದಿಂದ ಭ್ರಾಂತನಾದ ಮೂಢನೆಂಬ ಆ ದೈತ್ಯೇಂದ್ರನನ್ನು ಭಕ್ತವತ್ಸಲನಾದ ಶಿವನು, ಭಸ್ಮವಾಗಿ ಮಾಡಿದನು.

೧೭. ಆಮೇಲೆ ಭಕ್ತರನ್ನು ರಕ್ಷಿಸುವ ಪರಮೇಶ್ವರನು ಆಕೆಯನ್ನು ದಯಾದೃಷ್ಟಿಯಿಂದ ನೋಡಿ, ವರವನ್ನು ಕೇಳಿಕೋ, ಎಂಬುದಾಗಿ ಹೇಳಿದನು.

೧೮-೧೯. ಪತಿವ್ರತೆಯಾದ ಆ ಬ್ರಾಹ್ಮಣಪತ್ನಿಯು ಮಹೇಶ್ವರನ ಮಾತನ್ನು ಕೇಳಿ, ಆನಂದವನ್ನುಂಟುಮಾಡುವ ಆ ಶಿವನ ಸುಂದರ ರೂಪವನ್ನು ನೋಡಿ, ಪರಮೇಶ್ವರನಿಗೆ ನಮಸ್ಕಾರವನ್ನು ಮಾಡಿ ಒಳ್ಳೆಯಮನಸ್ಸಿನಿಂದ ತಲೆಯನ್ನು ತಗ್ಗಿಸಿ ಸ್ತೋತ್ರಮಾಡಿದಳು.

೨೦-೨೨. ಋಷಿಕೆಯು ಹೇಳಿದಳು.— ಓ ದೇವದೇವನೇ! ನೀನು ಶರಣಾಗತರನ್ನು ಪ್ರೀತಿಸತಕ್ಕವನು, ದೀನರಿಗೆ ಬಂಧುವಾದವನು, ನೀನು ಯಾವಾಗಲೂ

ತ್ವಯಾ ಮೇ ರಕ್ಷಿತೋ ಧರ್ಮೋ ಮೂಢನಾಮ್ನೋಽಸುರಾದಿಹ ।
ಯದಯಂ ನಿಹತೋ ದುಷ್ಟೋ ಜಗದ್ರಕ್ಷಾ ಕೃತಾ ತ್ವಯಾ ॥ ೨೧ ॥

ಸ್ವಪಾದಯೋಃ ಪರಾಂ ಭಕ್ತಿಂ ದೇಹಿ ಮೇ ಹ್ಯನಪಾಯಿನೀಂ ।
ಅಯಮೇವ ವರೋ ನಾಥ ಕಿಮನ್ಯದಧಿಕಂ ಹ್ಯತಃ ॥ ೨೨ ॥

ಅನ್ಯದಾಕರ್ಣಯ ವಿಭೋ ಪ್ರಾರ್ಥನಾಂ ಮೇ ಮಹೇಶ್ವರ ।
ಲೋಕಾನಾಮುಪಕಾರಾರ್ಥಮಿಹ ತ್ವಂ ಸಂಸ್ಥಿತೋ ಭವ ॥ ೨೩ ॥

॥ ಸೂತ ಉವಾಚ ॥

ಇತಿ ಸ್ತುತ್ವಾ ಮಹಾದೇವಮ್ಮೃಷಿಕಾ ಸಾ ಶುಭವ್ರತಾ ।
ತೂಷ್ಣೀಮಾಸಾಥ ಗಿರಿಶಃ ಪ್ರೋವಾಚ ಕರುಣಾಕರಃ ॥ ೨೪ ॥

॥ ಗಿರಿಶ ಉವಾಚ ॥

ಋಷಿಕೇ ಸುಚರಿತ್ರಾ ತ್ವಂ ಮಮ ಭಕ್ತಾ ವಿಶೇಷತಃ ।
ದತ್ತಾ ವರಾಶ್ಚ ತೇ ಸರ್ವೇ ತುಭ್ಯಂ ಯೇ ಯೇ ಹಿ ಯಾಚಿತಾಃ ॥ ೨೫ ॥

---

ಭಕ್ತರನ್ನು ಕಾಪಾಡುವೆ. ನೀನು ನನ್ನ ಧರ್ಮವನ್ನು ರಕ್ಷಿಸಿ, ಮೂಢನೆಂಬ ರಾಕ್ಷಸನನ್ನು ನಾಶಮಾಡಿದೆ. ಇದರಿಂದ ಲೋಕವನ್ನೂ ರಕ್ಷಿಸಿದೆ. ಈಗ ನಿನ್ನ ಪಾದಗಳಲ್ಲಿ ಎಂದಿಗೂ ನಾಶವಾಗದ ಭಕ್ತಿಯನ್ನು ನನಗೆ ಕೊಡು. ಇದೇ ನನಗೆ ಬೇಕಾದ ವರವು. ಇದಕ್ಕಿಂತ ಉತ್ತಮವಾದುದು ಮತ್ತಾವುದಿರುವುದು? ಸರ್ವವ್ಯಾಪಿಯಾದ ಓ ಶಿವನೇ! ಮತ್ತೊಂದು ವರವನ್ನು ಕೇಳುವೆನು. ಲೋಕೋಪಕಾರಕ್ಕಾಗಿ ನೀನು ಈ ಸ್ಥಳದಲ್ಲಿ ನೆಲೆಸಿರಬೇಕು.

೨೪. ಹೀಗೆಂದು ಋಷಿಕೆಯು ಸ್ತೋತ್ರಮಾಡಿ ಸುಮ್ಮನಾದಳು. ಕರುಣಾಶಾಲಿಯಾದ ಶಿವನು ಅವಳನ್ನು ಕುರಿತು,

೨೫-೨೮. ಎಲೈ ಋಷಿಕೆಯೇ, ನೀನು ಒಳ್ಳೆಯ ನಡತೆಯುಳ್ಳ ನನ್ನ ಭಕ್ತಳಾಗಿರುವೆ. ನೀನು ಕೇಳಿದ ವರಗಳನ್ನೆಲ್ಲ ಕೊಟ್ಟಿರುವೆನು ಎಂದನು. ಈ

ಏತಸ್ಮಿನ್ನಂತರೇ ತತ್ರ ಹರಿಬ್ರಹ್ಮಾದಯಃ ಸುರಾಃ ।
ಶಿವಾವಿರ್ಭಾವಮಾಜ್ಞಾಯ ಯಯುರ್ಹರ್ಷಸಮನ್ವಿತಾಃ ॥ ೨೬ ॥

ಶಿವಂ ಪ್ರಣಮ್ಯ ಸುಪ್ರೀತ್ಯಾ ಸಮಾನರ್ಚುಶ್ಚ ತೇಽಖಿಲಾಃ ।
ತುಷ್ಟುವುರ್ನತಕಾ ವಿಪ್ರಾಃ ಕರೌ ಬಧ್ವಾ ಸುಚೇತಸಃ ॥ ೨೭ ॥

ಏತಸ್ಮಿನ್ಸಮಯೇ ಗಂಗಾ ಸಾಧ್ವೀ ತಾಂ ಸ್ವರ್ಧುನೀ ಜಗೌ ।
ಋಷಿಕಾಂ ಸುಪ್ರಸನ್ನಾತ್ಮಾ ಪ್ರಶಂಸಂತೀ ಚ ತದ್ವಿಧಂ ॥ ೨೮ ॥

॥ ಗಂಗೋವಾಚ ॥

ಮಮಾರ್ಥೇ ಚೈವ ವೈಶಾಖೇ ಮಾಸಿ ದೇಯಂ ತ್ವಯಾ ವಚಃ ।
ಸ್ಥಿತ್ಯರ್ಥಂ ದಿನಮೇಕಂ ಮೇ ಸಾಮೀಪ್ಯಂ ಕಾರ್ಯಮೇವ ಹಿ ॥ ೨೯ ॥

॥ ಸೂತ ಉವಾಚ ॥

ಗಂಗಾವಚನಮಾಕರ್ಣ್ಯ ಸಾ ಸಾಧ್ವೀ ಪ್ರಾಹ ಸುವ್ರತಾ ।
ತಥಾಸ್ತ್ವಿತಿ ವಚಃ ಪ್ರೀತ್ಯಾ ಲೋಕಾನಾಂ ಹಿತಹೇತವೇ ॥ ೩೦ ॥

---

ಸಮಯದಲ್ಲಿ ಹರಿಬ್ರಹ್ಮರೇ ಮೊದಲಾದ ದೇವತೆಗಳು ಆ ಸ್ಥಳದಲ್ಲಿ ಶಿವನು ಆವಿರ್ಭವಿಸಿರುವುದನ್ನು ತಿಳಿದು ಸಂತೋಷದಿಂದ ಅಲ್ಲಿಗೆ ಬಂದರು. ಶಿವನಿಗೆ ಭಕ್ತಿಯಿಂದ ನಮಸ್ಕಾರಮಾಡಿ ತಲೆಯನ್ನು ಬಗ್ಗಿಸಿಕೊಂಡು ಕೈಗಳನ್ನು ಮುಗಿದುಕೊಂಡು ಒಳ್ಳೆಯಮನಸ್ಸಿನಿಂದ ಸ್ತೋತ್ರಮಾಡಿದರು. ಈ ಸಮಯದಲ್ಲಿಯೇ ಸ್ವರ್ಗಲೋಕದ ಗಂಗೆಯು ಆ ಪತಿವ್ರತೆಯಾದ ಋಷಿಕೆಯನ್ನು ಹೊಗಳುತ್ತ ಇಂತೆಂದಳು.

೨೯. ಎಲೈ ಪೂಜ್ಯೆಯಾದ ಋಷಿಕೆಯೇ, ವೈಶಾಖಮಾಸದಲ್ಲಿ ಒಂದುದಿನ ನಿನ್ನ ಸಮೀಪದಲ್ಲಿ ನಾನು ಇರಲು ಅಪೇಕ್ಷಿಸುವೆನು. ಅದಕ್ಕೆ ಒಪ್ಪಿ ನೀನು ಮಾತು ಕೊಡಬೇಕು ಎಂದಳು.

೩೦. ಗಂಗೆಯ ಮಾತನ್ನು ಕೇಳಿ ಆ ಪತಿವ್ರತೆಯು ಲೋಕಹಿತಕ್ಕಾಗಿ ಹಾಗೆಯೇ ಆಗಲಿ ಎಂದಳು.

ಆನಂದಾರ್ಥಂ ಶಿವಸ್ತಸ್ಯಾಃ ಸುಪ್ರಸನ್ನಶ್ಚ ಪಾರ್ಥಿವೇ ।
ತಸ್ಮಿಂಲ್ಲಿಂಗೇ ಲಯಂ ಯಾತಃ ಪೂರ್ಣಾಂಶೇನ ತಯಾ ಹರಃ ॥ ೩೧ ॥

ದೇವಾಃ ಸರ್ವೇ ಸುಪ್ರಸನ್ನಾಃ ಪ್ರಶಂಸಂತಿ ಶಿವಂ ಚ ತಾಂ ।
ಸ್ವಂ ಸ್ವಂ ಧಾಮ ಯಯುರ್ವಿಷ್ಣುಬ್ರಹ್ಮಾದ್ಯಾ ಅಪಿ ಸ್ವರ್ಣದೀ ॥ ೩೨ ॥

ತದ್ದಿನಾತ್ಪಾವನಂ ತೀರ್ಥಮಾಸೀದೀದೃಶಮುತ್ತಮಂ ।
ನಂದಿಕೇಶಃ ಶಿವಃ ಖ್ಯಾತಃ ಸರ್ವಪಾಪವಿನಾಶನಃ ॥ ೩೩ ॥

ಗಂಗಾಪಿ ಪ್ರತಿವರ್ಷಂ ತದ್ದಿನೇ ಯಾತಿ ಶುಭೇಚ್ಛಯಾ ।
ಕ್ಷಾಲನಾರ್ಥಂ ಸ್ವಪಾಪಸ್ಯ ಯದ್ಗೃಹೀತಂ ನೃಣಾಂ ದ್ವಿಜಾಃ ॥ ೩೪ ॥

---

೩೧-೩೨. ಶಿವನು ಅವಳ ಸಂತೋಷಕ್ಕಾಗಿಯೂ ಲೋಕಾನುಗ್ರಹಕ್ಕಾಗಿಯೂ ಆ ಪಾರ್ಥಿವಲಿಂಗದಲ್ಲಿ ತನ್ನ ಪೂರ್ಣಾಂಶದಿಂದ ಆಕೆಯೊಡನೆ ಲೀನನಾದನು. ದೇವತೆಗಳೆಲ್ಲರೂ ಸಂತೋಷದಿಂದ ಶಿವನನ್ನೂ, ಆ ಋಷಿಕೆಯನ್ನೂ ಹೊಗಳಿದರು. ಆಮೇಲೆ ವಿಷ್ಣುಬ್ರಹ್ಮಾದಿಗಳೂ ಗಂಗೆಯೂ ತಮ್ಮ ಸ್ಥಳಗಳಿಗೆ ಪ್ರಯಾಣಮಾಡಿದರು.

೩೩. ಆದಿನ ಮೊದಲುಗೊಂಡು ಆ ತೀರ್ಥವು ಪರಿಶುದ್ಧವಾಯಿತು. ನಂದಿಕೇಶ್ವರನೆಂಬ ಶಿವಲಿಂಗವು ಸಮಸ್ತಪಾಪನಾಶಕವಾಗಿ ಪ್ರಸಿದ್ಧಿಹೊಂದಿತು.

೩೪. ಎಲೈ ಬ್ರಾಹ್ಮಣರೇ, ಗಂಗೆಯು ಪ್ರತಿವರ್ಷವೂ ವೈಶಾಖ ಶುದ್ಧ ಸಪ್ತಮಿಯ ದಿನದಲ್ಲಿ ಜನರಿಂದ ತಾನು ಪರಿಗ್ರಹಿಸಿದ ತನ್ನ ಪಾಪವನ್ನು ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಅಲ್ಲಿಗೆ ಬರುವಳು.

ತತ್ರ ಸ್ನಾತೋ ನರಃ ಸಮ್ಯಙ್ನಂದಿಕೇಶಂ ಸಮರ್ಚ್ಯ ಚ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ಹ್ಯಖಿಲೈರಪಿ ॥ ೩೫ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ನಂದಿಕೇಶ್ವರಲಿಂಗಮಾಹಾತ್ಮ್ಯವರ್ಣನಂ ನಾಮ
ಸಪ್ತಮೋಽಧ್ಯಾಯಃ

---

೩೫. ಅಲ್ಲಿ ಸ್ನಾನಮಾಡಿ ನಂದಿಕೇಶ್ವರನನ್ನು ಪೂಜೆಮಾಡಿದ ಮನುಷ್ಯರು ಬ್ರಹ್ಮಹತ್ಯಾದಿ ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ನಂದಿಕೇಶ್ವರಶಿವಲಿಂಗ-ಮಹಾತ್ಮ್ಯವರ್ಣನೆಯೆಂಬ
ಏಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ನಮಃ ಶಿವಾಯ ||

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ಅಷ್ಟಮೋಽಧ್ಯಾಯಃ

|| ಸೂತ ಉವಾಚ ||

ದ್ವಿಜಾಃ ಶೃಣುತ ಸದ್ಭಕ್ತ್ಯಾ ಶಿವಲಿಂಗಾನಿ ತಾನಿ ಚ ।
ಪಶ್ಚಿಮಾಯಾಂ ದಿಶಾಯಾಂ ವೈ ಯಾನಿ ಖ್ಯಾತಾನಿ ಭೂತಲೇ || ೧ ||

ಕಪಿಲಾಯಾಂ ನಗರ್ಯಾಂ ತು ಕಾಲರಾಮೇಶ್ವರಾಭಿಧೇ ।
ಶಿವಲಿಂಗೇ ಮಹಾದಿವ್ಯೇ ದರ್ಶನಾತ್ಪಾಪಹಾರಕೇ || ೨ ||

ಪಶ್ಚಿಮೇ ಸಾಗರೇ ಚೈವ ಮಹಾಸಿದ್ಧೇಶ್ವರಃ ಸ್ಮೃತಃ ।
ಧರ್ಮಾರ್ಥಕಾಮದಶ್ಚೈವ ತಥಾ ಮೋಕ್ಷಪ್ರದೋಽಪಿ ಹಿ || ೩ ||

---

### ಎಂಟನೆಯ ಅಧ್ಯಾಯವು.

೧-೩. ಸೂತನು ಹೇಳಿದನು.—ಎಲೈ ಬ್ರಾಹ್ಮಣರೇ, ಈ ಭೂಮಿಯ ಪಶ್ಚಿಮದಿಕ್ಕಿನಲ್ಲಿ ಯಾವ ಯಾವ ಶಿವಲಿಂಗಗಳಿವೆಯೋ ಅವುಗಳ ವಿಚಾರವನ್ನು ಹೇಳುವೆನು ಭಕ್ತಿಯಿಂದ ಕೇಳಿರಿ. ಕಪಿಲಾನಗರಿಯಲ್ಲಿ ಕಾಲರಾಮೇಶ್ವರನೆಂಬ ಮಹಾದಿವ್ಯವಾದ ಶಿವಲಿಂಗವು ಪಾಪಪರಿಹಾರಕವಾಗಿರುವುದು. ಪಶ್ಚಿಮದಿಕ್ಕಿನ ಸಾಗರದ ಸಮೀಪದಲ್ಲಿ ಮಹಾಸಿದ್ಧೇಶ್ವರಲಿಂಗವು ಚತುರ್ವರ್ಗ ಫಲಗಳನ್ನು ಕೊಡುವುದಾಗಿರುವುದು.

ಪಶ್ಚಿಮಾಂಬುಧಿತೀರಸ್ಥಂ ಗೋಕರ್ಣಂ ಕ್ಷೇತ್ರಮುತ್ತಮಂ ।
ಬ್ರಹ್ಮಹತ್ಯಾದಿಪಾಪಘ್ನಂ ಸರ್ವಕಾಮಫಲಪ್ರದಮ್ ॥ ೪ ॥

ಗೋಕರ್ಣೇ ಶಿವಲಿಂಗಾನಿ ವಿದ್ಯಂತೇ ಕೋಟಿಕೋಟಿಶಃ ।
ಅಸಂಖ್ಯಾತಾನಿ ತೀರ್ಥಾನಿ ತಿಷ್ಠಂತಿ ಚ ಪದೇ ಪದೇ ॥ ೫ ॥

ಬಹುನಾತ್ರ ಕಿಮುಕ್ತೇನ ಗೋಕರ್ಣಸ್ಥಾನಿ ಸರ್ವಶಃ ।
ಶಿವಪ್ರತ್ಯಕ್ಷಲಿಂಗಾನಿ ತೀರ್ಥಾನ್ಯಂಭಾಂಸಿ ಸರ್ವಶಃ ॥ ೬ ॥

ಗೋಕರ್ಣೇ ಶಿವಲಿಂಗಾನಾಂ ತೀರ್ಥಾನಾಮಪಿ ಸರ್ವಶಃ ।
ವರ್ಣ್ಯತೇ ಮಹಿಮಾ ತಾತ ಪುರಾಣೇಷು ಮಹರ್ಷಿಭಿಃ ॥ ೭ ॥

ಕೃತೇ ಯುಗೇ ಸ ಹಿ ಶ್ವೇತಸ್ತ್ರೇತಾಯಾಂ ಸೋಽತಿಲೋಹಿತಃ ।
ದ್ವಾಪರೇ ಪೀತವರ್ಣಶ್ಚ ಕಲೌ ಶ್ಯಾಮೋ ಭವಿಷ್ಯತಿ ॥ ೮ ॥

ಆಕ್ರಾಂತಸಪ್ತಪಾತಾಲಕುಹರೋಽಪಿ ಮಹಾಬಲಂ ।
ಪ್ರಾಪ್ತೇ ಕಲಿಯುಗೇ ಘೋರೇ ಮೃದುತಾಮುಪಯಾಸ್ಯತಿ ॥ ೯ ॥

---

೪-೭. ಪಶ್ಚಿಮದಿಕ್ಕಿನ ಸಮುದ್ರತೀರದಲ್ಲಿ ಗೋಕರ್ಣವೆಂಬ ಉತ್ತಮವಾದ ಕ್ಷೇತ್ರವು ಬ್ರಹ್ಮಹತ್ಯೆಯನ್ನು ನಾಶಮಾಡತಕ್ಕುದಾಗಿಯೂ, ಸಕಲ ಇಷ್ಟಾರ್ಥಗಳನ್ನು ಕೊಡುವುದಾಗಿಯೂ ಇರುವುದು. ಗೋಕರ್ಣಕ್ಷೇತ್ರದಲ್ಲಿ ಕೋಟಿಸಂಖ್ಯೆಯ ಲಿಂಗಗಳಿರುವುವು. ಹೆಜ್ಜೆಹೆಜ್ಜೆಗೂ ಲೆಖ್ಖವಿಲ್ಲದಷ್ಟು ತೀರ್ಥಗಳಿರುವುವು. ಹೆಚ್ಚು ಹೇಳುವುದರಿಂದ ಪ್ರಯೋಜನವೇನು? ಗೋಕರ್ಣದಲ್ಲಿರುವ ಲಿಂಗಗಳೆಲ್ಲ ಸಾಕ್ಷಾತ್ ಶಿವನ ಪ್ರತ್ಯಕ್ಷರೂಪವಾದ ಲಿಂಗಗಳೇ. ನೀರೆಲ್ಲವೂ ತೀರ್ಥಗಳೇ. ಗೋಕರ್ಣದಲ್ಲಿರುವ ಶಿವಲಿಂಗಗಳನ್ನೂ ತೀರ್ಥಗಳನ್ನೂ ಅವುಗಳ ಮಹಿಮೆಗಳನ್ನು ಪುರಾಣಗಳಲ್ಲಿ ಮಹರ್ಷಿಗಳು ಬಹುವಾಗಿ ವರ್ಣಿಸಿರುವರು.

೮-೧೦. ಗೋಕರ್ಣಕ್ಷೇತ್ರದಲ್ಲಿರುವ ಮಹಾಬಲಲಿಂಗವು ಕೃತಯುಗದಲ್ಲಿ ಬೆಳ್ಳಗೂ, ತ್ರೇತಾಯುಗದಲ್ಲಿ ಕೆಂಪಗೂ, ದ್ವಾಪರಯುಗದಲ್ಲಿ ಹಳದಿಬಣ್ಣವಾಗಿಯೂ, ಕಲಿಯುಗದಲ್ಲಿ ಕಪ್ಪುಬಣ್ಣವಾಗಿಯೂ ಇರುವುದು. ಮಹಾಬಲಲಿಂಗವು ಸಪ್ತ ಪಾತಾಳಲೋಕಗಳನ್ನು ಆಕ್ರಮಿಸಿದ್ದರೂ ಕಲಿಯುಗವು ಪ್ರಾಪ್ತವಾದರೆ ಮೃದು

ಮಹಾಪಾತಕಿನಶ್ಚಾತ್ರ ಸಮಭ್ಯರ್ಚ್ಯ ಮಹಾಬಲಂ ।
ಶಿವಲಿಂಗಂ ಚ ಗೋಕರ್ಣೇ ಪ್ರಯಾತಾಶ್ಶಾಂಕರಂ ಪದಂ ॥ ೧೦ ॥

ಗೋಕರ್ಣೇ ತತ್ರ ಮುನಯೋ ಗತ್ವಾ ಪುಣ್ಯರ್ಕ್ಷವಾಸರೇ ।
ಯೋಽರ್ಚಯಂತಿ ಚ ತೇ ಭಕ್ತ್ಯಾ ತೇ ರುದ್ರಾಃ ಸ್ಯುರ್ನ ಸಂಶಯಃ ॥ ೧೧ ॥

ಯದಾ ಕದಾಚಿದ್ಗೋಕರ್ಣೇ ಯೋ ವಾ ಕೋ ವಾಪಿ ಮಾನವಃ ।
ಪೂಜಯೇಚ್ಛಿವಲಿಂಗಂ ತತ್ಸ ಗಚ್ಛೇದ್ಬ್ರಹ್ಮಣಃ ಪದಂ ॥ ೧೨ ॥

ಬ್ರಹ್ಮವಿಷ್ಣ್ವಾದಿದೇವಾನಾಂ ಶಂಕರೋ ಹಿತಕಾಮ್ಯಯಾ ।
ಮಹಾಬಲಾಭಿಧಾನೇನ ದೇವಃ ಸನ್ನಿಹಿತಸ್ಸದಾ ॥ ೧೩ ॥

ಘೋರೇಣ ತಪಸಾ ಲಬ್ಧಂ ರಾವಣಾಖ್ಯೇನ ರಕ್ಷಸಾ ।
ತಲ್ಲಿಂಗಂ ಸ್ಥಾಪಯಾಮಾಸ ಗೋಕರ್ಣೇ ಗಣನಾಯಕಃ ॥ ೧೪ ॥

---

ಹೊಂಗುವುದು. ಇಲ್ಲಿ ಮಹಾಪಾಪಮಾಡಿದವರು ಮಹಾಬಲಲಿಂಗವನ್ನು ಪೂಜಿಸಿ ಅಥವಾ ಗೋಕರ್ಣದಲ್ಲಿರುವ ಮತ್ತಾವ ಶಿವಲಿಂಗವನ್ನು ಪೂಜಿಸಿದರೂ ಶಿವಲೋಕಕ್ಕೆ ಹೋಗುವರು.

೧೧-೧೪. ಯಾವ ಮನುಜರು ಗೋಕರ್ಣಕ್ಕೆ ಪುಣ್ಯಕರವಾದ ತಿಥಿ, ವಾರ, ನಕ್ಷತ್ರಗಳಲ್ಲಿ ಹೋಗಿ ಶಿವಪೂಜೆಯನ್ನು ಭಕ್ತಿಯಿಂದ ಮಾಡುವರೋ ಅವರು ರುದ್ರರೇ ಆಗುವರು. ಸಂದೇಹವಿಲ್ಲ. ಯಾವ ದಿನವಾದರೂ ಯಾವ ಮನುಜನಾದರೂ ಗೋಕರ್ಣಕ್ಕೆ ಹೋಗಿ ಶಿವಲಿಂಗವನ್ನು ಪೂಜಿಸಿದರೆ ಅವನು ಬ್ರಹ್ಮಪದವಿಯನ್ನು ಹೊಂದುವನು. ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಗೆ ಹಿತವನ್ನು ಮಾಡಬೇಕೆಂದು ಶಂಕರನು ಮಹಾಬಲನೆಂಬ ಹೆಸರಿನಿಂದ ಯಾವಾಗಲೂ ಅಲ್ಲಿ ನೆಲಸಿರುವನು. ರಾವಣನೆಂಬ ರಾಕ್ಷಸನು ಕ್ರೂರವಾದ ತಪಸ್ಸಿನಿಂದ ಪಡೆದ ಆ ಲಿಂಗವನ್ನು ಗಣನಾಯಕನಾದ ಗಣಪತಿಯು ಗೋಕರ್ಣದಲ್ಲಿ ಸ್ಥಾಪಿಸಿದನು.

ವಿಷ್ಣುರ್ಬ್ರಹ್ಮಾ ಮಹೇಂದ್ರಶ್ಚ ವಿಶ್ವೇದೇವಾ ಮರುದ್ಗಣಾಃ ।
ಆದಿತ್ಯಾ ವಸವೋ ದಸ್ರೌ ಶಶಾಂಕಶ್ಚ ಸತಾರಕಃ ॥ ೧೫ ॥

ಏತೇ ವಿಮಾನಗತಯೋ ದೇವಾಶ್ಚ ಸಹ ಪಾರ್ಷದೈಃ ।
ಪೂರ್ವದ್ವಾರಂ ನಿಷೇವಂತೇ ತಸ್ಯ ವೈ ಪ್ರೀತಕಾರಣಾತ್ ॥ ೧೬ ॥

ಯಮೋ ಮೃತ್ಯುಃ ಸ್ವಯಂ ಸಾಕ್ಷಾಚ್ಚಿತ್ರಗುಪ್ತಶ್ಚ ಪಾವಕಃ ।
ಪಿತೃಭಿಃ ಸಹ ರುದ್ರೈಶ್ಚ ದಕ್ಷಿಣದ್ವಾರಮಾಶ್ರಿತಃ ॥ ೧೭ ॥

ವರುಣಃ ಸರಿತಾಂ ನಾಥೋ ಗಂಗಾದಿಸರಿತಾಂ ಗಣಾಃ ।
ಮಹಾಬಲಂ ಚ ಸೇವಂತೇ ಪಶ್ಚಿಮದ್ವಾರಮಾಶ್ರಿತಾಃ ॥ ೧೮ ॥

ತಥಾ ವಾಯುಃ ಕುಬೇರಶ್ಚ ದೇವೇಶೀ ಭದ್ರಕಾಲಿಕಾ ।
ಮಾತೃಭಿಶ್ಚಂಡಿಕಾದ್ಯಾಭಿರುತ್ತರದ್ವಾರಮಾಶ್ರಿತಾಃ ॥ ೧೯ ॥

---

೧೫-೧೬. ಆ ಗೋಕರ್ಣೇಶ್ವರನಿಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ವಿಷ್ಣು, ಬ್ರಹ್ಮ, ದೇವೇಂದ್ರರೂ, ವಿಶ್ವೇದೇವತೆಗಳೂ, ಮರುದ್ಗಣಗಳೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಅಶ್ವಿನೀದೇವತೆಗಳೂ, ನಕ್ಷತ್ರಗಳೊಡನೆ ಕೂಡಿದ ಚಂದ್ರನೂ ಇವರೆಲ್ಲರೂ ವಿಮಾನಾರೂಢರಾಗಿ ತಮ್ಮ ಸೇವಕರೊಡನೆ ಪೂರ್ವದಿಕ್ಕಿನ ಬಾಗಿಲಿನಲ್ಲಿರುವರು.

೧೭-೧೯. ಯಮನೂ, ಮೃತ್ಯುದೇವತೆಯೂ, ಚಿತ್ರಗುಪ್ತರೂ, ಅಗ್ನಿಯೂ, ಪಿತೃದೇವತೆಗಳೂ, ಏಕಾದಶರುದ್ರರೂ ದಕ್ಷಿಣದಿಕ್ಕಿನ ಬಾಗಿಲಿನಲ್ಲಿರುವರು. ನದಿಗಳ ಪತಿಯಾದ ವರುಣನು ಗಂಗಾದಿ ನದಿಗಳೊಡನೆ ಪಶ್ಚಿಮದಿಕ್ಕಿನ ಬಾಗಿಲಿನಲ್ಲಿ ಮಹಾಲಿಂಗವನ್ನು ಸೇವಿಸುತ್ತಿರುವನು. ವಾಯುವೂ, ಕುಬೇರನೂ, ಭದ್ರಕಾಳಿಯೂ, ಚಂಡಿಕಾದಿ ಸಮಸ್ತ ಮಾತೃಕೆಗಳೂ ಉತ್ತರದಿಕ್ಕಿನ ಬಾಗಿಲಿನಲ್ಲಿ ಸೇವೆಮಾಡುತ್ತಿರುವರು.

ಸರ್ವೇ ದೇವಾಸ್ಸಗಂಧರ್ವಾಃ ಪಿತರಃ ಸಿದ್ಧಚಾರಣಾಃ ।
ವಿದ್ಯಾಧರಾಃ ಕಿಂಪುರುಷಾಃ ಕಿನ್ನರಾ ಗುಹ್ಯಕಾಃ ಖಗಾಃ । ॥ ೨೦ ॥

ನಾನಾಪಿಶಾಚಾ ವೇತಾಲಾ ದೈತೇಯಾಶ್ಚ ಮಹಾಬಲಾಃ ।
ನಾಗಾಶ್ಶೇಷಾದಯಸ್ಸರ್ವೇ ಸಿದ್ಧಾಶ್ಚ ಮುನಯೋಽಖಿಲಾಃ ॥ ೨೧ ॥

ಪ್ರಣುವಂತಿ ಚ ತಂ ದೇವಂ ಪ್ರಣಮಂತಿ ಮಹಾಬಲಂ ।
ಲಭಂತ ಈಪ್ಸಿತಾನ್ಕಾಮಾನ್ರಮಂತೇ ಚ ಯಥಾಸುಖಂ ॥ ೨೨ ॥

ಬಹುಭಿಸ್ತತ್ರ ಸುತಪಸ್ತಪ್ತ್ವಾಂ ಸಂಪೂಜ್ಯ ತಂ ವಿಭುಂ ।
ಲಬ್ಧಾ ಹಿ ಪರಮಾ ಸಿದ್ಧಿರಿಹಾಮುತ್ರಾಪಿ ಸೌಖ್ಯದಾ ॥ ೨೩ ॥

ಗೋಕರ್ಣೇ ಶಿವಲಿಂಗಂ ತು ಮೋಕ್ಷದ್ವಾರ ಉದಾಹೃತಃ ।
ಮಹಾಬಲಾಭಿಧಾನೋಽಸೌ ಪೂಜಿತಃ ಸಂಸ್ತುತೋ ದ್ವಿಜಾಃ ॥ ೨೪ ॥

---

೨೦-೨೨. ಗಂಧರ್ವರೊಡನೆ ಕೂಡಿದ ಸಮಸ್ತ ದೇವತೆಗಳೂ, ಪಿತೃದೇವತೆಗಳೂ, ಸಿದ್ಧರೂ, ಚಾರಣರೂ, ವಿದ್ಯಾಧರರೂ, ಕಿಂಪುರುಷರೂ, ಗುಹ್ಯಕರೂ, ಕಿನ್ನರರೂ, ಖಗರೂ, ನಾನಾವಿಧವಾದ ಪಿಶಾಚಗಳೂ, ಭೇತಾಳಗಳೂ, ಮಹಾಬಲಶಾಲಿಗಳಾದ ದೈತ್ಯರೂ, ಆದಿಶೇಷನೇ ಮೊದಲಾದ ನಾಗಗಳೂ, ಸಮಸ್ತ ಸಿದ್ಧರೂ, ಮುನಿಗಳೂ ಆ ಮಹಾಬಲಲಿಂಗವನ್ನು ಸ್ತೋತ್ರಮಾಡಿ ನಮಸ್ಕರಿಸುವರು. ಮತ್ತು ಇಷ್ಟಾರ್ಥಗಳನ್ನು ಪಡೆದು ಸುಖವಾಗಿ ವಿಹರಿಸುತ್ತಿರುವರು.

೨೩. ಅನೇಕರು ಆ ಗೋಕರ್ಣಕ್ಷೇತ್ರದಲ್ಲಿ ಮಹಾಬಲಲಿಂಗವನ್ನು ಪೂಜಿಸಿ, ತಪಸ್ಸನ್ನು ಮಾಡಿ ಇಹಪರಗಳಲ್ಲಿ ಸೌಖ್ಯವನ್ನುಂಟುಮಾಡುವ ಶ್ರೇಷ್ಠವಾದ ಸಿದ್ಧಿಯನ್ನು ಪಡೆದಿರುವರು.

೨೪-೨೭. ಎಲೈ ಬ್ರಾಹ್ಮಣರೇ; ಕೇಳಿ ಗೋಕರ್ಣದಲ್ಲಿ ಮಹಾಬಲನೆಂಬ ಶಿವಲಿಂಗದ ಪೂಜೆಯು ಮೋಕ್ಷಕ್ಕೆ ಬಾಗಿಲಾಗಿರುವುದು. ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿನ ಮಹಾಬಲಲಿಂಗದ ಪೂಜೆಯು ಸಮಸ್ತ ಪಾಪಿಗಳಿಗೂ ಮೋಕ್ಷವನ್ನು ಕೊಡತಕ್ಕುದಾಗಿರುವುದು. ಈ ಶಿವತಿಥಿಯಲ್ಲಿ ನಡೆಯುವ ಮಹೋ

**ಮಾಘಾಸಿತಚತುರ್ದಶ್ಯಾಂ ಮಹಾಬಲಸಮರ್ಚನಂ ।**
**ವಿಮುಕ್ತಿದಂ ವಿಶೇಷೇಣ ಸರ್ವೇಷಾಂ ಪಾಪಿನಾಮಪಿ ॥ ೨೫ ॥**

**ಅಸ್ಯಾಂ ಶಿವತಿಥೌ ಸರ್ವೇ ಮಹೋತ್ಸವದಿದೃಕ್ಷವಃ ।**
**ಆಯಾಂತಿ ಸರ್ವದೇಶೇಭ್ಯಶ್ಚಾತುರ್ವರ್ಣ್ಯಮಹಾಜನಾಃ ॥ ೨೬ ॥**

**ಸ್ತ್ರಿಯೋ ವೃದ್ಧಾಶ್ಚ ಬಾಲಾಶ್ಚ ಚತುರಾಶ್ರಮವಾಸಿನಃ ।**
**ದೃಷ್ಟ್ವಾ ತತ್ರೈತ್ಯ ದೇವೇಶಂ ಲೇಭಿರೇ ಕೃತಕೃತ್ಯತಾಂ ॥ ೨೭ ॥**

**ಮಹಾಬಲಪ್ರಭಾವಾತ್ತೇ ತಚ್ಚ ಲಿಂಗಂ ಶಿವಸ್ಯ ತು ।**
**ಸಂಪೂಜ್ಯೈಕಾಥ ಚಾಂಡಾಲೀ ಶಿವಲೋಕಂ ಗತಾ ದ್ರುತಂ ॥ ೨೮ ॥**

**ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ**
**ಮಹಾಬಲಮಾಹಾತ್ಮ್ಯವರ್ಣನಂ ನಾಮ**
**॥ ಅಷ್ಟಮೋಽಧ್ಯಾಯಃ ॥**

---

ತ್ಸವವನ್ನು ನೋಡಬೇಕೆಂದು ಸಮಸ್ತ ದೇಶಗಳಿಂದಲೂ ನಾಲ್ಕು ವರ್ಣದ ಜನರೂ ಬಂದು ಸೇರುವರು. ಅನೇಕ ಸ್ತ್ರೀಯರೂ, ವೃದ್ಧರೂ, ಬಾಲಕರೂ, ನಾಲ್ಕುವಿಧವಾದ ಆಶ್ರಮವಾಸಿಗಳೂ ಆ ಮಹಾಬಲೇಶ್ವರನ ದರ್ಶನವನ್ನು ಮಾಡಿ ಕೃತಕೃತ್ಯರಾಗುವರು.

೨೮. ಒಬ್ಬ ಚಂಡಾಲಿಯು ಮಹಾಬಲಲಿಂಗವನ್ನು ಪೂಜೆಮಾಡಿ ಅದರ ಮಹಿಮೆಯಿಂದ ಬೇಗನೆ ಶಿವಲೋಕಕ್ಕೆ ಹೋದಳು ಎಂದನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ನಾಲ್ಕನೆಯ ಕೊಟಿರುದ್ರಸಂಹಿತೆಯಲ್ಲಿ
ಮಹಾಬಲಲಿಂಗದ ಮಹಿಮೆಯೆಂಬ ಎಂಟನೆಯ
ಅಧ್ಯಾಯವು ಮುಗಿದುದು.

|| ಶ್ರೀ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ನವಮೋಽಧ್ಯಾಯಃ

|| ಋಷಯ ಊಚುಃ ||

ಸೂತ ಸೂತ ಮಹಾಭಾಗ ಧನ್ಯಸ್ತ್ವಂ ಶೈವಸತ್ತಮಃ ।
ಚಾಂಡಾಲೀ ಕಾ ಸಮಾಖ್ಯಾತಾ ತತ್ಕಥಾಂ ಕಥಯ ಪ್ರಭೋ || ೧ ||

|| ಸೂತ ಉವಾಚ ||

ದ್ವಿಜಾಃ ಶೃಣುತ ಸದ್ಭಕ್ತ್ಯಾ ತಾಂ ಕಥಾಂ ಪರಮಾದ್ಭುತಾಂ ।
ಶಿವಪ್ರಭಾವಸಂಮಿಶ್ರಾಂ ಶೃಣ್ವತಾಂ ಭಕ್ತಿವರ್ಧಿನೀಂ || ೨ ||

---

## ಒಂಭತ್ತನೆಯ ಅಧ್ಯಾಯವು.

೧. ಋಷಿಗಳು ಕೇಳಿದರು.— ಮಹಾಮಹಿಮನಾದ ಓ ಸೂತನೇ, ನೀನೇ, ಶಿವಭಕ್ತರಲ್ಲಿ ಶ್ರೇಷ್ಠನು ಮತ್ತು ಕೃತಾರ್ಥನು. ನೀನು ಹೇಳಿದ ಆ ಚಾಂಡಾಲಿಯು ಯಾರು? ಅವಳ ಕಥೆಯನ್ನು ನಮಗೆ ಹೇಳು ಎನ್ನಲು,

೨. ಸೂತನು ಹೇಳಿದನು.—ಎಲೈ ಬ್ರಾಹ್ಮಣರೇ, ಅತ್ಯಂತಾಶ್ಚರ್ಯಕರವಾದ ಶಿವನ ಮಹಿಮೆಯಿಂದ ಕೂಡಿ, ಕೇಳಿದವರಿಗೆ ಭಕ್ತಿಯನ್ನೂ ಹೆಚ್ಚಿಸತಕ್ಕ ಆ ದಿವ್ಯವಾದ ಕಥೆಯನ್ನು ಹೇಳುವೆನು, ಭಕ್ತಿಯಿಂದ ಕೇಳಿರಿ.

ಚಾಂಡಾಲೀ ಸಾ ಪೂರ್ವಭವೇಽಭವದ್ಬ್ರಾಹ್ಮಣಕನ್ಯಕಾ ।
ಸೌಮಿನೀ ನಾಮ ಚಂದ್ರಾಸ್ಯಾ ಸರ್ವಲಕ್ಷಣಸಂಯುತಾ ॥ ೩ ॥

ಅಥ ಸಾ ಸಮಯೇ ಕನ್ಯಾ ಯುವತೀ ಸೌಮಿನೀ ದ್ವಿಜಾಃ ।
ಪಿತ್ರಾ ದತ್ತಾ ಚ ಕಸ್ಮೈಚಿದ್ವಿಧಿನಾ ದ್ವಿಜಸೂನವೇ ॥ ೪ ॥

ಸಾ ಭರ್ತಾರಮನುಪ್ರಾಪ್ಯ ಕಿಂಚಿತ್ಕಾಲಂ ಶುಭವ್ರತಾ ।
ರೇಮೇ ತೇನ ದ್ವಿಜಶ್ರೇಷ್ಠಾ ನವಯೌವನಶಾಲಿನೀ ॥ ೫ ॥

ಅಥ ತಸ್ಯಾಃ ಪತಿರ್ವಿಪ್ರಸ್ತರುಣಸ್ಸರುಜಾರ್ದಿತಃ ।
ಸೌಮಿನ್ಯಾಃ ಕಾಲಯೋಗಾತ್ತು ಪಂಚತ್ವಮಗಮದ್ದ್ವಿಜಾಃ ॥ ೬ ॥

ಮೃತೇ ಭರ್ತರಿ ಸಾ ನಾರೀ ದುಃಖಿತಾತಿವಿಷಣ್ಣಧೀಃ ।
ಕಿಂಚಿತ್ಕಾಲಂ ಶುಭಾಚಾರಾ ಸುಶೀಲೋವಾಸ ಸದ್ಮನಿ ॥ ೭ ॥

ತತಸ್ಸಾ ಮನ್ಮಥಾವಿಷ್ಟಹೃದಯಾ ವಿಧವಾಪಿ ಚ ।
ಯುವಾವಸ್ಥಾವಿಶೇಷೇಣ ಬಭೂವ ವ್ಯಭಿಚಾರಿಣೀ ॥ ೮ ॥

---

೩-೫. ಆ ಚಾಂಡಾಲಿಯು ಹಿಂದಿನ ಜನ್ಮದಲ್ಲಿ ಸೌಮಿನೀ ಎಂಬ ಹೆಸರಿನ ಸರ್ವಲಕ್ಷಣಸಂಪನ್ನೆಯೂ ಚಂದ್ರಮುಖಿಯೂ ಆದ ಬ್ರಾಹ್ಮಣಪುತ್ರಿಯಾಗಿದ್ದಳು. ಯೌವನವತಿಯಾದ ಅವಳನ್ನು ಅವಳ ತಂದೆಯು ಒಬ್ಬ ಬ್ರಾಹ್ಮಣಪುತ್ರನಿಗೆ ವಿಧಿಗನುಸಾರವಾಗಿ ವಿವಾಹಮಾಡಿಕೊಟ್ಟನು. ಅವಳು ತನ್ನ ಪ್ರಾಯದಲ್ಲಿ ಗಂಡನೊಂದಿಗೆ ಕೆಲವು ಕಾಲ ಒಳ್ಳೆಯ ನಡತೆಯಿಂದ ಕೂಡಿ ಸಂತೋಷದಿಂದ ವಿಹಾರ ಮಾಡಿಕೊಂಡಿದ್ದಳು.

೬-೮. ಬಳಿಕ ಆ ಸೌಮಿನಿಯ ಪತಿಯು ಯೌವನವಂತನಾಗಿದ್ದಾಗಲೇ ರೋಗಗ್ರಸ್ತನಾಗಿ ಮರಣವನ್ನು ಹೊಂದಿದನು. ಗಂಡನು ಸತ್ತಮೇಲೆ ಸ್ತ್ರೀಯು ದುಃಖದಿಂದ ಕೂಡಿ ಕೆಲವು ಕಾಲ ಒಳ್ಳೆಯ ನಡತೆಯಿಂದಲೇ ಮನೆಯಲ್ಲಿ ವಾಸವಾಗಿದ್ದಳು. ಆಮೇಲೆ ಗಂಡನಿಲ್ಲದ್ದರಿಂದ ಅವಳು ತನ್ನ ಮನಸ್ಸಿನ ಕಾಮುಕತ್ವದಿಂದಲೂ, ತನ್ನ ಶರೀರಕ್ಕಿರುವ ಪ್ರಾಯದಿಂದಲೂ ವ್ಯಭಿಚಾರಿಣಿಯಾದಳು. ಅದನ್ನು

ತಜ್ಜ್ಞಾತ್ವಾ ಗೋತ್ರಿಣಸ್ತಸ್ಯಾ ದುಷ್ಕರ್ಮ ಕುಲದೂಷಣಂ ।
ಸಮೇತಾಸ್ತತ್ಯಜುದೂ೯ರತಿ ನೀತ್ವಾ ತಾಂ ಸಕಚಗ್ರಹಾಂ ॥ ೯ ॥

ಕಶ್ಚಿಚ್ಛೂದ್ರವರಸ್ತಾಂ ವೈ ವಿಚರಂತೀ ನಿಜೇಚ್ಛಯಾ ।
ದೃಷ್ಟ್ವಾ ವನೇ ಸ್ತ್ರಿಯಂ ಚಕ್ರೇ ನಿನಾಯ ಸ್ವಗೃಹಂ ತತಃ ॥ ೧೦ ॥

ಅಥ ಸಾ ಪಿಶಿತಾಹಾರಾ ನಿತ್ಯಮಾಪೀತವಾರುಣೀ ।
ಅಜೀಜನತ್ಸುತಾನ್ತೇನ ಶೂದ್ರೇಣ ಸುರತಪ್ರಿಯಾ ॥ ೧೧ ॥

ಕದಾಚಿದ್ಭರ್ತರಿ ಕ್ವಾಪಿ ಯಾತೇ ಪೀತಸುರಾಥ ಸಾ ।
ಇಯೇಷ ಪಿಶಿತಾಹಾರಂ ಸೌಮಿನೀ ವ್ಯಭಿಚಾರಿಣೀ ॥ ೧೨ ॥

ತತೋ ಮೇಷೇಷು ಬದ್ಧೇಷು ಗೋಭಿಸ್ಸಹ ಬಹಿರ್ವ್ರಜೇ ।
ನಿಶಾಮುಖೇ ತತೋಽಂಧೇ ಹಿ ಖಡ್ಗಮಾದಾಯ ಸಾ ಯಯೌ ॥ ೧೩ ॥

---

ತಿಳಿದ ಅವಳ ಜ್ಞಾತಿಗಳು ಒಟ್ಟುಗೂಡಿ ಕುಲಕ್ಕೆ ಕಳಂಕವನ್ನು ತಂದಳೆಂದು ಅವಳ ತಲೆಯ ಕೂದಲನ್ನು ಹಿಡಿದು ಎಳೆದುಕೊಂಡು ಹೋಗಿ ದೂರದಲ್ಲಿ ಬಿಟ್ಟುಬಿಟ್ಟರು.

೧೦-೧೨. ಕಾಡಿನಲ್ಲಿ ತನ್ನಿಷ್ಟಬಂದಂತೆ ತಿರುಗುತ್ತಿರಲು ಅವಳನ್ನು ಒಬ್ಬ ಶೂದ್ರನು ಕಂಡು ತನ್ನ ಹೆಂಡತಿಯನ್ನಾಗಿ ಮಾಡಿಕೊಂಡು ತನ್ನ ಮನೆಗೆ ಕರೆದುಕೊಂಡು ಬಂದನು. ಆಮೇಲೆ ಅವಳು ಮಾಂಸಾಹಾರವನ್ನೂ ಮದ್ಯಪಾನವನ್ನೂ ಮಾಡುತ್ತ ಕಾಮಾಸಕ್ತಳಾಗಿ ಆ ಶೂದ್ರನಿಂದ ಅನೇಕ ಮಕ್ಕಳನ್ನು ಪಡೆದಳು. ಒಂದಾನೊಂದು ದಿನ ತನ್ನ ಗಂಡನು ಎಲ್ಲಿಗೋ ಹೋಗಿದ್ದಾಗ ಆ ವ್ಯಭಿಚಾರಿಣಿಯಾದ ಕಾಮಿನಿಯು ಹೆಂಡವನ್ನು ಕುಡಿದು ಮಾಂಸಭೋಜನವನ್ನು ಮಾಡಬೇಕೆಂದು ಬಯಸಿದಳು.

೧೩-೧೬. ಆಮೇಲೆ ಅವಳು ಸಾಯಂಕಾಲದಲ್ಲಿ ಕತ್ತಲೆಯಾಗಿದ್ದಾಗ ಹೊರಗಿನ ಕೊಟ್ಟಿಗೆಯಲ್ಲಿ ಹಸುಗಳೊಡನೆ ಆಡುಗಳನ್ನು ಕಟ್ಟಿಹಾಕಿರಲು ಒಂದು ಕತ್ತಿ

ಅವಿಮೃಶ್ಯ ಮದಾವೇಶಾನ್ಮೇಷಬುದ್ಧ್ಯಾಮಿಷಪ್ರಿಯಾ ।
ಏಕಂ ಜಘಾನ ಗೋವತ್ಸಂ ಕ್ರೋಶಂತಮತಿದುರ್ಭಗಾ ॥ ೧೪ ॥

ಹತಂ ತಂ ಗೃಹಮಾನೀಯ ಜ್ಞಾತ್ವಾ ಗೋವತ್ಸಮಂಗನಾ ।
ಭೀತಾ ಶಿವಶಿವೇತ್ಯಾಹ ಕೇನಚಿತ್ಪುಣ್ಯಕರ್ಮಣಾ ॥ ೧೫ ॥

ಸಾ ಮುಹೂರ್ತಂ ಶಿವಂ ಧ್ಯಾತ್ವಾಮಿಷಭೋಜನಲಾಲಸಾ ।
ಛಿತ್ತ್ವಾ ತಮೇವ ಗೋವತ್ಸಂ ಚಕಾರಾಹಾರಮೀಪ್ಸಿತಂ ॥ ೧೬ ॥

ಏವಂ ಬಹುತಿಥೇ ಕಾಲೇ ಗತೇ ಸಾ ಸೌಮಿನೀ ದ್ವಿಜಾಃ ।
ಕಾಲಸ್ಯ ವಶಮಾಪನ್ನಾ ಜಗಾಮ ಯಮಸಂಕ್ಷಯಂ ॥ ೧೭ ॥

ಯಮೋಽಪಿ ಧರ್ಮಮಾಲೋಕ್ಯ ತಸ್ಯಾಃ ಕರ್ಮ ಚ ಪೌರ್ವಿಕಂ ।
ನಿವರ್ತ್ಯ ನಿರಯಾವಾಸಾಚ್ಚಕ್ರೇ ಚಾಂಡಾಲಜಾತಿಕಾಂ ॥ ೧೮ ॥

---

ಯನ್ನು ತೆಗೆದುಕೊಂಡು ಹೊರಟಳು. ಮದ್ಯದ ಆವೇಶದಿಂದಲೂ ಮಾಂಸದ ಆಸೆಯಿಂದಲೂ ಪಾಪಿಯಾದ ಅವಳು ವಿಚಾರಮಾಡದೆ ಆಡೆಂದು ತಿಳಿದು ಒಂದು ಹಸುವಿನ ಕರುವನ್ನು ಕೊಂದಳು. ಸತ್ತ ಆ ಕರುವನ್ನು ಮನೆಗೆ ತಂದು ಹಸುವಿನ ಕರುವೆಂಬುದಾಗಿ ತಿಳಿದು ಭಯದಿಂದಲೂ ಯಾವುದೋ ಪುಣ್ಯಕರ್ಮಫಲದಿಂದಲೂ ಶಿವಶಿವ ಎಂದು ಹೇಳಿದಳು. ಅವಳು ಒಂದು ಮುಹೂರ್ತದವರೆಗೆ ಶಿವನನ್ನು ಧ್ಯಾನಿಸಿ ಮಾಂಸಭೋಜನದಲ್ಲಿ ಆಸಕ್ತಿಯಿಂದ ಆ ಕರುವನ್ನೇ ಕತ್ತರಿಸಿ ತನಗೆ ಬೇಕಾದ ಆಹಾರವನ್ನು ಮಾಡಿಕೊಂಡಳು.

೧೭-೨೦. ಎಲೈ ಬ್ರಾಹ್ಮಣರೇ, ಹೀಗೆ ಅನೇಕ ದಿನಗಳು ಕಳೆದ ಮೇಲೆ ಆ ಸೌಮಿನಿಯು ಮರಣಹೊಂದಿ ಯಮನ ಮನೆಗೆ ಹೋದಳು. ಯಮನು ಅವಳ ಧರ್ಮವನ್ನೂ ಪೂರ್ವಕರ್ಮವನ್ನೂ ವಿಚಾರಮಾಡಿ ನರಕವಾಸವನ್ನು ಕೊಟ್ಟಮೇಲೆ ಚಂಡಾಲಜಾತಿಯಲ್ಲಿ ಹುಟ್ಟುವಂತೆ ಮಾಡಿದನು. ಅವಳು ಯಮನ ಪಟ್ಟಣದಿಂದ

ಸಾಥ ಭ್ರಷ್ಟಾ ಯಮಪುರಾಚ್ಚಾಂಡಾಲೀಗರ್ಭಮಾಶ್ರಿತಾ ।
ತತೋ ಬಭೂವ ಜನ್ಮಾಂಧಾ ಪ್ರಶಾಂತಾಂಗಾರಮೇಚಕಾ ॥ ೧೯ ॥

ಜನ್ಮಾಂಧಾ ಸಾಥ ಬಾಲ್ಯೇಽಪಿ ವಿಧ್ವಸ್ತಪಿತೃಮಾತೃಕಾ ।
ಊಢಾ ನ ಕೇನಚಿದ್ದುಷ್ಟಾ ಮಹಾಕುಷ್ಠರುಜಾರ್ದಿತಾ ॥ ೨೦ ॥

ತತಃ ಕ್ಷುಧಾರ್ದಿತಾ ದೀನಾ ಯಷ್ಟಿಪಾಣಿರ್ಗತೇಕ್ಷಣಾ ।
ಚಾಂಡಾಲೋಚ್ಛಿಷ್ಟಪಿಂಡೇನ ಜಠರಾಗ್ನಿಮತರ್ಪಯತ್ ॥ ೨೧ ॥

ಏವಂ ಕೃಚ್ಛ್ರೇಣ ಮಹತಾ ನೀತ್ವಾ ಸ್ವವಿಪುಲಂ ವಯಃ ।
ಜರಯಾ ಗ್ರಸ್ತಸರ್ವಾಂಗೀ ದುಃಖಮಾಪ ದುರತ್ಯಯಂ ॥ ೨೨ ॥

ಕದಾಚಿತ್ಸಾಥ ಚಾಂಡಾಲೀ ಗೋಕರ್ಣಂ ತಂ ಮಹಾಜನಾನ್ ।
ಆಯಾಸ್ಯಂತ್ಯಾಂ ಶಿವತಿಥೌ ಗಚ್ಛತೋ ಬುಬುಧೇಽಧ್ವಗಾನ್ ॥ ೨೩ ॥

---

ಬಂದು ಚಂಡಾಲಿಯ ಹೊಟ್ಟೆಯಲ್ಲಿ ಹುಟ್ಟಿ ಕುರುಡಳಾಗಿಯೂ ಕರಿಯ ಮೈಬಣ್ಣದಿಂದ ಕೂಡಿದವಳಾಗಿಯೂ ಹುಟ್ಟಿ, ಬಾಲ್ಯದಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ಮಹಾಕುಷ್ಠರೋಗದಿಂದ ನರಳುತ್ತ ಯಾರನ್ನೂ ಮದುವೆಯಾಗದಿದ್ದಳು.

೨೧-೨೨. ಆಮೇಲೆ ಅವಳು ಹಸಿವಿನಿಂದ ಕಷ್ಟಪಡುತ್ತ ದೀನತೆಯಿಂದ ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಕಣ್ಣುಕಾಣದೆ ತಿರುಗುತ್ತ ಚಂಡಾಲನ ಎಂಜಲನ್ನು ತಿಂದು ಹೊಟ್ಟೆಯನ್ನು ತುಂಬಿಕೊಳ್ಳುತ್ತಿದ್ದಳು. ಹೀಗೆ ಬಹು ಕಷ್ಟದಿಂದ ತನ್ನ ವಯಸ್ಸನ್ನು ಕಳೆದು ಮುದುಕಿಯಾಗಿ ಬಹಳ ದುಃಖವನ್ನು ಹೊಂದಿದಳು.

೨೩-೨೫. ಒಂದಾನೊಂದು ದಿನ ಆ ಚಂಡಾಲಿಯು ಶಿವರಾತ್ರಿಯ ಉತ್ಸವಕ್ಕಾಗಿ ಜನರು ಗೋಕರ್ಣಕ್ಕೆ ಹೋಗುತ್ತಿರುವರೆಂಬುದನ್ನು ತಿಳಿದು, ತಾನೂ ಬಟ್ಟೆ

ಅಥಾಸಾವಪಿ ಚಾಂಡಾಲೀ ವಸನಾಸನತೃಷ್ಣಯಾ ।
ಮಹಾಜನಾನ್ಯಾಚಯಿತುಂ ಸಂಚಚಾರ ಶನೈಃ ಶನೈಃ ॥ ೨೪ ॥

ಗತ್ವಾ ತತ್ರಾಥ ಚಾಂಡಾಲೀ ಪ್ರಾರ್ಥಯಂತೀ ಮಹಾಜನಾನ್ ।
ಯತ್ರ ತತ್ರ ಚಚಾರಾಸೌ ದೀನವಾಕ್ಪ್ರಸೃತಾಂಜಲಿಃ ॥ ೨೫ ॥

ಏವಮಭ್ಯರ್ಥಯಂತ್ಯಾಸ್ತು ಚಾಂಡಾಲ್ಯಾಃ ಪ್ರಸೃತಾಂಜಲೌ ।
ಏಕಃ ಪುಣ್ಯತಮಃ ಸಾಂಥಃ ಪ್ರಾಕ್ಷಿಪದ್ಬಿಲ್ವಮಂಜರೀಂ ॥ ೨೬ ॥

ತಾಮಂಜಲೌ ನಿಪತಿತಾಂ ಸಾ ವಿಮೃಶ್ಯ ಪುನಃ ಪುನಃ ।
ಅಭಕ್ಷ್ಯಮಿತಿ ಮತ್ವಾಥ ದೂರೇ ಪ್ರಾಕ್ಷಿಪದಾತುರಾ ॥ ೨೭ ॥

ತಸ್ಯಾಃ ಕರಾದ್ವಿನಿರ್ಮುಕ್ತಾ ರಾತ್ರೌ ಸಾ ಬಿಲ್ವಮಂಜರೀ ।
ಪಪಾತ ಕಸ್ಯಚಿದ್ದಿಷ್ಟ್ಯಾ ಶಿವಲಿಂಗಸ್ಯ ಮಸ್ತಕೇ ॥ ೨೮ ॥

ಸೈವಂ ಶಿವಚತುರ್ದಶ್ಯಾಂ ರಾತ್ರೌ ಪಾಂಥಜನಾನ್ಮುಹುಃ ।
ಯಾಚಮಾನಾಪಿ ಯತ್ಕಿಂಚಿನ್ನ ಲೇಭೇ ದೈವಯೋಗತಃ ॥ ೨೯ ॥

---

ಮತ್ತು ಆಹಾರಗಳ ಆಸೆಯಿಂದ ಜನರನ್ನು ಯಾಚಿಸುತ್ತ ತಿರುಗುತ್ತಿದ್ದಳು. ಆ ಚಂಡಾಲಿಯು ಆ ಗೋಕರ್ಣಕ್ಷೇತ್ರಕ್ಕೆ ಹೋಗಿ ಬೊಗಸೆಯೊಡ್ಡಿ ದೈನ್ಯದಿಂದ ಜನರನ್ನು ಅಲ್ಲಲ್ಲಿ ಯಾಚಿಸುತ್ತ ತಿರುಗುತ್ತಿದ್ದಳು.

೨೬-೨೯. ಹೀಗೆ ಬೇಡಿಕೊಳ್ಳುತ್ತಿರುವ ಚಂಡಾಲಿಯ ಬೊಗಸೆಯಲ್ಲಿ ಒಬ್ಬ ಪುಣ್ಯಾತ್ಮನಾದ ಮಾರ್ಗಸ್ಥನು ಬಿಲ್ವಪತ್ರೆಯ ಚಿಗುರನ್ನು ಹಾಕಿದನು. ಬೊಗಸೆಗೆ ಬಿದ್ದ ಅದನ್ನು ಅವಳು ಮತ್ತೆ ಮತ್ತೆ ಮುಟ್ಟಿನೋಡಿ ಆಹಾರವಲ್ಲವೆಂದು ತಿಳಿದು ಅದನ್ನು ದೂರದಲ್ಲಿ ಬಿಸಾಡಿದಳು. ಆ ರಾತ್ರಿಯಲ್ಲಿ ಅವಳ ಕೈಯಿಂದ ಬಿದ್ದ ಬಿಲ್ವಪತ್ರೆಯ ಚಿಗುರು (ಗೊಂಚಲು) ಅದೃಷ್ಟವಶದಿಂದ ಒಂದು ಶಿವಲಿಂಗದ ತಲೆಯ ಮೇಲೆ ಬಿದ್ದಿತು. ಆ ಶಿವರಾತ್ರಿಯ ಚತುರ್ದಶಿಯ ದಿನ ರಾತ್ರಿಯಲ್ಲಿ ಬರುವವರೆಲ್ಲರನ್ನೂ ಯಾಚಿಸುತ್ತಿದ್ದರೂ ಅವಳಿಗೆ ದೈವಯೋಗದಿಂದ ಸ್ವಲ್ಪವೂ ಆಹಾರವು ದೊರೆಯಲಿಲ್ಲ.

ಏವಂ ಶಿವಚತುರ್ದಶ್ಯಾ ವ್ರತಂ ಜಾತಂ ಚ ನಿರ್ಮಲಂ ।
ಅಜ್ಞಾನತೋ ಜಾಗರಣಂ ಪರಮಾನಂದದಾಯಕಂ ॥ ೩೦ ॥

ತತಃ ಪ್ರಭಾತೇ ಸಾ ನಾರೀ ಶೋಕೇನ ಮಹತಾವೃತಾ ।
ಶನೈರ್ನಿರ್ವವೃತೇ ದೀನಾ ಸ್ವದೇಶಾಯ್ಯೈವ ಕೇವಲಂ ॥ ೩೧ ॥

ಶ್ರಾಂತಾ ಚಿರೋಪವಾಸೇನ ನಿಪತಂತೀ ಪದೇಪದೇ ।
ಅತೀತ್ಯ ತಾವತೀಂ ಭೂಮಿಂ ನಿಪಪಾತ ವಿಚೇತನಾ ॥ ೩೨ ॥

ಅಥ ಸಾ ಶಂಭುಕೃಪಯಾ ಜಗಾಮ ಪರಮಂ ಪದಂ ॥
ಆರುಹ್ಯ ಸುವಿಮಾನಂ ಚ ನೀತಂ ಶಿವಗಣೈರ್ವೃತಂ ॥ ೩೩ ॥

ಆದೌ ಯದೇಷಾ ಶಿವನಾಮ ನಾರೀ
ಪ್ರಮಾದತೋ ವಾಪ್ಯಸತೀ ಜಗಾದ ।
ತೇನೇಹ ಭೂಯಃ ಸುಕೃತೇನ ವಿಪ್ರಾ
ಮಹಾಬಲಸ್ಥಾನಮವಾಪ ದಿವ್ಯಂ ॥ ೩೪ ॥

---

೩೦-೩೨. ಹೀಗೆ ಶಿವರಾತ್ರಿಯ ಚತುರ್ದಶಿಯ ದಿನದಲ್ಲಿ ಆ ಚಂಡಾಲಿಗೆ ಅಜ್ಞಾನದಿಂದಲೇ ವ್ರತವೂ ಉಪವಾಸವೂ ಜಾಗರಣೆಯೂ ಆಯಿತು. ಬಳಿಕ ಪ್ರಾತಃಕಾಲದಲ್ಲಿ ಆ ಸ್ತ್ರೀಯು ಹೆಚ್ಚು ದುಃಖದಿಂದಲೂ ದೈನ್ಯದಿಂದಲೂ ಮೆಲ್ಲಗೆ ತನ್ನ ದೇಶಕ್ಕೆ ಹಿಂದಿರುಗಿದಳು. ಬಹಳ ಕಾಲ ಆಹಾರವಿಲ್ಲದೆ ಬಳಲಿ ಪುನಃ ಪುನಃ ದಾರಿಯಲ್ಲಿ ಬೀಳುತ್ತ ಸ್ವಲ್ಪದೂರ ಬಂದು ಶಕ್ತಿಯಿಲ್ಲದೆ ಬಿದ್ದುಬಿಟ್ಟಳು.

೩೩. ಆಮೇಲೆ ಅವಳು ಶಿವನ ಕೃಪೆಯಿಂದ ಪರಮಪದವನ್ನು ಪಡೆದಳು. ಶಿವಗಣಗಳು ಅವಳನ್ನು ವಿಮಾನದ ಮೇಲೇರಿಸಿಕೊಂಡು ಹೋದರು.

೩೪-೩೬. ಎಲೈ ಬ್ರಾಹ್ಮಣರೇ, ವ್ಯಭಿಚಾರಿಣಿಯಾದ ಈ ಸ್ತ್ರೀಯು ಮೊದಲು ಪ್ರಮಾದವಶದಿಂದ ಶಿವನಾಮವನ್ನುಚ್ಚರಿಸಿದಳು. ಆ ಪುಣ್ಯದಿಂದಲೇ ಮಹಾಬಲ ಲಿಂಗವಿರುವ ಗೋಕರ್ಣಕ್ಷೇತ್ರಕ್ಕೆ ಬಂದಳು. ಆ ಗೋಕರ್ಣಕ್ಷೇತ್ರದಲ್ಲಿ ಶಿವರಾತ್ರಿಯ

ಶ್ರೀಗೋಕರ್ಣೇ ಶಿವತಿಥಾವುಪೋಷ್ಯ ಶಿವಮಸ್ತಕೇ ।
ಕೃತ್ವಾ ಜಾಗರಣಂ ಸಾ ಹಿ ಚಕ್ರೇ ಬಿಲ್ವಾರ್ಚನಂ ನಿಶಿ ॥ ೩೫ ॥

ಅಕಾಮತಃ ಕೃತಸ್ಯಾಸ್ಯ ಪುಣ್ಯಸ್ಯೈವ ಚ ತತ್ಫಲಂ ।
ಭುನಕ್ತ್ಯದ್ಯಾಪಿ ಸಾ ಚೈವ ಮಹಾಬಲಪ್ರಸಾದತಃ ॥ ೩೬ ॥

ಏವಂವಿಧಂ ಮಹಾಲಿಂಗಂ ಶಂಕರಸ್ಯ ಮಹಾಬಲಂ ।
ಸರ್ವಪಾಪಹರಂ ಸದ್ಯಃ ಪರಮಾನಂದದಾಯಕಂ ॥ ೩೭ ॥

ಏವಂ ವಃ ಕಥಿತಂ ವಿಪ್ರಾ ಮಾಹಾತ್ಮ್ಯಂ ಪರಮಂ ಮಯಾ ।
ಮಹಾಬಲಾಭಿದಾನಸ್ಯ ಶಿವಲಿಂಗವರಸ್ಯ ಹಿ ॥ ೩೮ ॥

---

ದಿನ ಉಪವಾಸ ಮಾಡಿ ಶಿವಲಿಂಗದ ಮೇಲೆ ಬಿಲ್ವಪತ್ರೆಯನ್ನು ಪೂಜೆಮಾಡಿ ಜಾಗರಣೆಯನ್ನು ಮಾಡಿದಳು. ನಿಷ್ಕಾಮವಾಗಿ ಮಾಡಿದ ಈ ಪುಣ್ಯಕಾರ್ಯದ ಫಲವಾಗಿ ಮಹಾಬಲೇಶ್ವರನ ಅನುಗ್ರಹದಿಂದ ಈಗಲೂ ಅವಳು ಶಿವಲೋಕದಲ್ಲಿ ಸುಖವನ್ನನುಭವಿಸುತ್ತಿರುವಳು.

೩೭. ಈ ರೀತಿಯಲ್ಲಿ ಶಿವನ ಮಹಾಬಲಲಿಂಗವು ಸಮಸ್ತ ಪಾಪಪರಿಹಾರಕವಾದುದಾಗಿಯೂ ಪರಮಾನಂದವನ್ನು ಕೊಡತಕ್ಕುದಾಗಿಯೂ ಇರುವುದು.

೩೮. ಎಲೈ ಬ್ರಾಹ್ಮಣರೇ, ಈ ರೀತಿಯಲ್ಲಿ ನಿಮಗೆ ಮಹಾಬಲನೆಂಬ ಶಿವಲಿಂಗದ ಶ್ರೇಷ್ಠವಾದ ಮಹಿಮೆಯನ್ನು ಹೇಳಿರುವೆನು.

ಅಥಾನ್ಯದಪಿ ವಕ್ಷ್ಯಾಮಿ ಮಾಹಾತ್ಮ್ಯಂ ತಸ್ಯ ಚಾದ್ಭುತಂ ।
ಶ್ರುತಮಾತ್ರೇಣ ಯೇನಾಶು ಶಿವೇ ಭಕ್ತಿಃ ಪ್ರಜಾಯತೇ ॥ ೩೯ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಚಾಂಡಾಲೀಸದ್ಗತಿವರ್ಣನಂ ನಾಮ
ನವಮೋಽಧ್ಯಾಯಃ

---

೩೯. ಈ ಶಿವಲಿಂಗದ ವಿಷಯದಲ್ಲಿ ಕೇಳಿದೊಡನೆಯೇ ಭಕ್ತಿಯನ್ನು ಹುಟ್ಟಿಸುವ, ಆಶ್ಚರ್ಯಕರವಾದ ಮಹಿಮೆಯುಳ್ಳ ಮತ್ತೊಂದು ಇತಿಹಾಸವನ್ನು ಹೇಳುವೆನು ಎಂದನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಚಂಡಾಲೀ ಸದ್ಗತಿವರ್ಣನೆಯೆಂಬ ಒಂಭತ್ತನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ದಶಮೋಽಧ್ಯಾಯಃ

|| ಸೂತ ಉವಾಚ ||

ಶ್ರೀಮತೀಕ್ಷ್ವಾಕುವಂಶೇ ಹಿ ರಾಜಾ ಪರಮಧಾರ್ಮಿಕಃ ।
ಆಸೀನ್ಮಿತ್ರಸಹೋ ನಾಮ ಶ್ರೇಷ್ಠಸ್ಸರ್ವಧನುಷ್ಮತಾಂ || ೧ ||

ತಸ್ಯ ರಾಜ್ಞಃ ಸುಧರ್ಮಿಷ್ಠಾ ಮದಯಂತೀ ಪ್ರಿಯಾ ಶುಭಾ ।
ದಮಯಂತೀ ನಲಸ್ಯೇವ ಬಭೂವ ವಿದಿತಾ ಸತೀ || ೨ ||

---

## ಹತ್ತನೆಯ ಅಧ್ಯಾಯವು.

೧-೨. ಸೂತನು ಹೇಳಿದನು.— ಇಕ್ಷ್ವಾಕುವಂಶದಲ್ಲಿ ಅತ್ಯಂತಧರ್ಮಿಷ್ಠನೂ, ಸಮಸ್ತ ಧನುರ್ಧರರಲ್ಲಿ ಶ್ರೇಷ್ಠನೂ ಆದ ಮಿತ್ರಸಹನೆಂಬ ಒಬ್ಬ ರಾಜನಿದ್ದನು. ಆ ರಾಜನಿಗೆ ಪ್ರೀತಿಪಾತ್ರಳೂ ಮಂಗಳಸ್ವರೂಪಳೂ ಧರ್ಮಿಷ್ಠೆಯೂ ಆದ ಮದಯಂತೀ ಎಂಬ ಪತ್ನಿಯು, ನಳನಿಗೆ ದಮಯಂತಿಯಂತೆ ಪತಿವ್ರತಾಧರ್ಮದಿಂದ ಶೋಭಿಸುತ್ತಿದ್ದಳು.

ಸ ಏಕದಾ ಹಿ ಮೃಗಯಾಸ್ನೇಹೀ ಮಿತ್ರಸಹೋ ನೃಪಃ ।
ಮಹದ್ಬಲೇನ ಸಂಯುಕ್ತೋ ಜಗಾಮ ಗಹನಂ ವನಂ ॥ ೩ ॥

ವಿಹರಂಸ್ತತ್ರ ಸ ನೃಪಃ ಕಮಠಾಹ್ವಂ ನಿಶಾಚರಂ ।
ನಿಜಘಾನ ಮಹಾದುಷ್ಟಂ ಸಾಧುಪೀಡಾಕರಂ ಖಲಂ ॥ ೪ ॥

ಅಥ ತಸ್ಯಾನುಜಃ ಪಾಪೀ ಜಯೋಯಂ ಛದ್ಮನೈವ ತಂ ।
ಮತ್ವಾ ಜಗಾಮ ನೃಪತೇರಂತಿಕಂ ಛದ್ಮಕಾರಕಃ ॥ ೫ ॥

ತಂ ವಿನಮ್ರಾಕೃತಿಂ ದೃಷ್ಟ್ವಾ ಭೃತ್ಯತಾಂ ಕರ್ತುಮಾಗತಂ ।
ಚಕ್ರೇ ಮಹಾನಸಾಧ್ಯಕ್ಷಮಜ್ಞಾನಾತ್ಸ ಮಹೀಪತಿಃ ॥ ೬ ॥

ಅಥ ತಸ್ಮಿನ್ವನೇ ರಾಜಾ ಕಿಯತ್ಕಾಲಂ ವಿಹೃತ್ಯ ಸಃ ।
ನಿವೃತ್ತೋ ಮೃಗಯಾಂ ಹಿತ್ವಾ ಸ್ವಪುರೀಮಾಯಯೌ ಮುದಾ ॥ ೭ ॥

---

೩-೫. ಆ ಮಿತ್ರಸಹನೆಂಬ ರಾಜನು ಒಂದು ದಿನ ಬೇಟೆಯಾಡಬೇಕೆಂದು ದೊಡ್ಡ ಸೈನ್ಯದೊಡನೆ ಭಯಂಕರವಾದ ಕಾಡಿಗೆ ಹೋದನು. ಅಲ್ಲಿ ಆ ರಾಜನು ವಿಹರಿಸುತ್ತ ಸಜ್ಜನರಿಗೆ ತೊಂದರೆಯನ್ನುಂಟುಮಾಡುವವನೂ ಮಹಾದುಷ್ಟನೂ ಆದ ಕಮಠನೆಂಬ ರಾಕ್ಷಸನನ್ನು ಕೊಂದನು. ಇದರಿಂದ ಕೋಪಗೊಂಡ ಆ ರಾಕ್ಷಸನ ತಮ್ಮನು ಮೋಸದಿಂದ ರಾಜನನ್ನು ಜಯಿಸಬೇಕೆಂದು ಸೇವಕನ ವೇಷದಿಂದ ರಾಜನ ಸಮೀಪಕ್ಕೆ ಹೋದನು.

೬-೭. ಅತ್ಯಂತ ವಿನಯದಿಂದ ಸೇವಕನಾಗಿರಬೇಕೆಂದು ಬಂದ ಅವನನ್ನು ರಾಜನು ತಿಳಿಯದೆ ಅಡಿಗೆಯ ಮನೆಯ ಅಧ್ಯಕ್ಷನನ್ನಾಗಿ ಮಾಡಿದನು. ಆಮೇಲೆ ರಾಜನು ಕೆಲವು ದಿನ ಬೇಟೆಯಲ್ಲಿ ವಿಹರಿಸಿ, ಅದನ್ನು ಬಿಟ್ಟು ಸಂತೋಷದಿಂದ ತನ್ನ ಪಟ್ಟಣಕ್ಕೆ ಹಿಂತಿರುಗಿ ಬಂದನು.

ಪಿತುಃ ಕ್ಷಯಾಹೇ ಸಂಪ್ರಾಪ್ತೇ ನಿಮ್ರಂತ್ಯ ಸ್ವಗುರುಂ ನೃಪಃ ।
ವಸಿಷ್ಠಂ ಗೃಹಮಾನಿನ್ಯೇ ಭೋಜಯಾಮಾಸ ಭಕ್ತಿತಃ ॥ ೮ ॥

ರಕ್ಷಸಾ ಸೂದರೂಪೇಣ ಸಮಿಶ್ರಿತನರಾಮಿಷಂ ।
ಶಾಕಾಮಿಷಂ ಪುರಃ ಕ್ಷಿಪ್ತಂ ದೃಷ್ಟ್ವಾ ಗುರುರಥಾಬ್ರವೀತ್ ॥ ೯ ॥

॥ ಗುರುರುವಾಚ ॥

ಧಿಕ್ತ್ವಾಂ ನರಾಮಿಷಂ ರಾಜಂಸ್ತ್ವಯ್ಯೈತಚ್ಛದ್ಮಕಾರಿಣಾ ।
ಖಲೋನೋಪಹೃತಂ ಮಹ್ಯಂ ತತೋ ರಕ್ಷೋ ಭವಿಷ್ಯಸಿ ॥ ೧೦ ॥

ರಕ್ಷಃಕೃತಂ ಚ ವಿಜ್ಞಾಯ ತದ್ವೈವಂ ಸ ಗುರುಸ್ತದಾ ।
ಪುನರ್ವಿಮೃಶ್ಯ ತಂ ಶಾಪಂ ಚಕಾರ ದ್ವಾದಶಾಬ್ದಿಕಂ ॥ ೧೧ ॥

ಸ ರಾಜಾನುಚಿತಂ ಶಾಪಂ ವಿಜ್ಞಾಯ ಕ್ರೋಧಮೂರ್ಛಿತಃ ।
ಜಲಾಂಜಲಿಂ ಸಮಾದಾಯ ಗುರುಂ ಶಪ್ತುಂ ಸಮುದ್ಯತಃ ॥ ೧೨ ॥

---

೮-೯. ಹೀಗಿರಲು ತನ್ನ ತಂದೆಯ ಶ್ರಾದ್ಧದ ದಿನ ಬರಲು ರಾಜನು ತನ್ನ ಗುರುವಾದ ವಸಿಷ್ಠನನ್ನು ಭಕ್ತಿಯಿಂದ ಶ್ರಾದ್ಧಭೋಜನಕ್ಕಾಗಿ ಮನೆಗೆ ಕರೆದುಕೊಂಡು ಬಂದನು. ಅಡಿಗೆಯವನ ರೂಪದಿಂದಿದ್ದ ರಾಕ್ಷಸನು ಸಾಮಾನ್ಯವಾದ ಮಾಂಸದ ಜತೆಗೆ ಮನುಷ್ಯಮಾಂಸವನ್ನೂ ಬೆರಸಿ ಊಟಕ್ಕೆ ಬಡಿಸಿದನು. ಇದನ್ನು ಗುರುವು ನೋಡಿ,

೧೦-೧೧. ಎಲೈ ರಾಜನೇ, ಮೋಸಗಾರನಾದ ನಿನ್ನ ಈ ಅಡಿಗೆಯವನು ಮನುಷ್ಯರ ಮಾಂಸವನ್ನು ತಂದು ನನಗೆ ಬಡಿಸಿದನು. ಆದುದರಿಂದ ನೀನು ರಾಕ್ಷಸನಾಗು, ಎಂದು ಶಪಿಸಿದನು. ಈ ಕೆಲಸವು ರಾಕ್ಷಸನು ಮಾಡಿದುದು. ಇದರಲ್ಲಿ ರಾಜನ ತಪ್ಪು ವಿಶೇಷವಾಗಿ ಇಲ್ಲ ಎಂದು ತಿಳಿದು ಗುರುವು ಆಗಲೇ ವಿಚಾರಮಾಡಿ, ಈ ಶಾಪವು ಹನ್ನೆರಡು ವರ್ಷಗಳವರೆಗೆ ಮಾತ್ರ ಇರುವುದು, ಎಂದು ಹೇಳಿದನು.

೧೨-೧೩. ಆ ರಾಜನು ಗುರುವು ಕೊಟ್ಟ ಶಾಪವು ಉಚಿತವಲ್ಲವೆಂದು ತಿಳಿದು, ಕೋಪದಿಂದ ಬೊಗಸೆಯಲ್ಲಿ ನೀರನ್ನು ಹಿಡಿದು ಗುರುವಿಗೆ ಪ್ರತಿಶಾಪವನ್ನು

ತದಾ ಚ ತತ್ಪ್ರಿಯಾ ಸಾಧ್ವೀ ಮದಯಂತೀ ಸುಧರ್ಮಿಣೀ ।
ಪತಿತ್ವಾ ಪಾದಯೋಸ್ತಸ್ಯ ಶಾಪಂ ತಂ ಹಿ ನ್ಯವಾರಯತ್ ॥ ೧೩ ॥

ತತೋ ನಿವೃತ್ತಶಾಪಸ್ತು ತಸ್ಯಾ ವಚನಗೌರವಾತ್ ।
ತತ್ಯಾಜ ಪಾದಯೋರಂಭಃ ಪಾದೌ ಕಲ್ಮಷತಾಂ ಗತೌ ॥ ೧೪ ॥

ತತಃ ಪ್ರಭೃತಿ ರಾಜಾಭೂತ್ಸ ಲೋಕೇಽಸ್ಮಿನ್ಮುನೀಶ್ವರಾಃ ।
ಕಲ್ಮಷಾಂಘ್ರಿರಿತಿ ಖ್ಯಾತಃ ಪ್ರಭಾವಾತ್ತಜ್ಜಲಸ್ಯ ಹಿ ॥ ೧೫ ॥

ರಾಜಾ ಮಿತ್ರಸಹಃ ಶಾಪಾದ್ಗುರೋ ಋಷಿವರಸ್ಯ ಹಿ ।
ಬಭೂವ ರಾಕ್ಷಸೋ ಘೋರೋ ಹಿಂಸಕೋ ವನಗೋಚರಃ ॥ ೧೬ ॥

ಸ ಬಿಭ್ರದ್ರಾಕ್ಷಸಂ ರೂಪಂ ಕಾಲಾಂತಕಯಮೋಪಮಂ ।
ಚಖಾದ ವಿವಿಧಾಞ್ಜಂತೂನ್ಮಾನುಷಾದೀನ್ವನೇಚರಃ ॥ ೧೭ ॥

---

ಕೊಡಲು ಪ್ರಯತ್ನಿಸಿದನು. ಆಗ ಆ ರಾಜನ ಪತ್ನಿಯೂ ಪತಿವ್ರತೆಯೂ ಆದ ಮದಯಂತಿಯು ತನ್ನ ಪತಿಯ ಪಾದಗಳಲ್ಲಿ ಬಿದ್ದು, ಗುರುವಿಗೆ ಶಾಪಕೊಡುವುದನ್ನು ತಪ್ಪಿಸಿದಳು. ಆಮೇಲೆ ಹೆಂಡತಿಯ ಮಾತಿಗೆ ಗೌರವವನ್ನು ಕೊಟ್ಟು ಗುರುವಿಗೆ ಶಾಪವನ್ನು ಕೊಡದೆ, ರಾಜನು ಆ ನೀರನ್ನು ತನ್ನ ಪಾದಗಳ ಮೇಲೆ ಹಾಕಿಕೊಂಡನು. ಅದರಿಂದ ಅವನ ಪಾದಗಳು ಕಲ್ಮಷತ್ವವನ್ನು ಎಂದರೆ ಕಪ್ಪುಬಣ್ಣವನ್ನು ಹೊಂದಿತು. ಆದಿನ ಮೊದಲುಗೊಂಡು ಆ ನೀರಿನ ಮಹಿಮೆಯಿಂದ ಆ ರಾಜನಿಗೆ ಈ ಲೋಕದಲ್ಲಿ ಕಲ್ಮಾಷಪಾದನೆಂಬ ಹೆಸರುಂಟಾಯಿತು.

೧೬-೧೮. ಬಳಿಕ ಮಿತ್ರಸಹರಾಜನು ಗುರುವಾದ ಋಷಿಶ್ರೇಷ್ಠನ ಶಾಪದಿಂದ ಕಾಡಿನಲ್ಲಿ ಭಯಂಕರನೂ ಹಿಂಸಕನೂ ಆದ ರಾಕ್ಷಸನಾದನು. ಆ ರಾಜನು ಪ್ರಳಯ ಕಾಲದ ಯಮನಂತೆ ರಾಕ್ಷಸರೂಪವನ್ನು ಧರಿಸಿ ಕಾಡಿನಲ್ಲಿ ಸಂಚರಿಸುತ್ತ ಬಗೆಬಗೆಯ ಪ್ರಾಣಿಗಳನ್ನೂ, ಮನುಷ್ಯರೇ ಮೊದಲಾದವರನ್ನೂ ತಿನ್ನುತ್ತಿದ್ದನು. ಅವನು

ಸ ಕದಾಚಿದ್ವನೇ ಕ್ವಾಪಿ ರಮಮಾಣೌ ಕಿಶೋರಕೌ ।
ಅಪಶ್ಯದಂತಕಾಕಾರೋ ನವೋಢೌ ಮುನಿದಂಪತೀ ॥ ೧೮ ॥

ರಾಕ್ಷಸಃ ಸ ನರಾಹಾರಃ ಕಿಶೋರಂ ಮುನಿನಂದನಂ ।
ಜಗ್ಧುಂ ಜಗ್ರಾಹ ಶಾಪಾರ್ತ್ತೋ ವ್ಯಾಘ್ರೋ ಮೃಗಶಿಶುಂ ಯಥಾ ॥ ೧೯ ॥

ಕುಕ್ಷೌ ಗೃಹೀತಂ ಭರ್ತಾರಂ ದೃಷ್ಟ್ವಾ ಭೀತಾ ಚ ತತ್ಪ್ರಿಯಾ ।
ಸಾ ಚಕ್ರೇ ಪ್ರಾರ್ಥನಾಂ ತಸ್ಮೈ ವದತೀ ಕರುಣಂ ವಚಃ ॥ ೨೦ ॥

ಪ್ರಾರ್ಥ್ಯಮಾನೋಽಪಿ ಬಹುಶಃ ಪುರುಷಾದಃ ಸ ನಿರ್ಘೃಣಃ ।
ಚಖಾದ ಶಿರ ಉತ್ಕೃತ್ಯ ವಿಪ್ರಸೂನೋರ್ದುರಾಶಯಃ ॥ ೨೧ ॥

ಅಥ ಸಾಧ್ವೀ ಚ ಸಾ ದೀನಾ ವಿಲಪ್ಯ ಭೃಶದುಃಖಿತಾ ।
ಆಹೃತ್ಯ ಭರ್ತುರಸ್ಥೀನಿ ಚಿತಾಂ ಚಕ್ರೇ ಕಿಲೋಲ್ಬಣಾಂ ॥ ೨೨ ॥

ಭರ್ತಾರಮನುಗಚ್ಛಂತೀ ಸಂವಿಶಂತೀ ಹುತಾಶನಂ ।
ರಾಜಾನಂ ರಾಕ್ಷಸಾಕಾರಂ ಸಾ ಶಶಾಪ ದ್ವಿಜಾಂಗನಾ ॥ ೨೩ ॥

---

ಒಂದಾನೊಂದು ದಿನ ಕಾಡಿನಲ್ಲಿ ವಿನೋದದಿಂದ ಆಟವಾಡುತ್ತಿದ್ದ ಚಿಕ್ಕವಯಸ್ಸಿನ ಮುನಿದಂಪತಿಗಳನ್ನು ನೋಡಿದನು. ಶಾಪದಿಂದ ರಾಕ್ಷಸನಾದ, ಮನುಷ್ಯರನ್ನು ತಿನ್ನುವ ಆ ರಾಜನು, ಹುಲಿಯು ಜಿಂಕೆಯನ್ನು ಹಿಡಿಯುವಂತೆ ಆ ಮುನಿಪುತ್ರನನ್ನು ಹಿಡಿದುಕೊಂಡನು.

೨೦-೨೩. ತನ್ನ ಗಂಡನ ಹೊಟ್ಟೆಯನ್ನು ಹಿಡಿದುಕೊಂಡುದುದನ್ನು ನೋಡಿ ಆ ಮುನಿಪತ್ನಿಯು ಭಯದಿಂದ ದೀನವಾಗಿ ಮಾತನಾಡುತ್ತ ರಾಕ್ಷಸನನ್ನು ಬಹಳವಾಗಿ ಬೇಡಿಕೊಂಡಳು. ಎಷ್ಟು ಬೇಡಿಕೊಂಡರೂ ಮನುಷ್ಯರನ್ನು ತಿನ್ನುವ ಆ ದಯಾಶೂನ್ಯನಾದ ರಾಕ್ಷಸನು ಬ್ರಾಹ್ಮಣಪುತ್ರನ ತಲೆಯನ್ನು ಕೊಯ್ದು ಅವನನ್ನು ತಿಂದು ಬಿಟ್ಟನು. ಪತಿವ್ರತೆಯಾದ ಆಕೆಯು ಬಹಳವಾಗಿ ಅತ್ತು ತನ್ನ ಗಂಡನ ಮೂಳೆಯನ್ನು ತಂದು ಒಂದು ಚಿತೆಯನ್ನು ಮಾಡಿ ಬೆಂಕಿಯನ್ನು ಹಚ್ಚಿಸಿ, ತಾನು ಸಹಗಮನಮಾಡುವುದಕ್ಕಾಗಿ ಸಿದ್ಧಳಾಗಿ ರಾಕ್ಷಸಾಕಾರನಾದ ರಾಜನಿಗೆ ಶಾಪವನ್ನು ಕೊಟ್ಟಳು.

ಅದ್ಯಪ್ರಭೃತಿ ನಾರೀಷು ಯದಾ ತ್ವಂ ಸಂಗತೋ ಭವೇಃ ।
ತದಾ ಮೃತಿಸ್ತವೇತ್ಯುಕ್ತ್ವಾ ವಿವೇಶ ಜ್ವಲನಂ ಸತೀ ॥ ೨೪ ॥

ಸೋಽಪಿ ರಾಜಾ ಗುರೋಶ್ಶಾಪಮನುಭೂಯ ಕೃತಾವಧಿಂ ।
ಪುನಃ ಸ್ವರೂಪಮಾಸ್ಥಾಯ ಸ್ವಗೃಹಂ ಮುದಿತೋ ಯಯೌ ॥ ೨೫ ॥

ಜ್ಞಾತ್ವಾ ವಿಪ್ರಸತೀಶಾಪಂ ಮದಯಂತೀ ರತಿಪ್ರಿಯಂ ।
ಪತಿಂ ನಿವಾರಯಾಮಾಸ ವೈಧವ್ಯಾದತಿಬಿಭ್ಯತಿ ॥ ೨೬ ॥

ಅನಪತ್ಯೋ ವಿನಿರ್ವಿಣ್ಣೋ ರಾಜ್ಯಭೋಗೇಷು ಪಾರ್ಥಿವಃ ।
ವಿಸೃಜ್ಯ ಸಕಲಾಂ ಲಕ್ಷ್ಮೀಂ ವನಮೇವ ಜಗಾಮ ಹ ॥ ೨೭ ॥

ಸ್ವಪೃಷ್ಠತಸ್ಸಮಾಯಾಂತೀಂ ಬ್ರಹ್ಮಹತ್ಯಾಂ ಸುದುಃಖದಾಂ ।
ದದರ್ಶ ವಿಕಟಾಕಾರಾಂ ತರ್ಜಯಂತೀಂ ಮುಹುರ್ಮುಹುಃ ॥ ೨೮ ॥

---

೨೪-೨೬. ಎಲೈ ರಾಜನೇ, ನೀನು ಈದಿನ ಮೊದಲಾಗಿ ಯಾವಾಗ ಸ್ತ್ರೀಸಂಗ ಮಾಡುವೆಯೋ ಆಗ ನಿನಗೆ ಮರಣ ಉಂಟಾಗಲಿ, ಎಂದು ಹೇಳಿ ಆ ಪತಿವ್ರತೆಯು ಅಗ್ನಿಪ್ರವೇಶಮಾಡಿದಳು. ಆ ರಾಜನು ಗೊತ್ತಾದ ಹನ್ನೆರಡು ವರ್ಷಗಳವರೆಗೆ ಗುರುವಿನ ಶಾಪವನ್ನು ಅನುಭವಿಸಿ ಬಳಿಕ ತನ್ನ ಹಿಂದಿನ ರಾಜನ ಸ್ವರೂಪವನ್ನು ಪಡೆದು ಸಂತೋಷದಿಂದ ತನ್ನ ಮನೆಗೆ ಬಂದನು. ಅವನ ಹೆಂಡತಿಯಾದ ಮದಯಂತಿಯು ತನ್ನ ಗಂಡನಿಗೆ ಬಂದ ಪತಿವ್ರತೆಯ ಶಾಪವನ್ನು ತಿಳಿದಿದ್ದುದರಿಂದ ತನಗೆ ವೈಧವ್ಯಪ್ರಾಪ್ತಿಯಾಗುವುದೆಂಬ ಭಯದಿಂದ ಪತಿಯ ಸಂಗವನ್ನು ಮಾಡಲಿಲ್ಲ.

೨೭-೨೮. ಮಕ್ಕಳಿಲ್ಲದುದರಿಂದ ರಾಜನು ರಾಜ್ಯಸುಖಗಳಲ್ಲಿ ಆಸಕ್ತಿಯಿಲ್ಲದೆ ಸಕಲಸಂಪತ್ತನ್ನೂ ಬಿಟ್ಟು ಕಾಡಿಗೆ ಹೊರಟುಹೋದನು. ಅವನ ಹಿಂದೆಯೇ ವಿಕಾರವಾದ ರೂಪದಿಂದ ಮತ್ತೆ ಮತ್ತೆ ದುಃಖವನ್ನು ಕೊಡುತ್ತ ಭಯಪಡಿಸುತ್ತ ಬರುತ್ತಿರುವ ಬ್ರಹ್ಮಹತ್ಯೆಯನ್ನು ನೋಡಿದನು.

ತಸ್ಯಾ ನಿರ್ಭದ್ರಮುನ್ವಿಚ್ಛನ್ರಾಜಾ ನಿರ್ವಿಣ್ಣಮಾನಸಃ ।
ಚಕಾರ ನಾನೋಪಾಯಾನ್ಸ ಜಪವ್ರತಮುಖಾದಿಕಾನ್ ॥ ೨೯ ॥

ನಾನೋಪಾಯೈರ್ಯದಾ ರಾಜ್ಞಸ್ತೀರ್ಥಸ್ನಾನಾದಿಭಿರ್ದ್ವಿಜಾಃ ।
ನ ನಿವೃತ್ತಾ ಬ್ರಹ್ಮಹತ್ಯಾ ಮಿಥಿಲಾಂ ಸ ಯಯೌ ತದಾ ॥ ೩೦ ॥

ಬಾಹ್ಯೋದ್ಯಾನಗತಸ್ತಸ್ಯಾಶ್ಚಿಂತಯಾ ಪರಯಾರ್ದಿತಃ ।
ದದರ್ಶ ಮುನಿಮಾಯಾಂತಂ ಗೌತಮಂ ಪಾರ್ಥಿವಶ್ಚ ಸಃ ॥ ೩೧ ॥

ಅಭಿಸೃತ್ಯ ಸ ರಾಜೇಂದ್ರೋ ಗೌತಮಂ ವಿಮಲಾಶಯಂ ।
ತದ್ದರ್ಶನಾಪ್ತಕಿಂಚಿತ್ಕಃ ಪ್ರಣನಾಮ ಮುಹುರ್ಮುಹುಃ ॥ ೩೨ ॥

ಅಥ ತತ್ಪೃಷ್ಟಕುಶಲೋ ದೀರ್ಘಮುಷ್ಣಂ ಚ ನಿಶ್ವಸನ್ ।
ತತ್ಕೃಪಾದೃಷ್ಟಿಸಂಪ್ರಾಪ್ತಸುಖಃ ಪ್ರೋವಾಚ ತಂ ನೃಪಃ ॥ ೩೩ ॥

---

೨೯-೩೩. ಆ ಬ್ರಹ್ಮಹತ್ಯೆಯು ಹೋಗಿ ಮಂಗಳವುಂಟಾಗುವುದಕ್ಕಾಗಿ ರಾಜನು ವೈರಾಗ್ಯದಿಂದ ಬಗೆಬಗೆಯ ಉಪಾಯರೂಪವಾದ ಜಪವ್ರತಗಳು, ಯಜ್ಞ ಮುಂತಾದುವುಗಳನ್ನು ಮಾಡಿದನು. ಆ ಉಪಾಯಗಳಿಂದಲೂ ತೀರ್ಥಸ್ನಾನಗಳಿಂದಲೂ ಆ ಬ್ರಹ್ಮಹತ್ಯೆಯು ಹೋಗಲಿಲ್ಲ. ಬಳಿಕ ರಾಜನು ಮಿಥಿಲಾಪಟ್ಟಣಕ್ಕೆ ಹೋದನು. ಆ ಪಟ್ಟಣದ ಹೊರಗಿನ ಉದ್ಯಾನವನದಲ್ಲಿ ಆಲೋಚಿಸುತ್ತ ಕುಳಿತಿರುವಲ್ಲಿ, ಗೌತಮಮುನಿಯು ಅಲ್ಲಿಗೆ ಬರುತ್ತಿರುವುದನ್ನು ಕಂಡನು. ರಾಜನು ಪರಿಶುದ್ಧಚಿತ್ತನಾದ ಆ ಗೌತಮನ ಸಮೀಪಕ್ಕೆ ಹೋಗಿ ಆತನ ದರ್ಶನದಿಂದ ಸ್ವಲ್ಪ ಸುಖವನ್ನು ಹೊಂದಿ ಪುನಃಪುನಃ ಅವನಿಗೆ ನಮಸ್ಕಾರ ಮಾಡಿದನು. ಆಮೇಲೆ ಗೌತಮನು ಕುಶಲಪ್ರಶ್ನೆ ಮಾಡಲು, ರಾಜನು ಬಿಸಿಯಾಗಿ ನಿಟ್ಟುಸಿರನ್ನು ಬಿಟ್ಟು ಆ ಮುನಿಯ ದಯಾದೃಷ್ಟಿಯಿಂದ ಸುಖವನ್ನು ಹೊಂದಿ ಅವನನ್ನು ಕುರಿತು,

॥ ರಾಜೋವಾಚ ॥

ಮುನೇ ಮಾಂ ಬಾಧತೇ ಹ್ಯೇಷಾ ಬ್ರಹ್ಮಹತ್ಯಾ ದುರತ್ಯಯಾ ।
ಅಲಕ್ಷಿತಾ ಪರೈಸ್ತಾತ ತರ್ಜಯಂತೀ ಪದೇಪದೇ ॥ ೩೪ ॥

ಯನ್ಮಯಾ ಶಾಪದಗ್ಧೇನ ವಿಪ್ರಪುತ್ರಶ್ಚ ಭಕ್ಷಿತಃ ।
ತತ್ಪಾಪಸ್ಯ ನ ಶಾಂತಿರ್ಹಿ ಪ್ರಾಯಶ್ಚಿತ್ತಸಹಸ್ರಕೈಃ ॥ ೩೫ ॥

ನಾನೋಪಾಯಾಃ ಕೃತಾ ಮೇ ಹಿ ತಚ್ಛಾಂತ್ಯೈ ಭ್ರಮತಾ ಮುನೇ ।
ನ ನಿವೃತ್ತಾ ಬ್ರಹ್ಮಹತ್ಯಾ ಮಮ ಪಾಪಾತ್ಮನಃ ಕಿಮು ॥ ೩೬ ॥

ಅದ್ಯ ಮೇ ಜನ್ಮಸಾಫಲ್ಯಂ ಸಂಪ್ರಾಪ್ತಮಿವ ಲಕ್ಷಯೇ ।
ಯತಸ್ತ್ವದ್ದರ್ಶನಾದೇವ ಮಮಾನಂದಭರೋಽಭವತ್ ॥ ೩೭ ॥

ಅದ್ಯ ಮೇ ತವ ಪಾದಾಬ್ಜಶರಣಸ್ಯ ಕೃತೈನಸಃ ।
ಶಾಂತಿಂ ಕುರು ಮಹಾಭಾಗ ಯೇನಾಹಂ ಸುಖಮಾಪ್ನುಯಾಂ ॥ ೩೮ ॥

---

೩೪. ರಾಜನು ಹೇಳಿದನು.—ಎಲೈ ಮುನಿಯೇ, ಮೀರುವುದಕ್ಕಾಗದ ಈ ಬ್ರಹ್ಮಹತ್ಯೆಯು ನನ್ನನ್ನು ಬಾಧೆಪಡಿಸುತ್ತಿರುವುದು. ಇದು ಮತ್ತೊಬ್ಬರಿಗೆ ಕಾಣದೆ ನನ್ನನ್ನು ಪದೇಪದೇ ಹೆದರಿಸುತ್ತಿರುವುದು.

೩೫-೩೮. ಶಾಪದಿಂದ ಬೆಂದ ನಾನು ಬ್ರಾಹ್ಮಣಪುತ್ರನನ್ನು ತಿಂದೆನು. ಸಾವಿರ ಪ್ರಾಯಶ್ಚಿತ್ತವನ್ನು ಮಾಡಿದರೂ ಆ ಪಾಪವು ಶಾಂತವಾಗಲಿಲ್ಲ. ಎಲೈ ಮುನಿಯೆ, ಅದರ ಶಾಂತಿಗಾಗಿ ನಾನೂ ಅನೇಕ ಉಪಾಯಗಳನ್ನು ಮಾಡಿದೆನು. ಏನುಮಾಡಿದರೂ ಪಾಪಿಯಾದ ನನ್ನನ್ನು ಬ್ರಹ್ಮಹತ್ಯೆಯು ಬಿಡಲಿಲ್ಲ. ಈದಿನ ನನ್ನ ಜನ್ಮವು ಸಫಲವಾದಂತೆ ಕಾಣುತ್ತದೆ. ನಿನ್ನ ದರ್ಶನದಿಂದ ನನಗೆ ಸಂತೋಷ ವುಂಟಾಗಿರುತ್ತದೆ. ನಿನ್ನ ಪಾದಕಮಲವನ್ನು ಮರೆಹೊಕ್ಕಿರುವ ನನ್ನ ಪಾಪವು ಶಾಂತವಾಗಿ ನನಗೆ ಸುಖವುಂಟಾಗುವಂತೆ ಮಹಾಮಹಿಮನಾದ ನೀನೇ ಮಾಡಬೇಕಾಗಿರುವುದು ಎಂದನು.

॥ ಸೂತ ಉವಾಚ ॥

ಇತಿ ರಾಜ್ಞಾ ಸಮಾದಿಷ್ಟೋ ಗೌತಮಃ ಕರುಣಾರ್ದ್ರಧೀಃ ।
ಸಮಾದಿದೇಶ ಘೋರಾಣಾಮಘಾನಾಂ ಸಾಧು ನಿಷ್ಕೃತಿಂ ॥ ೩೯ ॥

॥ ಗೌತಮ ಉವಾಚ ॥

ಸಾಧು ರಾಜೇಂದ್ರ ಧನ್ಯೋಽಸಿ ಮಹಾಘೇಭ್ಯೋ ಭಯಂ ತ್ಯಜ ।
ಶಿವೇ ಶಾಸ್ತರಿ ಭಕ್ತಾನಾಂ ಕ್ವ ಭಯಂ ಶರಣೈಷಿಣಾಂ ॥ ೪೦ ॥

ಶೃಣು ರಾಜನ್ಮಹಾಭಾಗ ಕ್ಷೇತ್ರಮನ್ಯತ್ಪ್ರತಿಷ್ಠಿತಂ ।
ಮಹಾಪಾತಕಸಂಹಾರಿ ಗೋಕರ್ಣಾಖ್ಯಂ ಶಿವಾಲಯಂ ॥ ೪೧ ॥

ತತ್ರ ಸ್ಥಿತಿರ್ನ ಪಾಪಾನಾಂ ಮಹದ್ಭ್ಯೋ ಮಹತಾಮಪಿ ।
ಮಹಾಬಲಾಭಿಧಾನೇನ ಶಿವಃ ಸಂನಿಹಿತಃ ಸ್ವಯಂ ॥ ೪೨ ॥

ಸರ್ವೇಷಾಂ ಶಿವಲಿಂಗಾನಾಂ ಸಾರ್ವಭೌಮೋ ಮಹಾಬಲಃ ।
ಚತುರ್ಯುಗೇ ಚತುರ್ವರ್ಣಸ್ಸರ್ವಪಾಪಾಪಹಾರಕಃ ॥ ೪೩ ॥

---

೩೯. ಹೀಗೆಂದು ರಾಜನು ಕೇಳಿಕೊಳ್ಳುತ್ತಲು ದಯಾನಿಧಿಯಾದ ಗೌತಮನು ಅವನ ಭಯಂಕರವಾದ ಪಾಪಗಳಿಗೆ ತಕ್ಕ ಪ್ರಾಯಶ್ಚಿತ್ತಗಳನ್ನು ವಿವರಿಸಿದನು.

೪೦-೪೩. ಎಲೈ ರಾಜಶ್ರೇಷ್ಠನೇ, ನೀನೇ ಕೃತಾರ್ಥನು. ಮಹಾಪಾಪದ ಭಯವನ್ನು ಬಿಡು. ಶಿವನನ್ನು ಶರಣುಹೊಂದಿದ ಭಕ್ತರಿಗೆ ಭಯವೆಲ್ಲಿರುವುದು? ಪುಣ್ಯವಂತನಾದ ಓ ರಾಜನೇ, ಗೋಕರ್ಣದಲ್ಲಿರುವ ಶಿವಾಲಯವು ಮಹಾಪಾಪಗಳನ್ನು ನಾಶಮಾಡುವುದು. ಅದು ಮಹಾಪ್ರಸಿದ್ಧವಾದ ಕ್ಷೇತ್ರವು. ಮಹಾಬಲವತ್ತರವಾದ ಪಾಪಗಳಾದರೂ ಅಲ್ಲಿ ನಿಲ್ಲಲಾರವು. ಅಲ್ಲಿ ಶಿವನು ಮಹಾಬಲನೆಂಬ ಹೆಸರಿನಿಂದ ನೆಲಸಿರುವನು. ಮಹಾಬಲಲಿಂಗವು ಸಮಸ್ತ ಶಿವಲಿಂಗಗಳಿಗೂ ಚಕ್ರವರ್ತಿಸ್ವರೂಪವಾದುದು. ನಾಲ್ಕು ಯುಗಗಳಲ್ಲಿ ನಾಲ್ಕು ಬಣ್ಣವಾಗಿದ್ದು ಸಮಸ್ತ ಪಾಪಗಳನ್ನೂ ನಾಶಮಾಡತಕ್ಕುದಾಗಿರುವುದು.

ಪಶ್ಚಿಮಾಂಬುಧಿತೀರಸ್ಥಂ ಗೋಕರ್ಣಂ ತೀರ್ಥಮುತ್ತಮಂ ।
ತತ್ರಾಸ್ತಿ ಶಿವಲಿಂಗಂ ತನ್ಮಹಾಪಾತಕನಾಶನಂ ॥ ೪೪ ॥

ತತ್ರ ಗತ್ವಾ ಮಹಾಪಾಪಾಃ ಸ್ನಾತ್ವಾ ತೀರ್ಥೇಷು ಭೂರಿಶಃ ।
ಮಹಾಬಲಂ ಚ ಸಂಪೂಜ್ಯ ಪ್ರಯಾತಾಶ್ಶಾಂಕರಂ ಪದಂ ॥ ೪೫ ॥

ತಥಾ ತ್ವಮಪಿ ರಾಜೇಂದ್ರ ಗೋಕರ್ಣಂ ಗಿರಿಶಾಲಯಂ ।
ಗತ್ವಾ ಸಂಪೂಜ್ಯ ತಲ್ಲಿಂಗಂ ಕೃತಕೃತ್ಯತ್ವಮಾಪ್ನುಯಾಃ ॥ ೪೬ ॥

ತತ್ರ ಸರ್ವೇಷು ತೀರ್ಥೇಷು ಸ್ನಾತ್ವಾಭ್ಯರ್ಚ್ಯ ಮಹಾಬಲಂ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕಂ ತ್ವಮಾಪ್ನುಯಾಃ ॥ ೪೭ ॥

॥ ಸೂತ ಉವಾಚ ॥

ಇತ್ಯಾದಿಷ್ಟಃ ಸ ಮುನಿನಾ ಗೌತಮೇನ ಮಹಾತ್ಮನಾ ।
ಮಹಾಹೃಷ್ಟಮನಾ ರಾಜಾ ಗೋಕರ್ಣಂ ಪ್ರತ್ಯಪದ್ಯತ ॥ ೪೮ ॥

---

೪೪-೪೫. ಪಶ್ಚಿಮಸಮುದ್ರದ ದಡದಲ್ಲಿರುವ ಆ ಗೋಕರ್ಣಕ್ಷೇತ್ರವು ಅತ್ಯುತ್ತಮವಾದುದು. ಅಲ್ಲಿ ಆ ಮಹಾಬಲಲಿಂಗವಿರುವುದು. ಅದು ಮಹಾಪಾಪಗಳನ್ನು ನಾಶಮಾಡುವುದು. ಮಹಾಪಾಪಿಗಳು ಅಲ್ಲಿಗೆ ಹೋಗಿ ತೀರ್ಥಗಳಲ್ಲಿ ಅನೇಕ ಬಾರಿ ಸ್ನಾನಮಾಡಿ ಮಹಾಬಲಲಿಂಗವನ್ನು ಪೂಜಿಸಿ ಶಿವನ ಸ್ಥಾನಕ್ಕೆ ಹೋಗುವರು.

೪೬-೪೭. ಎಲೈ ರಾಜನೇ, ನೀನೂ ಕೂಡ ಶಿವನ ನೆಲೆಯಾದ ಗೋಕರ್ಣ ಕ್ಷೇತ್ರಕ್ಕೆ ಹೋಗಿ ಆ ಲಿಂಗವನ್ನು ಪೂಜಿಸಿ ಕೃತಾರ್ಥನಾಗು. ಆ ಕ್ಷೇತ್ರದಲ್ಲಿರುವ ಎಲ್ಲ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿ ಮಹಾಬಲಲಿಂಗವನ್ನು ಪೂಜಿಸಿ, ಎಲ್ಲ ಪಾಪಗಳನ್ನೂ ಕಳೆದುಕೊಂಡು ಶಿವಲೋಕವನ್ನು ಹೊಂದುವೆ ಎಂದನು.

೪೮-೪೯. ಮಹಾಮಹಿಮನಾದ ಗೌತಮನು ಹೀಗೆ ಅಪ್ಪಣೆ ಮಾಡುತ್ತಲು ರಾಜನು ಮಹಾಸಂತೋಷದಿಂದ ಗೋಕರ್ಣಕ್ಕೆ ಹೋದನು. ಅಲ್ಲಿರುವ ತೀರ್ಥ

ತತ್ರ ತೀರ್ಥೇಷು ಸುಸ್ನಾತ್ವಾ ಸಮಭ್ಯರ್ಚ್ಯ ಮಹಾಬಲಂ ।
ನಿರ್ಧೂತಾಶೇಷಪಾಪೌಘೋಽಲಭಚ್ಛಂಭೋಃ ಪರಂ ಪದಂ ॥ ೪೯ ॥

ಯ ಇಮಾಂ ಶೃಣುಯಾನ್ನಿತ್ಯಂ ಮಹಾಬಲಕಥಾಂ ಪ್ರಿಯಾಂ ।
ತ್ರಿಸಪ್ತಕುಲಜೈಸ್ಸಾರ್ಧಂ ಶಿವಲೋಕೇ ವ್ರಜತ್ಯಸೌ ॥ ೫೦ ॥

ಇತಿ ವಶ್ಚ ಸಮಾಖ್ಯಾತಂ ಮಾಹಾತ್ಮ್ಯಂ ಪರಮಾದ್ಭುತಂ ।
ಮಹಾಬಲಸ್ಯ ಗಿರಿಶಲಿಂಗಸ್ಯ ನಿಖಿಲಾಘಹೃತ್ ॥ ೫೧ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಮಹಾಬಲಾಹ್ವಶಿವಲಿಂಗಮಾಹಾತ್ಮ್ಯವರ್ಣನಂ ನಾಮ
ದಶಮೋಽಧ್ಯಾಯಃ

---

ಗಳಲ್ಲಿ ಸ್ನಾನವನ್ನು ಮಾಡಿ ಮಹಾಬಲಲಿಂಗವನ್ನು ಪೂಜಿಸಿ ಸಮಸ್ತ ಪಾಪರಾಶಿಯನ್ನೂ ಕಳೆದುಕೊಂಡು ಶಿವನ ಪರಮಪದವಿಯನ್ನು ಹೊಂದಿದನು.

೫೦-೫೧. ಯಾರು ಪ್ರತಿದಿನವೂ ಹಿತಕರವಾದ ಈ ಮಹಾಬಲಲಿಂಗದ ಕಥೆಯನ್ನು ಕೇಳುವರೋ ಅಂಥವರು ತಮ್ಮ ಇಪ್ಪತ್ತೊಂದು ವಂಶದ ಪಿತೃಗಳೊಡನೆ ಶಿವಲೋಕಕ್ಕೆ ಹೋಗುವರು. ಈ ರೀತಿಯಲ್ಲಿ ನಿಮಗೆ ಮಹಾಬಲಲಿಂಗದ ಸಮಸ್ತ ಪಾಪಪರಿಹಾರಕವಾದ ಆಶ್ಚರ್ಯಕರವಾದ ಮಹಿಮೆಯನ್ನು ಹೇಳಿರುವೆನು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಮಹಾಬಲನೆಂಬ ಶಿವಲಿಂಗಮಹಾತ್ಮ್ಯವರ್ಣನೆಯೆಂಬ
ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ಏಕಾದಶೋಽಧ್ಯಾಯಃ

---

॥ ಋಷಯ ಊಚುಃ ॥

ಸೂತ ಸೂತ ಮಹಾಭಾಗ ಧನಸ್ತ್ವಂ ಶಿವಸಕ್ತಧೀಃ ।
ಮಹಾಬಲಸ್ಯ ಲಿಂಗಸ್ಯ ಶ್ರಾವಿತೇಯಂ ಕಥಾದ್ಭುತಾ ॥ ೧

ಉತ್ತರಸ್ಯಾಂ ದಿಶಾಯಾಂ ಚ ಶಿವಲಿಂಗಾನಿ ಯಾನಿ ಚ ।
ತೇಷಾಂ ಮಾಹಾತ್ಮ್ಯಮನಘಂ ವದ ತ್ವಂ ಪಾಪನಾಶಕಂ ॥ ೨ ॥

---

## ಹನ್ನೊಂದನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು.—ಮಹಾಪುಣ್ಯವಂತನಾದ ಓ ಸೂತನೇ, ಶಿವನಲ್ಲಿಯೇ ನೆಲೆಸಿದ ಬುದ್ಧಿಯುಳ್ಳ ನೀನೇ ಕೃತಾರ್ಥನು. ಮಹಾಬಲಲಿಂಗದ ಆಶ್ಚರ್ಯಕರವಾದ ಕಥೆಯನ್ನು ಹೇಳಿರುವೆ. ಈಗ ಉತ್ತರದಿಕ್ಕಿನಲ್ಲಿ ಯಾವ ಶಿವಲಿಂಗಗಳಿರುವುವೋ ಅವುಗಳ ಪಾಪಪರಿಹಾರಕವಾದ ಶ್ರೇಷ್ಠವಾದ ಮಹಿಮೆಗಳನ್ನು ಹೇಳು ಎನ್ನಲು,

॥ ಸೂತ ಉವಾಚ ॥

ಶೃಣುತಾದರತೋ ವಿಪ್ರಾ ಔತ್ತರಾಣಾಂ ವಿಶೇಷತಃ ।
ಮಾಹಾತ್ಮ್ಯಂ ಶಿವಲಿಂಗಾನಾಂ ಪ್ರವದಾಮಿ ಸಮಾಸತಃ ॥ ೩ ॥

ಗೋಕರ್ಣಂ ಕ್ಷೇತ್ರಮಪರಂ ಮಹಾಪಾತಕನಾಶನಂ ।
ಮಹಾವನಂ ಚ ತತ್ರಾಸ್ತಿ ಪವಿತ್ರಮತಿವಿಸ್ತರಂ ॥ ೪ ॥

ತತ್ರಾಸ್ತಿ ಚಂದ್ರಭಾಲಾಖ್ಯಂ ಶಿವಲಿಂಗಮನುತ್ತಮಂ ।
ರಾವಣೇನ ಸಮಾನೀತಂ ಸದ್ಭಕ್ತ್ಯಾ ಸರ್ವಸಿದ್ಧಿದಂ ॥ ೫ ॥

ತಸ್ಯ ತತ್ರ ಸ್ಥಿತಿರ್ವೈದ್ಯನಾಥಸ್ಯೇವ ಮುನೀಶ್ವರಾಃ ।
ಸರ್ವಲೋಕಹಿತಾರ್ಥಾಯ ಕರುಣಾಸಾಗರಸ್ಯ ಚ ॥ ೬ ॥

ಸ್ನಾನಂ ಕೃತ್ವಾ ತು ಗೋಕರ್ಣೇ ಚಂದ್ರಭಾಲಂ ಸಮರ್ಚ್ಯ ಚ
ಶಿವಲೋಕಮವಾಪ್ನೋತಿ ಸತ್ಯಂ ಸತ್ಯಂ ನ ಸಂಶಯಃ ॥ ೭ ॥

ಚಂದ್ರಭಾಲಸ್ಯ ಲಿಂಗಸ್ಯ ಮಹಿಮಾ ಪರಮಾದ್ಭುತಾ ।
ನ ಶಕ್ಯಾ ವರ್ಣಿತುಂ ವ್ಯಾಸಾದ್ಭಕ್ತಸ್ತ್ವೇಹಿತರಸ್ಯ ಹಿ ॥ ೮ ॥

---

೩-೭. ಸೂತನು ಹೇಳತೊಡಗಿದನು.—ಎಲೈ ಬ್ರಾಹ್ಮಣರೇ, ಕೇಳಿ. ಉತ್ತರದಿಕ್ಕಿನಲ್ಲಿರುವ ಶಿವಲಿಂಗಗಳ ಮಹಿಮೆಯನ್ನು ಸಂಗ್ರಹವಾಗಿ ಹೇಳುವೆನು. ಮಹಾಪಾಪಗಳನ್ನು ನಾಶಮಾಡುವ ಗೋಕರ್ಣಕ್ಷೇತ್ರದಲ್ಲಿಯೇ ಪವಿತ್ರವಾದ ಮಹಾವನವೆಂಬುದು ವಿಸ್ತಾರವಾಗಿರುವುದು. ಅಲ್ಲಿ ಚಂದ್ರಶೇಖರನೆಂಬ ಶಿವಲಿಂಗ ವಿರುವುದು. ಅದು ರಾವಣನು ಅತ್ಯಂತ ಭಕ್ತಿಯಿಂದ ತಂದ ಲಿಂಗವು. ಸರ್ವಸಿದ್ಧಿ ಗಳನ್ನೂ ಕೊಡತಕ್ಕುದು. ಆ ಲಿಂಗದಲ್ಲಿ ಕರುಣಾಸಾಗರನಾದ ಶಿವನು ಸರ್ವ ಲೋಕಹಿತಕ್ಕಾಗಿ ವೈದ್ಯನಾಥೇಶ್ವರನಲ್ಲಿ ನೆಲಸಿದಂತೆ ನೆಲಸಿರುವನು. ಗೋಕರ್ಣದಲ್ಲಿ ಸ್ನಾನವನ್ನು ಮಾಡಿ ಚಂದ್ರಶೇಖರಲಿಂಗವನ್ನು ಪೂಜಿಸಿದವರು ಶಿವಲೋಕವನ್ನು ಪಡೆಯುವರು. ಈ ವಿಷಯವು ಸತ್ಯವಾದುದು. ಸಂದೇಹವಿರುವುದಿಲ್ಲ.

೮-೧೧. ಚಂದ್ರಶೇಖರಲಿಂಗದ ಮಹಿಮೆಯು ಅತ್ಯಂತಾಶ್ಚರ್ಯಕರವಾದುದು. ಇದನ್ನು ಭಕ್ತರಲ್ಲಿ ಶ್ರೇಷ್ಠನಾದ ವ್ಯಾಸನೂ ವರ್ಣಿಸಲಾರನು. ಚಂದ್ರಶೇಖರಲಿಂಗದ

ಚಂದ್ರಭಾಲಮಹಾದೇವಲಿಂಗಸ್ಯ ಮಹಿಮಾ ಮಹಾನ್ ।
ಯಥಾಕಥಂಚಿತ್ಸಂಪ್ರೋಕ್ತಾ ಪರಲಿಂಗಸ್ಯ ವೈ ಶೃಣು ॥ ೯ ॥

ದಾಧೀಚಂ ಶಿವಲಿಂಗಂ ತು ಮಿಶ್ರರ್ಷಿವರತೀರ್ಥಕೇ ।
ದಧೀಚಿನಾ ಮುನೀಶೇನ ಸುಪ್ರೀತ್ಯಾ ಚ ಪ್ರತಿಷ್ಠಿತಂ ॥ ೧೦ ॥

ತತ್ರ ಗತ್ವಾ ಚ ತತ್ತೀರ್ಥೇ ಸ್ನಾತ್ವಾ ಸಮ್ಯಗ್ವಿಧಾನತಃ ।
ಶಿವಲಿಂಗಂ ಸಮರ್ಚೇದ್ವೈ ದಾಧೀಚೇಶ್ವರಮಾದರಾತ್ ॥ ೧೧ ॥

ದಧೀಚಮೂರ್ತಿಸ್ತತ್ರೈವ ಸಮರ್ಚ್ಯಾ ವಿಧಿಪೂರ್ವಕಂ ।
ಶಿವಪ್ರೀತ್ಯರ್ಥಮೇನಾಶು ತೀರ್ಥಯಾತ್ರಾಫಲಾರ್ಥಿಭಿಃ ॥ ೧೨ ॥

ಏವಂ ಕೃತೇ ಮುನಿಶ್ರೇಷ್ಠಾಃ ಕೃತಕೃತ್ಯೋ ಭವೇನ್ನರಃ ।
ಇಹ ಸರ್ವಸುಖಂ ಭುಕ್ತ್ವಾ ಪರತ್ರ ಗತಿಮಾಪ್ನುಯಾತ್ ॥ ೧೩ ॥

ನೈಮಿಶಾರಣ್ಯತೀರ್ಥೇ ತು ನಿಖಿಲಾರ್ಷಿಪ್ರತಿಷ್ಠಿತಂ ।
ಋಷೀಶ್ವರಮಿತಿ ಖ್ಯಾತಂ ಶಿವಲಿಂಗಂ ಸುಖಪ್ರದಂ ॥ ೧೪ ॥

---

ಮಹಿಮೆಯನ್ನು ಹೇಳಿದೆನು. ಇನ್ನು ಬೇರೆ ಲಿಂಗಗಳನ್ನು ಹೇಳುವೆನು, ಕೇಳಿರಿ. ಮಿಶ್ರರ್ಷಿವರವೆಂಬ ತೀರ್ಥದ ಸಮೀಪದಲ್ಲಿ ದಧೀಚಲಿಂಗವಿರುವುದು. ಅದನ್ನು ದಧೀಚಮುನಿಯು ಅತ್ಯಂತ ಪ್ರೀತಿಯಿಂದ ಪ್ರತಿಷ್ಠೆಮಾಡಿದನು.

೧೧-೧೨. ಆ ಮಿತ್ರರ್ಷಿವರತೀರ್ಥಕ್ಕೆ ಹೋಗಿ ವಿಧಿಗನುಸಾರವಾಗಿ ಸ್ನಾನವನ್ನು ಮಾಡಿ ಪ್ರೀತಿಯಿಂದ ದಧೀಚೇಶ್ವರನನ್ನು ಪೂಜಿಸಬೇಕು. ತೀರ್ಥಯಾತ್ರಾಫಲವನ್ನಪೇಕ್ಷಿಸುವವರು ಶಿವಪ್ರೀತ್ಯರ್ಥವಾಗಿ ಅಲ್ಲಿರುವ ದಧೀಚಮೂರ್ತಿಯನ್ನು ವಿಧಿಗನುಸಾರವಾಗಿ ಪೂಜಿಸಬೇಕು.

೧೩. ಹೀಗೆ ಮಾಡಿದರೆ ಮನುಷ್ಯನು ಕೃತಾರ್ಥನಾಗಿ ಇಹಲೋಕದಲ್ಲಿ ಸುಖವನ್ನು ಹೊಂದಿ ಪರದಲ್ಲಿ ಸದ್ಗತಿಯನ್ನು ಹೊಂದುವನು.

೧೪-೧೫. ಸಮಸ್ತ ಋಷಿಗಳೂ ಪ್ರತಿಷ್ಠೆಮಾಡಿದ, ನೈಮಿಷಾರಣ್ಯತೀರ್ಥದಲ್ಲಿರುವ ಋಷೀಶ್ವರನೆಂಬ ಶಿವಲಿಂಗವು ಪ್ರಸಿದ್ಧವಾಗಿ ಸುಖವನ್ನು ಕೊಡತಕ್ಕುದಾಗಿರುವುದು.

ತದ್ದರ್ಶನಾತ್ಪೂಜನಾಚ್ಚ ಜನಾನಾಂ ಪಾಪಿನಾಮಪಿ ।
ಭುಕ್ತಿರ್ಮುಕ್ತಿಶ್ಚ ತೇಷಾಂ ತು ಪರತ್ರೇಹ ಮುನೀಶ್ವರಾಃ ॥ ೧೫ ॥

ಹತ್ಯಾಹರಣತೀರ್ಥೇ ತು ಶಿವಲಿಂಗಮಘಾಪಹಂ ।
ಪೂಜನೀಯಂ ವಿಶೇಷೇಣ ಹತ್ಯಾಕೋಟಿವಿನಾಶನಂ ॥ ೧೬ ॥

ದೇವಪ್ರಯಾಗತೀರ್ಥೇ ತು ಲಲಿತೇಶ್ವರನಾಮಕಂ ।
ಶಿವಲಿಂಗಂ ಸದಾ ಪೂಜ್ಯಂ ನರೈಸ್ಸರ್ವಾಘನಾಶನಂ ॥ ೧೭ ॥

ನಯಪಾಲಾಖ್ಯಪುರ್ಯಾಂ ತು ಪ್ರಸಿದ್ಧಾಯಾಂ ಮಹೀತಲೇ ।
ಲಿಂಗಂ ಪಶುಪತೀಶಾಖ್ಯಂ ಸರ್ವಕಾಮಫಲಪ್ರದಂ ॥ ೧೮ ॥

ಶಿರೋಭಾಗಸ್ವರೂಪೇಣ ಶಿವಲಿಂಗಂ ತದಸ್ತಿ ಹಿ ।
ತತ್ಕಥಾಂ ವರ್ಣಯಿಷ್ಯಾಮಿ ಕೇದಾರೇಶ್ವರವರ್ಣನೇ ॥ ೧೯ ॥

---

ಆ ಲಿಂಗವನ್ನು ದರ್ಶನಮಾಡುವುದರಿಂದಲೂ ಪೂಜಿಸುವುದರಿಂದಲೂ ಪಾಪಿಗಳಾದ ಜನರಿಗೂ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಭುಕ್ತಿಮುಕ್ತಿಗಳು ಉಂಟಾಗುವುವು.

೧೬. ಹತ್ಯಾಹರಣತೀರ್ಥವೆಂಬುದರ ಸಮೀಪದಲ್ಲಿರುವ ಶಿವಲಿಂಗವು ಪಾಪಪರಿಹಾರಕವಾಗಿರುವುದು. ವಿಶೇಷರೀತಿಯಿಂದ ಪೂಜಿಸಿದರೆ ಕೋಟಿಹತ್ಯಾ ದೋಷಗಳನ್ನು ನಾಶಮಾಡುವುದು.

೧೭. ದೇವಪ್ರಯಾಗವೆಂಬ ತೀರ್ಥದಲ್ಲಿ ಲಲಿತೇಶ್ವರನೆಂಬ ಶಿವಲಿಂಗವಿರುವುದು. ಮನುಜರು ಯಾವಾಗಲೂ ಅದನ್ನು ಪೂಜಿಸಿದರೆ ಸಕಲ ಪಾಪಗಳನ್ನೂ ನಿವಾರಿಸುವುದು.

೧೮-೧೯. ಭೂಮಿಯಲ್ಲಿ ಪ್ರಸಿದ್ಧವಾದ ನಯಪಾಲವೆಂಬ ಪಟ್ಟಣದಲ್ಲಿ ಪಶುಪತೀಶನೆಂಬ ಲಿಂಗವು ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕುದಾಗಿರುವುದು. ಆ ಲಿಂಗವು ಸಕಲ ಲಿಂಗಗಳಿಗೂ ಶಿರಸ್ಸಿನಂತೆ ಮುಖ್ಯವಾದುದಾಗಿರುವುದು.। ಕೇದಾರೇಶ್ವರನನ್ನು ವರ್ಣಿಸುವ ಸಂದರ್ಭದಲ್ಲಿ ಆದರ ಕಥೆಯನ್ನು ವರ್ಣಿಸುವೆನು.

ತದಾರಾನ್ಮುಕ್ತಿನಾಥಾಖ್ಯಂ ಶಿವಲಿಂಗಂ ಮಹಾದ್ಭುತಂ ।
ದರ್ಶನಾದರ್ಚನಾತ್ತಸ್ಯ ಭುಕ್ತಿರ್ಮುಕ್ತಿಶ್ಚ ಲಭ್ಯತೇ ॥ ೨೦ ॥

ಇತಿ ವಶ್ಚ ಸಮಾಖ್ಯಾತಂ ಲಿಂಗವರ್ಣನಮುತ್ತಮಂ ।
ಚತುರ್ದಿಕ್ಷು ಮುನಿಶ್ರೇಷ್ಠಾಃ ಕಿಮನ್ಯಚ್ಛ್ರೋತುಮಿಚ್ಛಥ ॥ ೨೧ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಚಂದ್ರಭಾಲಪಶುಪತಿನಾಥಲಿಂಗಮಾಹಾತ್ಮ್ಯವರ್ಣನಂ
ನಾಮೈಕಾದಶೋಽಧ್ಯಾಯಃ

---

೨೦. ಅದರ ಹತ್ತಿರದಲ್ಲಿಯೇ ಆಶ್ಚರ್ಯಕರವಾದ ಮುಕ್ತಿನಾಥನೆಂಬ ಶಿವ ಲಿಂಗವಿರುವುದು. ಅದರ ದರ್ಶನದಿಂದಲೂ ಪೂಜೆಯಿಂದಲೂ ಭುಕ್ತಿಮುಕ್ತಿ ಗಳುಂಟಾಗುವುವು.

೨೧. ಎಲೈ ಋಷಿಶ್ರೇಷ್ಠರೇ, ನಾಲ್ಕು ದಿಕ್ಕುಗಳಲ್ಲಿರುವ ಉತ್ತಮವಾದ ಲಿಂಗಗಳ ವರ್ಣನೆಯನ್ನು ನಿಮಗೆ ಹೇಳಿರುವೆನು. ನೀವು ಮತ್ತೇನನ್ನು ಕೇಳ ಬೇಕೆಂದಿರುವಿರಿ ? ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಚಂದ್ರಶೇಖರ-ಪಶುಪತಿನಾಥಲಿಂಗಮಾಹಾತ್ಮ್ಯ ವರ್ಣನೆಯೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ದ್ವಾದಶೋಽಧ್ಯಾಯಃ

॥ ಋಷಯ ಊಚುಃ ॥

**ಸೂತ ಜಾನಾಸಿ ಸಕಲಂ ವಸ್ತು ವ್ಯಾಸಪ್ರಸಾದತಃ ।**
**ತವಾಜ್ಞಾತಂ ನ ವಿದ್ಯೇತ ತಸ್ಮಾತ್ಪೃಚ್ಛಾಮಹೇ ವಯಂ ॥ ೧ ॥**

**ಲಿಂಗಂ ಚ ಪೂಜ್ಯತೇ ಲೋಕೇ ತತ್ತ್ವಯಾ ಕಥಿತಂ ಚ ಯತ್ ।**
**ತತ್ತಥೈವ ನ ಚಾನ್ಯದ್ವಾ ಕಾರಣಂ ವಿದ್ಯತೇ ತ್ವಿಹ ॥ ೨ ॥**

**ಬಾಣರೂಪಾ ಶ್ರುತಾ ಲೋಕೇ ಪಾರ್ವತೀ ಶಿವವಲ್ಲಭಾ ।**
**ಏತತ್ಕಿಂ ಕಾರಣಂ ಸೂತ ಕಥಯ ತ್ವಂ ಯಥಾಶ್ರುತಂ ॥ ೩ ॥**

---

### ಹನ್ನೆರಡನೆಯ ಅಧ್ಯಾಯವು.

೧-೩. ಋಷಿಗಳು ಪ್ರಶ್ನೆಮಾಡಿದರು.–ಎಲೈ, ಸೂತನೇ, ವ್ಯಾಸಮಹರ್ಷಿಯ ಅನುಗ್ರಹದಿಂದ ನೀನು ಸಕಲ ವಿಷಯಗಳನ್ನೂ ತಿಳಿದಿರುವೆ. ನಿನಗೆ ತಿಳಿಯದುದೇ ಇಲ್ಲ. ಆದುದರಿಂದ ನಿನ್ನನ್ನು ನಾವು ಪ್ರಶ್ನೆ ಮಾಡುತ್ತೇವೆ. ಲೋಕದಲ್ಲಿ ಲಿಂಗ ಪೂಜೆಯು ಹರಡುವುದಕ್ಕೆ ಹಿಂದೆ ನೀನು ಹೇಳಿದ ಕಾರಣವು ಒಂದೇ ಇರುವುದೇ, ಅಥವಾ ಬೇರೆ ಕಾರಣಗಳಿರುವುವೇ ? ಶಿವನ ಪ್ರೀತಿಪಾತ್ರಳಾದ ಪಾರ್ವತಿಯು ಬಾಣ ರೂಪಳೆಂದು ಲೋಕದಲ್ಲಿ ಪ್ರಸಿದ್ಧಿಯಿರುವುದು. ಇದಕ್ಕೆ ಕಾರಣವೇನು ? ನಿನಗೆ ತಿಳಿದಿರುವಂತೆ ಅದನ್ನು ನಮಗೆ ಹೇಳು ಎಂದರು.

॥ ಸೂತ ಉವಾಚ ॥

ಕಲ್ಪಭೇದಕಥಾ ಚೈವ ಶ್ರುತಾ ವ್ಯಾಸಾನ್ಮಯಾ ದ್ವಿಜಾಃ ।
ತಾಮೇವ ಕಥಯಾಮ್ಯದ್ಯ ಶ್ರೂಯತಾಮೃಷಿಸತ್ತಮಾಃ ॥ ೪ ॥

ಪುರಾ ದಾರುವನೇ ಜಾತಂ ಯದ್ವೃತ್ತಂ ತು ದ್ವಿಜನ್ಮನಾಂ ।
ತದೇವ ಶ್ರೂಯತಾಂ ಸಮ್ಯಕ್ಕಥಯಾಮಿ ಯಥಾಶ್ರುತಂ ॥ ೫ ॥

ದಾರುನಾಮವನಂ ಶ್ರೇಷ್ಠಂ ತತ್ರಾಸನ್ನೃಷಿಸತ್ತಮಾಃ ।
ಶಿವಭಕ್ತಾಸ್ಸದಾ ನಿತ್ಯಂ ಶಿವಧ್ಯಾನಪರಾಯಣಾಃ ॥ ೬ ॥

ತ್ರಿಕಾಲಂ ಶಿವಪೂಜಾಂ ಚ ಕುರ್ವಂತಿ ಸ್ಮ ನಿರಂತರಂ ।
ನಾನಾವಿಧೈಃ ಸ್ತವೈರ್ದಿವ್ಯೈಸ್ತುಷ್ಟುವುಸ್ತೇ ಮುನೀಶ್ವರಾಃ ॥ ೭ ॥

ತೇ ಕದಾಚಿದ್ವನೇ ಯಾತಾಸ್ಸಮಿಧಾಹರಣಾಯ ಚ ।
ಸರ್ವೇ ದ್ವಿಜರ್ಷಭಾಶ್ಶೈವಾಶ್ಶಿವಧ್ಯಾನಪರಾಯಣಾಃ ॥ ೮ ॥

---

೪-೫. ಸೂತನು ಹೇಳಿದನು.—ಎಲೈ, ಬ್ರಾಹ್ಮಣರೇ, ಕೇಳಿ. ಬೇರೆ ಕಲ್ಪಕ್ಕೆ ಸಂಬಂಧಿಸಿದ ಕಥೆಯನ್ನು ವ್ಯಾಸಋಷಿಯು ನನಗೆ ಹೇಳಿದನು. ಅದನ್ನೇ ನಿಮಗೆ ಹೇಳುವೆನು. ಹಿಂದೆ ದಾರುವನದಲ್ಲಿದ್ದ ಬ್ರಾಹ್ಮಣರಲ್ಲಿ ಏನು ನಡೆಯಿತೋ ಅದನ್ನೇ ನಾನು ಕೇಳಿದಂತೆ ನಿಮಗೆ ಹೇಳುವೆನು, ಕೇಳಿರಿ.

೬-೭. ದಾರುವೆಂಬ ವನವು ಅತ್ಯಂತ ಶ್ರೇಷ್ಠವಾದುದು. ಅಲ್ಲಿದ್ದ ಋಷಿ ಶ್ರೇಷ್ಠರು ಯಾವಾಗಲೂ ಶಿವಭಕ್ತರಾಗಿ ಪ್ರತಿದಿನವೂ ಶಿವನ ಧ್ಯಾನವನ್ನು ಮಾಡುತ್ತಾ ಮೂರುಕಾಲದಲ್ಲಿಯೂ ಶಿವಪೂಜೆಯನ್ನು ಮಾಡುತ್ತಿದ್ದರು. ಆ ಶಿವನನ್ನು ಬಗೆ ಬಗೆಯಾದ ಸ್ತೋತ್ರಗಳಿಂದ ಹೊಗಳುತ್ತಿದ್ದರು.

೮. ಅವರು ಒಂದಾನೊಂದು ಕಾಲದಲ್ಲಿ ಸಮಿತ್ತುಗಳನ್ನು ತರುವುದಕ್ಕಾಗಿ ಕಾಡಿಗೆ ಹೋದರು. ಆ ಬ್ರಾಹ್ಮಣಶ್ರೇಷ್ಠರೆಲ್ಲರೂ ಶಿವಭಕ್ತರು. ಯಾವಾಗಲೂ ಶಿವನನ್ನೇ ಧ್ಯಾನಿಸುತ್ತಿದ್ದರು.

ಏತಸ್ಮಿನ್ನಂತರೇ ಸಾಕ್ಷಾಚ್ಛಂಕರೋ ನೀಲಲೋಹಿತಃ ।
ವಿರೂಪಂ ಚ ಸಮಾಸ್ಥಾಯ ಪರೀಕ್ಷಾರ್ಥಂ ಸಮಾಗತಃ ॥ ೯ ॥

ದಿಗಂಬರೋऽತಿತೇಜಸ್ವೀ ಭೂತಿಭೂಷಣಭೂಷಿತಃ ।
ಸ ಚೇಷ್ಟಾಮಕರೋದ್ದುಷ್ಟಾಂ ಹಸ್ತೇ ಲಿಂಗಂ ವಿಧಾರಯನ್ ॥ ೧೦ ॥

ಮನಸಾ ಚ ಪ್ರಿಯಂ ತೇಷಾಂ ಕರ್ತುಂ ವೈ ವನವಾಸಿನಾಂ ।
ಜಗಾಮ ತದ್ವನಂ ಪ್ರೀತ್ಯಾ ಭಕ್ತಪ್ರೀತೋ ಹರಃ ಸ್ವಯಂ ॥ ೧೧ ॥

ತಂ ದೃಷ್ಟ್ವಾ ಋಷಿಪತ್ನ್ಯಸ್ತಾಃ ಪರಂ ತ್ರಾಸಮುಪಾಗತಾಃ ।
ವಿಹ್ವಲಾ ವಿಸ್ಮಿತಾಶ್ಚಾನ್ಯಾಸ್ಸಮಾಜಗ್ಮುಸ್ತಥಾ ಪುನಃ ॥ ೧೨ ॥

ಆಲಿಲಿಂಗುಸ್ತಥಾ ಚಾನ್ಯಾ ಕರಂ ಧೃತ್ವಾ ತಥಾಪರಾಃ ।
ಪರಸ್ಪರಂ ತು ಸಂಘರ್ಷಾತ್ಸಂಮಗ್ನಾಸ್ತಾಃ ಸ್ತ್ರಿಯಸ್ತದಾ ॥ ೧೩ ॥

---

೯. ಈ ಸಮಯದಲ್ಲಿ ನೀಲಲೋಹಿತನಾದ ಶಿವನು ಆ ಮುನಿಗಳ ಪರೀಕ್ಷಾರ್ಥವಾಗಿ ವಿಕಾರವಾದ ರೂಪಿನಿಂದ ಅಲ್ಲಿಗೆ ಬಂದನು.

೧೦-೧೧. ಆ ಶಿವನು ಮಹಾ ತೇಜಸ್ಸಿನಿಂದಕೂಡಿದ ಶರೀರವುಳ್ಳವನಾಗಿ, ವಸ್ತ್ರವನ್ನು ಧರಿಸದೆ ದಿಗಂಬರನಾಗಿ ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡು ದುಷ್ಟಚೇಷ್ಟೆಯನ್ನು ಮಾಡುತ್ತ ಕೈಯ್ಯಲ್ಲಿ ಲಿಂಗವನ್ನು ಹಿಡಿದುಕೊಂಡು ಮನಸ್ಸಿನಲ್ಲಿ ಆ ವನವಾಸಿಗಳಿಗೆ ಹಿತವನ್ನು ಮಾಡಬೇಕೆಂದು ಭಕ್ತರಲ್ಲಿ ಪ್ರೀತಿಯುಳ್ಳವನಾಗಿ ಆ ವನಕ್ಕೆ ಬಂದನು.

೧೨-೧೩. ಅವನನ್ನು ನೋಡಿ ಋಷಿಪತ್ನಿಯರು ಅತ್ಯಂತ ಭಯವನ್ನು ಹೊಂದಿದರು. ಕೆಲವರು ಭ್ರಾಂತರಾದರು. ಕೆಲವರು ಆಶ್ಚರ್ಯಪಡುತ್ತಿದ್ದರು. ಹೀಗೆ ಸ್ತ್ರೀಯರೆಲ್ಲ ಗುಂಪು ಸೇರಿದರು. ಕೆಲವರು ಶಿವನನ್ನು ಆಲಂಗಿಸಿಕೊಂಡರು. ಸ್ತ್ರೀಯರೆಲ್ಲರೂ ಒಬ್ಬರಮೇಲೊಬ್ಬರು ಬಂದು ಶಿವನನ್ನು ನೋಡುವುದರಲ್ಲಿಯೇ ಮಗ್ನರಾದರು.

ಏತಸ್ಮಿನ್ನೇವ ಸಮಯೇ ಋಷಿವರ್ಯಾಃ ಸಮಾಗಮನ್ ।
ವಿರುದ್ಧಂ ತಂ ಚ ತೇ ದೃಷ್ಟ್ವಾ ದುಃಖಿತಾಃ ಕ್ರೋಧಮೂರ್ಛಿತಾಃ ॥ ೧೪ ॥

ತದಾ ದುಃಖಮನುಪ್ರಾಪ್ತಾಃ ಕೋಽಯಂ ಕೋಽಯಂ ತಥಾಽಬ್ರುವನ್ ।
ಸಮಸ್ತಾ ಋಷಯಸ್ತೇ ವೈ ಶಿವಮಾಯಾವಿಮೋಹಿತಾಃ ॥ ೧೫ ॥

ಯದಾ ಚ ನೋಕ್ತವಾನ್ ಕಿಂಚಿತ್ಸೋಽವಧೂತೋ ದಿಗಂಬರಃ ।
ಊಚುಸ್ತಂ ಪುರುಷಂ ಭೀಮಂ ತದಾ ತೇ ಪರಮರ್ಷಯಃ ॥ ೧೬ ॥

ತ್ವಯಾ ವಿರುದ್ಧಂ ಕ್ರಿಯತೇ ವೇದಮಾರ್ಗವಿಲೋಪಿ ಯತ್ ।
ತತಸ್ತ್ವದೀಯಂ ತಲ್ಲಿಂಗಂ ಪತತಾಂ ಪೃಥಿವೀತಲೇ ॥ ೧೭ ॥

॥ ಸೂತ ಉವಾಚ ॥

ಇತ್ಯುಕ್ತೇ ತು ತದಾ ತೈಶ್ಚ ಲಿಂಗಂ ಚ ಪತಿತಂ ಕ್ಷಣಾತ್ ।
ಅವಧೂತಸ್ಯ ತಸ್ಯಾಶು ಶಿವಸ್ಯಾದ್ಭುತರೂಪಿಣಃ ॥ ೧೮ ॥

---

೧೪-೧೬. ಈ ಸಮಯದಲ್ಲಿಯೇ ಋಷಿಶ್ರೇಷ್ಠರೂ ಬಂದರು. ವಿರುದ್ಧವಾದ ಈ ನಡತೆಯನ್ನು ನೋಡಿ ದುಃಖಪಡುತ್ತಾ ಆ ಋಷಿಗಳೆಲ್ಲರೂ ಶಿವನ ಮಾಯೆಯಿಂದ ಮೋಹಿತರಾಗಿ ಇವನಾರು ? ಇವನೇಕೆ ಇಲ್ಲಿಗೆ ಬಂದನು ಎಂದು ಕೋಪಗೊಂಡರು. ಆ ದಿಗಂಬರನಾದ ಅವಧೂತನು ಯಾವ ಮಾತನ್ನೂ ಹೇಳದಿರಲು, ಆ ಋಷಿಶ್ರೇಷ್ಠರು ಆ ಭಯಂಕರಪುರುಷನನ್ನು ಕುರಿತು—

೧೭. ನೀನು ವೇದಮಾರ್ಗವನ್ನು ನಾಶಮಾಡತಕ್ಕ ವಿರುದ್ಧಕಾರ್ಯವನ್ನು ಮಾಡುವೆಯಾದುದರಿಂದ ನಿನ್ನ ಲಿಂಗವು ಭೂಮಿಯಮೇಲೆ ಬೀಳಲಿ ಎಂದರು.

೧೮-೨೦. ಆ ಋಷಿಗಳು ಹೀಗೆ ಹೇಳಿದಕೂಡಲೇ ಅವಧೂತರೂಪವನ್ನು ಧರಿಸಿದ ಆಶ್ಚರ್ಯಕರನಾದ ಶಿವನ ಲಿಂಗವು ಆ ಕ್ಷಣದಲ್ಲಿಯೇ ಬಿದ್ದುಹೋಯಿತು. ಆ ಲಿಂಗವು ಬೆಂಕಿಯಂತೆ ತನ್ನ ಸಮೀಪದಲ್ಲಿದ್ದುದನ್ನೆಲ್ಲಾ ಸುಡುತ್ತಿದ್ದಿತು. ಅದು

ತಲ್ಲಿಂಗಂ ಚಾಗ್ನಿವತ್ಸರ್ವಂ ಯದ್ದದಾಹ ಪುರಂ ಸ್ಥಿತಂ ।
ಯತ್ರ ಯತ್ರ ಚ ತದ್ಯಾತಿ ತತ್ರ ತತ್ರ ದಹೇತ್ಪುನಃ ॥ ೧೯ ॥

ಪಾತಾಲೇ ಚ ಗತಂ ತಚ್ಚ ಸ್ವರ್ಗೇ ಚಾಪಿ ತಥೈವ ಚ ।
ಭೂಮೌ ಸರ್ವತ್ರ ತದ್ಯಾತಂ ನ ಕುತ್ರಾಪಿ ಸ್ಥಿರಂ ಹಿ ತತ್ ॥ ೨೦ ॥

ಲೋಕಾಶ್ಚ ವ್ಯಾಕುಲಾ ಜಾತಾ ಋಷಯಸ್ತೇಽತಿದುಃಖಿತಾಃ ।
ನ ಶರ್ಮ ಲೇಭಿರೇ ಕೇಚಿದ್ದೇವಾಶ್ಚ ಋಷಯಸ್ತಥಾ ॥ ೨೧ ॥

ನ ಜ್ಞಾತಸ್ತು ಶಿವೋ ಯೈಸ್ತು ತೇ ಸರ್ವೇ ಚ ಸುರರ್ಷಯಃ ।
ದುಃಖಿತಾ ಮಿಲಿತಾಶ್ಶೀಘ್ರಂ ಬ್ರಹ್ಮಾಣಂ ಶರಣಂ ಯಯುಃ ॥ ೨೨ ॥

ತತ್ರ ಗತ್ವಾ ಚ ತೇ ಸರ್ವೇ ನತ್ವಾ ಸ್ತುತ್ವಾ ವಿಧಿಂ ದ್ವಿಜಾಃ ।
ತತ್ಸರ್ವಮುವದನ್ವೃತ್ತಂ ಬ್ರಹ್ಮಣೇ ಸೃಷ್ಟಿಕಾರಣೇ ॥ ೨೩ ॥

ಬ್ರಹ್ಮಾ ತದ್ವಚನಂ ಶ್ರುತ್ವಾ ಶಿವಮಾಯಾವಿಮೋಹಿತಾನ್ ।
ಜ್ಞಾತ್ವಾ ತಾಞ್ಛಂಕರಂ ನತ್ವಾ ಪ್ರೋವಾಚ ಋಷಿಸತ್ತಮಾನ್ ॥ ೨೪ ॥

---

ಸ್ಥಿರವಾಗಿ ಒಂದೆಡೆ ನಿಲ್ಲದೆ ಚಲಿಸುತ್ತಾ ಹೋದೆಡೆಯಲ್ಲೆಲ್ಲ ಇದ್ದುದನ್ನು ಸುಡುತ್ತಿದ್ದಿತು. ಪಾತಾಲಕ್ಕೆ ಹೋದರೂ, ಸ್ವರ್ಗಕ್ಕೆ ಹೋದರೂ, ಭೂಮಿಯಲ್ಲಿದ್ದರೂ ಎಲ್ಲಿಯೂ ಸ್ಥಿರವಾಗಿ ನಿಲ್ಲಲಿಲ್ಲ.

೨೧-೨೨. ಇದನ್ನು ನೋಡಿ ಆ ಸಮಸ್ತ ಋಷಿಗಳೂ ಜನರೂ ವ್ಯಾಕುಲಪಡುತ್ತಿದ್ದರು. ದೇವತೆಗಳಿಗೂ, ಋಷಿಗಳಿಗೂ ಸುಖ ಉಂಟಾಗಲಿಲ್ಲ. ಶಿವನನ್ನು ನೋಡದಿದ್ದ ದೇವರ್ಷಿಗಳೆಲ್ಲಾ ದುಃಖಿಸುತ್ತ ಗುಂಪುಕೂಡಿ ಬ್ರಹ್ಮನನ್ನು ಶರಣು ಹೊಂದಿದರು.

೨೩-೨೪. ಅವರೆಲ್ಲರೂ ಬ್ರಹ್ಮನ ಸಮೀಪಕ್ಕೆ ಹೋಗಿ ಅವನಿಗೆ ನಮಸ್ಕರಿಸಿ ಸ್ತೋತ್ರವನ್ನು ಮಾಡಿ ಸೃಷ್ಟಿಕರ್ತನಾದ ಅವನಿಗೆ ಸಕಲ ವೃತ್ತಾಂತವನ್ನು ಹೇಳಿದರು. ಬ್ರಹ್ಮನು ಶಿವನ ಮಾಯೆಯಿಂದ ಮೋಹಿತರಾದ ಅವರ ಮಾತನ್ನು ಕೇಳಿ, ಅವರ ಅಜ್ಞಾನವನ್ನು ತಿಳಿದು ಶಿವನಿಗೆ ನಮಸ್ಕಾರಮಾಡಿ ಆ ಋಷಿಶ್ರೇಷ್ಠರನ್ನು ಕುರಿತು ಇಂತೆಂದನು.

॥ ಬ್ರಹ್ಮೋವಾಚ ॥

ಜ್ಞಾತಾರಶ್ಚ ಭವಂತೋ ವೈ ಕುರ್ವತೇ ಗರ್ಹಿತಂ ದ್ವಿಜಾಃ ।
ಅಜ್ಞಾತಾರೋ ಯದಾ ಕುರ್ಯುಃ ಕಿಂ ಪುನಃ ಕಥ್ಯತೇ ಪುನಃ ॥ ೨೫ ॥

ವಿರುದ್ಧ್ಯೈವಂ ಶಿವಂ ದೇವಂ ಕುಶಲಂ ಕಸ್ಸಮಿಾಹತೇ ।
ಮಧ್ಯಾಹ್ನಸಮಯೇ ಯೋ ವೈ ನಾತಿಥಿಂ ಚ ಪರಾಮೃಶೇತ್ ॥ ೨೬ ॥

ತಸ್ಯೈವ ಸುಕೃತಂ ನೀತ್ವಾ ಸ್ವೀಯಂ ಚ ದುಷ್ಕೃತಂ ಪುನಃ ।
ಸಂಸ್ಥಾಪ್ಯ ಚಾತಿಥಿರ್ಯಾತಿ ಕಿಂ ಪುನಃ ಶಿವಮೇವ ವಾ ॥ ೨೭ ॥

ಯಾವಲ್ಲಿಂಗಂ ಸ್ಥಿರಂ ನೈವ ಜಗತಾಂ ತ್ರಿತಯೇ ಶುಭಂ ।
ಜಾಯತೇ ನ ತದಾ ಕ್ವಾಪಿ ಸತ್ಯಮೇತದ್ವದಾಮ್ಯಹಂ ॥ ೨೮ ॥

ಭವದ್ಭಿಶ್ಚ ತಥಾ ಕಾರ್ಯಂ ಯಥಾ ಸ್ವಾಸ್ಥ್ಯಂ ಭವೇದಿಹ ।
ಶಿವಲಿಂಗಸ್ಯ ಋಷಯೋ ಮನಸಾ ಸಂವಿಚಾರ್ಯತಾಂ ॥ ೨೯ ॥

---

೨೫-೨೭. ಎಲೈ ಋಷಿಗಳೇ! ಜ್ಞಾನಿಗಳಾದ ನೀವೇ ನಿಂದ್ಯವಾದ ಕೆಲಸವನ್ನು ಮಾಡುತ್ತಿರುವಲ್ಲಿ ಅಜ್ಞಾನಿಗಳು ಇಂಥದನ್ನು ಮಾಡಿದರೆ ಹೇಳಬೇಕಾದುದೇನಿರುವುದು? ದೇವನಾದ ಶಿವನನ್ನು ದ್ವೇಷಿಸಿದರೆ ಯಾವನಿಗೆ ತಾನೇ ಕುಶಲವಾಗುವುದು? ಮಧ್ಯಾಹ್ನಕಾಲದಲ್ಲಿ ಯಾವನು ಅತಿಥಿಗೆ ಸತ್ಕಾರವನ್ನು ಮಾಡುವುದಿಲ್ಲವೋ, ಅವನ ಪುಣ್ಯವನ್ನು ಅತಿಥಿಯು ತೆಗೆದುಕೊಂಡು ತನ್ನ ಪಾಪವನ್ನು ಅವನಿಗೆ ಕೊಟ್ಟು ಹೊರಟುಹೋಗುವನು. ಅತಿಥಿಯಾದ ಶಿವನಿಗೆ ಹೀಗೆ ಮಾಡಿದರೆ ಹೇಳಬೇಕಾದುದೇನಿರುವುದು?

೨೮-೨೯. ಲಿಂಗವು ಸ್ಥಿರವಾಗಿ ನಿಲ್ಲುವವರೆಗೂ ಮೂರು ಲೋಕದಲ್ಲಿಯೂ ಶುಭವಾಗುವುದೇ ಇಲ್ಲ. ಈ ಮಾತು ಸತ್ಯವಾದುದು. ಎಲೈ ಋಷಿಗಳೇ! ನೀವು ಶಿವಲಿಂಗವು ಸ್ಥಿರವಾಗಿ ನಿಲ್ಲುವ ಪ್ರಯತ್ನ ಮಾಡಬೇಕು. ಇದಕ್ಕಾಗಿ ಮನಸ್ಸಿನಲ್ಲಿ ಚೆನ್ನಾಗಿ ವಿಚಾರಮಾಡಿ ತಿಳಿದುಕೊಳ್ಳಿರಿ.

॥ ಸೂತ ಉವಾಚ ॥

ಇತ್ಯುಕ್ತಾಸ್ತೇ ಪ್ರಣಮ್ಯೋಚುರ್ಬ್ರಹ್ಮಾಣಮೃಷಯಶ್ಚ ವೈ ।
ಕಿಮಸ್ಮಾಭಿರ್ವಿಧೇ ಕಾರ್ಯಂ ತತ್ಕಾರ್ಯಂ ತ್ವಂ ಸಮಾದಿಶ ॥ ೩೦ ॥

ಇತ್ಯುಕ್ತಶ್ಚ ಮುನೀಶೈಸ್ತೈಸ್ಸರ್ವಲೋಕಪಿತಾಮಹಃ ।
ಮುನೀಶಾಂಸ್ತಾಂಸ್ತದಾ ಬ್ರಹ್ಮಾ ಸ್ವಯಂ ಪ್ರೋವಾಚ ವೈ ತದಾ ॥ ೩೧ ॥

॥ ಬ್ರಹ್ಮೋವಾಚ ॥

ಆರಾಧ್ಯ ಗಿರಿಜಾಂ ದೇವೀಂ ಪ್ರಾರ್ಥಯಂತು ಸುರಾಶ್ಶಿವಂ ।
ಯೋನಿರೂಪಾ ಭವೇಚ್ಚೇದ್ವೈ ತದಾ ತತ್ಸ್ಥಿರತಾಂ ವ್ರಜೇತ್ ॥ ೩೨ ॥

ತದ್ವಿಧಿಂ ಪ್ರವದಾಮ್ಯದ್ಯ ಸರ್ವೇ ಶೃಣುತ ಸತ್ತಮಾಃ ।
ತಾಮೇವ ಕುರುತ ಪ್ರೇಮ್ಣಾ ಪ್ರಸನ್ನಾ ಸಾ ಭವಿಷ್ಯತಿ ॥ ೩೩ ॥

ಕುಂಭಮೇಕಂ ಚ ಸಂಸ್ಥಾಪ್ಯಂ ಕೃತ್ವಾಷ್ಟದಲಮುತ್ತಮಂ ।
ದೂರ್ವಾಯವಾಂಕುರೈಸ್ತೀರ್ಥೋದಕಮಾಪೂರಯೇತ್ತತಃ ॥ ೩೪ ॥

---

೩೦-೩೧. ಹೀಗೆಂದು ಬ್ರಹ್ಮನು ಹೇಳಲು, ಋಷಿಗಳು ಬ್ರಹ್ಮನಿಗೆ ನಮಸ್ಕಾರವನ್ನು ಮಾಡಿ ಎಲೈ, ಬ್ರಹ್ಮದೇವನೇ! ಈ ಸಂದರ್ಭದಲ್ಲಿ ನಾವು ಏನು ಮಾಡಬೇಕೆಂಬುದನ್ನು ನೀನೇ ಅಪ್ಪಣೆ ಮಾಡಬೇಕು ಎನ್ನಲು, ಸಮಸ್ತ ಲೋಕವನ್ನೂ ಸೃಷ್ಟಿಸಿದ ಬ್ರಹ್ಮನು ಅವರನ್ನು ಕುರಿತು ಹೇಳಿದನು.

೩೨-೩೩. ಬ್ರಹ್ಮನು ಹೇಳಿದನು.—ಎಲೈ ಋಷಿಗಳೇ! ಪಾರ್ವತೀದೇವಿಯನ್ನು ಪೂಜಿಸಿ ಪ್ರಾರ್ಥನೆಮಾಡಿರಿ. ಆ ದೇವಿಯು ಯೋನಿರೂಪಳಾದರೆ ಆ ಲಿಂಗವು ಸ್ಥೈರ್ಯವನ್ನು ಪಡೆಯುವುದು. ಅದರ ಪ್ರಯತ್ನವನ್ನು ಹೇಳುವೆನು, ಕೇಳಿರಿ. ಅದನ್ನೇ ಮಾಡಿದರೆ ಪ್ರೀತಿಯಿಂದ ಆ ದೇವಿಯು ಪ್ರಸನ್ನಳಾಗುವಳು.

೩೪-೩೬. ಶುದ್ಧವಾದ ಒಂದೆಡೆಯಲ್ಲಿ ಅಷ್ಟದಳಪದ್ಮವನ್ನು ಬರೆದು ಅಲ್ಲಿ ಒಂದು ಕಲಶವನ್ನು ಸ್ಥಾಪಿಸಬೇಕು. ದೂರ್ವೆಯನ್ನೂ, ಯವಾಂಕುರಗಳನ್ನೂ, ತೀರ್ಥೋದಕಗಳನ್ನೂ ಆ ಕಲಶದೊಳಗೆ ಹಾಕಿ, ವೇದಮಂತ್ರಗಳಿಂದ ಆ ಕಲಶ

ವೇದಮಂತ್ರೈಸ್ತತಸ್ತಂ ವೈ ಕುಂಭಂ ಚೈವಾಭಿಮಂತ್ರಯೇತ್ ।
ಶ್ರುತ್ಯುಕ್ತವಿಧಿನಾ ತಸ್ಯ ಪೂಜಾಂ ಕೃತ್ವಾ ಶಿವಂ ಸ್ಮರನ್ ॥ ೩೫ ॥

ತಲ್ಲಿಂಗಂ ತಜ್ಜಲೇನಾಭಿಷೇಚಯೇತ್ಪರಮರ್ಷಯಃ ।
ಶತರುದ್ರೀಯಮಂತ್ರೈಸ್ತು ಪ್ರೋಕ್ಷಿತಂ ಶಾಂತಿಮಾಪ್ನುಯಾತ್ ॥ ೩೬ ॥

ಗಿರಿಜಾಂ ಯೋನಿರೂಪಾಂ ಚ ಬಾಣಂ ಸ್ಥಾಪ್ಯ ಶುಭಂ ಪುನಃ ।
ತತ್ರ ಲಿಂಗಂ ಚ ತತ್ಸ್ಥಾಪ್ಯಂ ಪುನಶ್ಚೈವಾಭಿಮಂತ್ರಯೇತ್ ॥ ೩೭ ॥

ಸುಗಂಧೈಶ್ಚಂದನೈಶ್ಚೈವ ಪುಷ್ಪಧೂಪಾದಿಭಿಸ್ತಥಾ ।
ನೈವೇದ್ಯಾದಿಕಪೂಜಾಭಿಸ್ತೋಷಯೇತ್ಪರಮೇಶ್ವರಂ ॥ ೩೮ ॥

ಪ್ರಣಿಪಾತೈಃ ಸ್ತವೈಃ ಪುಣ್ಯೈರ್ವಾದ್ಯೈರ್ಗಾನೈಸ್ತಥಾ ಪುನಃ ।
ತತಃ ಸ್ವಸ್ತ್ಯಯನಂ ಕೃತ್ವಾ ಜಯೇತಿ ವ್ಯಾಹರೇತ್ತಥಾ ॥ ೩೯ ॥

ಪ್ರಸನ್ನೋ ಭವ ದೇವೇಶ ಜಗದಾಹ್ಲಾದಕಾರಕ ।
ಕರ್ತಾ ಪಾಲಯಿತಾ ತ್ವಂ ಚ ಸಂಹರ್ತಾ ತ್ವಂ ನಿರಕ್ಷರಃ ॥ ೪೦ ॥

---

ವನ್ನು ಅಭಿಮಂತ್ರಿಸಿ ಶಿವನನ್ನು ಧ್ಯಾನಿಸುತ್ತ ವೇದೋಕ್ತಕ್ರಮದಿಂದ ಅದನ್ನು ಪೂಜಿಸಿ, ಆ ಲಿಂಗಕ್ಕೆ ಆ ಕಲಶೋದಕದಿಂದ ಅಭಿಷೇಕವನ್ನು ಮಾಡಬೇಕು. ಶತರುದ್ರೀಯ ಮಂತ್ರದಿಂದ ಅಭಿಷೇಕ ಮಾಡಿದರೆ ಶಾಂತಿಯುಂಟಾಗುವುದು.

೩೭-೩೮. ಪಾರ್ವತೀದೇವಿಯು ಯೋನಿರೂಪವಾದುದಕ್ಕೆ ಗುರುತಾಗಿ ಮಂಗಳಕರವಾದ ಪೀಠವನ್ನು (ಬಾಣ) ಸ್ಥಾಪಿಸಿ ಅದರಲ್ಲಿ ಲಿಂಗವನ್ನು ಸ್ಥಾಪಿಸಿ ಮತ್ತೆ ಅಭಿಮಂತ್ರಿಸಿ ಅಭಿಷೇಕಾದಿಗಳನ್ನು ಮಾಡಿ, ಸುವಾಸನೆಯಾದ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಮುಂತಾದ ಪೂಜೆಗಳಿಂದ ಶಿವನನ್ನು ಸಂತೋಷಪಡಿಸಬೇಕು.

೩೯-೪೨. ನಮಸ್ಕಾರ, ಪುಣ್ಯಕರವಾದ ಸ್ತೋತ್ರಗಳು, ವಾದ್ಯಗಳು, ಸಂಗೀತ ಇವುಗಳಿಂದ ಸಂತೋಷಪಡಿಸಿ ಜಯಘೋಷವನ್ನು ಮಾಡಬೇಕು. ಎಲೈ, "ಸ್ವಾಮಿಯೇ! ನೀನೇ ಸಮಸ್ತ ಲೋಕಗಳನ್ನೂ ಸೃಷ್ಟಿಸಿ, ರಕ್ಷಿಸಿ, ನಾಶಮಾಡ

ಜಗದಾದಿರ್ಜಗದ್ಯೋನಿರ್ಜಗದಂತರ್ಗತೋಽಪಿ ಚ ।
ಶಾಂತೋ ಭವ ಮಹೇಶಾನ ಸರ್ವಲೋಕಾಂಶ್ಚ ಪಾಲಯ ॥ ೪೧ ॥

ಏವಂ ಕೃತೇ ವಿಧೌ ಸ್ವಾಸ್ಥ್ಯಂ ಭವಿಷ್ಯತಿ ನ ಸಂಶಯಃ ।
ವಿಕಾರೋ ನ ತ್ರಿಲೋಕೇಽಸ್ಮಿನ್ಭವಿಷ್ಯತಿ ಸುಖಂ ಸದಾ ॥ ೪೨ ॥

॥ ಸೂತ ಉವಾಚ ॥

ಇತ್ಯುಕ್ತ್ವಾಸ್ತೇ ದ್ವಿಜಾ ದೇವಾಃ ಪ್ರಣಿಪತ್ಯ ಪಿತಾಮಹಂ ।
ಶಿವಂ ತಂ ಶರಣಂ ಪ್ರಾಪ್ತಾಸ್ಸರ್ವಲೋಕಸುಖೇಪ್ಸಯಾ ॥ ೪೩ ॥

ಪೂಜಿತಃ ಪರಯಾ ಭಕ್ತ್ಯಾ ಪ್ರಾರ್ಥಿತಃ ಶಂಕರಸ್ತದಾ ।
ಸುಪ್ರಸನ್ನಸ್ತತೋ ಭೂತ್ವಾ ತಾನುವಾಚ ಮಹೇಶ್ವರಃ ॥ ೪೪ ॥

॥ ಮಹೇಶ್ವರ ಉವಾಚ ॥

ಹೇ ದೇವಾ ಋಷಯಃ ಸರ್ವೇ ಮದ್ವಚಃ ಶೃಣುತಾದರಾತ್ ।
ಯೋನಿರೂಪೇಣ ಮಲ್ಲಿಂಗಂ ಧೃತಂ ಚೇತ್ಸ್ಯಾತ್ತದಾ ಸುಖಂ ॥ ೪೫ ॥

---

ತಕ್ಕವನು. ನೀನು ನಾಶರಹಿತನು. ಲೋಕಕ್ಕೆಲ್ಲಾ ಆದಿಕಾರಣನು. ಈ ಪ್ರಪಂಚದ ಅಂತರ್ಗತನಾಗಿರುವೆ, ಮಹಾಸ್ವಾಮಿಯೇ! ನೀನು ಶಾಂತನಾಗಿ ಸಮಸ್ತ ಲೋಕಗಳನ್ನೂ ರಕ್ಷಿಸು, ಎಂದು ಈ ರೀತಿಯಲ್ಲಿ ಸ್ತೋತ್ರ ಮಾಡಿದರೆ ಮೂರು ಲೋಕಕ್ಕೂ ಸುಖಉಂಟಾಗುವುದು. ಸಮಸ್ತ ವಿಕಾರಗಳೂ ನಾಶವಾಗುವುವು.

೪೩-೪೪. ಹೀಗೆ ಹೇಳುತ್ತಲು ದೇವತೆಗಳೂ, ಋಷಿಗಳೂ, ಬ್ರಹ್ಮನಿಗೆ ನಮಸ್ಕರಿಸಿ ಸಮಸ್ತ ಲೋಕಕ್ಕೂ ಸುಖವನ್ನು ಬಯಸಿ, ಶಿವನನ್ನು ಮರೆಹೊಕ್ಕರು. ಅತ್ಯಂತ ಭಕ್ತಿಯಿಂದ ಮಾಡಿದ ಅವರ ಪೂಜೆಯನ್ನು ಸ್ವೀಕರಿಸಿ ಪ್ರಾರ್ಥನೆಮಾಡಿದ ಅವರ ವಿಷಯದಲ್ಲಿ ಮಹೇಶ್ವರನು ಪ್ರಸನ್ನನಾಗಿ ಅವರನ್ನು ಕುರಿತು,

೪೫-೪೬. ಎಲೈ ದೇವತೆಗಳೇ, ಮತ್ತು ಋಷಿಗಳೇ! ಆದರದಿಂದ ನನ್ನ ಮಾತನ್ನು ಕೇಳಿರಿ. ಯೋನಿರೂಪದಿಂದ ನನ್ನ ಲಿಂಗವನ್ನು ಧರಿಸಿದರೆ ಲೋಕಕ್ಕೆ

ಪಾರ್ವತೀಂ ಚ ವಿನಾ ನಾನ್ಯಾ ಲಿಂಗಂ ಧಾರಯಿತುಂ ಕ್ಷಮಾ ।
ತಯಾ ಧೃತಂ ಚ ಮಲ್ಲಿಂಗಂ ದ್ರುತಂ ಶಾಂತಿಂ ಗಮಿಷ್ಯತಿ　॥ ೪೬ ॥

॥ ಸೂತ ಉವಾಚ ॥

ತಚ್ಛ್ರುತ್ವಾ ಋಷಿಭಿರ್ದೇವೈಸ್ಸುಪ್ರಸನ್ನೈರ್ಮುನೀಶ್ವರಾಃ ।
ಗೃಹೀತ್ವಾ ಚೈವ ಬ್ರಹ್ಮಾಣಂ ಗಿರಿಜಾ ಪ್ರಾರ್ಥಿತಾ ತದಾ　॥ ೪೭ ॥

ಪ್ರಸನ್ನಾಂ ಗಿರಿಜಾಂ ಕೃತ್ವಾ ವೃಷಭಧ್ವಜಮೇವ ಚ ।
ಪೂರ್ವೋಕ್ತಂ ಚ ವಿಧಿಂ ಕೃತ್ವಾ ಸ್ಥಾಪಿತಂ ಲಿಂಗಮುತ್ತಮಂ　॥ ೪೮ ॥

ಮಂತ್ರೋಕ್ತೇನ ವಿಧಾನೇನ ದೇವಾಶ್ಚ ಋಷಯಸ್ತಥಾ ।
ಚಕ್ರುಃ ಪ್ರಸನ್ನಾಂ ಗಿರಿಜಾಂ ಶಿವಂ ಚ ಧರ್ಮಹೇತವೇ　॥ ೪೯ ॥

ಸಮಾನರ್ಚುರ್ವಿಶೇಷೇಣ ಸರ್ವೇ ದೇವರ್ಷಯಃ ಶಿವಂ ।
ಬ್ರಹ್ಮಾ ವಿಷ್ಣುಃ ಪರೇ ಚೈವ ತ್ರೈಲೋಕ್ಯಂ ಸಚರಾಚರಂ　॥ ೫೦ ॥

---

ಸುಖವಾಗುವುದು. ಪಾರ್ವತಿಯನ್ನು ಬಿಟ್ಟು ಮತ್ತೊಬ್ಬರು ನನ್ನ ಲಿಂಗವನ್ನು ಧರಿಸಲಾರರು. ಪಾರ್ವತಿಯು ಧರಿಸಿದ ನನ್ನ ಲಿಂಗವು ಬೇಗನೆ ಶಾಂತಿಯನ್ನು ಹೊಂದುವುದು ಎಂದನು.

೪೭-೪೮. ಸೂತನು ಹೇಳಿದನು.—ಎಲೈ ಋಷಿಶ್ರೇಷ್ಠರೇ! ಮುನಿಗಳೂ, ದೇವತೆಗಳೂ ಆ ಮಾತನ್ನು ಕೇಳಿ ಬ್ರಹ್ಮನೊಡನೆ ಪಾರ್ವತಿಯನ್ನು ಪ್ರಾರ್ಥಿಸಿದರು. ಬಳಿಕ ಪಾರ್ವತಿಯನ್ನೂ, ಶಿವನನ್ನೂ ಪ್ರಸನ್ನರನ್ನಾಗಿ ಮಾಡಿಕೊಂಡು ಹಿಂದೆ ಹೇಳಿದ ಕ್ರಮದಿಂದ ಶ್ರೇಷ್ಠವಾದ ಲಿಂಗವನ್ನು ಪ್ರತಿಷ್ಠೆಮಾಡಿದರು.

೪೯-೫೦. ಮಂತ್ರೋಕ್ತವಾದ ವಿಧಿಯನ್ನನುಸರಿಸಿ ಪ್ರಪಂಚದಲ್ಲಿ ಧರ್ಮಾಭಿವೃದ್ಧಿಗಾಗಿ ಶಿವಪಾರ್ವತಿಯರನ್ನು ಪ್ರಸನ್ನರಾಗುವಂತೆ ಮಾಡಿಕೊಂಡರು. ಶಿವನನ್ನು ವಿಶೇಷ ರೀತಿಯಿಂದ ಪೂಜಿಸಿದರು. ಬ್ರಹ್ಮನೂ, ವಿಷ್ಣುವೂ, ಸಮಸ್ತ ದೇವರ್ಷಿಗಳೂ ಮೂರು ಲೋಕದ ಸಕಲಚರಾಚರಪ್ರಾಣಿಗಳೂ ಶಿವನನ್ನು ಪೂಜಿಸಿದರು.

ಸುಪ್ರಸನ್ನಃ ಶಿವೋ ಜಾತಃ ಶಿವಾ ಚ ಜಗದಂಬಿಕಾ ।
ಧೃತಂ ತಯಾ ಚ ತಲ್ಲಿಂಗಂ ತೇನ ರೂಪೇಣ ವೈ ತದಾ ॥ ೫೧ ॥

ಲೋಕಾನಾಂ ಸ್ಥಾಪಿತೇ ಲಿಂಗೇ ಕಲ್ಯಾಣಂ ಚಾಭವತ್ತದಾ ।
ಪ್ರಸಿದ್ಧಂ ಚೈವ ತಲ್ಲಿಂಗಂ ತ್ರಿಲೋಕ್ಯಾಮಭವದ್ದ್ವಿಜಾಃ ॥ ೫೨

ಹಾಟಕೇಶಮಿತಿ ಖ್ಯಾತಂ ತಚ್ಛಿವಾಶಿವಮಿತ್ಯಪಿ ।
ಪೂಜನಾತ್ತಸ್ಯ ಲೋಕಾನಾಂ ಸುಖಂ ಭವತಿ ಸರ್ವಥಾ ॥ ೫೩ ॥

ಇಹ ಸರ್ವಸಮೃದ್ಧಿಃ ಸ್ಯಾನ್ನಾನಾಸುಖವಹಾಧಿಕಾ ।
ಪರತ್ರ ಪರಮಾ ಮುಕ್ತಿರ್ನಾತ್ರ ಕಾರ್ಯಾ ವಿಚಾರಣಾ ॥ ೫೪ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರ
ಸಂಹಿತಾಯಾಂ ಲಿಂಗಸ್ವರೂಪಕಾರಣವರ್ಣನಂ
ನಾಮ ದ್ವಾದಶೋಽಧ್ಯಾಯಃ

---

೫೧-೫೨. ಶಿವನೂ, ಜಗದಂಬೆಯಾದ ಪಾರ್ವತಿಯೂ ಪ್ರಸನ್ನರಾದರು. ಪಾರ್ವತಿಯು ಯೋನಿರೂಪದಿಂದ ಆ ಲಿಂಗವನ್ನು ಧರಿಸಿದಳು. ಲಿಂಗವನ್ನು ಸ್ಥಾಪನೆ ಮಾಡುತ್ತಲು ಸಮಸ್ತ ಲೋಕಗಳಿಗೂ ಮಂಗಳವುಂಟಾಯಿತು. ಎಲೈ ಬ್ರಾಹ್ಮಣರೇ! ಆ ಲಿಂಗವು ಮೂರು ಲೋಕದಲ್ಲಿಯೂ ಪ್ರಸಿದ್ಧಿಯನ್ನು ಪಡೆಯಿತು.

೫೩. ಆ ಪಾರ್ವತೀಪರಮೇಶ್ವರಸ್ವರೂಪವಾದ ಲಿಂಗವು ಹಾಟಕೇಶ್ವರನೆಂದು ಪ್ರಸಿದ್ಧಿ ಹೊಂದಿತು. ಆ ಲಿಂಗದ ಪೂಜೆಯಿಂದ ಲೋಕಕ್ಕೆ ಸಂಪೂರ್ಣವಾದ ಸುಖವುಂಟಾಗುವುದು.

೫೪. ಇಹಲೋಕದಲ್ಲಿ ಸಕಲ ಸಂಪತ್ತೂ ಪ್ರಾಪ್ತವಾಗಿ ಪರಲೋಕದಲ್ಲಿ ಶ್ರೇಷ್ಠವಾದ ಮುಕ್ತಿಯೇ ಉಂಟಾಗುವುದು. ಈ ವಿಷಯದಲ್ಲಿ ಸಂದೇಹವಿರುವುದಿಲ್ಲ.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಲಿಂಗಸ್ವರೂಪಕ್ಕೆ ಕಾರಣವನ್ನು ವರ್ಣಿಸಿರುವ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ತ್ರಯೋದಶೋಽಧ್ಯಾಯಃ

॥ ಸೂತ ಉವಾಚ ॥

ಯಥಾಭವಲ್ಲಿಂಗರೂಪಃ ಸಂಪೂಜ್ಯಸ್ತ್ರಿಭವೇ ಶಿವಃ ।
ತಥೋಕ್ತಂ ವಾ ದ್ವಿಜಾಃ ಪ್ರೀತ್ಯಾ ಕಿಮನ್ಯಚ್ಛ್ರೋತುಮಿಚ್ಛಥ ॥ ೧ ॥

॥ ಋಷಯ ಊಚುಃ ॥

ಅಂಧಕೇಶ್ವರಲಿಂಗಸ್ಯ ಮಹಿಮಾನಂ ವದ ಪ್ರಭೋ ।
ತಥಾನ್ಯಚ್ಛಿವಲಿಂಗಾನಾಂ ಪ್ರೀತ್ಯಾ ವಕ್ತುಮಿಹಾರ್ಹಸಿ ॥ ೨ ॥

---

### ಹದಿಮೂರನೆಯ ಅಧ್ಯಾಯವು-

೧. ಸೂತನು ಹೇಳಿದನು.—ಎಲೈ ಋಷಿಗಳೇ, ಲಿಂಗರೂಪವು ಶಿವನಿಗೆ ಹೇಗೆ ಬಂದಿತೋ ಆ ಶಿವನು ಮೂರು ಲೋಕದಲ್ಲಿಯೂ ಹೇಗೆ ಪೂಜ್ಯನಾದನೋ ಅದನ್ನು ಹೇಳಿದೆನು. ಮತ್ತೇನನ್ನು ಕೇಳಬೇಕೆಂದಿರುವಿರಿ? ಎನ್ನಲು,

೨. ಋಷಿಗಳು ಕೇಳಿದರು.— ಎಲೈ ಸೂತನೇ, ಈಗ ಅಂಧಕೇಶ್ವರ ಲಿಂಗದ ಮಹಿಮೆಯನ್ನೂ, ಹಾಗೆಯೇ ಇತರ ಲಿಂಗಗಳ ಮಹಿಮೆಯನ್ನೂ ಪ್ರೀತಿಯಿಂದ ನಮಗೆ ಹೇಳಬೇಕು ಎಂದರು.

॥ ಸೂತ ಉವಾಚ ॥

ಪುರಾಬ್ಧಿಗರ್ತಮಾಶ್ರಿತ್ಯ ವಸನ್ದೈತ್ಯೋಽಂಧಕಾಸುರಃ ।
ಸ್ವವಶಂ ಕಾರಯಾಮಾಸ ತ್ರೈಲೋಕ್ಯಂ ಸುರಸೂದನಃ ॥ ೩ ॥

ತಸ್ಮಾದ್ಗರ್ತಾಚ್ಚ ನಿಸ್ಸೃತ್ಯ ಪೀಡಯಿತ್ವಾ ಪುನಃ ಪ್ರಜಾಃ ।
ಪ್ರಾವಿಶಚ್ಚ ತದಾ ದೈತ್ಯಸ್ತಂ ಗರ್ತಂ ಸುಪರಾಕ್ರಮಃ ॥ ೪ ॥

ದೇವಾಶ್ಚ ದುಃಖಿತಾಃ ಸರ್ವೇ ಶಿವಂ ಪ್ರಾರ್ಥ್ಯ ಪುನಃ ಪುನಃ ।
ಸರ್ವಂ ನಿವೇದಯಾಮಾಸುಸ್ಸ್ವದುಃಖಂ ಚ ಮುನೀಶ್ವರಾಃ ॥ ೫ ॥

॥ ಸೂತ ಉವಾಚ ॥

ತದಾಕರ್ಣ್ಯ ವಚಸ್ತೇಷಾಂ ದೇವಾನಾಂ ಪರಮೇಶ್ವರಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ದುಷ್ಟಹಂತಾ ಸತಾಂ ಗತಿಃ ॥ ೬ ॥

॥ ಶಿವ ಉವಾಚ ॥

ಘಾತಯಿಷ್ಯಾಮಿ ತಂ ದೈತ್ಯಮಂಧಕಂ ಸುರಸೂದನಂ ।
ಸೈನ್ಯಂ ಚ ನೀಯತಾಂ ದೇವಾ ಹ್ಯಾಯಾಮಿ ಚ ಗಣೈಸ್ಸಹ ॥ ೭ ॥

---

೩-೫, ಸೂತನು ಹೇಳಿದನು.—ಹಿಂದೆ ಸಮುದ್ರದ ಒಂದು ಹಳ್ಳವಾದ ಪ್ರದೇಶವನ್ನು ಆಶ್ರಯಿಸಿಕೊಂಡಿದ್ದ ಅಂಧಕನೆಂಬ ದೈತ್ಯನು ದೇವತೆಗಳನ್ನು ಜಯಿಸಿ ಮೂರು ಲೋಕವನ್ನೂ ತನ್ನ ವಶಮಾಡಿಕೊಂಡಿದ್ದನು. ಆ ದೈತ್ಯನು ಅತ್ಯಂತ ಪರಾಕ್ರಮಿಯಾಗಿ ಆ ಸಮುದ್ರದ ಹಳ್ಳದಿಂದ ಹೊರಗಡೆಗೆ ಬಂದು ಪ್ರಜೆಗಳನ್ನು ಪೀಡಿಸಿ ಮತ್ತೆ ಆ ಹಳ್ಳದೊಳಕ್ಕೆ ಪ್ರವೇಶಿಸುತ್ತಿದ್ದನು. ಎಲೈ ಋಷಿಶ್ರೇಷ್ಠರೇ ! ದೇವತೆಗಳೆಲ್ಲರೂ ಪುನಃ ಪುನಃ ಶಿವನನ್ನು ಪ್ರಾರ್ಥಿಸಿ ತಮ್ಮ ದುಃಖವೆಲ್ಲವನ್ನು ಹೇಳಿಕೊಂಡರು.

೬. ಪರಮೇಶ್ವರನು ದೇವತೆಗಳ ಆ ಮಾತನ್ನು ಕೇಳಿ ದುಷ್ಟರನ್ನು ನಾಶ ಮಾಡಿ ಸಜ್ಜನರನ್ನು ರಕ್ಷಿಸಬೇಕೆಂದಿಚ್ಛೈಸಿ,

೭-೯. ಎಲೈ ದೇವತೆಗಳೇ, ನಿಮ್ಮನ್ನು ಜಯಿಸಿದ ಅಂಧಕನೆಂಬ ಆ ದೈತ್ಯ ನನ್ನು ಕೊಲ್ಲುವೆನು. ನೀವು ಸೈನ್ಯವನ್ನು ತೆಗೆದುಕೊಂಡು ಮುಂದೆ ಹೋಗಿ. ನಾನು

ತಸ್ಮಾದ್ಗರ್ತಾದಂಧಕೇ ಹಿ ದೇವರ್ಷಿದ್ರುಹಿ ಭೀಕರೇ ।
ನಿಸ್ಸೃತೇ ಚ ತದಾ ತಸ್ಮಿನ್ದೇವಾ ಗರ್ತಮುಪಾಶ್ರಿತಾಃ ॥ ೮ ॥

ದೈತ್ಯಾಶ್ಚ ದೇವತಾಶ್ಚೈವ ಯುದ್ಧಂ ಚಕ್ರುಃ ಸುದಾರುಣಂ ।
ಶಿವಾನುಗ್ರಹತೋ ದೇವಾಃ ಪ್ರಬಲಾಶ್ಚಾಭವಂಸ್ತದಾ ॥ ೯ ॥

ದೇವೈಶ್ಚ ಪೀಡಿತಃ ಸೋಽಪಿ ಯಾವದ್ಗರ್ತಮುಪಾಗತಃ ।
ತಾವಚ್ಛೂಲೇನ ಸಂಪ್ರೋತಃ ಶಿವೇನ ಪರಮಾತ್ಮನಾ ॥ ೧೦ ॥

ತತ್ರಸ್ಥಶ್ಚ ತದಾ ಶಂಭುಂ ಧ್ಯಾತ್ವಾ ಸಂಪ್ರಾರ್ಥಯತ್ತದಾ ।
ಅಂತಕಾಲೇ ಚ ತ್ವಾಂ ದೃಷ್ಟ್ವಾ ತಾದೃಶೋ ಭವತಿ ಕ್ಷಣಾತ್ ॥ ೧೧ ॥

ಇತ್ಯೇವಂ ಸಂಸ್ತುತಸ್ತೋಽಪಿ ಪ್ರಸನ್ನಃ ಶಂಕರಸ್ತದಾ ।
ಉವಾಚ ವಚನಂ ತತ್ರ ವರಂ ಬ್ರೂಹಿ ದದಾಮಿ ತೇ ॥ ೧೨ ॥

ಇತ್ಯೇವಂ ವಚನಂ ಶ್ರುತ್ವಾ ಸ ದೈತ್ಯಃ ಪುನರಬ್ರವೀತ್ ।
ಸುಪ್ರಣಮ್ಯ ಶಿವಂ ಸ್ತುತ್ವಾ ಸತ್ತ್ವಭಾವಮುಪಾಶ್ರಿತಃ ॥ ೧೩ ॥

---

ಗಣಗಳೊಡನೆ ಬರುವೆನು ಎಂದನು. ದೇವರ್ಷಿಗಳಿಗೆ ಕೆಡಕನು ಮಾಡುವ ಭಯಂಕರನಾದ ಅಂಧಕನು ಆ ಹಳ್ಳದಿಂದ ಹೊರಕ್ಕೆ ಬಂದಾಗ ಆ ಹಳ್ಳವನ್ನು ದೇವತೆಗಳು ಆಕ್ರಮಿಸಿದರು. ದೈತ್ಯರೂ ದೇವತೆಗಳೂ ಭಯಂಕರವಾಗಿ ಯುದ್ಧ ಮಾಡಿದರು. ಶಿವನ ಅನುಗ್ರಹದಿಂದ ದೇವತೆಗಳು ಪ್ರಬಲರಾದರು.

೧೦-೧೩. ದೇವತೆಗಳ ಬಾಧೆಯನ್ನು ತಡೆಯಲಾರದೆ ಅಂಧಕನು ತನ್ನ ವಾಸಸ್ಥಾನವಾದ ಹಳ್ಳಕ್ಕೆ ಬಂದನು. ಆ ಸಮಯಕ್ಕೆ ಸರಿಯಾಗಿ ಶಿವನು ಅವನನ್ನು ಶೂಲದಿಂದ ತಿವಿದನು. ಆಗ ಅಂಧಕನು ಶಿವನನ್ನು ಧ್ಯಾನಿಸಿ ಪ್ರಾರ್ಥಿಸಿದನು. ಮರಣಕಾಲದಲ್ಲಿ ನಿನ್ನನ್ನು ನೋಡಿದರೆ ಕ್ಷಣಮಾತ್ರದಲ್ಲಿ ನಿನ್ನಲ್ಲಿ ಭಕ್ತಿಯುಳ್ಳವನಾಗುತ್ತಾನೆ. ಹೀಗೆಂದು ಸ್ತೋತ್ರಮಾಡುತ್ತಲು ಶಿವನು ಪ್ರಸನ್ನನಾಗಿ ಎಲೈ ಅಂಧಕನೇ ನಾನು ಪ್ರಸನ್ನನಾಗಿರುವೆನು. ವರವನ್ನು ಕೇಳು. ಕೊಡುತ್ತೇನೆ ಎಂದನು. ಈ ಮಾತನ್ನು ಕೇಳಿ ಆ ದೈತ್ಯನು ಸಾತ್ವಿಕಭಾವವನ್ನು ಹೊಂದಿ ಶಿವನಿಗೆ ನಮಸ್ಕರಿಸಿ ಸ್ತೋತ್ರಮಾಡಿ ಪುನಃ ಮಾತನಾಡಿದನು.

॥ ಅಂಧಕ ಉವಾಚ ॥

ಯದಿ ಪ್ರಸನ್ನೋ ದೇವೇಶ ಸ್ವಭಕ್ತಿಂ ದೇಹಿ ಮೇ ಶುಭಾಂ ।
ಕೃಪಾಂ ಕೃತ್ವಾ ವಿಶೇಷೇಣ ಸಂಸ್ಥಿತೋ ಭವ ಚೇಹ ವೈ ॥ ೧೪ ॥

॥ ಸೂತ ಉವಾಚ ॥

ಇತ್ಯುಕ್ತಸ್ತೇನ ದೈತ್ಯಂ ತಂ ತದ್ಗರ್ತೇ ಚಾಕ್ಷಿಪದ್ಧರಃ ।
ಸ್ವಯಂ ತತ್ರ ಸ್ಥಿತೋ ಲಿಂಗರೂಪೋಽಸೌ ಲೋಕಕಾಮ್ಯಯಾ ॥ ೧೫ ॥

ಅಂಧಕೇಶಂ ಚ ತಲ್ಲಿಂಗಂ ನಿತ್ಯಂ ಯಃ ಪೂಜಯೇನ್ನರಃ ।
ಷಣ್ಮಾಸಾಜ್ಜಾಯತೇ ತಸ್ಯ ವಾಂಛಾಸಿದ್ಧಿರ್ನ ಸಂಶಯಃ ॥ ೧೬ ॥

ವೃತ್ತ್ಯರ್ಥಂ ಪೂಜಯೇಲ್ಲಿಂಗಂ ಲೋಕಸ್ಯ ಹಿತಕಾರಕಂ ।
ಷಣ್ಮಾಸಂ ಯೋ ದ್ವಿಜಶ್ಚೈವ ಸ ವೈ ದೇವಲಕಃ ಸ್ಮೃತಃ ॥ ೧೭ ॥

---

೧೪. ಅಂಧಕನು ಹೇಳಿದನು.—ದೇವತೆಗಳಿಗೆ ಸ್ವಾಮಿಯಾದ ಓ ಶಿವನೇ, ನೀನು ಪ್ರಸನ್ನನಾಗಿದ್ದರೆ ನನ್ನಲ್ಲಿ ದಯಮಾಡಿ ವಿಶೇಷ ರೂಪದಿಂದ ನೀನು ಇಲ್ಲಿಯೇ ನೆಲಸಿರಬೇಕು. ನಿನ್ನಲ್ಲಿ ನನಗೆ ಯಾವಾಗಲೂ ಭಕ್ತಿಯನ್ನು ಕೊಡು ಎಂದನು.

೧೫. ಹೀಗೆಂದು ದೈತ್ಯನು ಕೇಳಿಕೊಳ್ಳಲು ಶಿವನು ಅವನನ್ನು ಆ ಹಳ್ಳದಲ್ಲಿಯೇ ಹಾಕಿ ಲೋಕಾನುಗ್ರಹಾರ್ಥವಾಗಿ ತಾನೂ ಆ ಹಳ್ಳದಲ್ಲಿ ಲಿಂಗರೂಪದಿಂದ ನೆಲಸಿದನು. ಆ ಲಿಂಗವು ಅಂಧಕೇಶ್ವರನೆಂಬ ಹೆಸರಿನಿಂದ ಪ್ರಸಿದ್ಧಿಯಾಯಿತು.

೧೬. ಅಂಧಕೇಶ್ವರನೆಂಬ ಆ ಲಿಂಗವನ್ನು ಮನುಜನು ಪ್ರತಿದಿನವೂ ಪೂಜೆ ಮಾಡಿದರೆ ಆರು ತಿಂಗಳಲ್ಲಿ ಇಷ್ಟಾರ್ಥಸಿದ್ಧಿಯಾಗುವುದು. ಇದರಲ್ಲಿ ಸಂದೇಹವಿಲ್ಲ,

೧೭. ಲೋಕಕ್ಕೆ ಹಿತವನ್ನುಂಟುಮಾಡುವ ಆ ಲಿಂಗವನ್ನು ಜೀವನಾರ್ಥವಾಗಿ ಯಾವನು ಆರು ತಿಂಗಳವರೆಗೆ ಪೂಜೆಯನ್ನು ಮಾಡುವನೋ ಅವನನ್ನು ದೇವಲಕನೆಂದು ಹೇಳುವರು.

ಯಥಾ ದೇವಲಕಶ್ಚೈವ ಸ ಭವೇದಿಹ ವೈ ತದಾ ।
ದೇವಲಕಶ್ಚ ಯಃ ಪ್ರೋಕ್ತೋ ನಾಧಿಕಾರೋ ದ್ವಿಜಸ್ಯ ಹಿ ॥ ೧೮ ॥

॥ ಋಷಯ ಊಚುಃ ॥

ದೇವಲಕಶ್ಚ ಕಃ ಪ್ರೋಕ್ತಃ ಕಿಂ ಕಾರ್ಯಂ ತಸ್ಯ ವಿದ್ಯತೇ ।
ತತ್ತ್ವಂ ವದ ಮಹಾಪ್ರಾಜ್ಞ ಲೋಕಾನಾಂ ಹಿತಹೇತವೇ ॥ ೧೯ ॥

॥ ಸೂತ ಉವಾಚ ॥

ದಧೀಚಿರ್ನಾಮ ವಿಪ್ರೋ ಯೋ ಧರ್ಮಿಷ್ಠೋ ವೇದಪಾರಗಃ ।
ಶಿವಭಕ್ತಿರತೋ ನಿತ್ಯಂ ಶಿವಶಾಸ್ತ್ರಪರಾಯಣಃ ॥ ೨೦ ॥

ತಸ್ಯ ಪುತ್ರಸ್ತಥಾ ಹ್ಯಾಸೀತ್ಸ್ಮೃತೋ ನಾಮ್ನಾ ಸುದರ್ಶನಃ ।
ತಸ್ಯ ಭಾರ್ಯಾ ದುಕೂಲಾ ಚ ನಾಮ್ನಾ ದುಷ್ಟಕುಲೋದ್ಭವಾ ॥ ೨೧ ॥

ತದ್ವಶೇ ಸ ಚ ಭರ್ತಾಸೀತ್ತಸ್ಯ ಪುತ್ರಚತುಷ್ಟಯಂ ।
ಸೋಽಪಿ ನಿತ್ಯಂ ಶಿವಸ್ಯೈವ ಪೂಜಾಂ ಚ ಸ್ಮ ಕರೋತ್ಯಸೌ ॥ ೨೨ ॥

---

೧೮. ಲೋಕದಲ್ಲಿ ದೇವರ ಪೂಜೆಯನ್ನು ಮಾಡಿ ಜೀವನವನ್ನು ನಡೆಸುವರು ಹೇಗೋ ಹಾಗೆಯೇ ಇವನೂ ಆಗುವನು. ದೇವಲಕನೆಂಬ ಹೆಸರು ಹೊಂದಿದವರಿಗೆ ದ್ವಿಜರಿಗಿರುವ ಕರ್ಮಾಧಿಕಾರವಿರುವುದಿಲ್ಲ. (ಎಂದರೆ ದೇವತಾಪೂಜೆ ಒಂದರಿಂದಲೇ ಸಕಲಕರ್ಮಗಳನ್ನೂ ಮಾಡಿದಂತಾಗುವುದೆಂದು ಅಭಿಪ್ರಾಯವು).

೧೯. ಋಷಿಗಳು ಕೇಳಿದರು.—ದೇವಲಕನೆಂಬುವನು ಯಾರು? ಅವನು ಮಾಡಬೇಕಾದ ಕೆಲಸವೇನು? ಮಹಾಬುದ್ಧಿಶಾಲಿಯಾದ ಸೂತನೇ, ಲೋಕಹಿತಕ್ಕಾಗಿ ನೀನೇ ಇದರ ತತ್ತ್ವವನ್ನು ಹೇಳಬೇಕು ಎಂದರು.

೨೦-೨೨. ಸೂತನು ಹೇಳಿದನು.—ಇದಕ್ಕೊಂದು ಕಥೆಯನ್ನು ಹೇಳುವೆನು ಕೇಳಿರಿ. ಹಿಂದೆ ಧರ್ಮಾತ್ಮನೂ ವೇದವನ್ನು ಸಂಪೂರ್ಣವಾಗಿ ತಿಳಿದವನೂ ಆದ ದಧೀಚನೆಂಬ ಬ್ರಾಹ್ಮಣನು ಯಾವಾಗಲೂ ಶಿವಾಗಮಶಾಸ್ತ್ರಾಸಕ್ತನಾಗಿ ಶಿವಭಕ್ತಿಯಿಂದ ಕೂಡಿದ್ದನು. ಅವನಿಗೆ ಸುದರ್ಶನನೆಂಬ ಮಗನಿದ್ದನು. ಆ ಸುದರ್ಶನನಿಗೆ ದುಷ್ಟಕುಲದಲ್ಲಿ ಹುಟ್ಟಿದ ದುಕೂಲಾ ಎಂಬ ಹೆಸರಿನ ಹೆಂಡತಿಯಿದ್ದಳು. ಗಂಡನು ಹೆಂಡತಿಯ ಅಧೀನನಾಗಿದ್ದನು. ಅವನಿಗೆ ನಾಲ್ವರುಮಕ್ಕಳಿದ್ದರು. ಅವನು ಪ್ರತಿದಿನವೂ ಶಿವಪೂಜೆಯನ್ನು ಮಾಡುತ್ತಿದ್ದನು.

ದಧೀಚೇಸ್ತು ತದಾ ಹ್ಯಾಸೀದ್ಗ್ರಾಮಾಂತರನಿವೇಶನಂ ।
ಜ್ಞಾತಿಸಂಯೋಗತಶ್ಚೈವ ಜ್ಞಾತಿಭಿರ್ನ ಸ ನೋಚಿತಃ ॥ ೨೩ ॥

ಕಥಯಿತ್ವಾ ಚ ಪುತ್ರಂ ಸ ಶಿವಭಕ್ತಿರತೋ ಭವ ।
ಇತ್ಯುಕ್ತ್ವಾ ಸ ಗತೋ ಮುಕ್ತ್ವೋ ದಧೀಚಿಶ್ಚೈವಸತ್ತಮಃ ॥ ೨೪ ॥

ಸುದರ್ಶನಶ್ಚ ಪುತ್ರೋಽಪಿ ಶಿವಪೂಜಾಂ ಚಕಾರ ಹ ।
ಏವಂ ಚಿರತರಃ ಕಾಲೋ ವ್ಯತೀಯಾಯ ಮುನೀಶ್ವರಾಃ ॥ ೨೫ ॥

ಏವಂ ಚ ಶಿವರಾತ್ರಿಶ್ಚ ಸಮಾಯಾತಾ ಕದಾಚನ ।
ತಸ್ಯಾಂ ಚೋಪೋಷಿತಾಸ್ಸರ್ವೇ ಸ್ವಯಂ ಸಂಯೋಗತಸ್ತದಾ ॥ ೨೬ ॥

ಪೂಜಾಂ ಕೃತ್ವಾ ಗತಸ್ಸೋಽಪಿ ಸುದರ್ಶನ ಇತಿ ಸ್ಮೃತಃ ।
ಸ್ತ್ರೀಸಂಗಂ ಶಿವರಾತ್ರೌ ತು ಕೃತ್ವಾ ಪುನರಿಹಾಗತಃ ॥ ೨೭ ॥

ನ ಸ್ನಾನಂ ತೇನ ಚ ಕೃತಂ ತದ್ರಾತ್ರ್ಯಾಂ ಶಿವಪೂಜನಂ ।
ತೇನ ತತ್ಕರ್ಮಪಾಕೇನ ಕ್ರುದ್ಧಃ ಪ್ರೋವಾಚ ಶಂಕರಃ ॥ ೨೮ ॥

---

೨೩-೨೫. ದಧೀಚನಿಗೆ ಜ್ಞಾತಿಗಳ ಸಂಬಂಧದಿಂದ ಗ್ರಾಮಾಂತರ ವಾಸವು ಪ್ರಾಪ್ತವಾಯಿತು. ಜ್ಞಾತಿಗಳು ಅವನನ್ನು ತನ್ನೂರಿಗೆ ಬರಲು ಬಿಡಲಿಲ್ಲ. ಶಿವ ಭಕ್ತನಾದ ದಧೀಚನು ತನ್ನ ಮಗನಿಗೆ ಶಿವಭಕ್ತಿಯಿಂದ ಕೂಡಿ ಶಿವನನ್ನು ಪೂಜಿಸು ಎಂದು ಹೇಳಿ ಮನೆಯಲ್ಲಿ ಮಗನನ್ನು ಬಿಟ್ಟು ತಾನು ಗ್ರಾಮಾಂತರಕ್ಕೆ ಹೋದನು. ಸುದರ್ಶನನು ಶಿವಪೂಜೆಯನ್ನು ಮಾಡಿಕೊಂಡಿದ್ದನು. ಎಲೈ, ಮುನಿಗಳೇ ಕೇಳಿರಿ ಹೀಗೆಯೇ ಬಹಳ ದಿನಗಳು ಕಳೆದುವು.

೨೬-೨೮. ಹೀಗಿರುತ್ತಿರಲು ಒಂದಾನೊಂದು ಶಿವರಾತ್ರಿಯ ದಿನವು ಬಂದಿತು. ಆ ದಿನ ಎಲ್ಲರೂ ಉಪವಾಸ ಮಾಡುತ್ತಿದ್ದರು. ಸುದರ್ಶನನು ಶಿವಪೂಜೆಯನ್ನು ಮಾಡಿ ಮನೆಗೆ ಹೋದನು. ಆ ಶಿವರಾತ್ರಿಯ ದಿನ ಸ್ತ್ರೀಸಂಗವನ್ನು ಮಾಡಿ ಸ್ನಾನವನ್ನು ಮಾಡದೆ ಮತ್ತೆ ಬಂದು ಶಿವಪೂಜೆಯನ್ನು ಮಾಡಿದನು. ಅವನು ಮಾಡಿದ ಕರ್ಮಫಲದಿಂದ ಶಿವನು ಕೋಪಿಸಿಕೊಂಡು,

॥ ಮಹೇಶ್ವರ ಉವಾಚ ॥

ಶಿವರಾತ್ರ್ಯಾಂ ತ್ವಯಾ ದುಷ್ಟ ಸೇವನಂ ಚ ಸ್ತ್ರಿಯಾಃ ಕೃತಂ ।
ಅಸ್ನಾತೇನ ಮದೀಯಾ ಚ ಕೃತಾ ಪೂಜಾವಿವೇಕಿನಾ ॥ ೨೯ ॥

ಜ್ಞಾತ್ವಾ ಚೈವಂ ಕೃತಂ ಯಸ್ಮಾತ್ತಸ್ಮಾತ್ತ್ವಂ ಜಡತಾಂ ವ್ರಜ ।
ಮಮಾಸ್ಪೃಶ್ಯೋ ಭವ ತ್ವಂ ಚ ದೂರತಃ ಸ್ಪರ್ಶನಂ ಕುರು ॥ ೩೦ ॥

॥ ಸೂತ ಉವಾಚ ॥

ಇತಿ ಶಪ್ತೋ ಮಹೇಶೇನ ದಾಧೀಚಿಸ್ಸ ಸುದರ್ಶನಃ ।
ಜಡತ್ವಂ ಪ್ರಾಪ್ತವಾನ್ಸದ್ಯಶ್ಶಿವಮಾಯಾವಿಮೋಹಿತಃ ॥ ೩೧ ॥

ಏತಸ್ಮಿನ್ಸಮಯೇ ವಿಪ್ರಾ ದಧೀಚಿಃ ಶೈವಸತ್ತಮಃ ।
ಗ್ರಾಮಾಂತರಾತ್ಸಮಾಯಾತೋ ವೃತ್ತಾಂತಂ ಶ್ರುತವಾಂಶ್ಚ ಸಃ ॥ ೩೨ ॥

ಶಿವೇನ ಭರ್ತ್ಸಿತಃ ಸೋಽಪಿ ದುಃಖಿತೋಽಭೂದತೀವ ಹಿ ।
ರುರೋದ ಹಾ ಹತೋಽಸ್ಮೀತಿ ದುಃಖೇನ ಸುತಕರ್ಮಣಾ ॥ ೩೩ ॥

---

೨೯-೩೦. ಎಲೈ, ದುಷ್ಟನೇ, ಶಿವರಾತ್ರಿಯಲ್ಲಿ ನೀನು ಸ್ತ್ರೀಸಂಗವನ್ನು ಮಾಡಿದೆ. ಅವಿವೇಕಿಯಾದ ನೀನು ಸ್ನಾನಮಾಡದೆ ನನ್ನ ಪೂಜೆಯನ್ನು ಮಾಡಿದೆ. ತಿಳುವಳಿಕೆಯನ್ನು ಹೊಂದಿಯೂ ಹೀಗೆ ಮಾಡಿದುದರಿಂದ ನೀನು ಜಡನಾಗು. ನನ್ನನ್ನು ಸ್ಪರ್ಶಮಾಡುವ ಯೋಗ್ಯತೆಯು ನಿನಗೆ ಬೇಡ. ದೂರದಲ್ಲಿದ್ದು ನನ್ನ ಸ್ಪರ್ಶವನ್ನು ಮಾಡಬೇಕು ಎಂದನು.

೩೧. ದಧೀಚನ ಮಗನಾದ ಸುದರ್ಶನನಿಗೆ ಶಿವನು ಹೀಗೆ ಶಾಪವನ್ನು ಕೊಡುತ್ತಲು ಶಿವಮಾಯೆಯಿಂದ ಮೋಹಿತನಾದ ಅವನು ಆ ಕ್ಷಣದಲ್ಲಿಯೇ ಜಡನಾಗಿ ಅಜ್ಞಾನಿಯಾದನು.

೩೨-೩೪. ಎಲೈ, ಋಷಿಗಳೇ ಕೇಳಿರಿ. ಈ ಸಮಯದಲ್ಲಿ ಶಿವಭಕ್ತನಾದ ದಧೀಚನು ಹಳ್ಳಿಯಿಂದ ಬಂದು ಈ ವರ್ತಮಾನವನ್ನು ತಿಳಿದನು. ಶಿವನ ಭಯ

ಪುನಃ ಪುನರುವಾಚೇತಿ ಸ ದಧೀಚಿಸ್ಸತಾಂ ಮತಃ ।
ಅನೇನೇದಂ ಕುಪುತ್ರೇಣ ಹತಂ ಮೇ ಕುಲಮುತ್ತಮಂ ॥ ೩೪ ॥

ಸ ಪುತ್ರೋऽಪಿ ಹತೋ ಭಾರ್ಯಾಂ ಪುಂಶ್ಚಲೀಂ ಕೃತವಾನ್ದ್ರುತಂ ।
ಪಶ್ಚಾತ್ತಾಪಮನುಪ್ರಾಪ್ಯ ಸ್ವಪಿತ್ರಾ ಪರಿಭರ್ತ್ಸಿತಃ ॥ ೩೫ ॥

ತತ್ಪಿತ್ರಾ ಗಿರಿಜಾ ತತ್ರ ಪೂಜಿತಾ ವಿಧಿಭಿರ್ವರೈಃ ।
ಸುಯತ್ನತೋ ಮಹಾಭಕ್ತ್ಯಾ ಸ್ವಪುತ್ರಸುಖಹೇತವೇ ॥ ೩೬ ॥

ಸುದರ್ಶನೋऽಪಿ ಗಿರಿಜಾಂ ಪೂಜಯಾಮಾಸ ಚ ಸ್ವಯಂ ।
ಚಂಡೀಪೂಜನಮಾರ್ಗೇಣ ಮಹಾಭಕ್ತ್ಯಾ ಶುಭೈಃ ಸ್ತವೈಃ ॥ ೩೭ ॥

ಏವಂ ತೌ ಪಿತೃಪುತ್ರೌ ಹಿ ನಾನೋಪಾಯೈಃ ಸುಭಕ್ತಿತಃ ।
ಪ್ರಸನ್ನಾಂ ಚಕ್ರತುರ್ದೇವೀಂ ಗಿರಿಜಾಂ ಭಕ್ತವತ್ಸಲಾಂ ॥ ೩೮ ॥

---

ದಿಂದ ಅವನು ಅತ್ಯಂತ ದುಃಖಿತನಾಗಿ ಮಗನು ಮಾಡಿದ ಕೆಲಸದಿಂದ ನಾನು ಕೆಟ್ಟೆನು ಎಂದು ಅಳುತ್ತಿದ್ದನು. ಮತ್ತೆ ಮತ್ತೆ ಸಜ್ಜನನಾದ ಆ ದಧೀಚನು ಈ ಕೆಟ್ಟ ಮಗನಿಂದ ನನ್ನ ಉತ್ತಮವಾದ ವಂಶವು ನಾಶವಾಯಿತು ಎಂದು ದುಃಖಿಸಿದನು.

೩೫. ಆ ಕೆಟ್ಟ ಮಗನು ತಾನು ಕೆಟ್ಟದ್ದಲ್ಲದೆ ಅವನ ಹೆಂಡತಿಯೂ ಜಾರಿಣಿಯಾದಳು. ತನ್ನ ತಂದೆಯ ಆಕ್ಷೇಪಣೆಯನ್ನು ಕೇಳಿ ತನ್ನ ದುಷ್ಟತನಕ್ಕಾಗಿ ಪಶ್ಚಾತ್ತಾಪಪಟ್ಟನು.

೩೬. ಬಳಿಕ ಅವನ ತಂದೆಯು ತನ್ನ ಪುತ್ರನ ಸುಖಕ್ಕಾಗಿ ಶ್ರೇಷ್ಠವಾದ ವಿಧಿಯನ್ನು ಅನುಸರಿಸಿ ಪಾರ್ವತಿಯನ್ನು ಮಹಾಪ್ರಯತ್ನದಿಂದಲೂ ಮಹಾಭಕ್ತಿಯಿಂದಲೂ ಪೂಜಿಸಿದನು.

೩೭. ಸುದರ್ಶನನೂ ಸಹ ಚಂಡೀಪೂಜಾವಿಧಾನದಿಂದ ಅತ್ಯಂತ ಭಕ್ತಿಯಿಂದ ಶುಭಕರವಾದ ಸ್ತೋತ್ರಗಳನ್ನು ಮಾಡುತ್ತಾ ಪಾರ್ವತಿಯ ಪೂಜೆಯನ್ನು ಮಾಡಿದನು.

೩೮. ಈ ರೀತಿಯಲ್ಲಿ ತಂದೆ, ಮಕ್ಕಳಿಬ್ಬರೂ ಬಗೆಬಗೆಯ ಉಪಾಯಗಳಿಂದಲೂ, ಭಕ್ತಿಯಿಂದಲೂ ಭಕ್ತರಲ್ಲಿ ಪ್ರೀತಿಯುಳ್ಳ ಪಾರ್ವತಿಯನ್ನು ಪ್ರಸನ್ನಳನ್ನಾಗಿ ಮಾಡಿಕೊಂಡರು.

ತಯೋಃ ಸೇವಾಪ್ರಭಾವೇಣ ಪ್ರಸನ್ನಾ ಚಂಡಿಕಾ ತದಾ ।
ಸುದರ್ಶನಂ ಚ ಪುತ್ರತ್ವೇ ಚಕಾರ ಗಿರಿಜಾ ಮುನೇ ॥ ೩೯ ॥

ಶಿವಂ ಪ್ರಸಾದಯಾಮಾಸ ಪುತ್ರಾರ್ಥೇ ಚಂಡಿಕಾ ಸ್ವಯಂ ।
ಕ್ರುದ್ಧಾಽಕ್ರುದ್ಧಾ ಪುನಶ್ಚಂಡೀ ತತ್ಪುತ್ರಸ್ಯ ಪ್ರಸನ್ನಧೀಃ ॥ ೪೦ ॥

ಅಥಾಜ್ಞಾಯ ಪ್ರಸನ್ನಂ ತಂ ಮಹೇಶಂ ವೃಷಭಧ್ವಜಂ ।
ನಮಸ್ಕೃತ್ಯ ಸ್ವಯಂ ತಸ್ಯ ಹ್ಯುತ್ಸಂಗೇ ತಂ ನ್ಯವೇಶಯತ್ ॥ ೪೧ ॥

ಘೃತಸ್ನಾನಂ ತತಃ ಕೃತ್ವಾ ಪುತ್ರಸ್ಯ ಗಿರಿಜಾ ಸ್ವಯಂ ।
ತ್ರಿರಾವೃತ್ತೋಪವೀತಂ ಚ ಗ್ರಂಥಿನೈಕೇನ ಸಂಯುತಂ ॥ ೪೨ ॥

ಸುದರ್ಶನಾಯ ಪುತ್ರಾಯ ದದೌ ಪ್ರೀತ್ಯಾ ತದಾಂಬಿಕಾ ।
ಉದ್ದಿಶ್ಯ ಶಿವಗಾಯತ್ರೀಂ ಷೋಡಶಾಕ್ಷರಸಂಯುತಾಂ ॥ ೪೩ ॥

---

೩೯-೪೧. ಅವರ ಸೇವೆಯ ಮಹಿಮೆಯಿಂದ ಚಂಡಿಯು ಪ್ರಸನ್ನಳಾಗಿ ಸುದರ್ಶನನನ್ನು ತನ್ನ ಮಗನನ್ನಾಗಿ ಗ್ರಹಿಸಿದಳು. ಎಂದರೆ ಅವನಲ್ಲಿ ಪುತ್ರ ವಾತ್ಸಲ್ಯವನ್ನಿಟ್ಟಳು. ಆ ಚಂಡಿಯು ತನ್ನ ಪುತ್ರನಿಗಾಗಿ ಶಿವನನ್ನು ಪ್ರಸನ್ನನನ್ನಾಗಿ ಮಾಡಿಕೊಂಡಳು. ಚಂಡಿಯು ಕೋಪಸ್ವಭಾವದವಳಾದರೂ ತನ್ನ ಆ ಮಗನ ವಿಷಯದಲ್ಲಿ ಪ್ರಸನ್ನಳಾಗಿ ಕೋಪವಿಲ್ಲದವಳಾಗಿದ್ದಳು. ವೃಷಭಧ್ವಜನಾದ ಮಹೇಶ್ವರನು ಪ್ರಸನ್ನನಾಗಿರುವನೆಂಬುದನ್ನು ತಿಳಿದು ನಮಸ್ಕಾರ ಮಾಡಿ ತಾನೇ ಆ-ಶಿವನ ತೊಡೆಯಮೇಲೆ ಆ ಪುತ್ರ (ಸುದರ್ಶ) ನನ್ನು ಕೂಡಿಸಿದಳು.

೪೨-೪೩. ಪಾರ್ವತಿಯು ಆ ಮಗನಿಗೆ ತುಪ್ಪದಲ್ಲಿ ಸ್ನಾನಮಾಡಿಸಿ ಮೂರು ಎಳೆಯಿಂದಲೂ ಒಂದು ಗಂಟಿನಿಂದಲೂ ಕೂಡಿದ ಯಜ್ಞೋಪವೀತವನ್ನು ಆ ಸುದರ್ಶನನಿಗೆ ಪ್ರೀತಿಯಿಂದ ಕೊಟ್ಟಳು ಮತ್ತು ಹದಿನಾರು ಅಕ್ಷರಗಳಿಂದ ಕೂಡಿದ ಶಿವಗಾಯಿತ್ರಿಯನ್ನು ಉಪದೇಶಮಾಡಿದಳು. ಈ ವಟುವು ಶ್ರೀ, ಶಬ್ದದೊಡನೆ

ತದೋಂನಮಃ ಶಿವಾಯೇತಿ ಶ್ರೀಶಬ್ದಪೂರ್ವಕಾಯ ಚ ।
ವಾರಾನ್ಷೋಡಶ ಸಂಕಲ್ಪಪೂಜಾಂ ಕುರ್ಯಾದಯಂ ವಟುಃ ॥ ೪೪ ॥

ಆಸ್ನಾನಾದಿಪ್ರಣಾಮಾಂತಂ ಪೂಜಯನ್ವೃಷಭಧ್ವಜಂ ।
ಮಂತ್ರವಾದಿತ್ರಪೂಜಾಭಿಸ್ಸರ್ಷೀಣಾಂ ಸನ್ನಿಧೌ ತಥಾ ॥ ೪೫ ॥

ನಾಮಮಂತ್ರಾನನೇಕಾಂಶ್ಚ ಪಾಠಯಾಮಾಸ ವೈ ತದಾ ।
ಉವಾಚ ಸುಪ್ರಸನ್ನಾತ್ಮಾ ಚಂಡಿಕಾ ಚ ಶಿವಸ್ತಥಾ ॥ ೪೬ ॥

ಮದರ್ಪಿತಂ ಚ ಯತ್ಕಿಂಚಿದ್ಧನಧಾನ್ಯಾದಿಕಂ ತಥಾ ।
ತತ್ಸರ್ವಂ ಚ ತ್ವಯಾ ಗ್ರಾಹ್ಯಂ ನ ದೋಷಾಯ ಭವಿಷ್ಯತಿ ॥ ೪೭ ॥

ಮಮ ಕೃತ್ಯೇ ಭವಾನ್ಮುಖ್ಯೋ ದೇವೀಕೃತ್ಯೇ ವಿಶೇಷತಃ ।
ಘೃತತೈಲಾದಿಕಂ ಸರ್ವಂ ತ್ವಯಾ ಗ್ರಾಹ್ಯಂ ಮದರ್ಪಿತಂ ॥ ೪೮ ॥

---

ಕೂಡಿದ ಓಂ ನಮಶ್ಶಿವಾಯ ಎಂಬ ಮಂತ್ರದಿಂದ ಸಂಕಲ್ಪಪೂರ್ವಕವಾಗಿ ಷೋಡಶೋಪಚಾರ ಪೂಜೆಯನ್ನು ಮಾಡಲಿ.

೪೫–೪೯. ಸ್ನಾನವೇ ಮೊದಲಾಗಿ ನಮಸ್ಕಾರದವರೆಗೆ ಋಷಿಗಳ ಸಮೀಪದಲ್ಲಿರುವ ವೃಷಭಧ್ವಜನಾದ ಶಿವನಿಗೆ ಮಂತ್ರಗಳಿಂದಲೂ, ವಾದ್ಯಗಳ ಧ್ವನಿಯಿಂದಲೂ ಪೂಜಿಸಲಿ. ।ಎಂದು ಅನೇಕ ನಾಮಮಂತ್ರಗಳನ್ನು ದೇವಿಯು ಹೇಳಿಕೊಟ್ಟಳು. ಶಿವನೂ, ಚಂಡಿಯೂ ಪ್ರಸನ್ನರಾಗಿ ಅವನನ್ನು ಕುರಿತು—ನನಗೆ ಪೂಜಾರ್ಥವಾಗಿ ಸಮರ್ಪಿಸಿದ ಧನ, ಧಾನ್ಯಾದಿಗಳೆಷ್ಟಿದ್ದರೂ ಅವೆಲ್ಲವನ್ನೂ ನೀನು ತೆಗೆದುಕೊಳ್ಳಬಹುದು. ಅದು ದೋಷವಾದುದಲ್ಲ. ನೀನು ನನ್ನ ಪೂಜಾಕಾರ್ಯದಲ್ಲಿಯೂ, ದೇವಿಯ ಪೂಜಾಕಾರ್ಯದಲ್ಲಿಯೂ ಅತಿಮುಖ್ಯನಾಗಿರುವೆ. ನನಗೆ ಸಮರ್ಪಣೆಮಾಡಿದ ಎಣ್ಣೆ, ತುಪ್ಪ ಮೊದಲಾದುವನ್ನೆಲ್ಲಾ ನೀನು ತೆಗೆದುಕೊಳ್ಳಬಹುದು. ಹಾಗೆ ನೀನು ತೆಗೆದುಕೊಂಡರೆ ಕೊಟ್ಟವರಿಗೆ ಅದು ಪ್ರಜಾಪತ್ಯವೆಂಬ ಕೃಚ್ಛ್ರವನ್ನು ಮಾಡಿದ ಫಲವನ್ನು ಕೊಡುವುದು. ಅದಕ್ಕೆ ನೀನೊಬ್ಬನೇ

ಪ್ರಾಜಾಪತ್ಯಂ ಭವೇದ್ಯರ್ಹಿ ತರ್ಹ್ಯೇಕೋ ಹಿ ಭವಾನ್ಭವೇತ್ ।
ತದಾ ಪೂಜಾ ಚ ಸಂಪೂರ್ಣಾನ್ಯಥಾ ಸರ್ವಾ ಚ ನಿಷ್ಫಲಾ ॥ ೪೯ ॥

ತಿಲಕಂ ವರ್ತುಲಂ ಕಾರ್ಯಂ ಸ್ನಾನಂ ಕಾರ್ಯಂ ಸದಾ ತ್ವಯಾ ।
ಶಿವಸಂಧ್ಯಾ ಚ ಕರ್ತವ್ಯಾ ಗಾಯತ್ರೀ ಚ ತದೀಯಕಾ ॥ ೫೦ ॥

ಮತ್ಸೇವಾಂ ಪ್ರಥಮಂ ಕೃತ್ವಾ ಕಾರ್ಯಮನ್ಯತ್ಕುಲೋಚಿತಂ ।
ಏವಂ ಕೃತೇಽಖಿಲೇ ಭದ್ರಂ ದೋಷಾಃ ಕ್ಷಾಂತಾ ಮಯಾ ತವ ॥ ೫೧ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ತಸ್ಯ ಪುತ್ರಾಶ್ಚ ಚತ್ವಾರೋ ವಟುಕಾಸ್ತದಾ ।
ಅಭಿಷಿಕ್ತಾಶ್ಚತುರ್ದಿಕ್ಷು ಶಿವೇನ ಪರಮಾತ್ಮನಾ ॥ ೫೨ ॥

ಚಂಡೀ ಚೈವಾತ್ಮನಿಕಟೇ ಪುತ್ರಂ ಸ್ಥಾಪ್ಯ ಸುದರ್ಶನಂ ।
ತತ್ಪುತ್ರಾನ್ಪ್ರೇರಯಾಮಾಸ ವರಾನ್ದತ್ವಾ ಹ್ಯನೇಕಶಃ ॥ ೫೩ ॥

---

ಅರ್ಹನು. ಆ ಪದಾರ್ಥಗಳು ನಿನಗೆ ಸೇರಿದರೆ ನನ್ನ ಪೂಜೆಯು ಸಂಪೂರ್ಣವಾದಂ ತಾಗುವುದು. ಇಲ್ಲದಿದ್ದರೆ ಪೂಜೆಯು ನಿಷ್ಫಲವಾಗುವುದು.

೫೦-೫೧. ವಟುವಾದ ನೀನು ಹಣೆಯಲ್ಲಿ ಗುಂಡಾದ ತಿಲಕವನ್ನಿಡಬೇಕು. ತ್ರಿಕಾಲದಲ್ಲಿಯೂ ಸ್ನಾನಮಾಡಬೇಕು. ಆಗಲೇ ಶಿವಸಂಧ್ಯೆಯನ್ನೂ ಶಿವಗಾಯಿತ್ರಿಯನ್ನೂ ಮಾಡಬೇಕು. ಮೊದಲು ನನ್ನ ಪೂಜಾರೂಪವಾದ ಸೇವೆಯನ್ನು ಮಾಡಿ ಆಮೇಲೆ ನಿನ್ನ ಕುಲೋಚಿತವಾದ ಕರ್ಮಗಳನ್ನು ಮಾಡಬೇಕು. ಹೀಗೆ ಮಾಡಿದರೆ ಎಲ್ಲವೂ ಮಂಗಳಕರವಾಗುವುದು. ನಾನು ನಿನ್ನ ದೋಷಗಳನ್ನೆಲ್ಲಾ ಕ್ಷಮಿಸಿರುವೆನು. ಎಂದು ಹೇಳಿ ಅವನನ್ನು ಅನುಗ್ರಹಿಸಿದನು.

೫೨-೫೩. ಸೂತನು ಹೇಳಿದನು.—ಹೀಗೆಂದು ಹೇಳಿ ಪರಮಾತ್ಮನಾದ ಶಿವನು ಅವನ ನಾಲ್ವರು ಮಕ್ಕಳನ್ನೂ ನಾಲ್ಕು ದಿಕ್ಕಿನಲ್ಲಿ ವಟುಕರೆಂಬ ಹೆಸರಿನಿಂದ ಪಟ್ಟಾಭಿಷೇಕವನ್ನು ಮಾಡಿದನು. ಚಂಡಿಯು ತನ್ನ ಸಮೀಪದಲ್ಲಿಯೇ ಸುದರ್ಶನನೆಂಬ ಪುತ್ರನನ್ನು ಇಟ್ಟುಕೊಂಡಳು. ಅವನ ಮಕ್ಕಳಿಗೆ ಅನೇಕ ವರಗಳನ್ನು ಕೊಟ್ಟು ಕಳುಹಿಸಿದಳು.

॥ ದೇವ್ಯುವಾಚ ॥

ಉಭಯೋರ್ಯುವಯೋರ್ಮಧ್ಯೇ ವಟುಕೋ ಯೋ ಭವೇನ್ಮಮ ।
ತಸ್ಯ ಸ್ಯಾದ್ವಿಜಯೋ ನಿತ್ಯಂ ನಾತ್ರ ಕಾರ್ಯಾ ವಿಚಾರಣಾ ॥ ೫೪ ॥

ಭವಾಂಶ್ಚ ಪೂಜಿತೋ ಯೇನ ತೇನೈವಾಹಂ ಪ್ರಪೂಜಿತಾ ।
ಕರ್ತವ್ಯಂ ಹಿ ಭವದ್ಭಿಶ್ಚ ಸ್ವೀಯಂ ಕರ್ಮ ಸದಾ ಸುತ ॥ ೫೫ ॥

॥ ಸೂತ ಉವಾಚ ॥

ಏವಂ ತಸ್ಮೈ ವರಾ ದತ್ತಾಸ್ಸಪುತ್ರಾಯ ಮಹಾತ್ಮನೇ ।
ಸುದರ್ಶನಾಯ ಕೃಪಯಾ ಶಿವಾಭ್ಯಾಂ ಜಗತಾಂ ಕೃತೇ ॥ ೫೬ ॥

ಶಿವಾಭ್ಯಾಂ ಸ್ಥಾಪಿತಾ ಯಸ್ಮಾತ್ತಸ್ಮಾತ್ತೇ ವಟುಕಾಃ ಸ್ಮೃತಾಃ ।
ತಪೋಭ್ರಷ್ಟಾಶ್ಚ ಯೇ ಜಾತಾಃ ಸ್ಮೃತಾಸ್ತಸ್ಮಾತ್ತಪೋಧಮಾಃ ॥ ೫೭ ॥

ಶಿವಯೋಃ ಕೃಪಯಾ ಸರ್ವೇ ವಿಸ್ತಾರಂ ಬಹುಧಾ ಗತಾಃ ।
ತೇಷಾಂ ಚ ಪ್ರಥಮಾ ಪೂಜಾ ಮಹಾಪೂಜಾ ಮಹಾತ್ಮನಃ ॥ ೫೮ ॥

---

೫೪-೫೫. ದೇವಿಯು ಹೇಳಿದಳು.—ನಿಮ್ಮಿಬ್ಬರಲ್ಲಿ ನನಗೆ ಪ್ರೀತಿಪಾತ್ರನಾದ ವಟುಕನಿಗೆ ವಿಜಯವುಂಟಾಗುವುದು ಈ ವಿಷಯದಲ್ಲಿ ಸಂದೇಹವಿಲ್ಲ. ಎಲೈ, ವಟುಕನೇ ನಿನ್ನನ್ನು ಪೂಜಿಸಿದರೆ ನನ್ನನ್ನು ಪೂಜಿಸಿದಂತಾಗುವುದು. ನೀವು ನಿಮ್ಮ ನಿಮ್ಮ ಕರ್ಮಗಳನ್ನು ಮಾಡಿಕೊಂಡಿರಿ.

೫೬-೫೮. ಈ ರೀತಿಯಲ್ಲಿ ಮಕ್ಕಳೊಡನೆ ಕೂಡಿದ ಸುದರ್ಶನನಿಗೆ ವರವನ್ನು ಕೊಟ್ಟು ಲೋಕಾನುಗ್ರಹಾರ್ಥವಾಗಿ ಶಿವದಂಪತಿಗಳು ಅವರನ್ನು ಸ್ಥಾಪಿಸಿದುದರಿಂದ ಅವರಿಗೆ ವಟುಕರೆಂದು ಹೆಸರಾಯಿತು. ಅವರು ತಪಸ್ಸಿನ ವಿಷಯದಲ್ಲಿ ಭ್ರಷ್ಟರಾದುದರಿಂದ ಅಂದರೆ ಅವರ ತಪಸ್ಸು ಪೂರ್ಣವಾಗದಿದ್ದುದರಿಂದ ತಪೋಧಮರೆಂದು ಅವರಿಗೆ ಹೆಸರು ಬಂದಿರುವುದು. ಶಿವನ ಕೃಪೆಯಿಂದಲೇ ಲೋಕದಲ್ಲಿ ವಿಶೇಷ ಪ್ರಸಿದ್ಧಿಗೆ ಬಂದಿರುವರು. ಅವರಿಗೆ ಮೊದಲು ಪೂಜೆಮಾಡಿದರೆ ಬಳಿಕಮಾಡಿದ ಶಿವಪೂಜೆಯು ಮಹಾಪೂಜೆಯೆನಿಸುವುದು.

ತೇನ ಯಾವತ್ಕೃತಾ ನೈವ ಪೂಜಾ ವೈ ಶಂಕರಸ್ಯ ಚ ।
ತಾವತ್ಪೂಜಾ ನ ಕರ್ತವ್ಯಾ ಕೃತಾ ಚೇನ್ನ ಶುಭಾಪಿ ಸಾ ॥ ೫೯ ॥

ಶುಭಂ ವಾಪ್ಯಶುಭಂ ವಾಪಿ ವಟುಕಂ ನ ಪರಿತ್ಯಜೇತ್ ।
ಪ್ರಾಜಾಪತ್ಯೇ ಚ ಭೋಜ್ಯೇ ವೈ ವಟುರೇಕೋ ವಿಶಿಷ್ಯತೇ ॥ ೬೦ ॥

ಶಿವಯೋಶ್ಚ ತಥಾ ಕಾರ್ಯೇ ವಿಶೇಷೋಽತ್ರ ಪ್ರದೃಶ್ಯತೇ ।
ತದೇವ ಶೃಣು ಸುಪ್ರಾಜ್ಞ ಯಥಾಹಂ ವಚ್ಮಿ ತೇಽನಘ ॥ ೬೧ ॥

ತಸ್ಯೈವ ನಗರೇ ರಾಜ್ಞೋ ಭದ್ರಸ್ಯ ನಿತ್ಯಭೋಜನೇ ।
ನಿಯಮೋ ಪ್ರಾಜಾಪತ್ಯಸ್ಯ ಹ್ಯಂಧಕೇಶಸಮೀಪತಃ ॥ ೬೨ ॥

ಯಜ್ಞಾತಮದ್ಭುತಂ ವೃತ್ತಂ ಶಿವಾನುಗ್ರಹಕಾರಣಾತ್ ।
ಶ್ರೂಯತಾಂ ತಚ್ಚ ಸುಪ್ರೀತ್ಯಾ ಕಥಯಾಮಿ ಯಥಾಶ್ರುತಂ ॥ ೬೩ ॥

---

೫೯-೬೦. ವಟುಕನ ಪೂಜೆಯನ್ನು ಮಾಡದೆ ಶಿವಪೂಜೆಯನ್ನು ಮಾಡಬಾರದು. ಹಾಗೆ ಮಾಡಿದರೆ ಅದು ಶುಭಕರವಾದುದಾಗುವುದಿಲ್ಲ. ಶುಭಕರವಾಗಲಿ, ಅಶುಭಕರವಾಗಲಿ ಪೂಜಾಕರ್ಮದಲ್ಲಿ ವಟುಕನನ್ನು ಪೂಜಿಸದೆ ಬಿಡಬಾರದು. ಪ್ರಾಜಾಪತ್ಯಕೃಚ್ಛ್ರರೂಪವಾದ ಪ್ರಾಯಶ್ಚಿತ್ತದಲ್ಲಿ ಭೋಜನಾರ್ಥವಾಗಿ ಒಬ್ಬ ವಟು (ಬ್ರಹ್ಮಚಾರಿ) ವನ್ನು ಆಹ್ವಾನಿಸಬೇಕು.

೬೧-೬೩. ಶಿವದಂಪತಿಗಳ ಪೂಜಾಕಾರ್ಯದಲ್ಲಿ ಇಲ್ಲಿ ವಿಶೇಷವೊಂದಿರುವುದು. ಅದನ್ನೇ ಹೇಳುವೆನು. ಭದ್ರನೆಂಬ ರಾಜನ ಪಟ್ಟಣದಲ್ಲಿ ಅಂಧಕೇಶ್ವರನ ಸಮೀಪದಲ್ಲಿ ಪ್ರಾಜಾಪತ್ಯನಿಯಮವನ್ನಾಚರಿಸುತ್ತಿರುವ ರಾಜನು ಪ್ರತಿದಿನವೂ ಭೋಜನ ಮಾಡುವಾಗ ಶಿವಾನುಗ್ರಹಕ್ಕೆ ಕಾರಣವಾದ ಆಶ್ಚರ್ಯಕರವಾದ ಒಂದು ವಿಷಯವು ನಡೆಯಿತು ಅದನ್ನೇ ನಿಮ್ಮಲ್ಲಿ ಪ್ರೀತಿಯಿಂದ ನಾನು ಕೇಳಿದಂತೆ ಹೇಳುವೆನು—ಕೇಳಿರಿ.

ಧ್ವಜ ಏಕಶ್ಚ ತದ್ರಾಜ್ಞೇ ದತ್ತಸ್ತುಷ್ಟೇನ ಶಂಭುನಾ ।
ಪ್ರೋಕ್ತಶ್ಚ ಕೃಪಯಾ ರಾಜಾ ದೇವದೇವೇನ ತೇನ ಸಃ ॥ ೬೪ ॥

ಪ್ರಾತಶ್ಚ ಬಧ್ಯತಾಂ ರಾಜನ್ಧ್ವಜೋ ರಾತ್ರೌ ಪತಿಷ್ಯತಿ ।
ಪುನರುತ್ಸ್ಥೇವಂ ಚ ಸಂಪೂರ್ಣೇ ಪ್ರಾಜಾಪತ್ಯೇ ತಥಾ ಪುನಃ ॥ ೬೫ ॥

ಅನ್ಯಥಾಯಂ ಧ್ವಜೋ ಮೇ ಹಿ ರಾತ್ರಾವಪಿ ಸ್ಥಿರೋ ಭವೇತ್ ।
ಇತ್ಯುಕ್ತ್ವಾಂತರ್ಹಿತಶ್ಶಂಭೂ ರಾಜ್ಞೇ ತುಷ್ಟಃ ಕೃಪಾನಿಧಿಃ ॥ ೬೬ ॥

ತಥೇತಿ ನಿಯಮಶ್ಚಾಸೀತ್ತಸ್ಯ ರಾಜ್ಞೋ ಮಹಾಮುನೇ ।
ಪ್ರಾಜಾಪತ್ಯಂ ಕೃತಂ ನಿತ್ಯಂ ಶಿವಪೂಜಾವಿಧಾನತಃ ॥ ೬೭ ॥

ಸ್ವಯಂ ಪ್ರಾತರ್ನಿವರ್ತೇತ ಧ್ವಜಃ ಸಾಯಂ ಪತೇದಿತಿ ।
ಯದಿ ಕಾರ್ಯಂ ಚ ಸಂಪೂರ್ಣಂ ಜಾತಂ ಚೈವ ಭವೇದಿಹ ॥ ೬೮ ॥

---

೬೪-೬೬. ರಾಜನ ಭಕ್ತಿಗೆ ಸಂತುಷ್ಟನಾದ ಶಿವನು ರಾಜನಿಗೆ ಒಂದು ಧ್ವಜವನ್ನು ಕೊಟ್ಟನು. ಮತ್ತು ಆ ರಾಜನನ್ನು ಕಂಡು ಶಿವನು-ಎಲೈ, ರಾಜನೆ! ಪ್ರಾತಃಕಾಲದಲ್ಲಿ ಈ ಧ್ವಜವನ್ನು ಕಟ್ಟು. ಪ್ರಾಜಾಪತ್ಯರೂಪವಾದ ನನ್ನ ಪೂಜಾ ಕರ್ಮವು ಪೂರ್ಣವಾದರೆ ರಾತ್ರಿಯಲ್ಲಿ ಈ ಧ್ವಜವು ಬಿದ್ದು ಬಿಡುವುದು. ಪೂರ್ಣವಾಗದಿದ್ದರೆ ರಾತ್ರಿಯಲ್ಲಿಯೂ ಈ ಧ್ವಜವು ಸ್ಥಿರವಾಗಿ ನಿಂತೇ ಇರುವುದು. ಹೀಗೆಂದು ಹೇಳಿ ದಯಾನಿಧಿಯಾದ ಶಿವನು ಅಂತರ್ಧಾನನಾದನು.

೬೭. ಆ ರಾಜನು ಹಾಗೆಯೇ ಆಗಲೆಂದು ನಿಯಮದಿಂದ ಪ್ರಾಜಾಪತ್ಯರೂಪವಾದ ಶಿವಪೂಜೆಯನ್ನು ಪ್ರತಿದಿನವೂ ವಿಧಿಗನುಸಾರವಾಗಿ ಮಾಡುತ್ತಿದ್ದನು.

೬೮. ಪ್ರಾತಃಕಾಲದಲ್ಲಿ ತಾನಾಗಿ ಮೇಲಕ್ಕೆ ಉದಯಿಸಿದ ಧ್ವಜವು ಪೂಜಾ ಕಾರ್ಯವು ಪೂರ್ಣವಾದಮೇಲೆ ಸಂಧ್ಯಾಕಾಲದಲ್ಲಿ ಕೆಳಗೆ ಬೀಳುತ್ತಿದ್ದಿತು.

ಏಕಸ್ಮಿನ್ಸಮಯೇ ಚಾತ್ರ ವಟೋಃ ಕಾರ್ಯಂ ಪುರಾ ಹ್ಯಭೂತ್ ।
ಧ್ವಜಃ ಸ ಪತಿತೋ ವೈ ಹಿ ಬ್ರಹ್ಮಭೋಜಂ ವಿನಾಪಿ ಹಿ ॥ ೬೯ ॥

ದೃಷ್ಟ್ವಾ ತಚ್ಚ ತದಾ ತತ್ರ ಪೃಷ್ಟಾ ರಾಜ್ಞಾ ಚ ಪಂಡಿತಾಃ ।
ಭುಂಜತೇ ಬ್ರಾಹ್ಮಣಾ ಹ್ಯತ್ರ ಸೋತ್ಥಿತೋ ವೈ ಧ್ವಜಸ್ತ್ವಿತಿ ॥ ೭೦ ॥

ಕಥಂ ಚ ಪತಿತಃ ಸೋಽತ್ರ ಬ್ರಾಹ್ಮಣಾ ಬ್ರೂತ ಸತ್ಯತಃ ।
ತೇ ಪೃಷ್ಟಾಶ್ಚ ತದಾ ಪ್ರೋಚುರ್ಬ್ರಾಹ್ಮಣಾಃ ಪಂಡಿತೋತ್ತಮಾಃ ॥ ೭೧ ॥

ಬ್ರಹ್ಮಭೋಜೇ ಮಹಾರಾಜ ವಟುಕೋ ಭೋಜಿತಃ ಪುರಾ ।
ಚಂಡೀಪುತ್ರಶ್ಶಿವಸ್ತುಷ್ಟಸ್ತಸ್ಮಾಚ್ಚ ಪತಿತೋ ಧ್ವಜಃ ॥ ೭೨ ॥

ತಚ್ಛ್ರುತ್ವಾ ನೃಪತಿಸ್ಸೋಽಥ ಜನಾಶ್ಚಾನ್ಯೇಽಪಿ ಸರ್ವಶಃ ।
ಅಭವನ್ವಿಸ್ಮಿತಾಸ್ತತ್ರ ಪ್ರಶಂಸಾಂ ಚಕ್ರಿರೇ ತತಃ ॥ ೭೩ ॥

---

೬೯-೭೧. ಒಂದಾನೊಂದು ದಿನ ವಟುಕನ ಪೂಜೆಯು ಮೊದಲೇ ನಡೆಯಿತು. ಪೂಜೆಯೆಲ್ಲ ಮುಗಿದು ಬ್ರಾಹ್ಮಣ ಭೋಜನವಾಗುವುದಕ್ಕಿಂತ ಮುಂಚಿತವಾಗಿಯೇ ಧ್ವಜವು ಕೆಳಗೆ ಬಿದ್ದಿತು. ಇದನ್ನು ನೋಡಿ ರಾಜನು ವಿದ್ವಾಂಸರನ್ನು ಪ್ರಶ್ನೆ ಮಾಡಿದನು. ಬ್ರಾಹ್ಮಣರು ಇನ್ನೂ ಭೋಜನ ಮಾಡುತ್ತಿರುವರು. ಧ್ವಜವು ನಿಂತಿರದೆ ಹೇಗೆ ಕೆಳಗೆ ಬಿದ್ದಿತು? ಎಲೈ, ಬ್ರಾಹ್ಮಣರೆ, ಈ ವಿಷಯದಲ್ಲಿ ನಿಜವನ್ನು ಹೇಳಿರಿ. ಎಂದು ಕೇಳಿದನು. ಆ ಪ್ರಶ್ನೆಗೆ ವಿದ್ವಾಂಸರು ಉತ್ತರವನ್ನು ಹೇಳಿದರು.

೭೨. ಎಲೈ, ಮಹಾರಾಜನೇ! ಬ್ರಾಹ್ಮಣರ ಭೋಜನಕ್ಕಿಂತ ಮುಂಚಿತವಾಗಿ ವಟುಕನಿಗೆ ಭೋಜನವನ್ನು ಮಾಡಿಸಿದರು. ಅವನು ಚಂಡಿಯ ಪುತ್ರನು. ಆದುದರಿಂದ ಶಿವನು ಸಂತೋಷಪಟ್ಟನು. ಈ ಕಾರಣದಿಂದ ಧ್ವಜವು ಬಿದ್ದಿತು! ಎಂದರು.

೭೩-೭೪. ಈ ಮಾತನ್ನು ಕೇಳಿ ರಾಜನೂ, ಇತರ ಜನಗಳೂ ಆಶ್ಚರ್ಯವನ್ನು ಹೊಂದಿ ವಟುಕನನ್ನು ಹೊಗಳಿದರು. ಹೀಗೆ ಶಿವನಿಂದಲೇ ವಟುಕನ

ಏವಂ ಚ ಮಹಿಮಾ ತೇಷಾಂ ವರ್ಧಿತಃ ಶಂಕರೇಣ ಹಿ ।
ತಸ್ಮಾಚ್ಚ ವಟುಕಾಶ್ಶ್ರೇಷ್ಠಾಃ ಪುರಾವಿದ್ಭಿಃ ಪ್ರಕೀರ್ತಿತಾಃ ॥ ೭೪ ॥

ಶಿವಪೂಜಾ ತು ತೈಃ ಪೂರ್ಣಮುತ್ತಾರ್ಯಾ ನಾನ್ಯಥಾ ಪುನಃ ।
ಅನ್ಯೇಷಾಂ ನಾಧಿಕಾರೋಽಸ್ತಿ ಶಿವಸ್ಯ ವಚನಾದಿಹ ॥ ೭೫ ॥

ಉತ್ತಾರಣಂ ಚ ಕಾರ್ಯಂ ವೈ ಪೂಜಾ ಪೂರ್ಣಾ ಭವತ್ವಿತಿ ।
ಏತಾವದೇವ ತೇಷಾಂ ತು ಕಾರ್ಯಂ ನ್ಯಾಯ್ಯನ್ತ್ರತ್ಥೈವ ಚ ॥ ೭೬ ॥

ಏತತ್ಸರ್ವಂ ಸಮಾಖ್ಯಾತಂ ಯತ್ಪೃಷ್ಟಂ ಚ ಮುನೀಶ್ವರಾಃ ।
ಯಚ್ಛ್ರುತ್ವಾ ಶಿವಪೂಜಾಯಾಃ ಫಲಂ ಪ್ರಾಪ್ನೋತಿ ವೈ ನರಃ ॥ ೭೭ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ವಟುಕೋತ್ಪತ್ತಿವರ್ಣನಂ ನಾಮ
ತ್ರಯೋದಶೋಽಧ್ಯಾಯಃ

---

ಮಹಿಮೆಯು ಹೆಚ್ಚಿರುವುದು. ಆದುದರಿಂದಲೇ ವಟುಕರು (ಬ್ರಹ್ಮಚಾರಿಗಳು) ಶ್ರೇಷ್ಠರೆಂದು ವಿದ್ವಾಂಸರು ಹೇಳುವರು.

೭೫. ಶಿವಪೂಜೆಯು ವಟುಕರಿಂದಲೇ ಪೂರ್ಣವಾಗಬೇಕು. ಬೇರೆ ಮಾರ್ಗದಿಂದ ಪೂರ್ಣವಾಗಲಾರದು. ಇತರರಿಗೆ ಆ ಪೂಜೆಯನ್ನು ಪೂರ್ಣಮಾಡುವ ಅಧಿಕಾರವಿಲ್ಲ. ಈ ಮಾತನ್ನು ಶಿವನೇ ಹೇಳಿರುವನು.

೭೬. ಶಿವಪೂಜೆಯು ಪೂರ್ಣವಾಗಬೇಕೆಂಬ ಅಪೇಕ್ಷೆಯಿಂದ ವಟುಕೋತ್ತಾರಣವನ್ನು ಮಾಡಬೇಕು. ಪೂಜೆಯನ್ನು ಮಾಡುವುದರಲ್ಲಿ ಈ ಕೆಲಸವು ಮುಖ್ಯವಾದುದು.

೭೭. ಎಲೈ, ಋಷಿಶ್ರೇಷ್ಠರೇ! ನಿಮ್ಮ ಪ್ರಶ್ನೆಗೆ ಉತ್ತರವಾಗಿ ಇವೆಲ್ಲವನ್ನೂ ಹೇಳಿರುವೆನು. ಇದನ್ನು ಕೇಳಿದ ಮನುಷ್ಯನು ಶಿವಪೂಜಾ ಫಲವನ್ನು ಹೊಂದುವನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ನಾಲ್ಕನೆಯದಾದ-ಕೋಟಿರುದ್ರ
ಸಂಹಿತೆಯಲ್ಲಿ ವಟುಕೋತ್ಪತ್ತಿ ವರ್ಣನವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಚತುರ್ದಶೋಽಧ್ಯಾಯಃ

॥ ಋಷಯ ಊಚುಃ ॥

ಜ್ಯೋತಿಷಾಂ ಚೈವ ಲಿಂಗಾನಾಂ ಮಾಹಾತ್ಮ್ಯಂ ಕಥಯಾಧುನಾ ।
ಉತ್ಪತ್ತಿಂ ಚ ತಥಾ ತೇಷಾಂ ಬ್ರೂಹಿ ಸರ್ವಂ ಯಥಾಶ್ರುತಂ ॥ ೧ ॥

॥ ಸೂತ ಉವಾಚ ॥

ಶೃಣ್ವಂತು ವಿಪ್ರಾ ವಕ್ಷ್ಯಾಮಿ ತನ್ಮಾಹಾತ್ಮ್ಯಂ ಜನಿಂ ತಥಾ ।
ಸಂಕ್ಷೇಪತೋ ಯಥಾಬುದ್ಧಿ ಸದ್ಗುರೋಶ್ಚ ಮಯಾ ಶ್ರುತಂ ॥ ೨ ॥

ಏತೇಷಾಂ ಚೈವ ಮಾಹಾತ್ಮ್ಯಂ ವಕ್ತುಂ ವರ್ಷಶತೈರಪಿ ।
ಶಕ್ಯತೇ ನ ಮುನಿಶ್ರೇಷ್ಠಾಸ್ತಥಾಪಿ ಕಥಯಾಮಿ ವಃ ॥ ೩ ॥

---

### ಹದಿನಾಲ್ಕನೆಯ ಅಧ್ಯಾಯವು.

೧. ಋಷಿಗಳು ಕೇಳಿದರು.—ಎಲೈ, ಸೂತನೇ! ಈಗ ಸಮಸ್ತ ಜ್ಯೋತಿರ್ಲಿಂಗಗಳ ಉತ್ಪತ್ತಿಯನ್ನೂ, ಅವುಗಳ ಮಹಿಮೆಯನ್ನೂ ನೀನು ತಿಳಿದಿರುವಂತೆ ನಮಗೆ ಹೇಳು. ಎನ್ನಲು,

೨-೩. ಸೂತನು ಹೇಳತೊಡಗಿದನು.—ಎಲೈ, ಬ್ರಾಹ್ಮಣರೇ, ಜ್ಯೋತಿರ್ಲಿಂಗಗಳ ಉತ್ಪತ್ತಿಯನ್ನೂ ಮಾಹಾತ್ಮ್ಯೆಯನ್ನೂ ಸದ್ಗುರುವಾದ ವ್ಯಾಸರಿಂದ ಕೇಳಿ

**ಸೋಮನಾಥಶ್ಚ ತೇಷಾಂ ವೈ ಪ್ರಥಮಃ ಪರಿಕೀರ್ತಿತಃ ।**
**ತನ್ಮಾಹಾತ್ಮ್ಯಂ ಶೃಣು ಮುನೇ ಪ್ರಥಮಂ ಸಾವಧಾನತಃ ॥ ೪ ॥**

**ಸಪ್ತವಿಂಶನ್ಮಿತಾಃ ಕನ್ಯಾ ದಕ್ಷೇಣ ಚ ಮಹಾತ್ಮನಾ ।**
**ತೇನ ಚಂದ್ರಮಸೇ ದತ್ತಾ ಅಶ್ವಿನ್ಯಾದ್ಯಾ ಮುನೀಶ್ವರಾಃ ॥ ೫ ॥**

**ಚಂದ್ರಂ ಚ ಸ್ವಾಮಿನಂ ಪ್ರಾಪ್ಯ ಶೋಭಮಾನಾ ವಿಶೇಷತಃ ।**
**ಚಂದ್ರೋಽಪಿ ಚೈವ ತಾಃ ಪ್ರಾಪ್ಯ ಶೋಭತೇ ಸ್ಮ ನಿರಂತರಂ ॥ ೬ ॥**

**ಹೇಮ್ನಾ ಚೈವ ಮಣಿರ್ಭಾತಿ ಮಣಿನಾ ಹೇಮ ಚೈವ ಹಿ ।**
**ಏವಂ ಚ ಸಮಯೇ ತಸ್ಯ ಯಜ್ಜಾತಂ ಶ್ರೂಯತಾಮಿತಿ ॥ ೭ ॥**

**ಸರ್ವಾಸ್ವಪಿ ಚ ಪತ್ನೀಷು ರೋಹಿಣೀನಾಮ ಯಾ ಸ್ಮೃತಾ ।**
**ಯಥೈಕಾ ಸಾ ಪ್ರಿಯಾ ಚಾಸೀತ್ತಥಾನ್ಯಾ ನ ಕದಾಚನ ॥ ೮ ॥**

---

ತಿಳಿದಿರುವಂತೆ ಸಂಕ್ಷೇಪವಾಗಿ ಹೇಳುವೆನು. ಇವುಗಳ ಮಹಿಮೆಯನ್ನು ಹೇಳಲು ನೂರು ವರ್ಷವಾದರೂ ಸಾಧ್ಯವಾಗುವುದಿಲ್ಲ. ಹಾಗಾದರೂ ನಾನು ತಿಳಿದಿರುವುದನ್ನು ನಿಮಗೆ ಹೇಳುವೆನು.

೪. ಜ್ಯೋತಿರ್ಲಿಂಗಗಳಲ್ಲಿ ಮೊದಲನೆಯದು ಸೋಮನಾಥ ಲಿಂಗವು. ಅದರ ಮಹಿಮೆಯನ್ನು ಮೊದಲು ಹೇಳುವೆನು ಕೇಳಿರಿ.

೫-೭. ಋಷಿಶ್ರೇಷ್ಠರೇ, ಅಶ್ವಿನಿಯೇ ಮೊದಲಾದ ಇಪ್ಪತ್ತೇಳು ಜನ ನಕ್ಷತ್ರ ರೂಪವಾದ ಕನ್ಯೆಯರನ್ನು ದಕ್ಷಪ್ರಜಾಪತಿಯು ಚಂದ್ರನಿಗೆ ಮದುವೆಮಾಡಿ ಕೊಟ್ಟನು. ಚಂದ್ರನನ್ನು ಪತಿಯಾಗಿ ಪಡೆದ ಅವರೂ, ಅವರನ್ನು ಪತ್ನಿಯರನ್ನಾಗಿ ಪಡೆದ ಚಂದ್ರನೂ ಚಿನ್ನಕ್ಕೆ ರತ್ನವೂ ರತ್ನಕ್ಕೆ ಚಿನ್ನವೂ ಸೇರಿ ಶೋಭಿಸುವಂತೆ ಪರಸ್ಪರವಾಗಿ ಶೋಭಿಸುತ್ತಿದ್ದರು. ಹೀಗಿರುತ್ತಿರುವಲ್ಲಿ ಮುಂದೆ ಏನಾಯಿತೆಂಬುದನ್ನು ಹೇಳುವೆನು ಕೇಳಿರಿ.

೮-೧೦. ಚಂದ್ರನಿಗೆ ಇಪ್ಪತ್ತೇಳು ಜನ ಪತ್ನಿಯರಲ್ಲಿ ರೋಹಿಣೀ ಎಂಬೊಬ್ಬಳು ಮಾತ್ರ ಅತ್ಯಂತ ಪ್ರೀತಿಪಾತ್ರಳಾಗಿದ್ದಳು. ಮಿಕ್ಕವರು ಅಷ್ಟು ಪ್ರೀತಿಪಾತ್ರ'

ಅನ್ಯಾಶ್ಚ ದುಃಖಮಾಪನ್ನಾಃ ಪಿತರಂ ಶರಣಂ ಯಯುಃ ।
ಗತ್ವಾ ತಸ್ಮೈ ಚ ಯದ್ದುಃಖಂ ತಥಾ ತಾಭಿರ್ನಿವೇದಿತಂ ॥ ೯ ॥

ದಕ್ಷಸ್ಸ ಚ ತಥಾ ಶ್ರುತ್ವಾ ದುಃಖಂ ಚ ಪ್ರಾಪ್ತವಾಂಸ್ತದಾ ।
ಸಮಾಗತ್ಯ ದ್ವಿಜಾಶ್ಚಂದ್ರಂ ಶಾಂತ್ಯಾವೋಚದ್ವಚಸ್ತದಾ ॥ ೧೦ ॥

॥ ದಕ್ಷ ಉವಾಚ ॥

ವಿಮಲೇ ಚ ಕುಲೇ ತ್ವಂ ಹಿ ಸಮುತ್ಪನ್ನಃ ಕಲಾನಿಧೇ ।
ಆಶ್ರಿತೇಷು ಚ ಸರ್ವೇಷು ನ್ಯೂನಾಧಿಕ್ಯಃ ಕಥಂ ತವ ॥ ೧೧ ॥

ಕೃತಂ ಚೇತ್ತತ್ಕೃತಂ ತಚ್ಚ ನ ಕರ್ತವ್ಯಂ ತ್ವಯಾ ಪುನಃ ।
ವರ್ತನಂ ವಿಷಮತ್ವೇನ ನರಕಪ್ರದಮೀರಿತಂ ॥ ೧೨ ॥

॥ ಸೂತ ಉವಾಚ ॥

ದಕ್ಷಶ್ಚೈವಂ ಚ ಸಂಪ್ರಾರ್ಥ್ಯ ಚಂದ್ರಂ ಜಾಮಾತರಂ ಸ್ವಯಂ ।
ಜಗಾಮ ಮಂದಿರಂ ಸ್ವಂ ವೈ ನಿಶ್ಚಯಂ ಪರಮಂ ಗತಃ ॥ ೧೩ ॥

---

ರಾಗಿರಲಿಲ್ಲ. ಆದುದರಿಂದ ಮಿಕ್ಕವರು ದುಃಖದಿಂದ ತಂದೆಯನ್ನು ಮರೆಹೊಕ್ಕರು. ಅವನ ಸಮೀಪಕ್ಕೆ ಹೋಗಿ ತಮ್ಮ ದುಃಖವನ್ನು ಹೇಳಿಕೊಂಡರು. ದಕ್ಷನು ಈ ಮಾತನ್ನು ಕೇಳಿ, ತಾನೂ ದುಃಖಪಟ್ಟು ಚಂದ್ರನ ಸಮೀಪಕ್ಕೆ ಬಂದು ಒಳ್ಳೆಯ ಮಾತಿನಿಂದ ಅವನಿಗೆ ಬುದ್ಧಿವಾದ ಹೇಳಿದನು.

೧೧-೧೨. ಕಾಂತಿಗೆ ಆಶ್ರಯಸ್ಥಾನನಾದ ಎಲೈ ಚಂದ್ರನೇ, ನೀನು ಪರಿಶುದ್ಧವಾದ ವಂಶದಲ್ಲಿ ಹುಟ್ಟಿರುವೆ. ನಿನ್ನನ್ನು ಆಶ್ರಯಿಸಿದ ಪತ್ನಿಯರಲ್ಲಿ ಹೆಚ್ಚು, ಕಡಿಮೆಯ ಪ್ರೀತಿಯನ್ನು ಮಾಡಬೇಡ. ಇದುವರೆಗೆ ಮಾಡಿದ್ದರೆ ಅದು ಕಳೆದು ಹೋಯಿತು. ಇಂತಹ ಭೇದವನ್ನು ಮುಂದೆ ಮಾಡಬೇಡ. ಭೇದಬುದ್ಧಿಯಿಂದಿರುವುದು ನರಕ ದುಃಖವನ್ನು ಕೊಡುವುದು.

೧೩-೧೪. ಹೀಗೆಂದು ದಕ್ಷನು ಅಳಿಯನಾದ ಚಂದ್ರನನ್ನು ತಾನೇ ಪ್ರಾರ್ಥಿಸಿ ಅವನಿಂದ ಒಪ್ಪಿಗೆಯನ್ನು ಪಡೆದು ತನ್ನ ಮನೆಗೆ ಹೋದನು. ಚಂದ್ರನು ಶಿವನ

ಚಂದ್ರೋऽಪಿ ವಚನಂ ತಸ್ಯ ನ ಚಕಾರ ವಿಮೋಹಿತಃ ।
ಶಿವಮಾಯಾಪ್ರಭಾವೇಣ ಯಯಾ ಸಂಮೋಹಿತಂ ಜಗತ್ ॥ ೧೪ ॥

ಶುಭಂ ಭಾವಿ ಯದಾ ಯಸ್ಯ ಶುಭಂ ಭವತಿ ತಸ್ಯ ವೈ ।
ಅಶುಭಂ ಚ ಯದಾ ಭಾವಿ ಕಥಂ ತಸ್ಯ ಶುಭಂ ಭವೇತ್ ॥ ೧೫ ॥

ಚಂದ್ರೋऽಪಿ ಬಲವದ್ಭಾವಿವಶಾನ್ಮೇನೇ ನ ತದ್ವಚಃ ।
ರೋಹಿಣ್ಯಾಂ ಚ ಸಮಾಸಕ್ತೋ ನಾನ್ಯಾಂ ಮೇನೇ ಕದಾಚನ ॥ ೧೬ ॥

ತಚ್ಛ್ರುತ್ವಾ ಪುನರಾಗತ್ಯ ಸ್ವಯಂ ದುಃಖಸಮನ್ವಿತಃ ।
ಪ್ರಾರ್ಥಯಾಮಾಸ ಚಂದ್ರಂ ಸ ದಕ್ಷೋ ದಕ್ಷಸ್ಸುನೀತಿತಃ ॥ ೧೭ ॥

॥ ದಕ್ಷ ಉವಾಚ ॥

ಶ್ರೂಯತಾಂ ಚಂದ್ರ ಯತ್ಪೂರ್ವಂ ಪ್ರಾರ್ಥಿತೋ ಬಹುಧಾ ಮಯಾ ।
ನ ಮಾನಿತಂ ತ್ವಯಾ ಯಸ್ಮಾತ್ತಸ್ಮಾತ್ತ್ವಂ ಚ ಕ್ಷಯೀ ಭವ ॥ ೧೮ ॥

---

ಮಾಯಾಮಹಿಮೆಯಿಂದ ಮೋಹಿತನಾಗಿ ದಕ್ಷನ ಮಾತನ್ನು ನಡೆಸಲಿಲ್ಲ. ಶಿವನ ಮಾಯೆಯಿಂದ ಜಗತ್ತೇ ಮೋಹಗೊಳ್ಳುವುದಷ್ಟೆ ?

೧೫-೧೬. ಯಾವಾಗ ಒಳ್ಳೆಯದಾಗಬೇಕೋ ಆವಾಗ ಒಳ್ಳೆಯದಾಗುವುದು. ಕೆಟ್ಟದಾಗಬೇಕಾಗಿರುವಾಗ ಹೇಗೆ ಒಳ್ಳೆಯದಾಗುವುದು ? ಚಂದ್ರನು ಮುಂದೆ ಬಲವತ್ತರವಾದ ಕರ್ಮಫಲವನ್ನನುಭವಿಸಬೇಕಾಗಿರುವುದರಿಂದ ದಕ್ಷನ ಮಾತನ್ನು ನಡೆಸಲಿಲ್ಲ. ರೋಹಿಣಿಯಲ್ಲಿಯೇ ಆಸಕ್ತನಾಗಿದ್ದನು. ಮಿಕ್ಕವರನ್ನು ಲಕ್ಷಿಸಲೇ ಇಲ್ಲ.

೧೭. ಈ ವಿಷಯವನ್ನು ತಿಳಿದು ದಕ್ಷನು ದುಃಖದಿಂದಕೂಡಿ ಮತ್ತೆ ಚಂದ್ರನ ಸಮೀಪಕ್ಕೆ ಬಂದು ಒಳ್ಳೆಯ ನೀತಿಯ ಮಾತನ್ನು ಹೇಳಿದರೂ, ಚಂದ್ರನು

೧೮. ಕೇಳದ್ದರಿಂದ ಪುನಃ ಇಂತೆಂದನು—ಎಲೈ, ಚಂದ್ರನೇ ! ಹಿಂದೆ ನಾನು ಅನೇಕ ಬಗೆಯಲ್ಲಿ ಪ್ರಾರ್ಥನೆ ಮಾಡಿಕೊಂಡೆನು. ನೀನು ಅದರಂತೆ ನಡೆಯಲಿಲ್ಲ. ನನ್ನ ಮಾತಿಗೆ ನೀನು ಮರ್ಯಾದೆಯನ್ನೂ ಮಾಡಲಿಲ್ಲ. ಆದಕಾರಣದಿಂದ ನೀನು ಕ್ಷಯರೋಗವುಳ್ಳವನಾಗು. ಎಂದು ಶಪಿಸಿದನು.

॥ ಸೂತ ಉವಾಚ ॥

ಇತ್ಯುಕ್ತೇ ತೇನ ಚಂದ್ರೋ ವೈ ಕ್ಷಯೀ ಜಾತಃ ಕ್ಷಣಾದಿಹ ।
ಹಾಹಾಕಾರೋ ಮಹಾನಾಸೀತ್ತದೇಂದೌ ಕ್ಷೀಣತಾಂ ಗತೇ ॥ ೧೯ ॥

ದೇವರ್ಷಯಸ್ತದಾ ಸರ್ವೇ ಕಿಂ ಕಾರ್ಯಂ ಹಾ ಕಥಂ ಭವೇತ್ ।
ಇತಿ ದುಃಖಂ ಸಮಾಪನ್ನಾ ವಿಹ್ವಲಾ ಹ್ಯಭವನ್ಮುನೇ ॥ ೨೦ ॥

ವಿಜ್ಞಾಪಿತಾಶ್ಚ ಚಂದ್ರೇಣ ಸರ್ವೇ ಶಕ್ರಾದಯಸ್ಸುರಾಃ ।
ಋಷಯಶ್ಚ ವಸಿಷ್ಠಾದ್ಯಾ ಬ್ರಹ್ಮಾಣಂ ಶರಣಂ ಯಯುಃ ॥ ೨೧ ॥

ಗತ್ವಾಪಿ ತು ತದಾ ಪ್ರೋಚುಸ್ತದ್ವೃತ್ತಂ ನಿಖಿಲಂ ಮುನೇ ।
ಬ್ರಹ್ಮಣೇ ಋಷಯೋ ದೇವಾ ನತ್ವಾ ನುತ್ವಾತಿವಿಹ್ವಲಾಃ ॥ ೨೨ ॥

ಬ್ರಹ್ಮಾಪಿ ತದ್ವಚಶ್ಶ್ರುತ್ವಾ ವಿಸ್ಮಯಂ ಪರಮಂ ಯಯೌ ।
ಶಿವಮಾಯಾಂ ಸುಪ್ರಶಸ್ಯ ಶ್ರಾವಯಂಸ್ತಾನುವಾಚ ಹ ॥ ೨೩ ॥

---

೧೯-೨೩. ದಕ್ಷನು ಹೀಗೆ ಹೇಳುತ್ತಲು ಚಂದ್ರನು ಆ ಕ್ಷಣದಲ್ಲಿಯೇ ಕ್ಷಯ ರೋಗಪೀಡಿತನಾದನು. ಆಗ ಚಂದ್ರನು ಕ್ಷೀಣತೆಯನ್ನು ಹೊಂದಲು ಲೋಕದಲ್ಲಿ ಮಹಾ ಹಾಹಾಕಾರವು ಹುಟ್ಟಿತು. ದೇವತೆಗಳೂ, ಋಷಿಗಳೂ ಚಂದ್ರನಿಲ್ಲದೆ ಏನು ಮಾಡಬೇಕು? ಮುಂದೆ ಹೇಗಾಗುವುದು ಎಂದು ದುಃಖದಿಂದ ಕಳವಳ ಪಡುತ್ತಿದ್ದರು. ಚಂದ್ರನ ಪ್ರಾರ್ಥನೆಯಿಂದ ದೇವೇಂದ್ರನೇ ಮೊದಲಾದ ಸಮಸ್ತ ದೇವತೆಗಳೂ, ವಸಿಷ್ಠನೇ ಮೊದಲಾದ ಋಷಿಗಳೂ ಬ್ರಹ್ಮನನ್ನು ಮರೆ ಹೊಕ್ಕರು. ಬ್ರಹ್ಮನಿಗೆ ನಮಸ್ಕರಿಸಿ ಅವನನ್ನು ಸ್ತೋತ್ರಮಾಡಿ ಎಲ್ಲಾ ವೃತ್ತಾಂತ ವನ್ನೂ ಅವನಿಗೆ ಹೇಳಿದರು. ಬ್ರಹ್ಮನೂ ಕೂಡ ಅವರ ಮಾತನ್ನು ಕೇಳಿ ಶಿವ ಮಾಯೆಯನ್ನು ಹೊಗಳಿ ಆಶ್ಚರ್ಯದಿಂದ ಆ ದೇವರ್ಷಿಗಳನ್ನು ಕುರಿತು,

೨೪-೨೭. ಬ್ರಹ್ಮನು ಹೇಳಿದನು.—ಅಯ್ಯೋ, ಸಮಸ್ತಲೋಕಕ್ಕೂ ಮಹಾ ಕಷ್ಟವು ಪ್ರಾಪ್ತವಾಯಿತು. ಚಂದ್ರನು ಯಾವಾಗಲೂ ದುಷ್ಟನು. ದಕ್ಷನು ಅವನಿಗೆ ಶಾಪವನ್ನು ಕೊಟ್ಟನು. ದುಷ್ಟನಾದ ಚಂದ್ರನು ಅನೇಕ ದುಷ್ಕಾರ್ಯ

॥ ಬ್ರಹ್ಮೋವಾಚ ॥

ಅಹೋ ಕಷ್ಟಂ ಮಹಜ್ಜಾತಂ ಸರ್ವಲೋಕಸ್ಯ ದುಃಖದಂ ।
ಚಂದ್ರಸ್ತು ಸರ್ವದಾ ದುಷ್ಟೋ ದಕ್ಷಶ್ಚ ಶಪ್ತವಾನಮುಂ ॥ ೨೪ ॥

ಸರ್ವಂ ದುಷ್ಟೇನ ಚಂದ್ರೇಣ ಕೃತಂ ಕರ್ಮಾಪ್ಯನೇಕಶಃ ।
ಶ್ರೂಯತಾಮೃಷಯೋ ದೇವಾಶ್ಚಂದ್ರಕೃತ್ಯಂ ಪುರಾತನಂ ॥ ೨೫ ॥

ಬೃಹಸ್ಪತೇರ್ಗೃಹಂ ಗತ್ವಾ ತಾರಾ ದುಷ್ಟೇನ ವೈ ಹೃತಾ ।
ತಸ್ಯ ಭಾರ್ಯಾ ಪುನಶ್ಚೈವ ಸ ದೈತ್ಯಾನ್ಸಮುಪಸ್ಥಿತಃ ॥ ೨೬ ॥

ಸಮಾಶ್ರಿತಸ್ತದಾ ತೈತ್ಯಾನ್ಯುದ್ಧಂ ದೇವೈಶ್ಚಕಾರ ಹ ।
ಮಯಾತ್ರಿಣಾ ನಿಷಿದ್ಧಶ್ಚ ತಸ್ಮೈ ತಾರಾಂ ದದೌ ಶಶೀ ॥ ೨೭ ॥

ತಾಂ ಚ ಗರ್ಭವತೀಂ ದೃಷ್ಟ್ವಾ ನ ಗೃಹ್ಣಾಮೀತಿ ಸೋಽಬ್ರವೀತ್ ।
ಅಸ್ಮಾಭಿರ್ವಾರಿತೋ ಜೀವಃ ಕೃಚ್ಛ್ರಾಜ್ಜಗ್ರಾಹ ತಾಂ ತದಾ ॥ ೨೮ ॥

ಯದಿ ಗರ್ಭಂ ಜಹಾತೀಹ ಗೃಹ್ಣಾಮೀತ್ಯಬ್ರವೀತ್ಪುನಃ ।
ಗರ್ಭೇ ಮಯಾ ಪುನಸ್ತತ್ರ ತ್ಯಾಜಿತೇ ಮುನಿಸತ್ತಮಾಃ ॥ ೨೯ ॥

---

ಗಳನ್ನು ಮಾಡಿದನು. ಎಲೈ, ಋಷಿಗಳೇ, ಮತ್ತು ದೇವತೆಗಳೇ, ಚಂದ್ರನು ಹಿಂದೆ ಮಾಡಿದ ದುಷ್ಕಾರ್ಯಗಳನ್ನು ಹೇಳುವೆನು, ಕೇಳಿರಿ. ದುಷ್ಟನಾದ ಚಂದ್ರನು ಗುರುವಾದ ಬೃಹಸ್ಪತಿಯ ಮನೆಗೆ ಹೋಗಿ ಅವನ ಹೆಂಡತಿಯಾದ ತಾರೆಯನ್ನು ಕದ್ದುಕೊಂಡು ಹೋದನು. ಪುನಃ ಆ ಚಂದ್ರನು ದೈತ್ಯರನ್ನು ಆಶ್ರಯಿಸಿ ದೇವತೆಗಳೊಡನೆ ಯುದ್ಧ ಮಾಡಿದನು. ನಾನೂ, ಅತ್ರಿಯೂ ನಿಷಿದ್ಧ ಕಾರ್ಯವನ್ನು ಮಾಡಬೇಡವೆಂದು ತಡೆದಮೇಲೆ ಚಂದ್ರನು ತಾರೆಯನ್ನು ಗುರುವಿಗೆ ಕೊಟ್ಟನು.

೨೮-೩೧. ಆ ತಾರೆಯು ಗರ್ಭಿಣಿಯಾಗಿದ್ದುದರಿಂದ ಅವಳನ್ನು ನಾನು ಪರಿಗ್ರಹಿಸುವುದಿಲ್ಲವೆಂದು ಗುರುವು ಹೇಳಿದನು. ನಾವೆಲ್ಲರೂ ಹೇಳಿದುದರಿಂದ ಗುರುವು ಬಹಳ ಕಷ್ಟದಿಂದ ಅವಳನ್ನು ಸ್ವೀಕರಿಸಿದನು. ಇವಳು ಗರ್ಭವನ್ನು ತ್ಯಾಗ ಮಾಡಿದರೆ ಇವಳನ್ನು ಗ್ರಹಿಸುವೆನು ಎಂದು ಮತ್ತೆ ಹೇಳಿದನು. ಎಲೈ, ಮುನಿಶ್ರೇಷ್ಠರೇ!

ಕಸ್ಯಾಯಂ ಚ ಪುನರ್ಗರ್ಭಸ್ತ್ವೋಽಮುಸ್ಯೇತಿ ಚ ಸಾಽಬ್ರವೀತ್ ।
ಪಶ್ಚಾತ್ತೇನ ಗೃಹೀತಾ ಸಾ ಮಯಾ ಚ ವಾರಿತೇನ ವೈ ॥ ೩೦ ॥

ಏವಂವಿಧಾನಿ ಚಂದ್ರಸ್ಯ ದುಶ್ಚರಿತ್ರಾಣ್ಯನೇಕಶಃ ।
ವರ್ಣ್ಯಂತೇ ಕಿಂ ಪುನಸ್ತಾನಿ ಸೋಽದ್ಯಾಪಿ ಕುರುತೇ ಕಥಂ ॥ ೩೧ ॥

ಯಜ್ಜಾತಂ ತತ್ಸುಸಂಜಾತಂ ನಾನ್ಯಥಾ ಭವತಿ ಧ್ರುವಂ ।
ಅತಃ ಪರಮುಪಾಯಂ ವೋ ವಕ್ಷ್ಯಾಮಿ ಶೃಣುತಾದರಾತ್ ॥ ೩೨ ॥

ಪ್ರಭಾಸಕೇ ಶುಭೇ ಕ್ಷೇತ್ರೇ ವ್ರಜೇಚ್ಚಂದ್ರಸ್ಸದೈವತೈಃ ।
ಶಿವಮಾರಾಧಯೇತ್ತತ್ರ ಮೃತ್ಯುಂಜಯವಿಧಾನತಃ ॥ ೩೩ ॥

ನಿಧಾಯೇಶಂ ಪುರಸ್ತತ್ರ ಚಂದ್ರಸ್ತಪತು ನಿತ್ಯಶಃ ।
ಪ್ರಸನ್ನಶ್ಚ ಶಿವಃ ಪಶ್ಚಾದಕ್ಷಯಂ ತಂ ಕರಿಷ್ಯತಿ ॥ ೩೪ ॥

---

ನಾನು ಆ ತಾರೆಯು ಗರ್ಭವನ್ನು ತ್ಯಾಗಮಾಡಿಸುವ ಸಂದರ್ಭದಲ್ಲಿ ಈ ಗರ್ಭವು ಯಾರದೆಂದು ಪ್ರಶ್ನೆ ಮಾಡಲು ಚಂದ್ರನಿಂದುಂಟಾದುದೆಂದು ಅವಳು ಹೇಳಿದಳು. ಗರ್ಭತ್ಯಾಗ ಮಾಡಿದಮೇಲೆ ಅವಳನ್ನು ಗುರುವು ಗ್ರಹಿಸಿದನು. ಇಂತಹ ದುಷ್ಟ ನಡತೆಗಳು ಚಂದ್ರನಿಗೆ ಅನೇಕವಾಗಿರುವುವು. ಅವುಗಳನ್ನು ಏನೆಂದು ವರ್ಣಿಸಲಿ? ಅವನು ಈಗಲೂ ಹಾಗೆಯೇ ಮಾಡುವನು.

೩೨-೩೪. ಹೀಗೆ ಆದುದು ಒಳ್ಳೆಯದೇ ಆಯಿತು. ಆದುದರಿಂದ ಮುಂದೆ ನಿಮಗೊಂದು ಉಪಾಯವನ್ನು ಹೇಳುವೆನು ಕೇಳಿರಿ. ಪ್ರಭಾಸವೆಂಬ ಶುಭವಾದ ಕ್ಷೇತ್ರಕ್ಕೆ ಚಂದ್ರನು ದೇವತೆಗಳೊಡನೆ ಹೋಗಲಿ. ಅಲ್ಲಿ ಮೃತ್ಯುಂಜಯಮಂತ್ರ ವಿಧಿಯನ್ನನುಸರಿಸಿ ಶಿವನನ್ನು ಪೂಜಿಸಲಿ. ಅಲ್ಲಿ ಶಿವಲಿಂಗವನ್ನು ತನ್ನಮುಂದೆ ಇಟ್ಟುಕೊಂಡು ಪ್ರತಿದಿನವೂ ತಪಸ್ಸನ್ನು ಮಾಡಲಿ. ಆಮೇಲೆ ಶಿವನು ಪ್ರತ್ಯಕ್ಷವಾಗಿ ಅವನಿಗೆ ಕ್ಷಯರೋಗವನ್ನು ನಾಶಮಾಡುವನು ಎಂದನು.

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಬ್ರಹ್ಮಣಸ್ತೇ ಸುರರ್ಷಯಃ ।
ಸಂನಿವೃತ್ತ್ಯಾಯಯುಸ್ಸರ್ವೇ ಯತ್ರ ದಕ್ಷವಿಧೂ ತತಃ ॥ ೩೫ ॥

ಗೃಹೀತ್ವಾ ತೇ ತತಶ್ಚಂದ್ರಂ ದಕ್ಷಂ ಚಾಶ್ವಾಸ್ಯ ನಿರ್ಜರಾಃ ।
ಪ್ರಭಾಸೇ ಋಷಯಶ್ಚಕ್ರುಸ್ತತ್ರ ಗತ್ವಾಖಿಲಾಶ್ಚ ವೈ ॥ ೩೬ ॥

ಆವಾಹ್ಯ ತೀರ್ಥವರ್ಯಾಣಿ ಸರಸ್ವತ್ಯಾದಿಕಾನಿ ಚ ।
ಪಾರ್ಥಿವೇನ ತದಾ ಪೂಜಾಂ ಮೃತ್ಯುಂಜಯವಿಧಾನತಃ ॥ ೩೭ ॥

ತೇ ದೇವಾಶ್ಚ ತದಾ ಸರ್ವೇ ಋಷಯೋ ನಿರ್ಮಲಾಶಯಾಃ ।
ಸ್ಥಾಪ್ಯ ಚಂದ್ರಂ ಪ್ರಭಾಸೇ ಚ ಸ್ವಂ ಸ್ವಂ ಧಾಮ ಯಯುರ್ಮುದಾ ॥

ಚಂದ್ರೇಣ ಚ ತಪಸ್ತಪ್ತಂ ಷಣ್ಮಾಸಂ ಚ ನಿರಂತರಂ ।
ಮೃತ್ಯುಂಜಯೇನ ಮಂತ್ರೇಣ ಪೂಜಿತೋ ವೃಷಭಧ್ವಜಃ ॥ ೩೯ ॥

ದಶಕೋಟಿಮಿತಂ ಮಂತ್ರಂ ಸಮಾವೃತ್ಯ ಶಶೀ ಚ ತಂ ।
ಧ್ಯಾತ್ವಾ ಮೃತ್ಯುಂಜಯಂ ಮಂತ್ರಂ ತಸ್ಥೌ ನಿಶ್ಚಲಮಾನಸಃ ॥ ೪೦ ॥

---

೩೫-೩೮. ಹೀಗೆ ಹೇಳಿದ ಬ್ರಹ್ಮನ ಮಾತನ್ನು ದೇವರ್ಷಿಗಳು ಕೇಳಿ, ದಕ್ಷ, ಚಂದ್ರರಿಬ್ಬರೂ ಇದ್ದ ಸ್ಥಳಕ್ಕೆ ಹಿಂದಿರುಗಿ ಬಂದರು. ದೇವತೆಗಳು ದಕ್ಷನನ್ನು ಸಮಾಧಾನಪಡಿಸಿ ಚಂದ್ರನನ್ನು ಕರೆದುಕೊಂಡು ಋಷಿಗಳೊಡನೆ ಪ್ರಭಾಸಕ್ಷೇತ್ರಕ್ಕೆ ಹೋದರು ಆ ಕ್ಷೇತ್ರದಲ್ಲಿ ಸರಸ್ವತಿಯೇ ಮುಂತಾದ ಸಮಸ್ತತೀರ್ಥಗಳನ್ನೂ ಆವಾಹನೆಮಾಡಿದರು. ಪಾರ್ಥಿವಲಿಂಗವನ್ನು ಮಾಡಿ ಮೃತ್ಯುಂಜಯ ಮಂತ್ರವಿಧಿಯಿಂದ ಪೂಜಿಸಬೇಕೆಂದು ಹೇಳಿ ಚಂದ್ರನನ್ನು ಅಲ್ಲಿಯೇ ಬಿಟ್ಟು ಋಷಿಗಳೂ, ದೇವತೆಗಳೂ, ಪರಿಶುದ್ಧವಾದ ಮನಸ್ಸುಳ್ಳವರಾಗಿ ಸಂತೋಷದಿಂದ ತಮ್ಮ ಸ್ಥಳಗಳಿಗೆ ಹೊರಟುಹೋದರು.

೩೯-೪೧. ಚಂದ್ರನು ಪ್ರತಿದಿನವೂ ತಪಸ್ಸನ್ನು ಮಾಡುತ್ತಾ ಆರು ತಿಂಗಳ ವರೆಗೆ ಮೃತ್ಯುಂಜಯಮಂತ್ರವಿಧಿಯಿಂದ ಶಿವನನ್ನು ಪೂಜಿಸಿದನು. ಚಂದ್ರನು

ತಂ ದೃಷ್ಟ್ವಾ ಶಂಕರೋ ದೇವಃ ಪ್ರಸನ್ನೋಽಭೂತ್ತತಃ ಪ್ರಭುಃ ।
ಆವಿರ್ಭೂಯ ವಿಧುಂ ಪ್ರಾಹ ಸ್ವಭಕ್ತಂ ಭಕ್ತವತ್ಸಲಃ ॥ ೪೧ ॥

॥ ಶಂಕರ ಉವಾಚ ॥

ವರಂ ವೃಣೀಷ್ವ ಭದ್ರಂ ತೇ ಮನಸಾ ಯತ್ಸಮೀಪ್ಸಿತಂ ।
ಪ್ರಸನ್ನೋಽಹಂ ಶಶಿನ್ಸರ್ವಂ ದಾಸ್ಯೇ ವರಮನುತ್ತಮಂ ॥ ೪೨ ॥

॥ ಚಂದ್ರ ಉವಾಚ ॥

ಯದಿ ಪ್ರಸನ್ನೋ ದೇವೇಶ ಕಿಮಸಾಧ್ಯಂ ಭವೇನ್ಮಮ ।
ತಥಾಪಿ ಮೇ ಶರೀರಸ್ಯ ಕ್ಷಯಂ ವಾರಯ ಶಂಕರ ॥ ೪೩ ॥

ಕ್ಷಂತವ್ಯೋ ಮೇಽಪರಾಧಶ್ಚ ಕಲ್ಯಾಣಂ ಕುರು ಸರ್ವದಾ ।
ಇತ್ಯುಕ್ತೇ ಚ ತದಾ ತೇನ ಶಿವೋ ವಚನಮಬ್ರವೀತ್ ॥ ೪೪ ॥

---

ಹತ್ತುಕೋಟಿ ಮೃತ್ಯುಂಜಯಮಂತ್ರವನ್ನು ಜಪಿಸಿ ಈಶ್ವರನನ್ನು ಧ್ಯಾನಮಾಡುತ್ತ ಏಕಾಗ್ರಚಿತ್ತನಾಗಿದ್ದನು. ಆ ಚಂದ್ರನನ್ನು ನೋಡಿ ಸ್ವಾಮಿಯಾದ ಶಿವನು ಸಂತೋಷ ಪಟ್ಟು ಅವನಿಗೆ ಪ್ರತ್ಯಕ್ಷನಾಗಿ ಅವನನ್ನು ಕುರಿತು,

೪೨. ಶಿವನು ಹೇಳಿದನು.—ಎಲೈ, ಚಂದ್ರನೆ! ನನಗೆ ಸಂತೋಷವಾಯಿತು. ನಿನ್ನ ಮನಸ್ಸಿನ ಅಪೇಕ್ಷೆಯನ್ನು ಕೇಳಿಕೋ. ನಾನು ಶ್ರೇಷ್ಠವಾದ ವರನ್ನು ಕೊಡು ವೆನು ಎನ್ನಲು,

೪೩-೪೪. ಚಂದ್ರನು ಕೇಳಿದನು.—ಎಲೈ, ಸ್ವಾಮಿಯೇ! ನೀನು ಪ್ರಸನ್ನ ನಾದಮೇಲೆ ನನಗೆ ಅಸಾಧ್ಯವಾದುದಾವುದಿರುವುದು? ಆದರೂ ನನ್ನ ಶರೀರಕ್ಕೆ ಉಂಟಾಗಿರುವ ಈ ಕ್ಷಯ ರೋಗವನ್ನು ನಿವಾರಣೆ ಮಾಡೆಂದು ಕೇಳಿಕೊಳ್ಳುವೆನು. ನನ್ನ ತಪ್ಪನ್ನು ಕ್ಷಮಿಸಿ ನನಗೆ ಯಾವಾಗಲೂ ಮಂಗಳವನ್ನುಂಟುಮಾಡು. ಎಂದು ಪ್ರಾರ್ಥಿಸಿದನು.

॥ ಶಿವ ಉವಾಚ ॥

ಪಕ್ಷೇ ಚ ಕ್ಷೀಯತಾಂ ಚಂದ್ರ ಕಲಾ ತೇ ಚ ದಿನೇ ದಿನೇ ।
ಪುನಶ್ಚ ವರ್ಧತಾಂ ಪಕ್ಷೇ ಸಾ ಕಲಾ ಚ ನಿರಂತರಂ ॥ ೪೫ ॥

॥ ಸೂತ ಉವಾಚ ॥

ಏವಂ ಸತಿ ತದಾ ದೇವಾ ಹರ್ಷನಿರ್ಭರಮಾನಸಾಃ ।
ಋಷಯಶ್ಚ ತಥಾ ಸರ್ವೇ ಸಮಾಜಗ್ಮುರ್ದ್ರುತಂ ದ್ವಿಜಾಃ ॥ ೪೬ ॥

ಆಗತ್ಯ ಚ ತದಾ ಸರ್ವೇ ಚಂದ್ರಾಯಾಶಿಷಮಬ್ರುವನ್ ।
ಶಿವಂ ನತ್ವಾ ಕರೌ ಬಧ್ವಾ ಪ್ರಾರ್ಥಯಾಮಾಸುರಾದರಾತ್ ॥ ೪೭ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಪರಮೇಶ ನಮೋಽಸ್ತು ತೇ ।
ಉಮಯಾ ಸಹಿತಶ್ಶಂಭೋ ಸ್ವಾಮಿನ್ನತ್ರ ಸ್ಥಿರೋ ಭವ ॥ ೪೮ ॥

---

೪೫. ಶಿವನು ಹೇಳಿದನು.—ಎಲೈ, ಚಂದ್ರನೇ! ನಿನ್ನ ಕಾಂತಿಯು ಕೃಷ್ಣ ಪಕ್ಷದಲ್ಲಿ ಕ್ಷೀಣಿಸಲಿ, ಶುಕ್ಲಪಕ್ಷದಲ್ಲಿ ಅಭಿವೃದ್ಧಿಯಾಗಲಿ. ನಿನ್ನಲ್ಲಿ ಕಾಂತಿಯು ಯಾವಾಗಲೂ ಇದ್ದೇ ಇರಲಿ ಎಂದನು.

೪೬-೪೭. ಹೀಗೆ ಶಿವನು ವರವನ್ನು ಕೊಡಲು ದೇವತೆಗಳು ಸಂತೋಷದಿಂದ ಋಷಿಗಳೊಡನೆ ಅಲ್ಲಿಗೆ ಬಂದು ಎಲ್ಲರೂ ಚಂದ್ರನಿಗೆ ಆಶೀರ್ವಾದವನ್ನು ಮಾಡಿದರು. ಬಳಿಕ ಶಿವನಿಗೆ ನಮಸ್ಕಾರವನ್ನು ಮಾಡಿ ಕೈ ಜೋಡಿಸಿಕೊಂಡು ಭಕ್ತಿಯಿಂದ ಸ್ತೋತ್ರಮಾಡಿದರು.

೪೮. ದೇವತೆಗಳು ಹೇಳಿದರು.—ಎಲೈ, ದೇವತೆಗಳಿಗೆಲ್ಲಾ ಸ್ವಾಮಿಯಾದ ಪರಮೇಶ್ವರನೇ! ನಿನಗೆ ನಮಸ್ಕಾರ ಮಾಡುವೆವು. ನೀನು ಉಮಾದೇವಿ ಸಹಿತನಾಗಿ ಇಲ್ಲಿ ನೆಲಸಬೇಕು ಎಂದರು.

॥ ಸೂತ ಉವಾಚ ॥

ತತಶ್ಚಂದ್ರೇಣ ಸದ್ಭಕ್ತ್ಯಾ ಸಂಸ್ತುತಶ್ಶಂಕರಃ ಪುರಾ ।
ನಿರಾಕಾರಶ್ಚ ಸಾಕಾರಃ ಪುನಶ್ಚೈವಾಭವತ್ಪ್ರಭುಃ ॥ ೪೯ ॥

ಪ್ರಸನ್ನಶ್ಚ ಸ ದೇವಾನಾಂ ಕ್ಷೇತ್ರಮಾಹಾತ್ಮ್ಯಹೇತವೇ ।
ಚಂದ್ರಸ್ಯ ಯಶಸೇ ತತ್ರ ನಾಮ್ನಾ ಚಂದ್ರಸ್ಯ ಶಂಕರಃ ॥ ೫೦ ॥

ಸೋಮೇಶ್ವರಶ್ಚ ನಾಮ್ನಾಸೀದ್ವಿಖ್ಯಾತೋ ಭುವನತ್ರಯೇ ।
ಕ್ಷಯಕುಷ್ಠಾದಿರೋಗಾಣಾಂ ನಾಶಕಃ ಪೂಜನಾದ್ದ್ವಿಜಾಃ ॥ ೫೧ ॥

ಧನ್ಯೋಽಯಂ ಕೃತಕೃತ್ಯೋಽಯಂ ಯನ್ನಾಮ್ನಾ ಶಂಕರಃ ಸ್ವಯಂ ।
ಸ್ಥಿತಶ್ಚ ಜಗತಾಂ ನಾಥಃ ಪಾವಯಞ್ಜಗತೀತಲಂ ॥ ೫೨ ॥

ತತ್ಕುಂಡಂ ತೈಶ್ಚ ತತ್ರೈವ ಸರ್ವೈರ್ದೇವೈಃ ಪ್ರತಿಷ್ಠಿತಂ ।
ಶಿವೇನ ಬ್ರಹ್ಮಣಾ ತತ್ರ ಹ್ಯವಿಭಕ್ತಂ ತು ತತ್ಪುನಃ ॥ ೫೩ ॥

---

೪೯-೫೧. ಆಮೇಲೆ ಚಂದ್ರನು ಶಿವನನ್ನು ಸ್ತೋತ್ರಮಾಡಿದನು. ಬಳಿಕ ನಿರ್ಗುಣನೂ, ನಿರಾಕಾರನೂ ಆದ ಶಿವನು ಸುಗುಣನೂ ಸಾಕಾರನೂ ಆಗಿ ಅಲ್ಲಿ ನೆಲಸಿದನು. ದೇವತೆಗಳಿಗೆ ಪ್ರಸನ್ನನಾದ ಶಿವನು ಕ್ಷೇತ್ರಮಾಹಾತ್ಮ್ಯಗಾಗಿಯೂ ಚಂದ್ರನಿಗೆ ಕೀರ್ತಿ ಬರುವುದಕ್ಕಾಗಿಯೂ ಸೋಮೇಶ್ವರನೆಂಬ ಹೆಸರಿನಿಂದ ಮೂರು ಲೋಕದಲ್ಲಿಯೂ ಪ್ರಸಿದ್ಧನಾದನು. ಆ ಸೋಮೇಶ್ವರನ ಪೂಜೆಯಿಂದ ಕ್ಷಯ, ಕುಷ್ಠಾದಿ ರೋಗಗಳು ನಾಶವಾಗುವುವು.

೫೨-೫೫. ಲೋಕಕ್ಕೆಲ್ಲಾ ಸ್ವಾಮಿಯಾದ ಶಂಕರನು ಸೋಮೇಶ್ವರನೆಂಬ ಹೆಸರನ್ನು ಹೊಂದಿ ಭೂಮಂಡಲವನ್ನು ಪಾಪವಿಲ್ಲದುದಾಗಿ ಮಾಡುತ್ತಾ ಈ ಸ್ಥಳದಲ್ಲಿ ಚಂದ್ರನಿಗೋಸ್ಕರವಾಗಿ ನೆಲೆಸಿದುದರಿಂದ ಆ ಚಂದ್ರನೇ ಕೃತಾರ್ಥನು. ಆ ಲಿಂಗದ ಸಮೀಪದಲ್ಲಿರುವ ತೀರ್ಥವು ದೇವತೆಗಳಿಂದಲೂ, ಬ್ರಹ್ಮನಿಂದಲೂ, ಶಿವನಿಂದಲೂ

ಚಂದ್ರಕುಂಡಂ ಪ್ರಸಿದ್ಧಂ ಚ ಪೃಥಿವ್ಯಾಂ ಪಾಪನಾಶನಂ ।
ತತ್ರ ಸ್ನಾತಿ ನರೋ ಯಸ್ಸ ಸರ್ವೈಃ ಪಾಪೈಃ ಪ್ರಮುಚ್ಯತೇ ॥ ೫೪ ॥

ರೋಗಾಸ್ಸರ್ವೇ ಕ್ಷಯಾದ್ಯಾಶ್ಚ ಹ್ಯಸಾಧ್ಯಾ ಯೇ ಭವಂತಿ ವೈ ।
ತೇ ಸರ್ವೇ ಚ ಕ್ಷಯಂ ಯಾಂತಿ ಷಣ್ಮಾಸಂ ಸ್ನಾನಮಾತ್ರತಃ ॥ ೫೫ ॥

ಪ್ರಭಾಸಂ ಚ ಪರಿಕ್ರಮ್ಯ ಪೃಥಿವೀಕ್ರಮಸಂಭವಂ ।
ಫಲಂ ಪ್ರಾಪ್ನೋತಿ ಶುದ್ಧಾತ್ಮಾ ಮೃತಸ್ಸ್ವರ್ಗೇ ಮಹೀಯತೇ ॥ ೫೬ ॥

ಸೋಮಲಿಂಗಂ ನರೋ ದೃಷ್ಟ್ವಾ ಸರ್ವಪಾಪಾತ್ಪ್ರಮುಚ್ಯತೇ ।
ಲಬ್ಧ್ವಾ ಫಲಂ ಮನೋಭೀಷ್ಟಂ ಮೃತಸ್ಸ್ವರ್ಗಂ ಸಮೀಹತೇ ॥ ೫೭ ॥

ಯದ್ಯತ್ಫಲಂ ಸಮುದ್ದಿಶ್ಯ ಕುರುತೇ ತೀರ್ಥಮುತ್ತಮಂ ।
ತತ್ತತ್ಫಲಮವಾಪ್ನೋತಿ ಸರ್ವಥಾ ನಾತ್ರ ಸಂಶಯಃ ॥ ೫೮ ॥

---

ಸ್ಥಾಪಿತವಾಗಿ ಚಂದ್ರಕುಂಡವೆಂದು ಲೋಕದಲ್ಲಿ ಪ್ರಸಿದ್ಧವಾಗಿರುವುದು. ಅಲ್ಲಿ ಸ್ನಾನ ಮಾಡಿದ ಮನುಷ್ಯನ ಪಾಪಗಳೆಲ್ಲಾ ನಾಶವಾಗುವುವು. ಅಸಾಧ್ಯವಾದ ಕ್ಷಯ ರೋಗವೇ ಮುಂತಾದ ಸಮಸ್ತ ರೋಗಗಳೂ ಆ ತೀರ್ಥದಲ್ಲಿ ಆರು ತಿಂಗಳು ಸ್ನಾನ ಮಾಡಿದ ಮಾತ್ರದಿಂದ ನಿವಾರಣೆಯಾಗುವುವು.

೫೬. ಪರಿಶುದ್ಧವಾದ ಮನಸ್ಸಿನಿಂದ ಪ್ರಭಾಸತೀರ್ಥವನ್ನು ಪ್ರದಕ್ಷಿಣೆಮಾಡಿದ ಮನುಷ್ಯನು ಭೂಪ್ರದಕ್ಷಿಣೆಯನ್ನು ಮಾಡಿದ ಫಲವನ್ನು ಹೊಂದಿ ಮರಣಾನಂತರ ಸ್ವರ್ಗಸುಖವನ್ನನುಭವಿಸುವನು.

೫೭. ಸೋಮೇಶ್ವರ ಲಿಂಗವನ್ನು ದರ್ಶನಮಾಡಿದ ಮನುಜನು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಈ ಲೋಕದಲ್ಲಿ ಇಷ್ಟಾರ್ಥಫಲವನ್ನು ಹೊಂದಿ ಪರದಲ್ಲಿ ಸ್ವರ್ಗಸುಖವನ್ನನುಭವಿಸುವನು.

೫೮. ಯಾವ ಯಾವ ಫಲಾಪೇಕ್ಷೆಯಿಂದ ಮನುಜರು ಈ ಉತ್ತಮವಾದ ತೀರ್ಥಸೇವೆಯನ್ನು ಮಾಡುವರೋ ಆಯಾ ಫಲಗಳು ಸಿದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

ಇತಿ ತೇ ಋಷಯೋ ದೇವಾಃ ಫಲಂ ದೃಷ್ಟ್ವಾ ತಥಾವಿಧಂ ।
ಮುದಾ ಶಿವಂ ನಮಸ್ಕೃತ್ಯ ಗೃಹೀತ್ವಾ ಚಂದ್ರಮಕ್ಷಯಂ ॥ ೫೯ ॥

ಪರಿಕ್ರಮ್ಯ ಚ ತತ್ತೀರ್ಥಂ ಪ್ರಶಂಸಂತಶ್ಚ ತೇ ಯಯುಃ ।
ಚಂದ್ರಶ್ಚಾಪಿ ಸ್ವಕೀಯಂ ಚ ಕಾರ್ಯಂ ಚಕ್ರೇ ಪುರಾತನಂ ॥ ೬೦ ॥

ಇತಿ ಸರ್ವಃ ಸಮಾಖ್ಯಾತಃ ಸೋಮೇಶಸ್ಯ ಸಮುದ್ಭವಃ ।
ಏವಂ ಸೋಮೇಶ್ವರಂ ಲಿಂಗಂ ಸಮುತ್ಪನ್ನಂ ಮುನೀಶ್ವರಾಃ ॥ ೬೧ ॥

ಯಃ ಶೃಣೋತಿ ತದುತ್ಪತ್ತಿಂ ಶ್ರಾವಯೇದ್ವಾ ಪರಾನ್ನರಃ ।
ಸರ್ವಾನ್ಕಾಮಾನವಾಪ್ನೋತಿ ಸರ್ವಪಾಪೈಃ ಪ್ರಮುಚ್ಯತೇ ॥ ೬೨ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಸೋಮನಾಥಜ್ಯೋತಿರ್ಲಿಂಗೋತ್ಪತ್ತಿವರ್ಣನಂ ನಾಮ
ಚತುರ್ದಶೋಽಧ್ಯಾಯಃ

---

೫೯-೬೦. ಹೀಗೆ ಆ ಋಷಿಗಳೂ, ದೇವತೆಗಳೂ ಈ ಸೋಮನಾಥಲಿಂಗದಲ್ಲಿ ಆ ವಿಧವಾದ ಫಲವನ್ನು ಕಂಡು ಸಂತೋಷದಿಂದ ಶಿವನಿಗೆ ನಮಸ್ಕಾರಮಾಡಿ, ಕ್ಷಯ ರೋಗವಿಲ್ಲದ ಚಂದ್ರನನ್ನು ಕರೆದುಕೊಂಡು ಆ ತೀರ್ಥವನ್ನು ಪ್ರದಕ್ಷಿಣೆಮಾಡಿ ಹೊಗಳುತ್ತ ಹೊರಟುಹೋದರು. ಚಂದ್ರನು ತಾನು ಹಿಂದಿನಂತೆ ಮಾಡಬೇಕಾದ ಕಾರ್ಯಗಳನ್ನು ಮಾಡುತ್ತಿದ್ದನು.

೬೧-೬೨. ಎಲೈ, ಋಷಿಶ್ರೇಷ್ಠರೇ! ಸೋಮೇಶ್ವರನ ಉತ್ಪತ್ತಿ ವಿಷಯವಾದ ಸಮಸ್ತ ಸಂಗತಿಯನ್ನೂ ನಿಮಗೆ ಹೇಳಿದೆನು. ಯಾವ ಮನುಷ್ಯನು ಸೋಮೇಶ್ವರ ಲಿಂಗದ ಉತ್ಪತ್ತಿಯನ್ನು ಕೇಳುವನೋ ಅಥವಾ ಇತರರಿಗೆ ಹೇಳುವನೋ ಅವನು ಸಕಲ ಪಾಪಗಳಿಂದ ನಿರ್ಮುಕ್ತನಾಗಿ ಸಮಸ್ತ ಇಷ್ಟಾರ್ಥಗಳನ್ನೂ ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಸೋಮನಾಥಜ್ಯೋತಿರ್ಲಿಂಗೋತ್ಪತ್ತಿವರ್ಣನೆಯೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ಪಂಚದಶೋಽಧ್ಯಾಯಃ

॥ ಸೂತ ಉವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಮಲ್ಲಿಕಾರ್ಜುನಸಂಭವಂ ।**
**ಯಂ ಶ್ರುತ್ವಾ ಭಕ್ತಿಮಾನ್ಧೀಮಾನ್ಸರ್ವಪಾಪೈಃ ಪ್ರಮುಚ್ಯತೇ ॥ ೧ ॥**

**ಪೂರ್ವಂ ಚ ಕಥಿತಂ ಯಚ್ಚ ತತ್ಪುನಃ ಕಥಯಾಮ್ಯಹಂ ।**
**ಕುಮಾರಚರಿತಂ ದಿವ್ಯಂ ಸರ್ವಪಾಪವಿನಾಶನಂ ॥ ೨ ॥**

---

## ಹದಿನೈದನೆಯ ಅಧ್ಯಾಯವು.

೧-೨. ಸೂತನು ಹೇಳಿದನು.—ಇಲ್ಲಿಂದ ಮುಂದೆ ಮಲ್ಲಿಕಾರ್ಜುನ ಲಿಂಗದ ಉತ್ಪತ್ತಿಯ ವಿಷಯವನ್ನು ಹೇಳುವೆನು. ಇದನ್ನು ಕೇಳಿದ ಮನುಜನು ಶಿವನಲ್ಲಿ ಭಕ್ತಿಯುಳ್ಳವನಾಗಿಯೂ ಬುದ್ಧಿವಂತನಾಗಿಯೂ ಆಗಿ ಸಕಲ ಪಾಪರಹಿತನಾಗುವನು. ಹಿಂದೆ ಹೇಳಿದ ಕಥೆಯನ್ನೇ ಈಗ ಹೇಳುವೆನು, ಇದು ಕುಮಾರಸ್ವಾಮಿಯ ಚರಿತ್ರೆಯು. ಬಹು ಶ್ರೇಷ್ಠವಾದುದು. ಸಮಸ್ತ ಪಾಪನಾಶಕವಾಗಿಯೂ ಇರುವುದು.

ಯದಾ ಪೃಥ್ವೀಂ ಸಮಾಕ್ರಮ್ಯ ಕೈಲಾಸಂ ಪುನರಾಗತಃ ।
ಕುಮಾರಸ್ಸ ಶಿವಾಪುತ್ರಸ್ತಾರಕಾರಿರ್ಮಹಾಬಲಃ ॥ ೩ ॥

ತದಾ ಸುರರ್ಷಿರಾಗತ್ಯ ಸರ್ವಂ ವೃತ್ತಂ ಜಗಾದ ಹ ।
ಗಣೇಶ್ವರವಿವಾಹಾದಿ ಭ್ರಾಮಯಂಸ್ತಂ ಸ್ವಬುದ್ಧಿತಃ ॥ ೪ ॥

ತಚ್ಛ್ರುತ್ವಾ ಸ ಕುಮಾರೋ ಹಿ ಪ್ರಣಮ್ಯ ಪಿತರೌ ಚ ತೌ ।
ಜಗಾಮ ಪರ್ವತಂ ಕ್ರೌಂಚಂ ಪಿತೃಭ್ಯಾಂ ವಾರಿತೋಽಪಿ ಹಿ ॥ ೫ ॥

ಕುಮಾರಸ್ಯ ವಿಯೋಗೇನ ತನ್ಮಾತಾ ಗಿರಿಜಾ ಯದಾ ।
ದುಃಖಿತಾಸೀತ್ತದಾ ಶಂಭುಸ್ತಾಮುವಾಚ ಸುಬೋಧಕೃತ್ ॥ ೬ ॥

ಕಥಂ ಪ್ರಿಯೇ ದುಃಖಿತಾಸಿ ನ ದುಃಖಂ ಕುರು ಪಾರ್ವತಿ ।
ಆಯಾಸ್ಯತಿ ಸುತಃ ಸುಭ್ರೂಸ್ತ್ಯಜ್ಯತಾಂ ದುಃಖಮುತ್ಕಟಂ ॥ ೭ ॥

ಸಾ ಯದಾ ಚ ನ ತನ್ಮೇನೇ ಪಾರ್ವತೀ ದುಃಖಿತಾ ಭೃಶಂ ।
ತದಾ ಚ ಪ್ರೇಷಿತಾಸ್ತತ್ರ ಶಂಕರೇಣ ಸುರರ್ಷಯಃ ॥ ೮ ॥

---

೩-೫. ಪಾರ್ವತಿಯ ಪುತ್ರನೂ, ತಾರಕಾಸುರನ ಶತ್ರುವೂ, ಮಹಾಬಲಶಾಲಿಯೂ ಆದ ಕುಮಾರಸ್ವಾಮಿಯು ಭೂಪ್ರದಕ್ಷಿಣೆಯನ್ನು ಮಾಡಿಕೊಂಡು ಕೈಲಾಸಕ್ಕೆ ಬಂದಮೇಲೆ ದೇವರ್ಷಿಯಾದ ನಾರದನು ಆ ಸಮಯಕ್ಕೆ ಸರಿಯಾಗಿ ಬಂದು ಗಣಪತಿಯ ವಿವಾಹವೇ ಮುಂತಾದ ವಿಷಯಗಳನ್ನು ಮಾತನಾಡುತ್ತ ತನ್ನ ಬುದ್ಧಿಶಕ್ತಿಯಿಂದ ಕುಮಾರಸ್ವಾಮಿಗೆ ಭ್ರಾಂತಿಯನ್ನುಂಟುಮಾಡಿದನು. ಆ ಮಾತನ್ನು ಕೇಳಿ ಕುಮಾರಸ್ವಾಮಿಯು ತಂದೆ, ತಾಯಿಗಳಿಗೆ ನಮಸ್ಕಾರವನ್ನು ಮಾಡಿ ಕ್ರೌಂಚ ಪರ್ವತಕ್ಕೆ ಹೊರಟುಹೋದನು. ಅವರು ಹೋಗಬೇಡವೆಂದರೂ ಕೇಳಲಿಲ್ಲ.

೬-೭. ಕುಮಾರಸ್ವಾಮಿಯ ಅಗಲಿಕೆಯಿಂದ ತಾಯಿಯಾದ ಪಾರ್ವತಿಯು ದುಃಖಪಡುತ್ತಿರಲು ಶಿವನು ಜ್ಞಾನಪ್ರದವಾದ ಮಾತಿನಿಂದ ಆಕೆಯನ್ನು ಕುರಿತು— ಎಲೈ, ಪಾರ್ವತಿಯೇ! ಏಕೆ ದುಃಖಿಸುತ್ತಿರುವೆ? ದುಃಖಪಡಬೇಡ ನಿನ್ನ ಪುತ್ರನು ಬರುವನು. ದುಃಖವನ್ನು ಬಿಡು.

೮. ಹೀಗೆಂದು ಶಿವನು ಹೇಳಿದರೂ ಪಾರ್ವತಿಯು ಮನಸ್ಸಿಗೆ ತೆಗೆದುಕೊಳ್ಳದೆ ಬಹುವಾಗಿ ವ್ಯಸನಪಡುತ್ತಿರಲು ಶಿವನು ದೇವರ್ಷಿಗಳನ್ನು ಕುಮಾರಸ್ವಾಮಿಯ ಸಮೀಪಕ್ಕೆ ಕಳುಹಿಸಿದನು.

ದೇವಾಶ್ಚ ಋಷಯಸ್ಸರ್ವೇ ಸಗಣಾ ಹಿ ಮುದಾನ್ವಿತಾಃ ।
ಕುಮಾರಾನಯನಾರ್ಥಂ ವೈ ತತ್ರ ಜಗ್ಮುಃ ಸುಬುದ್ಧಯಃ ॥ ೯ ॥

ತತ್ರ ಗತ್ವಾ ಚ ತೇ ಸರ್ವೇ ಕುಮಾರಂ ಸುಪ್ರಣಮ್ಯ ಚ ।
ವಿಜ್ಞಾಪ್ಯ ಬಹುಧಾಪ್ಯೇನಂ ಪ್ರಾರ್ಥನಾಂ ಚಕ್ರುರಾದರಾತ್ ॥ ೧೦ ॥

ದೇವಾದಿಪ್ರಾರ್ಥನಾಂ ತಾಂ ಚ ಶಿವಾಜ್ಞಾಸಂಕುಲಾಂ ಗುರುಃ ।
ನ ಮೇನೇ ಸ ಕುಮಾರೋ ಹಿ ಮಹಾಹಂಕಾರವಿಹ್ವಲಃ ॥ ೧೧ ॥

ತತಶ್ಚ ಪುನರಾವೃತ್ಯ ಸರ್ವೇ ತೇ ಹಿ ಶಿವಾಂತಿಕಂ ।
ಸ್ವಂ ಸ್ವಂ ಸ್ಥಾನಂ ಗತಾ ನತ್ವಾ ಪ್ರಾಪ್ಯ ಶಂಕರಶಾಸನಂ ॥ ೧೨ ॥

ತದಾ ಚ ಗಿರಿಜಾ ದೇವೀ ವಿರಹಂ ಪುತ್ರಸಂಭವಂ ।
ಶಂಭುಶ್ಚ ಪರಮಂ ದುಃಖಂ ಪ್ರಾಪ ತಸ್ಮಿನ್ನನಾಗತೇ ॥ ೧೩ ॥

---

೯-೧೦. ಬುದ್ಧಿವಂತರಾದ ದೇವತೆಗಳೂ, ಋಷಿಗಳೂ ಸೇರಿ ಸಂತೋಷದಿಂದ ಕುಮಾರಸ್ವಾಮಿಯನ್ನು ಕರೆದುಕೊಂಡು ಬರುವುದಕ್ಕಾಗಿ ಕ್ರೌಂಚಪರ್ವತಕ್ಕೆ ಹೋಗಿ ಕುಮಾರಸ್ವಾಮಿಗೆ ನಮಸ್ಕರಿಸಿ ಪ್ರೀತಿಯಿಂದ ಅನೇಕ ಬಗೆಯಲ್ಲಿ ಪ್ರಾರ್ಥನೆಯನ್ನು ಮಾಡಿಕೊಂಡರು.

೧೧-೧೨. ಶಿವನ ಆಜ್ಞೆಯನ್ನನುಸರಿಸಿ ಆ ದೇವತೆಗಳೇ ಮೊದಲಾದವರು ಎಷ್ಟುಬಗೆಯಾಗಿ ಪ್ರಾರ್ಥನೆಯನ್ನು ಮಾಡಿದರೂ ಮಹಾ ಅಹಂಕಾರದಿಂದ ಭ್ರಾಂತನಾದ ಕುಮಾರಸ್ವಾಮಿಯು ಒಪ್ಪಿಕೊಳ್ಳಲಿಲ್ಲ. ಆಮೇಲೆ ಅವರೆಲ್ಲರೂ ಹಿಂದಿರುಗಿ ಶಿವನ ಸಮೀಪಕ್ಕೆ ಬಂದು ಅವನಿಗೆ ನಮಸ್ಕಾರವನ್ನು ಮಾಡಿ ಅವನಪ್ಪಣೆಯಿಂದ ತಂತಮ್ಮ ಸ್ಥಳಗಳಿಗೆ ಹೊರಟು ಹೋದರು.

೧೩-೧೪. ತಮ್ಮ ಪುತ್ರನು ಬರದೆ ಹೋದುದರಿಂದ ಶಿವಪಾರ್ವತಿಯರು ಪುತ್ರವಿರಹದಿಂದ ವಿಶೇಷವಾಗಿ ದುಃಖವನ್ನು ಹೊಂದಿದರು. ಆಮೇಲೆ ಅವರಿಬ್ಬರೂ ಲೋಕವ್ಯವಹಾರವನ್ನನುಸರಿಸಿ ತಮ್ಮ ಪುತ್ರನಲ್ಲಿ ಅತ್ಯಂತ ಪ್ರೀತಿಯಿಂದ ಕೂಡಿದವ

ಅಥೋ ಸುದುಃಖಿತೌ ದೀನೌ ಲೋಕಾಚಾರಕರೌ ತದಾ ।
ಜಗ್ಮತುಸ್ತತ್ರಸುಸ್ನೇಹಾತ್ಸ್ವಪುತ್ರೋ ಯತ್ರ ಸಂಸ್ಥಿತಃ　　　॥ ೧೪ ॥

ಸ ಪುತ್ರಶ್ಚ ಕುಮಾರಾಖ್ಯಃ ಪಿತ್ರೋರಾಗಮನಂ ಗಿರೇಃ ।
ಜ್ಞಾತ್ವಾ ದೂರಂ ಗತೋಽಸ್ನೇಹಾದ್ಯೋಜನತ್ರಯಮೇವ ಚ　　　॥ ೧೫ ॥

ಕ್ರೌಂಚೇ ಚ ಪರ್ವತೇ ದೂರಂ ಗತೇ ತಸ್ಮಿನ್ಸ್ವಪುತ್ರಕೇ ।
ತೌ ಚ ತತ್ರ ಸಮಾಸೀನೌ ಜ್ಯೋತೀರೂಪಂ ಸಮಾಶ್ರಿತೌ　　　॥ ೧೬ ॥

ಪುತ್ರಸ್ನೇಹಾತುರೌ ತೌ ವೈ ಶಿವೌ ಪರ್ವಣಿಪರ್ವಣಿ ।
ದರ್ಶನಾರ್ಥಂ ಕುಮಾರಸ್ಯ ಸ್ವಪುತ್ರಸ್ಯ ಹಿ ಗಚ್ಛತಃ　　　॥ ೧೭ ॥

ಅಮಾವಾಸ್ಯಾದಿನೇ ಶಂಭುಸ್ಸ್ವಯಂ ಗಚ್ಛತಿ ತತ್ರ ಹ ।
ಪೌರ್ಣಮಾಸೀದಿನೇ ತತ್ರ ಪಾರ್ವತೀ ಗಚ್ಛತಿ ಧ್ರುವಂ　　　॥ ೧೮ ॥

ತದ್ದಿನಂ ಹಿ ಸಮಾರಭ್ಯ ಮಲ್ಲಿಕಾರ್ಜುನಸಂಭವಂ ।
ಲಿಂಗಂ ಚೈವ ಶಿವಸ್ಯೈಕಂ ಪ್ರಸಿದ್ಧಂ ಭುವತ್ರಯೇ　　　॥ ೧೯ ॥

---

ರಾಗಿ ಅವನಿದ್ದ ಸ್ಥಳಕ್ಕೆ ತಾವೇ ಹೋದರು. ತಾಯಿ ತಂದೆಗಳು ಅಲ್ಲಿಗೆ ಬಂದಿದ್ದನ್ನು ತಿಳಿದು ಕುಮಾರಸ್ವಾಮಿಯು ಅವರಮೇಲಿನ ಕೋಪದಿಂದ ಮೂರು ಗಾವುದ ದೂರಕ್ಕೆ ಹೊರಟುಹೋದನು.

೧೬-೧೭. ತಮ್ಮ ಪುತ್ರನು ದೂರಕ್ಕೆ ಹೊರಟು ಹೋಗುತ್ತಲು ಶಿವ ಪಾರ್ವತಿಯರು ಆ ಕ್ರೌಂಚಪರ್ವತದಲ್ಲಿ ಜ್ಯೋತಿರ್ಲಿಂಗ ರೂಪವಾಗಿ ನೆಲಸಿದರು. ಮಗನ ಮೇಲಿನ ಪ್ರೀತಿಯಿಂದ ಶಿವದಂಪತಿಗಳು ಪ್ರತಿ ಪರ್ವಕಾಲಗಳಲ್ಲಿಯೂ ತಮ್ಮ ಮಗನಾದ ಕುಮಾರಸ್ವಾಮಿಯ ದರ್ಶನಕ್ಕಾಗಿ ಹೋಗುತ್ತಿರುವರು.

೧೮-೧೯. ಅಮಾವಾಸ್ಯೆಯ ದಿನ ಶಿವನೂ ಪೂರ್ಣಿಮೆಯ ದಿನ ಪಾರ್ವತಿಯೂ ಕುಮಾರಸ್ವಾಮಿಯ ದರ್ಶನಾರ್ಥವಾಗಿ ಹೋಗುವರು. ಆ ದಿನ ಮೊದಲುಗೊಂಡು ಮಲ್ಲಿಕಾರ್ಜುನ ಲಿಂಗವು ಮೂರುಲೋಕದಲ್ಲಿಯೂ ಪ್ರಸಿದ್ಧಿ ಹೊಂದಿರುವುದು.

ತಲ್ಲಿಂಗಂ ಯಃ ಸಮೀಕ್ಷೇತ ಸ ಸರ್ವೈಃ ಕಿಲ್ಬಿಷೈರಪಿ।
ಮುಚ್ಯತೇ ನಾತ್ರ ಸಂದೇಹಃ ಸರ್ವಾನ್ಕಾಮಾನವಾಪ್ನುಯಾತ್ ॥ ೨೦ ॥

ದುಃಖಂ ಚ ದೂರತೋ ಯಾತಿ ಸುಖಮಾತ್ಯಂತಿಕಂ ಲಭೇತ್।
ಜನನೀಗರ್ಭಸಂಭೂತಂ ಕಷ್ಟಂ ನಾಪ್ನೋತಿ ವೈ ಪುನಃ ॥ ೨೧ ॥

ಧನಧಾನ್ಯಸಮೃದ್ಧಿಶ್ಚ ಪ್ರತಿಷ್ಠಾರೋಗ್ಯಮೇವ ಚ।
ಅಭೀಷ್ಟಫಲಸಿದ್ಧಿಶ್ಚ ಜಾಯತೇ ನಾತ್ರ ಸಂಶಯಃ ॥ ೨೨ ॥

ಜ್ಯೋತಿರ್ಲಿಂಗಂ ದ್ವಿತೀಯಂ ಚ ಪ್ರೋಕ್ತಂ ಮಲ್ಲಿಕಸಂಜ್ಞಿತಂ।
ದರ್ಶನಾತ್ಸರ್ವಸುಖದಂ ಕಥಿತಂ ಲೋಕಹೇತವೇ ॥ ೨೩ ॥

ಇತಿ ಶ್ರೀ ಶ್ರೀವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಮಲ್ಲಿಕಾರ್ಜುನದ್ವಿತೀಯಜ್ಯೋತಿರ್ಲಿಂಗವರ್ಣನಂ ನಾಮ
ಪಂಚದಶೋಽಧ್ಯಾಯಃ

---

೨೦-೨೧. ಆ ಲಿಂಗವನ್ನು ಯಾರು ದರ್ಶನಮಾಡುವರೋ ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಇಷ್ಟಾರ್ಥವನ್ನು ಪಡೆಯುವರು. ಈ ವಿಷಯದಲ್ಲಿ ಸಂದೇಹವಿಲ್ಲ. ದುಃಖವು ದೂರವಾಗುವುದು. ಪರಮಸುಖವು ಪ್ರಾಪ್ತವಾಗುವುದು. ಮತ್ತೆ ತಾಯಿಯ ಗರ್ಭಸಂಬಂಧವಾದ ದುಃಖವನ್ನು ಹೊಂದುವುದಿಲ್ಲ.

೨೨-೨೩. ಧನ, ಧಾನ್ಯಸಮೃದ್ಧಿಯೂ ಗೌರವವೂ ಆರೋಗ್ಯವೂ ಇಷ್ಟಾರ್ಥ ಸಿದ್ಧಿಯೂ ಉಂಟಾಗುವುದರಲ್ಲಿ ಸಂದೇಹವಿಲ್ಲ. ಮಲ್ಲಿಕಾರ್ಜುನವೆಂಬ ಎರಡನೆಯ ಜ್ಯೋತಿರ್ಲಿಂಗದ ಮಹಿಮೆಯನ್ನು ಹೇಳಿದೆನು. ಆ ಲಿಂಗದರ್ಶನದಿಂದ ಸಮಸ್ತ ಸುಖಗಳೂ ಪ್ರಾಪ್ತವಾಗುವವು. ಇದನ್ನು ಲೋಕಾನುಗ್ರಹಾರ್ಥವಾಗಿ ಹೇಳಿರುವೆನು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಮಲ್ಲಿಕಾರ್ಜುನವೆಂಬ ಎರಡನೆಯ ಜ್ಯೋತಿರ್ಲಿಂಗವರ್ಣನೆಯೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಷೋಡಶೋಽಧ್ಯಾಯಃ

॥ ಋಷಯ ಊಚುಃ ॥

ಸೂತ ಸರ್ವಂ ವಿಜಾನಾಸಿ ವಸ್ತು ವ್ಯಾಸಪ್ರಸಾದತಃ ।
ಜ್ಯೋತಿಷಾಂ ಚ ಕಥಾಂ ಶ್ರುತ್ವಾ ತೃಪ್ತಿರ್ನೈವ ಪ್ರಜಾಯತೇ ॥ ೧ ॥

ತಸ್ಮಾತ್ತ್ವಂ ಹಿ ವಿಶೇಷೇಣ ಕೃಪಾಂ ಕೃತ್ವಾತುಲಾಂ ಪ್ರಭೋ ।
ಜ್ಯೋತಿರ್ಲಿಂಗಂ ತೃತೀಯಾಂ ಚ ಕಥಯ ತ್ವಂ ಹಿ ನೋಽಧುನಾ ॥ ೨ ॥

---

## ಹದಿನಾರನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು.—ಎಲೈ, ಸೂತನೇ ನೀನು ವ್ಯಾಸರ ಅನುಗ್ರಹದಿಂದ ಎಲ್ಲವನ್ನೂ ತಿಳಿದಿರುವೆ. ಈಗ ನೀನು ಹೇಳಿದ ಎರಡು ಜ್ಯೋತಿರ್ಲಿಂಗಗಳ ಕಥೆಯನ್ನು ಕೇಳಿದರೂ ನಮಗೆ ತೃಪ್ತಿಯಾಗಲಿಲ್ಲ. ಆದುದರಿಂದ ನಮ್ಮಲ್ಲಿ ವಿಶೇಷವಾಗಿ ದಯೆಯನ್ನು ತೋರಿಸಿ, ಮೂರನೆಯ ಜ್ಯೋತಿರ್ಲಿಂಗದ ಕಥೆಯನ್ನು ಹೇಳಬೇಕು ಎಂದರು.

॥ ಸೂತ ಉವಾಚ ॥

ಧನ್ಯೋಽಹಂ ಕೃತಕೃತ್ಯೋಽಹಂ ಶ್ರೀಮತಾಂ ಭವತಾಂ ಯದಿ ।
ಗತಶ್ಚ ಸಂಗಮಂ ವಿಪ್ರಾ ಧನ್ಯಾ ವೈ ಸಾಧುಸಂಗತಿಃ ॥ ೩ ॥

ಅತೋ ಮತ್ವಾ ಸ್ವಭಾಗ್ಯಂ ಹಿ ಕಥಯಿಷ್ಯಾಮಿ ಪಾವನೀಂ ।
ಪಾಪಪ್ರಣಾಶಿನೀಂ ದಿವ್ಯಾಂ ಕಥಾಂ ಚ ಶೃಣುತಾದರಾತ್ ॥ ೪ ॥

ಅವಂತೀ ನಗರೀ ರಮ್ಯಾ ಮುಕ್ತಿದಾ ಸರ್ವದೇಹಿನಾಂ ।
ಶಿವಪ್ರಿಯಾ ಮಹಾಪುಣ್ಯಾ ವರ್ತತೇ ಲೋಕಪಾವನೀ ॥ ೫ ॥

ತತ್ರಾಸೀದ್ಬ್ರಾಹ್ಮಣಶ್ರೇಷ್ಠಶ್ಶುಭಕರ್ಮಪರಾಯಣಃ ।
ವೇದಾಧ್ಯಯನಕರ್ತಾ ಚ ವೇದಕರ್ಮರತಸ್ಸದಾ ॥ ೬ ॥

ಅಗ್ನ್ಯಾಧಾನಸಮಾಯುಕ್ತಶ್ಶಿವಪೂಜಾರತಸ್ಸದಾ ।
ಪಾರ್ಥಿವೀಂ ಪ್ರತ್ಯಹಂ ಮೂರ್ತಿಂ ಪೂಜಯಾಮಾಸ ವೈ ದ್ವಿಜಃ ॥ ೭ ॥

---

೩-೪. ಸೂತನು ಹೇಳಿದನು—ಎಲೈ, ಬ್ರಾಹ್ಮಣರೇ! ಕೇಳಿ. ಸಜ್ಜನರ ಸಹವಾಸವೇ ಶ್ರೇಷ್ಠವಾದುದು. ನಿಮ್ಮಂತಹ ಸಜ್ಜನರ ಸಹವಾಸವು ನನಗೆ ದೊರೆಯಿತು. ಆದುದರಿಂದ ನಾನೇ ಧನ್ಯನು, ಕೃತಾರ್ಥನು ಮತ್ತು ಭಾಗ್ಯವಂತನೆಂದು ತಿಳಿದುಕೊಂಡು ಪಾಪವನ್ನು ಹೋಗಲಾಡಿಸುವ ಪರಿಶುದ್ಧವೂ ದೇವಯೋಗ್ಯವೂ ಆದ ಕಥೆಯನ್ನು ಹೇಳುವೆನು ಪ್ರೀತಿಯಿಂದ ಕೇಳಿರಿ.

೫-೭. ಮನೋಹರವಾದ ಅವಂತೀ ಎಂಬ ಪಟ್ಟಣವಿರುವುದು. ಅದು ಸಮಸ್ತ ಪ್ರಾಣಿಗಳಿಗೂ ಮುಕ್ತಿಯನ್ನು ಕೊಡತಕ್ಕ ಶಿವನಿಗೆ ಪ್ರೀತಿಪಾತ್ರವಾಗಿರುವುದು. ಲೋಕವನ್ನೆಲ್ಲಾ ಪರಿಶುದ್ಧಮಾಡುವುದರಿಂದ ಬಹುಪುಣ್ಯಕರವಾಗಿರುವುದು. ಅಲ್ಲಿ ಶುಭಕರ್ಮಗಳಲ್ಲಿ ಆಸಕ್ತನೂ, ವೇದಾಧ್ಯಯನಸಂಪನ್ನನೂ, ವೇದೋಕ್ತವಾದ ಕರ್ಮಗಳನ್ನು ಯಾವಾಗಲೂ ಮಾಡತಕ್ಕವನೂ ಆದ ಒಬ್ಬ ಬ್ರಾಹ್ಮಣನಿದ್ದನು. ಅವನು ಅಗ್ನಿಯನ್ನಿಟ್ಟು ಪ್ರತಿದಿನವೂ ಔಪಾಸನವನ್ನು ಮಾಡುತ್ತಾ ಪ್ರತಿದಿನವೂ ಪಾರ್ಥಿವಲಿಂಗವನ್ನು ಮಾಡಿ ಶಿವಪೂಜೆಯನ್ನು ಮಾಡುತ್ತಿದ್ದನು.

ಸರ್ವಕರ್ಮಫಲಂ ಪ್ರಾಪ್ಯ ದ್ವಿಜೋ ವೇದಪ್ರಿಯಸ್ಸದಾ ।
ಸತಾಂ ಗತಿಂ ಸಮಾಲೇಭೇ ಸಮ್ಯಗ್ಜ್ಞಾನಪರಾಯಣಃ ॥ ೮ ॥

ತತ್ಪುತ್ರಾಸ್ತಾದೃಶಾಶ್ಚಾಸಂಶ್ಚತ್ವಾರೋ ಮುನಿಸತ್ತಮಾಃ ।
ಶಿವಪೂಜಾರತಾ ನಿತ್ಯಂ ಪಿತ್ರೋರನವಮಾಸ್ಸದಾ ॥ ೯ ॥

ದೇವಪ್ರಿಯಶ್ಚ ತಜ್ಜ್ಯೇಷ್ಠಃ ಪ್ರಿಯಮೇಧಾಸ್ತತಃ ಪರಂ ।
ತೃತೀಯಸ್ಸುಕೃತೋ ನಾಮ ಧರ್ಮವಾಹೀ ಚ ಸುವ್ರತಃ ॥ ೧೦ ॥

ತೇಷಾಂ ಪುಣ್ಯಪ್ರತಾಪಾಚ್ಚ ಪೃಥಿವ್ಯಾಂ ಸುಖಮೈಧತ ।
ಶುಕ್ಲಪಕ್ಷೇ ಯಥಾ ಚಂದ್ರೋ ವರ್ತತೇ ಚ ನಿರಂತರಂ ॥ ೧೧ ॥

ತಥಾ ತೇಷಾಂ ಗುಣಾಸ್ತತ್ರ ವರ್ಧಂತೇ ಸ್ಮ ಸುಖಾವಹಾಃ ।
ಬ್ರಹ್ಮತೇಜೋಮಯೀ ಸಾ ವೈ ನಗರೀ ಚಾಭವತ್ತದಾ ॥ ೧೨ ॥

ಏತಸ್ಮಿನ್ನಂತರೇ ತತ್ರ ಯಜ್ಜಾತಂ ವೃತ್ತಮುತ್ತಮಂ ।
ಶ್ರೂಯತಾಂ ತದ್ದ್ವಿಜಶ್ರೇಷ್ಠಾಃ ಕಥಯಾಮಿ ಯಥಾಶ್ರುತಂ ॥ ೧೩ ॥

---

೮-೧೨. ವೇದಗಳಲ್ಲಿ ಪ್ರೀತಿಯುಳ್ಳವನಾದುದರಿಂದ ಅವನಿಗೆ ವೇದಪ್ರಿಯನೆಂಬ ಹೆಸರು ಪ್ರಸಿದ್ಧವಾಗಿತ್ತು. ಆ ಬ್ರಾಹ್ಮಣನು ಸಮಸ್ತ ಕರ್ಮಗಳ ಫಲವನ್ನೂ ಪಡೆದು ಉತ್ತಮವಾದ ಜ್ಞಾನದಲ್ಲಿ ಆಸಕ್ತನಾಗಿ ಸದ್ಗತಿಯನ್ನು ಪಡೆದನು. ಎಲೈ, ಋಷಿಶ್ರೇಷ್ಠರೇ! ಆ ಬ್ರಾಹ್ಮಣನಿಗೆ ಅವನ ಗುಣ ಮತ್ತು ನಡತೆಗಳಿಗೆ ಸಮಾನರೂ, ಶಿವಪೂಜಾಸಕ್ತರೂ, ತಂದೆ ತಾಯಿಯರಿಗೆ ಗೌರವವನ್ನು ತರತಕ್ಕವರೂ, ಆದ ನಾಲ್ವರು ಮಕ್ಕಳಿದ್ದರು. ದೇವಪ್ರಿಯ, ವೇದಪ್ರಿಯ, ಸುಕೃತ, ಧರ್ಮವಾಹಿ ಎಂಬ ಆ ನಾಲ್ವರು ಅವರ ಪುಣ್ಯಪ್ರಭಾವದಿಂದ ಭೂಮಿಯಲ್ಲಿ ಹೆಚ್ಚು ಸುಖವನ್ನು ಹೊಂದಿ ಶುಕ್ಲಪಕ್ಷದಲ್ಲಿ ಚಂದ್ರನು ಅಭಿವೃದ್ಧಿಯಾಗುವಂತೆ ಸದ್ಗುಣಗಳಿಂದ ವೃದ್ಧಿಹೊಂದುತ್ತಿದ್ದರು. ಇವರ ಬ್ರಹ್ಮತೇಜಸ್ಸಿನಿಂದ ಆ ಪಟ್ಟಣವು ಶೋಭಿಸುತ್ತಿತ್ತು.

೧೩. ಹೀಗಿರುವಲ್ಲಿ ಆ ಪಟ್ಟಣದಲ್ಲಿ ಆಶ್ಚರ್ಯಕರವಾದ ಒಂದು ಸಂಗತಿಯು ನಡೆಯಿತು. ಅದನ್ನು ಹೇಳುವೆನು, ಕೇಳಿರಿ.

ಪರ್ವತೇ ರತ್ನಮಾಲೇ ಚ ದೂಷಣಾಖ್ಯೋ ಮಹಾಸುರಃ ।
ಬಲವಾನ್ನೈರ್ಋತ್ಯರಾಜಶ್ಚ ಧರ್ಮದ್ವೇಷೀ ನಿರಂತರಂ ॥ ೧೪ ॥

ಬ್ರಹ್ಮಣೋ ವರದಾನಾಚ್ಚ ಜಗತ್ತುಚ್ಛೀಚಕಾರ ಹ ।
ದೇವಾಃ ಪರಾಜಿತಾಸ್ತೇನ ಸ್ಥಾನಾನ್ನಿಸ್ಸಾರಿತಾಸ್ತಥಾ ॥ ೧೫ ॥

ಪೃಥಿವ್ಯಾಂ ವೇದಧರ್ಮಾಶ್ಚ ಸ್ಮೃತಿಧರ್ಮಾಶ್ಚ ಸರ್ವಶಃ ।
ಸ್ಫೋಟಿತಾಸ್ತೇನ ದುಷ್ಟೇನ ಸಿಂಹೇನೇವ ಶಶಾಃ ಖಲು ॥ ೧೬ ॥

ಯಾವಂತೋ ವೇದಧರ್ಮಾಶ್ಚ ತಾವಂತೋ ದೂರತಃ ಕೃತಾಃ ।
ತೀರ್ಥೇ ತೀರ್ಥೇ ತಥಾ ಕ್ಷೇತ್ರೇ ಧರ್ಮೋ ನೀತಶ್ಚ ದೂರತಃ ॥ ೧೭ ॥

ಅವಂತೀ ನಗರೀ ರಮ್ಯಾ ತತ್ರೈಕಾ ದೃಶ್ಯತೇ ಪುನಃ ।
ಇತ್ಥಂ ವಿಚಾರ್ಯ ತೇನೈವ ಯತ್ಕೃತಂ ಶ್ರೂಯತಾಂ ಹಿ ತತ್ ॥ ೧೮ ॥

ಬಹುಸೈನ್ಯಸಮಾಯುಕ್ತೋ ದೂಷಣಸ್ಸ ಮಹಾಸುರಃ ।
ತತ್ರಸ್ಥಾನ್ಬ್ರಾಹ್ಮಣಾನ್ಸರ್ವಾನುದ್ದಿಶ್ಯ ಸಮುಪಾಯಯೌ ॥ ೧೯ ॥

---

೧೪-೧೮. ರತ್ನಮಾಲಾ ಎಂಬ ಪರ್ವತದಲ್ಲಿ ದೂಷಣನೆಂಬ ಒಬ್ಬ ಮಹಾ ಬಲಶಾಲಿಯಾದ ರಾಕ್ಷಸನು ಯಾವಾಗಲೂ ಧರ್ಮದ್ವೇಷಿಯಾಗಿದ್ದನು. ಅವನು ಬ್ರಹ್ಮನ ವರಬಲದಿಂದ ಲೋಕವನ್ನು ಲಕ್ಷ್ಯಮಾಡುತ್ತಿರಲಿಲ್ಲ. ದೇವತೆಗಳನ್ನು ಸೋಲಿಸಿ ಅವರ ಪದವಿಯಿಂದ ಅವರನ್ನು ಓಡಿಸಿದನು. ಭೂಮಿಯಲ್ಲಿ ವೇದ ಧರ್ಮಗಳೂ, ಶಾಸ್ತ್ರಧರ್ಮಗಳೂ ಆ ದುಷ್ಟನಿಂದ ಹಾಳಾದುವು. ಎಷ್ಟೋ ವೇದ ಧರ್ಮಗಳು ದೂರವಾಗಿ ಹೋದುವು. ಪ್ರತಿಯೊಂದು ತೀರ್ಥಗಳಲ್ಲಿಯೂ, ಕ್ಷೇತ್ರ ಗಳಲ್ಲಿಯೂ, ಧರ್ಮವಿಲ್ಲವಾಯಿತು. ಅವಂತಿಪಟ್ಟಣವೊಂದು ಮನೋಹರವಾಗಿರು ವುದೆಂದು ತಿಳಿದು ಅಲ್ಲಿಗೆ ಬಂದನು. ಅವನು ಅಲ್ಲಿ ಏನು ಮಾಡಿದನೆಂಬುದನ್ನು ಹೇಳುವೆನು, ಕೇಳಿರಿ.

೧೯-೨೦. ಆ ದೂಷಣಂನೆಬ ದೊಡ್ಡ ರಾಕ್ಷಸನು ಅನೇಕ ಸೈನ್ಯವನ್ನು ಕೂಡಿ ಕೊಂಡು ಆ ಅವಂತೀಪಟ್ಟಣದಲ್ಲಿ ವಾಸವಾಗಿದ್ದ ಬ್ರಾಹ್ಮಣರಮೇಲೆ ದಂಡೆತ್ತಿ ಬಂದನು.

ತತ್ರಾಗತ್ಯ ಸ ದೈತ್ಯೇಂದ್ರಶ್ಚತುರೋ ದೈತ್ಯಸತ್ತಮಾನ್ ।
ಪ್ರೋವಾಚಾಹೂಯ ವಚನಂ ವಿಪ್ರದ್ರೋಹೀ ಮಹಾಖಲಃ ॥ ೨೦ ॥

॥ ದೈತ್ಯ ಉವಾಚ ॥

ಕಿಮೇತೇ ಬ್ರಾಹ್ಮಣಾ ದುಷ್ಟಾ ನ ಕುರ್ವಂತಿ ವಚೋ ಮಮ ।
ವೇದಧರ್ಮರತಾ ಏತೇ ಸರ್ವೇ ದಂಡ್ಯಾ ಮತೇ ಮಮ ॥ ೨೧ ॥

ಸರ್ವೇ ದೇವಾ ಮಯಾ ಲೋಕೇ ರಾಜಾನಶ್ಚ ಪರಾಜಿತಾಃ ।
ವಶೇ ಕಿಂ ಬ್ರಾಹ್ಮಣಾಶ್ಯಕ್ಯಾ ನ ಕರ್ತುಂ ದೈತ್ಯಸತ್ತಮಾಃ ॥ ೨೨ ॥

ಯದಿ ಜೀವಿತುಮಿಚ್ಛಾ ಸ್ಯಾತ್ತದಾ ಧರ್ಮಂ ಶಿವಸ್ಯ ಚ ।
ವೇದಾನಾಂ ಪರಮಂ ಧರ್ಮಂ ತ್ಯಕ್ತ್ವಾ ಸುಖಸುಭಾಗಿನಃ ॥ ೨೩ ॥

ಅನ್ಯಥಾ ಜೀವನೇ ತೇಷಾಂ ಸಂಶಯಶ್ಚ ಭವಿಷ್ಯತಿ ।
ಇತಿ ಸತ್ಯಂ ಮಯಾ ಪ್ರೋಕ್ತಂ ತತ್ಕುರುಧ್ವಂ ವಿಶಂಕಿತಾಃ ॥ ೨೪ ॥

---

ಅಲ್ಲಿಗೆ ಬಂದಮೇಲೆ ಬ್ರಾಹ್ಮಣದ್ರೋಹಿಯೂ, ಮಹಾ ದುಷ್ಟನೂ ಆದ ಅವನು ನಾಲ್ಕು ಜನ ದೈತ್ಯಶ್ರೇಷ್ಠರನ್ನು ಕರೆದು,

೨೧-೨೪. ಈ ದುಷ್ಟ ಬ್ರಾಹ್ಮಣರು ನನ್ನ ಮಾತನ್ನು ಕೇಳುವುದಿಲ್ಲ. ವೇದೋಕ್ತವಾದ ಧರ್ಮಾನುಷ್ಠಾನ ಮಾಡುವ ಇವರನ್ನು ನನ್ನ ಅಪ್ಪಣೆಯಂತೆ ದಂಡಿಸಬೇಕು. ಲೋಕದಲ್ಲಿರುವ ಸಮಸ್ತ ದೇವತೆಗಳೂ, ರಾಜರೂ ನನ್ನಿಂದ ಅಪಜಯುವನ್ನು ಹೊಂದಿದರು. ಎಲೈ, ದೈತ್ಯಶ್ರೇಷ್ಠರೇ ಈ ಬ್ರಾಹ್ಮಣರನ್ನು ನನ್ನ ವಶದಲ್ಲಿಟ್ಟುಕೊಳ್ಳುವುದಕ್ಕೆ ಆಗುವುದಿಲ್ಲವೆ? ಜೀವಿಸಿರಬೇಕೆಂದು ಇವರಿಗೆ ಅಪೇಕ್ಷೆ ಇದ್ದರೆ ಶಿವಧರ್ಮವನ್ನೂ, ವೇದೋಕ್ತವಾದ ಶ್ರೇಷ್ಠಧರ್ಮವನ್ನೂ ಬಿಟ್ಟು ಸುಖವಾಗಿರಲಿ. ಇಲ್ಲದಿದ್ದರೆ ಅವರು ಬದುಕಿರುವ ವಿಷಯವೇ ಸಂದೇಹವಾಗಿರುವುದು. ಇದು ನಿಜವು ಸಂದೇಹಪಡದೆ ನಾನು ಹೇಳಿದಂತೆ ನಡೆಸಿರಿ ಎಂದನು.

॥ ಸೂತ ಉವಾಚ ॥

ಇತಿ ನಿಶ್ಚಿತ್ಯ ತೇ ದೈತ್ಯಾಶ್ಚತ್ವಾರಃ ಪಾವಕಾ ಇವ ।
ಚತುರ್ದಿಕ್ಷು ತದಾ ಜಾತಾಃ ಪ್ರಲಯೇ ಚ ಯಥಾ ಪುರಾ ॥ ೨೫ ॥

ತೇ ಬ್ರಾಹ್ಮಣಾಸ್ತಥಾ ಶ್ರುತ್ವಾ ದೈತ್ಯಾನಾಮುದ್ಯಮಂ ತದಾ ।
ನ ದುಃಖಂ ಲೇಭಿರೇ ತತ್ರ ಶಿವಧ್ಯಾನಪರಾಯಣಾಃ ॥ ೨೬ ॥

ಧೈರ್ಯಂ ಸಮಾಶ್ರಿತಾಸ್ತೇ ಚ ರೇಖಾಮಾತ್ರಂ ತದಾ ದ್ವಿಜಾಃ ।
ನ ಚೇಲುಃ ಪರಮಧ್ಯಾನಾದ್ವರಾಕಾಃ ಕೇ ಶಿವಾಗ್ರತಃ ॥ ೨೭ ॥

ಏತಸ್ಮಿನ್ನಂತರೇ ತೈಸ್ತು ವ್ಯಾಪ್ತಾಸೀನ್ನಗರೀ ಶುಭಾ ।
ಲೋಕಾಶ್ಚ ಪೀಡಿತಾಸ್ತೈಸ್ತು ಬ್ರಾಹ್ಮಣಾನ್ಸಮುಪಾಯಯುಃ ॥ ೨೮ ॥

॥ ಲೋಕಾ ಊಚುಃ ॥

ಸ್ವಾಮಿನಃ ಕಿಂ ಚ ಕರ್ತವ್ಯಂ ದುಷ್ಟಾಶ್ಚ ಸಮುಪಾಗತಾಃ ।
ಹಿಂಸಿತಾ ಬಹವೋ ಲೋಕಾ ಆಗತಾಶ್ಚ ಸಮೀಪತಃ ॥ ೨೯ ॥

---

೨೫-೨೮. ಹೀಗೆಂದುದನ್ನು ಕೇಳಿ ಆ ನಾಲ್ವರು ದೈತ್ಯರೂ ಆ ಪಟ್ಟಣದ ನಾಲ್ಕು ದಿಕ್ಕುಗಳಲ್ಲಿಯೂ ಪ್ರಳಯಕಾಲದ ಅಗ್ನಿಯಂತೆ ಮುತ್ತಿಗೆಯನ್ನು ಹಾಕಿದರು. ದೈತ್ಯರ ಯುದ್ಧೋದ್ಯೋಗವನ್ನು ಕೇಳಿ ಶಿವಧ್ಯಾನಾಸಕ್ತರಾಗಿದ್ದ ಆ ಬ್ರಾಹ್ಮಣರು ಸ್ವಲ್ಪವೂ ದುಃಖವನ್ನು ಹೊಂದಲಿಲ್ಲ. ಧೈರ್ಯದಿಂದ ಶ್ರೇಷ್ಠವಾದ ಶಿವಧ್ಯಾನದಲ್ಲೇ ಆಸಕ್ತರಾಗಿ ಒಂದು ಗೆರೆಯಷ್ಟೂ ಚಲಿಸದೆ ಇದ್ದರು. ಶಿವನ ಎದುರಿಗೆ ಅಲ್ಪರ ಶಕ್ತಿಯು ಎಷ್ಟರದು? ಇತ್ತ ಆ ದೈತ್ಯರು ಪಟ್ಟಣವನ್ನು ವ್ಯಾಪಿಸಿ ಜನರನ್ನು ಪೀಡಿಸುತ್ತ ಬ್ರಾಹ್ಮಣರ ಸಮೀಪಕ್ಕೆ ಬಂದರು.

೨೯. ಜನರು ಹೇಳಿದರು.—ಸ್ವಾಮಿ, ದುಷ್ಟದೈತ್ಯರು ಬಂದು ಜನರನ್ನು ಹಿಂಸಿಸುತ್ತಿರುವರು. ಅನೇಕ ಜನರು ತಮ್ಮ ಸಮೀಪಕ್ಕೆ ಬಂದಿರುವರು. ಈ ಸಂದರ್ಭದಲ್ಲಿ ನಾವು ಏನು, ಮಾಡಬೇಕು? ಎಂದರು.

॥ ಸೂತ ಉವಾಚ ॥

ತೇಷಾಮಿತಿ ವಚಶ್ಶ್ರುತ್ವಾ ವೇದಪ್ರಿಯಸುತಾಶ್ಚ ತೇ ।
ಸಮೂಚುರ್ಬ್ರಾಹ್ಮಣಾಸ್ತಾನ್ವೈ ವಿಶ್ವಸ್ತಾಶ್ಶಂಕರೇ ಸದಾ ॥ ೩೦ ॥

॥ ಬ್ರಾಹ್ಮಣಾ ಊಚುಃ ॥

ಶ್ರೂಯತಾಂ ವಿದ್ಯತೇ ನೈವ ಬಲಂ ದುಷ್ಟಭಯಾವಹಂ ।
ನ ಶಸ್ತ್ರಾಣಿ ತಥಾ ಸಂತಿ ಯಚ್ಚ ತೇ ವಿಮುಖಾಃ ಪುನಃ ॥ ೩೧ ॥

ಸಾಮಾನ್ಯಸ್ಯಾಪಮಾನೋ ನೋ ಹ್ಯಾಶ್ರಯಸ್ಯ ಭವೇದಿಹ ।
ಪುನಶ್ಚ ಕಿಂ ಸಮರ್ಥಸ್ಯ ಶಿವಸ್ಯೇಹ ಭವಿಷ್ಯತಿ ॥ ೩೨ ॥

ಶಿವೋ ರಕ್ಷಾಂ ಕರೋತ್ವದ್ಯಾಸುರಾಣಾಂ ಭಯತಃ ಪ್ರಭುಃ ।
ನಾನ್ಯಥಾ ಶರಣಂ ಲೋಕೇ ಭಕ್ತವತ್ಸಲತಶ್ಶಿವಾತ್ ॥ ೩೩ ॥

॥ ಸೂತ ಉವಾಚ ॥

ಇತಿ ಧೈರ್ಯಂ ಸಮಾಸ್ಥಾಯ ಸಮರ್ಚಾಂ ಪಾರ್ಥಿವಸ್ಯ ಚ ।
ಕೃತ್ವಾ ತೇ ಚ ದ್ವಿಜಾಃ ಸಮ್ಯಕ್ಸ್ಥಿತಾ ಧ್ಯಾನಪರಾಯಣಾಃ ।
ದೃಷ್ಟ್ವಾ ದೈತ್ಯೇನ ತಾವಚ್ಚ ತೇ ವಿಪ್ರಾಸ್ಸಬಲೇನ ಹಿ ॥ ೩೪ ॥

---

೩೦. ಅವರ ಮಾತನ್ನು ಕೇಳಿ ವೇದಪ್ರಿಯನ ಮಕ್ಕಳಾದ ಬ್ರಾಹ್ಮಣರು ಶಂಕರನಲ್ಲಿ ನಂಬಿಕೆಯಿಂದ ಜನರನ್ನು ಕುರಿತು,

೩೧-೩೩. ಎಲೈ ಜನರೇ! ಕೇಳಿರಿ. ನಮ್ಮ ಬಳಿ ದುಷ್ಟರನ್ನು ಭಯಪಡಿಸುವ ಸೇನೆಯಿಲ್ಲ. ಆಯುಧಗಳೂ ಇಲ್ಲ. ಸಾಮಾನ್ಯವಾದ ನಮ್ಮ ಆಶ್ರಯಸ್ಥಾನಕ್ಕೆ ಅಪಮಾನವೂ ಆಗುವುದಿಲ್ಲ. ಸಮರ್ಥನಾದ ಶಿವನಿಗೆ ಯಾವ ತೊಂದರೆಯು ತಾನೆ ಆಗುವುದು! ಶಿವನೇ ರಾಕ್ಷಸ ಭಯದಿಂದ ನಮ್ಮನ್ನು ರಕ್ಷಿಸುವನು. ಭಕ್ತರನ್ನು ಪ್ರೀತಿಸುವ ಶಂಕರನಿಗಿಂತ ರಕ್ಷಕರಾದವರು ಮತ್ತೊಬ್ಬರಿಲ್ಲ.

೩೪-೩೫. ಹೀಗೆಂದು ಧೈರ್ಯವನ್ನಾಶ್ರಯಿಸಿ ಬ್ರಾಹ್ಮಣರು ಪಾರ್ಥಿವಲಿಂಗವನ್ನು ಪೂಜೆಮಾಡಿ ಧ್ಯಾನಾಸಕ್ತರಾಗಿದ್ದರು. ಸೇನೆಯೊಡನೆ ಕೂಡಿದ ದೈತ್ಯನಾದ

**ದೂಷಣೇನ ವಚಃ ಪ್ರೋಕ್ತಂ ಹನ್ಯತಾಂ ವಧ್ಯತಾಮಿತಿ ।**
**ತಚ್ಛ್ರುತಂ ತೈಸ್ತದಾ ನೈವ ದೈತ್ಯಪ್ರೋಕ್ತಂ ವಚೋ ದ್ವಿಜೈಃ ।**
**ವೇದಪ್ರಿಯಸುತೈಶ್ಶಂಭೋರ್ಧ್ಯಾನಮಾರ್ಗಪರಾಯಣೈಃ ॥ ೩೫ ॥**

**ಅಥ ಯಾವತ್ಸ ದುಷ್ಟಾತ್ಮಾ ಹಂತುಮೈಚ್ಛದ್ದ್ವಿಜಾಂಶ್ಚ ತಾನ್ ।**
**ತಾವಚ್ಚ ಪಾರ್ಥಿವಸ್ಥಾನೇ ಗರ್ತ ಆಸೀತ್ಸಶಬ್ದಕಃ ॥ ೩೬ ॥**

**ಗರ್ತಾತ್ತತಸ್ಸಮುತ್ಪನ್ನಃ ಶಿವೋ ವಿಕಟರೂಪಧೃಕ್ ।**
**ಮಹಾಕಾಲ ಇತಿ ಖ್ಯಾತೋ ದುಷ್ಟಹಂತಾ ಸತಾಂ ಗತಿಃ ॥ ೩೭ ॥**

**ಮಹಾಕಾಲಃ ಸಮುತ್ಪನ್ನೋ ದುಷ್ಟಾನಾಂ ತ್ವಾದೃಶಾಮಹಂ ।**
**ಖಲ ತ್ವಂ ಬ್ರಾಹ್ಮಣಾನಾಂ ಹಿ ಸಮೀಪಾದ್ದೂರತೋ ವ್ರಜ ॥ ೩೮ ॥**

**ಇತ್ಯುಕ್ತ್ವಾ ಹುಂಕೃತೇನೈವ ಭಸ್ಮಸಾತ್ಕೃತವಾಂಸ್ತದಾ ।**
**ದೂಷಣಂ ಚ ಮಹಾಕಾಲಃ ಶಂಕರಸ್ಸಬಲಂ ದ್ರುತಂ ॥ ೩೯ ॥**

---

ದೂಷಣನು ಅವರನ್ನು ನೋಡಿ, ಹೊಡೆದು ಕೊಲ್ಲಿರಿ, ಎಂದು ಹೇಳಿದನು. ದೈತ್ಯನು ಹೇಳಿದ ಮಾತನ್ನು ಆ ವೇದಪ್ರಿಯನ ಪುತ್ರರು ಕೇಳಲಿಲ್ಲ. ಶಿವನಲ್ಲಿಯೇ ಧ್ಯಾನಾಸಕ್ತರಾಗಿದ್ದರು.

೩೬-೩೭. ಆಮೇಲೆ ಆ ದುಷ್ಟನಾದ ದೂಷಣನು ಆ ಬ್ರಾಹ್ಮಣರನ್ನು ಕೊಲ್ಲಲು ಪ್ರಯತ್ನಿಸುವಷ್ಟರಲ್ಲಿಯೇ ಆ ಪಾರ್ಥಿವಲಿಂಗವಿದ್ದ ಕಡೆಯಲ್ಲಿ ದೊಡ್ಡ ಧ್ವನಿಯೊಡನೆ ಒಂದು ಹಳ್ಳವಾಯಿತು. ದುಷ್ಟರನ್ನು ನಾಶಮಾಡುವುದಕ್ಕಾಗಿಯೂ ಸಜ್ಜನರನ್ನು ರಕ್ಷಿಸುವುದಕ್ಕಾಗಿಯೂ ಶಿವನು ವಿಕಾರವೂ ಭಯಂಕರವೂ ಆದ ರೂಪನ್ನು ಧರಿಸಿ ಮಹಾಕಾಲನೆಂಬ ಹೆಸರಿನಿಂದ ಆ ಹಳ್ಳದಲ್ಲಿ ವ್ಯಕ್ತವಾದನು.

೩೮–೪೧. ಬಳಿಕ ಆ ದೈತ್ಯನನ್ನು ಕುರಿತು ಶಿವನಿಂತೆಂದನು—ನಾನು ದುಷ್ಟರಾದ ನಿಮ್ಮಂತಹರಿಗೆ ಯಮಸ್ವರೂಪನು. ಎಲೈ, ದುಷ್ಟನೇ! ಈ ಬ್ರಾಹ್ಮಣರ ಸಮೀಪದಿಂದ ದೂರಕ್ಕೆ ಹೋಗು. ಎಂದು ಹೇಳಿ, ಹುಂಕಾರ ಶಬ್ದದಿಂದಲೇ ಸೇನಾಸಹಿತನಾದ ದೂಷಣನನ್ನು ಭಸ್ಮಮಾಡಿದನು. ಎಷ್ಟೋ ಸೈನ್ಯಗಳನ್ನು ಶಿವನು

ಕಿಯತ್ಸೈನ್ಯಂ ಹತಂ ತೇನ ಕಿಂಚಿತ್ಸೈನ್ಯಂ ಪಲಾಯಿತಂ ।
ದೂಷಣಶ್ಚ ಹತಸ್ತೇನ ಶಿವೇನೇಹ ಪರಾತ್ಮನಾ ॥ ೪೦ ॥

ಸೂರ್ಯಂ ದೃಷ್ಟ್ವಾ ಯಥಾ ಯಾತಿ ಸಂಕ್ಷಯಂ ಸರ್ವಶಸ್ತಮಃ ।
ತಥೈವ ಚ ಶಿವಂ ದೃಷ್ಟ್ವಾ ತತ್ಸೈನ್ಯಂ ವಿನನಾಶ ಹ ॥ ೪೧ ॥

ದೇವದುಂದುಭಯೋ ನೇದುಃ ಪುಷ್ಪವೃಷ್ಟಿಃ ಪಪಾತ ಹ ।
ದೇವಾಸ್ಸಮಾಯಯುಸ್ಸರ್ವೇ ಹರಿಬ್ರಹ್ಮಾದಯಸ್ತಥಾ ॥ ೪೨ ॥

ಭಕ್ತ್ಯಾ ಪ್ರಣಮ್ಯ ತಂ ದೇವಂ ಶಂಕರಂ ಲೋಕಶಂಕರಂ ।
ತುಷ್ಟುವುರ್ವಿವಿಧೈಃ ಸ್ತೋತ್ರೈಃ ಕೃತಾಂಜಲಿಪುಟಾ ದ್ವಿಜಾಃ ॥ ೪೩ ॥

ಬ್ರಾಹ್ಮಣಾಂಶ್ಚ ಸಮಾಶ್ವಾಸ್ಯ ಸುಪ್ರಸನ್ನಶ್ಶಿವಸ್ಸ್ವಯಂ ।
ವರಂ ಬ್ರೂತೇತಿ ಚೋವಾಚ ಮಹಾಕಾಲೋ ಮಹೇಶ್ವರಃ ॥ ೪೪ ॥

ತಚ್ಛ್ರುತ್ವಾ ತೇ ದ್ವಿಜಾಸ್ಸರ್ವೇ ಕೃತಾಂಜಲಿಪುಟಾಸ್ತದಾ ।
ಸುಪ್ರಣಮ್ಯ ಶಿವಂ ಭಕ್ತ್ಯಾ ಪ್ರೋಚುಸ್ಸಂನತಮಸ್ತಕಾಃ ॥ ೪೫ ॥

---

ಕೊಂದನು. ಉಳಿದ ಸೈನ್ಯವು ಓಡಿಹೋಯಿತು. ಪರಮಾತ್ಮನಾದ ಶಿವನು ದೂಷಣನನ್ನು ಹೀಗೆ ಕೊಂದನು. ಸೂರ್ಯನನ್ನು ಕಂಡು ಕತ್ತಲೆಯು ಎಲ್ಲೆಡೆಯಲ್ಲಿಯೂ ಹೇಗೆ ನಾಶವಾಗುವುದೋ, ಹಾಗೆ ಶಿವನನ್ನು ಕಂಡು ರಾಕ್ಷಸಸೈನ್ಯವೆಲ್ಲವೂ ನಾಶ ಹೊಂದಿತು.

೪೨-೪೫. ಆಗ ದೇವದುಂದುಭಿಗಳು ಮೊಳಗಿದವು. ಆಕಾಶದಿಂದ ಹೂವಿನ ಮಳೆ ಸುರಿಯಿತು. ಹರಿ, ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಅಲ್ಲಿಗೆ ಬಂದರು. ಆ ಬ್ರಾಹ್ಮಣರು ಕೈ ಜೋಡಿಸಿಕೊಂಡು ಲೋಕಕ್ಕೆ ಸುಖವನ್ನುಂಟುಮಾಡುವ ಶಂಕರನಿಗೆ ಭಕ್ತಿಯಿಂದ ನಮಸ್ಕರಿಸಿ ಅನೇಕ ಬಗೆಯ ಸ್ತೋತ್ರಗಳಿಂದ ಆ ದೇವನನ್ನು ಹೊಗಳಿದರು. ಸಂತೋಷಗೊಂಡ ಶಿವನು ಬ್ರಾಹ್ಮಣರನ್ನು ಸಮಾಧಾನಪಡಿಸಿ ನಿಮಗೆ ಇಷ್ಟವಾದ ವರವನ್ನು ಕೇಳಿಕೊಳ್ಳಿರಿ, ಎಂದು ಹೇಳಿದನು. ಆ ಮಾತನ್ನು ಕೇಳಿ ಆ ಬ್ರಾಹ್ಮಣರೆಲ್ಲರೂ ಕೈ ಜೋಡಿಸಿ ಶಿವನಿಗೆ ನಮಸ್ಕಾರವನ್ನು ಮಾಡಿ ನತಸ್ಕಂಧರಾಗಿ ಸ್ತೋತ್ರಮಾಡಿದರು.

॥ ದ್ವಿಜಾ ಊಚುः ॥

ಮಹಾಕಾಲ ಮಹಾದೇವ ದುಷ್ಟದಂಡಕರ ಪ್ರಭೋ ।
ಮುಕ್ತಿಂ ಪ್ರಯಚ್ಛ ನಶ್ಶಂಭೋ ಸಂಸಾರಾಂಬುಧಿತಶ್ಶಿವ ॥ ೪೬ ॥

ಅತ್ರೈವ ಲೋಕರಕ್ಷಾರ್ಥಂ ಸ್ಥಾತವ್ಯಂ ಹಿ ತ್ವಯಾ ಶಿವ ।
ಸ್ವದರ್ಶಕಾನ್ನರಾಚ್ಛಂಭೋ ತಾರಯ ತ್ವಂ ಸದಾ ಪ್ರಭೋ ॥ ೪೭ ॥

॥ ಸೂತ ಉವಾಚ ॥

ಇತ್ಯುಕ್ತಸ್ತೈಶ್ಶಿವಸ್ತತ್ರ ತಸ್ಥೌ ಗರ್ತೇ ಸುಶೋಭನೇ ।
ಭಕ್ತಾನಾಂ ಚೈವ ರಕ್ಷಾರ್ಥಂ ದತ್ವಾ ತೇಭ್ಯಶ್ಚ ಸದ್ಗತಿಂ ॥ ೪೮ ॥

ದ್ವಿಜಾಸ್ತೇ ಮುಕ್ತಿಮಾಪನ್ನಾಶ್ಚತುರ್ದಿಕ್ಷು ಶಿವಾಸ್ಪದಂ ।
ಕ್ರೋಶಮಾತ್ರಂ ತದಾ ಜಾತಂ ಲಿಂಗರೂಪಿಣ ಏವ ಚ ॥ ೪೯ ॥

ಮಹಾಕಾಲೇಶ್ವರೋ ನಾಮ ಶಿವಃ ಖ್ಯಾತಶ್ಚ ಭೂತಲೇ ।
ತಂ ದೃಷ್ಟ್ವಾ ನ ಭವೇತ್ಸ್ವಪ್ನೇ ಕಿಂಚಿದ್ದುಃಖಮಪಿ ದ್ವಿಜಾಃ ॥ ೫೦ ॥

---

೪೬-೪೭. ಎಲೈ ಮಹಾದೇವನೇ, ನೀನು ಮಹಾಕಾಲಸ್ವರೂಪನು. ದುಷ್ಟರನ್ನು ದಂಡಿಸುವವನು. ಸಕಲರಿಗೂ ಸ್ವಾಮಿಯು. ಈ ಸಂಸಾರ ಸಮುದ್ರದ ದೆಸೆಯಿಂದ ನಮಗೆ ಬಿಡುಗಡೆಯನ್ನುಂಟುಮಾಡು. ಲೋಕರಕ್ಷಣೆಗಾಗಿ ನೀನು ಈ ಸ್ಥಳದಲ್ಲಿಯೇ ನೆಲಸಬೇಕು. ಎಲೈ, ಸ್ವಾಮಿಯೇ! ನಿನ್ನ ದರ್ಶನವನ್ನು ಮಾಡುವ ಮನುಜರನ್ನು ಯಾವಾಗಲೂ ನೀನು ದುಃಖಸಮುದ್ರದಿಂದ ದಾಟಿಸು.

೪೮-೪೯. ಹೀಗೆಂದು ಆ ಬ್ರಾಹ್ಮಣರು ಹೇಳುತ್ತಲು ಶಿವನು ಆ ಶುಭಕರವಾದ ಹಳ್ಳದಲ್ಲಿಯೇ ನೆಲಸಿದನು. ಭಕ್ತರನ್ನು ರಕ್ಷಿಸುವುದಕ್ಕಾಗಿ ಆ ಬ್ರಾಹ್ಮಣರಿಗೆ ಸದ್ಗತಿಯನ್ನು ಕೊಟ್ಟನು. ಆ ಪ್ರದೇಶದ ನಾಲ್ಕು ದಿಕ್ಕಿನಲ್ಲಿಯೂ ಒಂದು ಹರಿದಾರಿಯವರೆಗೆ ಇರುವ ಪ್ರದೇಶವು ಲಿಂಗಸ್ವರೂಪವಾದುದಾಯಿತು.

೫೦-೫೧. ಮಹಾಕಾಲೇಶ್ವರನೆಂಬ ಶಿವಲಿಂಗವು ಭೂಮಂಡಲದಲ್ಲಿ ಪ್ರಸಿದ್ಧಿ ಹೊಂದಿರುವುದು. ಆ ಶಿವಲಿಂಗವನ್ನು ದರ್ಶನಮಾಡಿದವರಿಗೆ ಸ್ವಪ್ನದಲ್ಲಿಯೂ

**ಯಂಯಂ ಕಾಮಮುಪೇಕ್ಷ್ಯೈವ ತಲ್ಲಿಂಗಂ ಭಜತೇ ತು ಯಃ ।**
**ತಂ ತಂ ಕಾಮಮವಾಪ್ನೋತಿ ಲಭೇನ್ಮೋಕ್ಷಂ ಪರತ್ರ ಚ　　॥ ೫೧ ॥**

**ಏತತ್ಸರ್ವಂ ಸಮಾಖ್ಯಾತಂ ಮಹಾಕಾಲಸ್ಯ ಸುವ್ರತಾಃ ।**
**ಸಮುದ್ಭವಶ್ಚ ಮಾಹಾತ್ಮ್ಯಂ ಕಿಮನ್ಯಚ್ಛ್ರೋತುಮಿಚ್ಛಥ　　॥ ೫೨ ॥**

**ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ ಮಹಾಕಾಲಜ್ಯೋತಿರ್ಲಿಂಗಮಾಹಾತ್ಮ್ಯವರ್ಣನಂ ನಾಮ ಷೋಡಶೋಽಧ್ಯಾಯಃ**

---

ಸ್ವಲ್ಪವಾದರೂ ದುಃಖವಾಗುವುದಿಲ್ಲ. ಯಾವ ಯಾವ ಇಷ್ಟಾರ್ಥವನ್ನು ಬಯಸಿ ಆ ಲಿಂಗವನ್ನು ಪೂಜಿಸಿದರೆ ಪುರುಷನು ಆ ಇಷ್ಟಾರ್ಥಗಳೆಲ್ಲವನ್ನೂ ಇಹಲೋಕದಲ್ಲಿ ಪಡೆದು ಪರಲೋಕದಲ್ಲಿ ಮೋಕ್ಷಸುಖವನ್ನನುಭವಿಸುವನು.

೫೨. ಎಲೈ ಮುನಿಗಳೇ, ನೀವು ಮಹಾತಪಸ್ವಿಗಳು. ನಿಮಗೆ ಮಹಾಕಾಲ ಲಿಂಗದ ಉತ್ಪತ್ತಿಕ್ರಮವನ್ನೂ ಮಹಿಮೆಯನ್ನೂ ಹೇಳಿರುವೆನು. ಈಗ ಮತ್ತೇನನ್ನು ಕೇಳಬೇಕೆಂದಿರುವಿರಿ, ಕೇಳಿ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಕೋಟಿರುದ್ರಸಂಹಿತೆಯಲ್ಲಿ
ಮಹಾಕಾಲಜ್ಯೋತಿರ್ಲಿಂಗಮಾಹಾತ್ಮ್ಯವರ್ಣನವೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಸಪ್ತದಶೋಽಧ್ಯಾಯಃ

॥ ಋಷಯ ಊಚುಃ ॥

ಮಹಾಕಾಲಸಮಾಹ್ವಸ್ಯ ಜ್ಯೋತಿರ್ಲಿಂಗಸ್ಯ ರಕ್ಷಿಣಃ ।
ಭಕ್ತಾನಾಂ ಮಹಿಮಾನಂ ಚ ಪುನರ್ಬ್ರೂಹಿ ಮಹಾಮತೇ ॥ ೧ ॥

॥ ಸೂತ ಉವಾಚ ॥

ಶೃಣುತಾದರತೋ ವಿಪ್ರಾ ಭಕ್ತರಕ್ಷಾವಿಧಾಯಿನಃ ।
ಮಹಾಕಾಲಸ್ಯ ಲಿಂಗಸ್ಯ ಮಾಹಾತ್ಮ್ಯಂ ಭಕ್ತಿವರ್ಧನಂ ॥ ೨ ॥

---

## ಹದಿನೇಳನೆಯ ಅಧ್ಯಾಯವು.

೧. ಋಷಿಗಳು ಕೇಳಿದರು.—ಮಹಾಬುದ್ಧಿಶಾಲಿಯಾದ ಸೂತನೇ, ಮಹಾಕಾಲನೆಂಬ ಹೆಸರಿನ ಜ್ಯೋತಿರ್ಲಿಂಗವನ್ನು ರಕ್ಷಿಸುವ ಭಕ್ತರ ಮಹಿಮೆಯನ್ನು ನಮಗೆ ಹೇಳಬೇಕು. ಎನ್ನಲು,

೨. ಸೂತನು ಹೇಳಿದನು.—ಎಲೈ, ಬ್ರಾಹ್ಮಣರೇ, ಭಕ್ತರನ್ನು ರಕ್ಷಿಸುವ ಮಹಾಕಾಲಲಿಂಗದ ಮಹಿಮೆಯು ಭಕ್ತಿಯನ್ನು ಅಭಿವೃದ್ಧಿಪಡಿಸುವುದು, ಪ್ರೀತಿಯಿಂದ ಅದನ್ನು ಕೇಳಿರಿ.

ಉಜ್ಜಯಿನ್ಯಾಮಭೂದ್ರಾಜಾ ಚಂದ್ರಸೇನಾಹ್ವಯೋ ಮಹಾನ್ ।
ಸರ್ವಶಾಸ್ತ್ರಾರ್ಥತತ್ತ್ವಜ್ಞಶ್ಶಿವಭಕ್ತೋ ಜಿತೇಂದ್ರಿಯಃ ॥ ೩ ॥

ತಸ್ಯಾಭವತ್ಸಖಾ ರಾಜ್ಞೋ ಮಣಿಭದ್ರೋ ಗಣೋ ದ್ವಿಜಾಃ ।
ಗಿರೀಶಗಣಮುಖ್ಯಶ್ಚ ಸರ್ವಲೋಕನಮಸ್ಕೃತಃ ॥ ೪ ॥

ಏಕದಾ ಸ ಗಣೇಂದ್ರೋ ಹಿ ಪ್ರಸನ್ನಾಸ್ಯೋ ಮಹಾಮಣಿಂ ।
ಮಣಿಭದ್ರೋ ದದೌ ತಸ್ಮೈ ಚಿಂತಾಮಣಿಮುದಾರಧೀಃ ॥ ೫ ॥

ಸ ವೈ ಮಣಿಃ ಕೌಸ್ತುಭವದ್ದ್ಯೋತಮಾನೋಽರ್ಕಸನ್ನಿಭಃ ।
ಧ್ಯಾತೋ ದೃಷ್ಟಃ ಶ್ರುತೋ ವಾಪಿ ಮಂಗಲಂ ಯಚ್ಛತಿ ಧ್ರುವಂ ॥ ೬ ॥

ತಸ್ಯ ಕಾಂತಿತಲಸ್ಪೃಷ್ಟಂ ಕಾಂಸ್ಯಂ ತಾಮ್ರಮಯಂ ತ್ರಪು ।
ಪಾಷಾಣಾದಿಕಮನ್ಯದ್ವಾ ದ್ರುತಂ ಭವತಿ ಹಾಟಕಂ ॥ ೭ ॥

---

೩-೪. ಉಜ್ಜಯಿನೀ ನಗರದಲ್ಲಿ ಸಮಸ್ತ ಶಾಸ್ತ್ರಗಳ ತತ್ತ್ವವನ್ನೂ ತಿಳಿದವನೂ, ಜಿತೇಂದ್ರಿಯನೂ, ಶಿವಭಕ್ತನೂ ಆದ ಚಂದ್ರಸೇನನೆಂಬ ರಾಜನಿದ್ದನು. ಆ ರಾಜನಿಗೆ ಮಣಿಭದ್ರನೆಂಬ ಗಣದ್ವಿಜನು ಶಿವಗಣಗಳಲ್ಲಿ ಮುಖ್ಯವಾದವನೆನಿಸಿ, ಎಲ್ಲರಿಂದಲೂ ಗೌರವಿಸಲ್ಪಡುತ್ತಿದ್ದನು.

೫-೭. ಒಂದಾನೊಂದು ದಿನ ಮಣಿಭದ್ರನು ಧಾರಾಳಬುದ್ಧಿಯಿಂದ ಚಿಂತಾಮಣಿ ಸಮಾನವಾದ ಒಂದು ಮಹಾರತ್ನವನ್ನು ಆ ರಾಜನಿಗೆ ಕೊಟ್ಟನು. ಆ ರತ್ನವು ಕೌಸ್ತುಭರತ್ನದಂತೆ ಸೂರ್ಯಸಮಾನವಾಗಿ ಪ್ರಕಾಶಿಸುತ್ತಿದ್ದಿತು. ಅದನ್ನು ಧ್ಯಾನಮಾಡಿದವರಿಗೂ, ದರ್ಶನಮಾಡಿದವರಿಗೂ ಅದರ ವಿಷಯವನ್ನು ಕೇಳಿದವರಿಗೂ ಮಂಗಳವನ್ನುಂಟುಮಾಡುತ್ತಿದ್ದಿತು. ಆ ರತ್ನದ ಕಾಂತಿಗೆ ತಗುಲಿದ ಕಂಚು. ತಾಮ್ರ, ಸೀಸ, ಕಲ್ಲು ಮತ್ತು ಇತರ ಲೋಹಗಳೂ ಬೇಗನೆ ಚಿನ್ನವಾಗುತ್ತಲಿದ್ದವು.

**ಸ ತು ಚಿಂತಾಮಣಿಂ ಕಂಠೇ ಬಿಭ್ರದ್ರಾಜಾ ಶಿವಾಶ್ರಯಃ ।**
**ಚಂದ್ರಸೇನೋ ರರಾಜಾತಿ ದೇವಮಧ್ಯೇ ಽ ವ ಭಾನುಮಾನ್ ॥ ೮ ॥**

**ಶ್ರುತ್ವಾ ಚಿಂತಾಮಣಿಗ್ರೀವಂ ಚಂದ್ರಸೇನಂ ನೃಪೋತ್ತಮಂ ।**
**ನಿಖಿಲಾಃ ಕ್ಷಿತಿರಾಜಾನಸ್ತೃಷ್ಣಾಕ್ಷುಬ್ಧಹೃದೋಽಭವನ್ ॥ ೯ ॥**

**ನೃಪಾ ಮತ್ಸರಿಣಸ್ಸರ್ವೇ ತಂ ಮಣಿಂ ಚಂದ್ರಸೇನತಃ ।**
**ನಾನೋಪಾಯೈರಯಾಚಂತ ದೇವಲಬ್ಧಮಬುದ್ಧಯಃ ॥ ೧೦ ॥**

**ಸರ್ವೇಷಾಂ ಭೂಭೃತಾಂ ಯಾಜ್ಞಾ ಚಂದ್ರಸೇನೇನ ತೇನ ವೈ ।**
**ವ್ಯರ್ಥೀಕೃತಾ ಮಹಾಕಾಲದೃಢಭಕ್ತೇನ ಭೂಸುರಾಃ ॥ ೧೧ ॥**

**ತೇ ಕದರ್ಥೀಕೃತಾಃ ಸರ್ವೇ ಚಂದ್ರಸೇನೇನ ಭೂಭೃತಾ ।**
**ರಾಜಾನಸ್ಸರ್ವದೇಶಾನಾಂ ಸಂರಂಭಂ ಚಕ್ರಿರೇ ತದಾ ॥ ೧೨ ॥**

**ಅಥ ತೇ ಸರ್ವರಾಜಾನಶ್ಚತುರಂಗಬಲಾನ್ವಿತಾಃ ।**
**ಚಂದ್ರಸೇನಂ ರಣೇ ಜೇತುಂ ಸಂಬಭೂವುಃ ಕಿಲೋದ್ಯತಾಃ ॥ ೧೩ ॥**

---

೮-೧೦. ಶಿವನಲ್ಲಿ ಭಕ್ತಿಯುಳ್ಳ ಆ ಚಂದ್ರಸೇನರಾಜನು ಚಿಂತಾಮಣಿಯನ್ನು ಕಂಠದಲ್ಲಿ ಧರಿಸಿ ದೇವತೆಗಳ ನಡುವೆ ಇರುವ ಸೂರ್ಯನಂತೆ ಪ್ರಕಾಶಿಸುತ್ತಿದ್ದುದನ್ನೂ ಚಿಂತಾಮಣಿಯನ್ನು ಕುತ್ತಿಗೆಯಲ್ಲಿ ಧರಿಸಿದ ಚಂದ್ರಸೇನರಾಜನ ಸಂಪತ್ತನ್ನೂ ಕೇಳಿ ಭೂಮಂಡಲದ ಸಮಸ್ತ ರಾಜರೂ ತಾವೂ ಆ ಮಣಿಯನ್ನು ಪಡೆಯಬೇಕೆಂದು ಅಪೇಕ್ಷಿಸಿ ಮಾತ್ಸರ್ಯದಿಂದ ಬುದ್ಧಿಹೀನರಾಗಿ ದೇವರಿಂದ ದೊರೆತ ಆ ಮಣಿಯನ್ನು ಚಂದ್ರಸೇನರಾಜನಿಂದ ಅಪಹರಿಸಲು ಬಗೆ ಬಗೆಯ ಯುಕ್ತಿಗಳಿಂದ ಅವನನ್ನು ಯಾಚಿಸಿದರು.

೧೧-೧೩. ಎಲೈ, ಬ್ರಾಹ್ಮಣರೇ ಕೇಳಿರಿ! ಆ ಚಂದ್ರಸೇನರಾಜನು ಮಹಾಕಾಲನಲ್ಲಿ ದೃಢವಾದ ಭಕ್ತಿಯಿಟ್ಟಿದ್ದನು. ಸಮಸ್ತ ರಾಜರ ಪ್ರಾರ್ಥನೆಯನ್ನೂ ನಿರಾಕರಿಸಿದನು. ಅವರಿಗೆ ಆ ರತ್ನವನ್ನು ಕೊಡಲಿಲ್ಲ. ಚಂದ್ರಸೇನರಾಜನಿಂದ ಅಪಮಾನವನ್ನು ಹೊಂದಿದ ರಾಜರೆಲ್ಲರೂ ಸೇರಿ ಅವನಮೇಲೆ ಯುದ್ಧೋದ್ಯಮವನ್ನು ಕೈಗೊಂಡು ತಮ್ಮ ತಮ್ಮ ಚತುರಂಗಸೇನೆಯಿಂದ ಕೂಡಿ ಚಂದ್ರಸೇನನನ್ನು ಯುದ್ಧದಲ್ಲಿ ಜಯಿಸಲು ಒಟ್ಟಿಗೆ ಸೇರಿದರು.

ತೇ ತು ಸರ್ವೇ ಸಮೇತಾ ವೈ ಕೃತಸಂಕೇತಸಂವಿದಃ ।
ಉಜ್ಜಯಿನ್ಯಾಶ್ಚತುರ್ದ್ವಾರಂ ರುರುಧುರ್ಬಹುಸೈನಿಕಾಃ ॥ ೧೪ ॥

ಸಂರುಧ್ಯಮಾನಾಂ ಸ್ವಪುರೀಂ ದೃಷ್ಟ್ವಾ ನಿಖಿಲರಾಜಭಿಃ ।
ತಮೇವ ಶರಣಂ ರಾಜಾ ಮಹಾಕಾಲೇಶ್ವರಂ ಯಯೌ ॥ ೧೫ ॥

ನಿರ್ವಿಕಲ್ಪೋ ನಿರಾಹಾರಸ್ಸ ನೃಪೋ ದೃಢನಿಶ್ಚಯಃ ।
ಸಮಾನರ್ಚ ಮಹಾಕಾಲಂ ದಿವಾನಕ್ತಮನನ್ಯಧೀಃ ॥ ೧೬ ॥

ತತಃ ಸ ಭಗವಾಞ್ಛಂಭುರ್ಮಹಾಕಾಲಃ ಪ್ರಸನ್ನಧೀಃ ।
ತಂ ರಕ್ಷಿತುಮುಪಾಯಂ ವೈ ಚಕ್ರೇ ತಂ ಶೃಣುತಾದರಾತ್ ॥ ೧೭ ॥

ತದೈವ ಸಮಯೇ ಗೋಪೀ ಕಾಚಿತ್ತತ್ರ ಪುರೋತ್ತಮೇ ।
ಚರಂತೀ ಸಶಿಶುರ್ವಿಪ್ರಾ ಮಹಾಕಾಲಾಂತಿಕಂ ಯಯೌ ॥ ೧೮ ॥

ಪಂಚಾಬ್ದವಯಸಂ ಬಾಲಂ ವಹಂತೀ ಗತಭರ್ತೃಕಾ ।
ರಾಜ್ಞಾ ಕೃತಾಂ ಮಹಾಕಾಲಪೂಜಾಂ ಸಾಪಶ್ಯದಾದರಾತ್ ॥ ೧೯ ॥

---

೧೪-೧೭. ಗುಂಪುಗೂಡಿದ ಆ ರಾಜರು ಒಂದು ದಿನವನ್ನು ಗೊತ್ತುಮಾಡಿಕೊಂಡು ಉಜ್ಜಯಿನಿಯ ನಾಲ್ಕು ದಿಕ್ಕಿನ ಬಾಗಿಲುಗಳನ್ನೂ ಅನೇಕ ಸೈನ್ಯದೊಡನೆ ಮುತ್ತಿಗೆ ಹಾಕಿದರು. ಇದನ್ನು ತಿಳಿದು ಆ ರಾಜನು ಮಹಾಕಾಲೇಶ್ವರನನ್ನು ಶರಣು ಹೊಂದಿದನು. ಆ ರಾಜನು ಮನಸ್ಸಿನಲ್ಲಿ ವಿಕಾರವನ್ನು ಹೊಂದದೆ, ದೃಢವಾದ ನಿಶ್ಚಯದಿಂದ ಆಹಾರವನ್ನು ಬಿಟ್ಟು ಹಗಲೂ ರಾತ್ರಿಯೂ ಏಕಾಗ್ರಚಿತ್ತದಿಂದ ಮಹಾಕಾಲೇಶ್ವರನನ್ನು ಪೂಜಿಸಿದನು. ಮಹಾಮಹಿಮನಾದ ಶಿವನು ರಾಜನಿಗೆ ಪ್ರಸನ್ನನಾಗಿ ಅವನನ್ನು ರಕ್ಷಿಸುವುದಕ್ಕೆ ಒಂದು ಉಪಾಯವನ್ನು ಮಾಡಿದನು. ಅದನ್ನು ಕೇಳಿರಿ.

೧೮-೨೧. ಅದೇ ಸಮಯದಲ್ಲಿಯೇ ಒಬ್ಬ ಗೊಲ್ಲತಿಯು ಮಗುವನ್ನೆತ್ತಿಕೊಂಡು ಆ ಪಟ್ಟಣದಲ್ಲಿ ಸಂಚರಿಸುತ್ತ ಮಹಾಕಾಲೇಶ್ವರನ ಸಮೀಪಕ್ಕೆ ಹೋದಳು. ಅವಳಿಗೆ ಗಂಡನಿರಲಿಲ್ಲ. ಐದುವರ್ಷದ ಮಗುವೊಂದು ಮಾತ್ರವಿದ್ದಿತು. ಆ ಮಗು,

ಸಾ ದೃಷ್ಟ್ವಾ ಸುಮಹಾಶ್ಚರ್ಯಾಂ ಶಿವಪೂಜಾಂ ಚ ತತ್ಕೃತಾಂ ।
ಪ್ರಣಿಪತ್ಯ ಸ್ವಶಿಬಿರಂ ಪುನರೇವಾಭ್ಯಪದ್ಯತ ॥ ೨೦ ॥

ಏತತ್ಸರ್ವಮಶೇಷೇಣ ಸ ದೃಷ್ಟ್ವಾ ಬಲ್ಲವೀಸುತಃ ।
ಕುತೂಹಲೇನ ತಾಂ ಕರ್ತುಂ ಶಿವಪೂಜಾಂ ಮನೋ ದಧೇ ॥ ೨೧ ॥

ಆನೀಯ ಹ್ಯದ್ಯಂ ಪಾಷಾಣಂ ಶೂನ್ಯೇ ತು ಶಿಬಿರಾಂತರೇ ।
ಅವಿದೂರೇ ಸ್ವಶಿಬಿರಾಚ್ಛಿವಲಿಂಗಂ ಸ ಭಕ್ತಿತಃ ॥ ೨೨ ॥

ಗಂಧಾಲಂಕಾರವಾಸೋಭಿರ್ಧೂಪದೀಪಾಕ್ಷತಾದಿಭಿಃ ।
ವಿಧಾಯ ಕೃತ್ರಿಮೈರ್ದ್ರವ್ಯೈರ್ನೈವೇದ್ಯಂ ಚಾಪ್ಯಕಲ್ಪಯತ್ ॥ ೨೩ ॥

ಭೂಯೋ ಭೂಯಸ್ಸಮಭ್ಯರ್ಚ್ಯ ಪತ್ರೈಃ ಪುಷ್ಪೈರ್ಮನೋರಮೈಃ ।
ನೃತ್ಯಂ ಚ ವಿವಿಧಂ ಕೃತ್ವಾ ಪ್ರಣನಾಮ ಪುನಃ ಪುನಃ ॥ ೨೪ ॥

---

ವನ್ನೆತ್ತಿಕೊಂಡು ರಾಜನು ಮಾಡುವ ಮಹಾಕಾಲನ ಪೂಜೆಯನ್ನು ಪ್ರೀತಿಯಿಂದ ನೋಡುತ್ತಿದ್ದಳು. ರಾಜನು ಮಾಡಿದ ಆಶ್ಚರ್ಯಕರವಾದ ಆ ಶಿವಪೂಜೆಯನ್ನು ನೋಡಿ ನಮಸ್ಕಾರ ಮಾಡಿ, ತನ್ನ ಮನೆಗೆ ಹೋದಳು. ಇದೆಲ್ಲವನ್ನೂ ಆ ಗೊಲ್ಲತಿಯ ಮಗನು ನೋಡಿ ಅತ್ಯಾಸಕ್ತಿಯಿಂದ ತಾನೂ ಆ ಶಿವನ ಪೂಜೆಯನ್ನು ಮಾಡಬೇಕೆಂದು ಮನಸ್ಸು ಮಾಡಿದನು.

೨೨-೨೪. ಆ ಬಾಲಕನು ಒಂದು ಮನೋಹರವಾದ ಕಲ್ಲನ್ನು ತಂದು ತನ್ನ ಗುಡಸಲಿನ ಹತ್ತಿರದಲ್ಲಿರುವ ಮತ್ತೊಂದು ನಿರ್ಜನವಾದ ಗುಡಸಲಿನಲ್ಲಿಟ್ಟು ಶಿವಲಿಂಗವೆಂದು ಭಕ್ತಿಯಿಂದ ಕೃತ್ರಿಮವಾದ ವಸ್ತುಗಳಿಂದ ಗಂಧ, ಅಲಂಕಾರ, ವಸ್ತ್ರ, ಧೂಪ, ದೀಪ, ಅಕ್ಷತೆ ನೈವೇದ್ಯ ಇವುಗಳನ್ನು ಕಲ್ಪಿಸಿ, ಮತ್ತೆ ಮತ್ತೆ ಮನೋಹರವಾದ ಪತೆಗಳಿಂದಲೂ, ಹೂವುಗಳಿಂದಲೂ ಪೂಜಿಸಿ ಬಗೆ ಬಗೆಯ ನರ್ತನವನ್ನು ಮಾಡಿ ಪುನಃ ಪುನಃ ನಮಸ್ಕಾರವನ್ನು ಮಾಡಿದನು.

ಏತಸ್ಮಿನ್ಸಮಯೇ ಪುತ್ರಂ ಶಿವಾಸಕ್ತಸುಚೇತಸಂ ।
ಪ್ರಣಯಾದ್ಗೋಪಿಕಾ ಸಾ ತಂ ಭೋಜನಾಯ ಸಮಾಹ್ವಯತ್ ॥ ೨೫ ॥

ಯದಾಹೂತೋಽಪಿ ಬಹುಶಶ್ಶಿವಪೂಜಾಕ್ತಮಾನಸಃ ।
ಬಾಲಶ್ಚ ಭೋಜನಂ ನೈಚ್ಛತ್ತದಾ ತತ್ರ ಯಯೌ ಪ್ರಸೂಃ ॥ ೨೬ ॥

ತಂ ವಿಲೋಕ್ಯ ಶಿವಸ್ಯಾಗ್ರೇ ನಿಷಣ್ಣಂ ಮೀಲಿತೇಕ್ಷಣಂ ।
ಚಕರ್ಷ ಪಾಣಿಂ ಸಂಗೃಹ್ಯ ಕೋಪೇನ ಸಮತಾಡಯತ್ ॥ ೨೭ ॥

ಆಕೃಷ್ಟಸ್ತಾಡಿತಶ್ಚಾಪಿ ನಾಗಚ್ಛತ್ಸ್ವಸುತೋ ಯದಾ ।
ತಾಂ ಪೂಜಾಂ ನಾಶಯಾಮಾಸ ಕ್ಷಿಪ್ತ್ವಾ ಲಿಂಗಂ ಚ ದೂರತಃ ॥ ೨೮ ॥

ಹಾಹೇತಿ ದೂಯಮಾನಂ ತಂ ನಿರ್ಭತ್ಸ್ಯ ಸ್ವಸುತಂ ಚ ಸಾ ।
ಪುನರ್ವಿವೇಶ ಸ್ವಗೃಹಂ ಗೋಪೀ ಕ್ರೋಧಸಮನ್ವಿತಾ ॥ ೨೯ ॥

ಮಾತ್ರಾ ವಿನಾಶಿತಾಂ ಪೂಜಾಂ ದೃಷ್ಟ್ವಾ ದೇವಸ್ಯ ಶೂಲಿನಃ ।
ದೇವದೇವೇತಿ ಚುಕ್ರೋಶ ನಿಪಪಾತ ಸ ಬಾಲಕಃ ॥ ೩೦ ॥

ಪ್ರನಷ್ಟಸಂಜ್ಞಃ ಸಹಸಾ ಸ ಬಭೂವ ಶುಚಾಕುಲಃ ।
ಲಬ್ಧಸಂಜ್ಞೋ ಮುಹೂರ್ತೇನ ಚಕ್ಷುಷೀ ಉದಮೀಲಯತ್ ॥ ೩೧ ॥

---

೨೫-೨೮. ಈ ಸಮಯದಲ್ಲಿ ಶಿವನಲ್ಲಿಯೇ ಆಸಕ್ತವಾದ ಮನಸ್ಸುಳ್ಳ ತನ್ನ ಮಗನನ್ನು ಗೊಲ್ಲತಿಯು ಭೋಜನಕ್ಕೆ ಕರೆದಳು. ಅನೇಕ ಬಾರಿ ಕರೆದರೂ, ಶಿವ ಪೂಜೆಯಲ್ಲಿ ಆಸಕ್ತನಾದ ಬಾಲಕನು ಭೋಜನವನ್ನು ಅಪೇಕ್ಷಿಸದೆ ಇರಲು, ತಾಯಿಯು ತಾನೇ ಅಲ್ಲಿಗೆ ಹೋದಳು. ಅಲ್ಲಿ ಶಿವಲಿಂಗದ ಮುಂದೆ ಕಣ್ಣು ಮುಚ್ಚಿ ಕೊಂಡು ಕುಳಿತ ಮಗನನ್ನು ನೋಡಿ ಕೈಹಿಡಿದು ಎಳೆದು ಕೋಪದಿಂದ ಹೊಡೆದಳು. ಎಳೆದು ಹೊಡೆದರೂ ತನ್ನ ಮಗನು ಬಾರದೆ ಹೋಗಲು ಆ ಗೊಲ್ಲತಿಯು ಲಿಂಗವನ್ನು ದೂರಕ್ಕೆ ಎಸೆದು ಅವನು ಮಾಡಿದ ಪೂಜೆಯನ್ನು ಹಾಳುಮಾಡಿದಳು.

೨೯-೩೨. ಅಳುತ್ತಿರುವ ಮಗನನ್ನು ಅವಳು ಹೆದರಿಸಿ ಕೋಪದಿಂದ ಮನೆಗೆ ಹೋದಳು. ತನ್ನ ತಾಯಿಯು ದೇವನಾದ ಶಿವನ ಪೂಜೆಯನ್ನು ಹಾಳುಮಾಡಿದು ದನ್ನು ಕಂಡು, ಬಾಲಕನು ಶಿವ ಶಿವ ಎಂದು ಅಳುತ್ತಾ ಭೂಮಿಯಮೇಲೆ ಬಿದ್ದನ್ನು ಅತ್ಯಂತ ದುಃಖದಿಂದ ಆ ಹುಡುಗನು ಮೂರ್ಛೆಯನ್ನು ಹೊಂದಿ ಒಂದು ಮುಹೂ

ತದೈವ ಜಾತಂ ಶಿಬಿರಂ ಮಹಾಕಾಲಸ್ಯ ಸುಂದರಂ ।
ದದರ್ಶ ಸ ಸಿಶುಸ್ತತ್ರ ಶಿವಾನುಗ್ರಹತೋಽಚಿರಾತ್ ॥ ೩೨ ॥

ಹಿರಣ್ಮಯಬೃಹದ್ವಾರಂ ಕಪಾಟವರತೋರಣಂ ।
ಮಹಾರ್ಘನೀಲವಿಮಲವಜ್ರವೇದೀವಿರಾಜಿತಂ ॥ ೩೩ ॥

ಸಂತಪ್ತಹೇಮಕಲಶೈರ್ವಿಚಿತ್ರೈರ್ಬಹುಭಿರ್ಯುತಂ ।
ಪ್ರೋದ್ಭಾಸಿತಮಣಿಸ್ತಂಭೈರ್ಬದ್ಧಸ್ಫಟಿಕಭೂತಲೈಃ ॥ ೩೪ ॥

ತನ್ಮಧ್ಯೇ ರತ್ನಲಿಂಗಂ ಹಿ ಶಂಕರಸ್ಯ ಕೃಪಾನಿಧೇಃ ।
ಸ್ವಕೃತಾರ್ಚನಸಂಯುಕ್ತಮಪಶ್ಯದ್ಗೋಪಿಕಾಸುತಃ ॥ ೩೫ ॥

ಸ ದೃಷ್ಟ್ವಾ ಸಹಸೋತ್ಥಾಯ ಶಿಶುರ್ವಿಸ್ಮಿತಮಾನಸಃ ।
ಸಂನಿಮಗ್ನ ಇವಾಸೀದ್ವೈ ಪರಮಾನಂದಸಾಗರೇ ॥ ೩೬ ॥

ತತಃ ಸ್ತುತ್ವಾ ಸ ಗಿರಿಶಂ ಭೂಯೋ ಭೂಯಃ ಪ್ರಣಮ್ಯ ಚ ।
ಸೂರ್ಯೇ ಚಾಸ್ತಂ ಗತೇ ಬಾಲೋ ನಿರ್ಜಗಾಮ ಶಿವಾಲಯಾತ್ ॥ ೩೭ ॥

ಅಥಾಪಶ್ಯತ್ಸ್ವಶಿಬಿರಂ ಪುರಂದರಪುರೋಪಮಂ ।
ಸದ್ಯೋ ಹಿರಣ್ಮಯೀಭೂತಂ ವಿಚಿತ್ರಂ ಪರಮೋಜ್ಜ್ವಲಂ ॥ ೩೮ ॥

---

ರ್ಘದ ಮೇಲೆ ಎಚ್ಚತ್ತು ಕಣ್ಣು ತೆರೆದನು. ಆ ಕ್ಷಣದಲ್ಲಿಯೇ ಆ ಪ್ರದೇಶವು ಮಹಾಕಾಲನ ಸುಂದರವಾದ ದೇವಾಲಯವಾಗಿದ್ದಿತು. ಶಿವನ ಅನುಗ್ರಹದಿಂದ ಆ ಬಾಲಕನು ಅದನ್ನು ನೋಡಿದನು.

೩೩-೩೬. ಆ ದೇವಾಲಯವು ಚಿನ್ನದ ಕೆಲಸ ಮಾಡಿದ ಮಹಾದ್ವಾರ, ಕದಗಳು, ಚಿತ್ರಕರವಾದ ಕಲಶಗಳು, ನೀಲ ವಜ್ರ ಮುಂತಾದುವುಗಳಿಂದ ಮಾಡಿದ ಜಗಲಿಗಳು, ರತ್ನಗಳಿಂದ ಮಾಡಿದ ಕಂಬಗಳು, ಸ್ಫಟಿಕದ ನೆಲಗಟ್ಟು ಇವುಗಳಿಂದ ಕೂಡಿ ನಡುವೆ ಇದ್ದ ರತ್ನದ ಶಿವಲಿಂಗಕ್ಕೆ ತಾನು ಮಾಡಿದ ಪೂಜೆಯು ಪ್ರಕಾಶಿಸುತ್ತಿರಲು ಆ ಬಾಲಕನು ಅದನ್ನೆಲ್ಲಾ ನೋಡಿದನು. ಒಡನೆಯೇ ಎದ್ದು ಆಶ್ಚರ್ಯದಿಂದ ಆನಂದಸಾಗರದಲ್ಲಿ ಮುಳುಗಿದವನಂತಿದ್ದನು.

೩೭-೪೦. ಆಮೇಲೆ ಬಾಲಕನು ಶಿವನನ್ನು ಸ್ತೋತ್ರ ಮಾಡಿ ಪುನಃ ಪುನಃ

ಸೋಂತರ್ವಿವೇಶ ಭವನಂ ಸರ್ವಶೋಭಾಸಮನ್ವಿತಂ ।
ಮಣಿಹೇಮಗಣಾಕೀರ್ಣಂ ಮೋದಮಾನೋ ನಿಶಾಮುಖೇ ॥ ೩೯ ॥

ತತ್ರಾಪಶ್ಯತ್ಸ್ವಜನನೀಂ ಸ್ವಪಂತೀಂ ದಿವ್ಯಲಕ್ಷಣಾಂ ।
ರತ್ನಾಲಂಕಾರದೀಪ್ತಾಂಗೀಂ ಸಾಕ್ಷಾತ್ಸುರವಧೂಮಿವ ॥ ೪೦ ॥

ಅಥೋ ಸ ತನಯೋ ವಿಪ್ರಾಶ್ಶಿವಾನುಗ್ರಹಭಾಜನಂ ।
ಜವೇನೋತ್ಥಾಪಯಾಮಾಸ ಮಾತರಂ ಸುಖವಿಹ್ವಲಃ ॥ ೪೧ ॥

ಸೋತ್ಥಿತೋದ್ಭುತಮಾಲಕ್ಷ್ಯಾಪೂರ್ವಂ ಸರ್ವಮಿವಾಭವತ್ ।
ಮಹಾನಂದಸುಮಗ್ನಾ ಹಿ ಸಸ್ವಜೇ ಸ್ವಸುತಂ ಚ ತಂ ॥ ೪೨ ॥

ಶ್ರುತ್ವಾ ಪುತ್ರಮುಖಾತ್ಸರ್ವಂ ಪ್ರಸಾದಂ ಗಿರಿಜಾಪತೇಃ ।
ಪ್ರಭುಂ ವಿಜ್ಞಾಪಯಾಮಾಸ ಯೋ ಭಜತ್ಯನಿಶಂ ಶಿವಂ ॥ ೪೩ ॥

---

ನಮಸ್ಕಾರವನ್ನು ಮಾಡಿ ಸೂರ್ಯಾಸ್ತಮಾನದವರೆಗೂ ಅಲ್ಲಿಯೇ ಇದ್ದು ಬಳಿಕ ಆ ಶಿವಾಲಯದಿಂದ ಮನೆಗೆ ಬಂದನು. ತನ್ನ ಗುಡಿಸಲು ಇಂದ್ರನ ಪಟ್ಟಣದಂತೆ ಚಿನ್ನದ ಅಲಂಕಾರದಿಂದ ವಿಚಿತ್ರವಾಗಿಯೂ, ಪ್ರಕಾಶಮಾನವಾದುದಾಗಿಯೂ ಇದ್ದುದನ್ನು ಕಂಡನು. ಸಂಧ್ಯಾಕಾಲದಲ್ಲಿ ರತ್ನಗಳ ಸಮೂಹದಿಂದ ತುಂಬಿ ಪ್ರಕಾಶಿಸುತ್ತಿರುವ ತನ್ನ ಮನೆಯೊಳಕ್ಕೆ ಹೋದನು. ಅಲ್ಲಿ ಅವನ ತಾಯಿಯು ದೇವಸ್ತ್ರೀಯಂತೆ ರತ್ನಾಭರಣಗಳನ್ನು ಧರಿಸಿ ದಿವ್ಯವಾದ ಲಕ್ಷಣದಿಂದಕೂಡಿ ಪ್ರಕಾಶಿಸುತ್ತ ಮಲಗಿದ್ದುದನ್ನು ಕಂಡನು.

೪೧-೪೩. ಎಲೈ, ಬ್ರಾಹ್ಮಣರೇ ಕೇಳಿರಿ. ಶಿವಾನುಗ್ರಹಕ್ಕೆ ಪಾತ್ರನಾದ ಆ ಬಾಲಕನು ಸಂತೋಷದಿಂದ ತನ್ನ ತಾಯಿಯನ್ನು ಬೇಗ ಎಚ್ಚರಗೊಳಿಸಿದನು. ಆಕೆಯು ಎದ್ದು ಅಪೂರ್ವವಾದ ಈ ಆಶ್ಚರ್ಯಗಳನ್ನು ನೋಡಿ ಆನಂದದಲ್ಲಿ ಮುಳುಗಿ ತನ್ನ ಮಗನನ್ನು ಆಲಂಗಿಸಿಕೊಂಡಳು. ಗಿರಿಜಾಪತಿಯಾದ ಪರಮೇಶ್ವರನ ಅನುಗ್ರಹವಾದುದನ್ನು ಮಗನ ಬಾಯಿಂದ ಕೇಳಿ, ಆಕೆಯು, ಯಾವಾಗಲೂ ಶಿವಪೂಜೆಯನ್ನು ಮಾಡುವ ದೊರೆಗೆ ಈ ವಿಚಾರವನ್ನು ವಿಜ್ಞಾಪನೆಮಾಡಿದಳು.

ಸ ರಾಜಾ ಸಹಸಾಗತ್ಯ ಸಮಾಪ್ತನಿಯಮೋ ನಿಶಿ ।
ದದರ್ಶ ಗೋಪಿಕಾಸೂನೋಃ ಪ್ರಭಾವಂ ಶಿವತೋಷಣಂ ॥ ೪೪ ॥

ದೃಷ್ಟ್ವಾ ಮಹೀಪತಿಸ್ಸರ್ವಂ ತತ್ಸಾಮಾತ್ಯಪುರೋಹಿತಃ ।
ಆಸೀನ್ನಿಮಗ್ನೋ ವಿಧೃತಿಃ ಪರಮಾನಂದಸಾಗರೇ ॥ ೪೫ ॥

ಪ್ರೇಮ್ಣಾ ಬಾಷ್ಪಜಲಂ ಮುಂಚನ್ ಚಂದ್ರಸೇನೋ ನೃಪೋ ಹಿ ಸಃ ।
ಶಿವನಾಮೋಚ್ಚರನ್ಪ್ರೀತ್ಯಾ ಪರಿರೇಭೇ ತಮರ್ಭಕಂ ॥ ೪೬ ॥

ಮಹಾಮಹೋತ್ಸವಸ್ತತ್ರ ಪ್ರಬಭೂವಾದ್ಭುತೋ ದ್ವಿಜಾಃ ।
ಮಹೇಶಕೀರ್ತನಂ ಚಕ್ರುಸ್ಸರ್ವೇ ಚ ಸುಖವಿಹ್ವಲಾಃ ॥ ೪೭ ॥

ಏವಮತ್ಯದ್ಭುತಾಚಾರಾಚ್ಛಿವಮಾಹಾತ್ಮ್ಯದರ್ಶನಾತ್ ।
ಪೌರಾಣಾಂ ಸಂಭ್ರಮಾಚ್ಚೈವ ಸಾ ರಾತ್ರಿಃ ಕ್ಷಣತಾಮಗಾತ್ ॥ ೪೮ ॥

ಅಥ ಪ್ರಭಾತೇ ಯುದ್ಧಾಯ ಪುರಂ ಸಂರುಧ್ಯ ಸಂಸ್ಥಿತಾಃ ।
ರಾಜಾನಶ್ಚಾರವಕ್ತ್ರೇಭ್ಯಶ್ಶುಶ್ರುವುಶ್ಚರಿತಂ ಚ ತತ್ ॥ ೪೯ ॥

---

೪೪-೪೬. ಆ ರಾಜನು ತನ್ನ ನಿಯಮವನ್ನು ಮುಗಿಸಿ ಆ ರಾತ್ರಿ ಗೊಲ್ಲತಿಯ ಮನೆಗೆ ಬಂದು ಅವಳ ಮಗನಿಗೆ ಶಿವನು ಪ್ರಸನ್ನನಾದುದರ ಮಹಿಮೆಯನ್ನು ನೋಡಿದನು. ಆ ರಾಜನು ಮಂತ್ರಿ, ಪುರೋಹಿತರೊಡನೆ ಎಲ್ಲವನ್ನೂ ನೋಡಿ ವಿಶೇಷವಾದ ಧೈರ್ಯದಿಂದಕೂಡಿ ಪರಮಾನಂದಸಮುದ್ರದಲ್ಲಿ ಮುಳುಗಿದನು. ಆ ಚಂದ್ರಸೇನ ರಾಜನು ಪ್ರೀತಿಯಿಂದ ಆನಂದಬಾಷ್ಪ ಸುರಿಸುತ್ತ, ಭಕ್ತಿಯಿಂದ ಶಿವನಾಮವನ್ನುಚ್ಚರಿಸುತ್ತ ಆ ಬಾಲಕನನ್ನು ಪ್ರೇಮದಿಂದ ತಬ್ಬಿಕೊಂಡನು.

೪೭-೫೦. ಎಲೈ ಋಷಿಗಳೇ, ಆ ಸಮಯದಲ್ಲಿ ಅಲ್ಲಿ ವಿಶೇಷವಾದ ಮಹೋತ್ಸವವು ನಡೆಯಿತು. ಸಮಸ್ತರೂ ಆಶ್ಚರ್ಯಾನಂದಗಳಿಂದ ಮಹೇಶ್ವರನ ನಾಮಕೀರ್ತನೆಯನ್ನು ಮಾಡಿದರು. ಹೀಗೆ ಅತ್ಯಾಶ್ಚರ್ಯಕರವಾದ ಕೆಲಸಗಳಿಂದಲೂ, ಶಿವನ ಮಹಿಮೆಯನ್ನು ನೋಡುವುದರಿಂದಲೂ, ಪುರಜನರ ಸಂಭ್ರಮದಿಂದಲೂ ಆ ರಾತ್ರಿಯು ಕ್ಷಣದಂತೆ ಕಳೆಯಿತು. ಆಮೇಲೆ ಪ್ರಾತಃಕಾಲದಲ್ಲಿ ಯುದ್ಧಮಾಡಬೇಕೆಂದು ಪಟ್ಟಣಕ್ಕೆ ಮುತ್ತಿಗೆಯನ್ನುಹಾಕಿದ್ದ ರಾಜರು ದೂತರಿಂದ ಈ ವರ್ತಮಾನ

ತೇ ಸಮೇತಾಶ್ಚ ರಾಜಾನಃ ಸರ್ವೇ ಯೇ ಯೇ ಸಮಾಗತಾಃ ।
ಪರಸ್ಪರಮಿತಿ ಪ್ರೋಚುಸ್ತಚ್ಛೃತ್ವಾ ಚಕಿತಾ ಅತಿ ॥ ೫೦ ॥

॥ ರಾಜಾನ ಊಚುಃ ॥

ಅಯಂ ರಾಜಾ ಚಂದ್ರಸೇನಶ್ಶಿವಭಕ್ತೋತಿದುರ್ಜಯಃ ।
ಉಜ್ಜಯಿನ್ಯಾ ಮಹಾಕಾಲಪುರ್ಯಾಃ ಪತಿರನಾಕುಲಃ ॥ ೫೧ ॥

ಐದೃಶಾಶ್ಶಿವೋ ಯಸ್ಯ ಪುರ್ಯಾಂ ಸಂತಿ ಶಿವವ್ರತಾಃ ।
ಸ ರಾಜಾ ಚಂದ್ರಸೇನಸ್ತು ಮಹಾಶಂಕರಸೇವಕಃ ॥ ೫೨ ॥

ನೂನಮಸ್ಯ ವಿರೋಧೇನ ಶಿವಃ ಕ್ರೋಧಂ ಕರಿಷ್ಯತಿ ।
ತತ್ಕ್ರೋಧಾದ್ಧಿ ವಯಂ ಸರ್ವೇ ಭವಿಷ್ಯಾಮೋ ವಿನಷ್ಟಕಾಃ ॥ ೫೩ ॥

ತಸ್ಮಾದನೇನ ರಾಜ್ಞಾ ವೈ ಮಿಲಾಪಃ ಕಾರ್ಯ ಏವ ಹಿ ।
ಏವಂ ಸತಿ ಮಹೇಶಾನಃ ಕರಿಷ್ಯತಿ ಕೃಪಾಂ ಪರಾಂ ॥ ೫೪ ॥

॥ ಸೂತ ಉವಾಚ ॥

ಇತಿ ನಿಶ್ಚಿತ್ಯ ತೇ ಭೂಪಾಸ್ತ್ಯಕ್ತ್ವವೈರಾಸ್ಸದಾಶಯಾಃ ।
ಸರ್ವೇ ಬಭೂವುಸ್ಸುಪ್ರೀತಾ ನ್ಯಸ್ತಶಸ್ತ್ರಾಸ್ತ್ರಪಾಣಯಃ ॥ ೫೫ ॥

---

ವನ್ನು ಕೇಳಿದರು. ಆ ರಾಜರೆಲ್ಲಾ ಒಟ್ಟಿಗೆಸೇರಿ ವಿಶೇಷ ಆಶ್ಚರ್ಯಪಡುತ್ತಾ ತಂತಮ್ಮಲ್ಲಿಯೇ ಮಾತನಾಡಿಕೊಂಡರು.

೫೧-೫೪. ಈ ಚಂದ್ರಸೇನರಾಜನು ಶಿವಭಕ್ತನು. ಇವನನ್ನು ಜಯಿಸಲಸಾಧ್ಯವು. ಮಹಾಕಾಲೇಶ್ವರನ ಪಟ್ಟಣವಾದ ಉಜ್ಜಯಿನಿಗೆ ಅಧಿಪತಿಯಾಗಿರುವನು. ಇವನ ಪಟ್ಟಣದಲ್ಲಿ ಇಂತಹ ಶಿವಭಕ್ತರಾದ ಮಕ್ಕಳುಗಳಿರುವರು. ಚಂದ್ರಸೇನ ರಾಜನೂ ಶಂಕರನ ಮಹಾಭಕ್ತನು. ಇವನಲ್ಲಿ ನಾವು ವಿರೋಧಮಾಡಿಕೊಂಡರೆ ಶಿವನು ಕೋಪಗೊಳ್ಳುವನು. ಅವನ ಕೋಪದಿಂದ ನಾವೆಲ್ಲರೂ ನಾಶವಾಗುವೆವು. ಆದುದರಿಂದ ಈ ರಾಜನೊಡನೆ ಸ್ನೇಹವನ್ನೇ ಮಾಡಿಕೊಳ್ಳಬೇಕು. ಹಾಗೆ ಮಾಡಿದರೆ ಮಹೇಶ್ವರನು ನಮ್ಮಲ್ಲಿ ವಿಶೇಷವಾಗಿ ದಯೆಯನ್ನು ತೋರಿಸುವನು.

೫೫-೫೮. ಹೀಗೆಂದು ಆ ರಾಜರು ನಿಶ್ಚಯಿಸಿ ದ್ವೇಷವನ್ನು ಬಿಟ್ಟು ಒಳ್ಳೆಯ

ವಿವಿಶುಸ್ತೇ ಪುರೀಂ ರಮ್ಯಾಂ ಮಹಾಕಾಲಸ್ಯ ಭೂಭೃತಃ ।
ಮಹಾಕಾಲಂ ಸಮಾನರ್ಚುಶ್ಚಂದ್ರಸೇನಾನುಮೋದಿತಾಃ ॥ ೫೬ ॥

ತತಸ್ತೇ ಗೋಪವನಿತಾಗೇಹಂ ಜಗ್ಮುರ್ಮಹೀಭೃತಃ ।
ಪ್ರಶಂಸಂತಶ್ಚ ತದ್ಭಾಗ್ಯಂ ಸರ್ವೇ ದಿವ್ಯಮಹೋದಯಂ ॥ ೫೭ ॥

ತೇ ತತ್ರ ಚಂದ್ರಸೇನೇನ ಪ್ರತ್ಯುದ್ಗಮ್ಯಾಭಿಪೂಜಿತಾಃ ।
ಮಹಾರ್ಹವಿಷ್ಟರಗತಾಃ ಪ್ರತ್ಯನಂದಸ್ಸುವಿಸ್ಮಿತಾಃ ॥ ೫೮ ॥

ಗೋಪಸೂನೋಃ ಪ್ರಸಾದಾತ್ತತ್ಪ್ರಾದುರ್ಭೂತಂ ಶಿವಾಲಯಂ ।
ಸಂವೀಕ್ಷ್ಯ ಶಿವಲಿಂಗಂ ಚ ಶಿವೇ ಚಕ್ರುಃ ಪರಾಂ ಮತಿಂ ॥ ೫೯ ॥

ತತಸ್ತೇ ಗೋಪಶಿಶವೇ ಪ್ರೀತಾ ನಿಖಿಲಭೂಭುಜಃ ।
ದದುರ್ಬಹೂನಿ ವಸ್ತೂನಿ ತಸ್ಮೈ ಶಿವಕೃಪಾರ್ಥಿನಃ ॥ ೬೦ ॥

ಯೇ ಯೇ ಸರ್ವೇಷು ದೇಶೇಷು ಗೋಪಾಸ್ತಿಷ್ಠಂತಿ ಭೂರಿಶಃ ।
ತೇಷಾಂ ತಮೇವ ರಾಜಾನಂ ಚಕ್ರಿರೇ ಸರ್ವಪಾರ್ಥಿವಾಃ ॥ ೬೧ ॥

---

ಅಭಿಪ್ರಾಯದಿಂದ ಶಸ್ತ್ರಾಸ್ತ್ರಗಳನ್ನು ಬಿಸುಟು ಸಂತೋಷಚಿತ್ತರಾಗಿ ಪಟ್ಟಣಪ್ರವೇಶ ಮಾಡಿ ಚಂದ್ರಸೇನನ ಅನುಮತಿಯಿಂದ ಮಹಾಕಾಲನನ್ನು ಪೂಜಿಸಿದರು. ಆಮೇಲೆ ಆ ರಾಜರೆಲ್ಲರೂ ಗೊಲ್ಲತಿಯ ಮನೆಗೆ ಹೋದರು. ಅಲ್ಲಿ ಅವಳ ಭಾಗ್ಯವನ್ನು ಹೊಗಳಿದರು. ಚಂದ್ರಸೇನರಾಜನು ಅಲ್ಲಿದ್ದ ರಾಜರನ್ನೆಲ್ಲಾ ಇದಿರುಗೊಂಡು ಕರ ತಂದು ಕುಳ್ಳಿರಿಸಿ ಪೂಜಿಸಿದನು. ಉತ್ತಮವಾದ ಪೀಠದಲ್ಲಿ ಆ ರಾಜರು ಕುಳಿತು ಆಶ್ಚರ್ಯಪಡುತ್ತ ಚಂದ್ರಸೇನರಾಜನನ್ನು ಹೊಗಳಿದರು.

೫೯-೬೧. ಗೊಲ್ಲರ ಹುಡುಗನಿಗೆ ಅನುಗ್ರಹ ಮಾಡಿದುದರಿಂದ ತನಗೆ ತಾನೇ ವ್ಯಕ್ತವಾದ ಆ ಶಿವಾಲಯವನ್ನೂ, ಶಿವಲಿಂಗವನ್ನೂ ನೋಡಿ, ಆ ರಾಜರೆಲ್ಲರೂ ಶಿವನಲ್ಲಿ ವಿಶೇಷವಾದ ಭಕ್ತಿಯನ್ನು ತೋರಿದರು. ಆಮೇಲೆ ಗೊಲ್ಲರ ಹುಡುಗನನ್ನು ನೋಡಿ ರಾಜರುಗಳೆಲ್ಲರೂ ಸಂತೋಷದಿಂದ ಶಿವನ ಕೃಪೆಯನ್ನು ಬಯಸಿ ಆ ಹುಡುಗನಿಗೆ ಅನೇಕ ವಸ್ತುಗಳನ್ನು ಬಹುಮಾನವಾಗಿ ಕೊಟ್ಟರು. ಸಮಸ್ತ ರಾಜರೂ ತಂತಮ್ಮ ದೇಶದಲ್ಲಿರುವ ಗೊಲ್ಲರಿಗೆಲ್ಲಾ ಅವನನ್ನೇ ರಾಜನನ್ನಾಗಿ ಮಾಡಿದರು.

ಅಥಾಸ್ಮಿನ್ನಂತರೇ ಸರ್ವೈಸ್ತ್ರಿದಶೈರಭಿಪೂಜಿತಃ ।
ಪ್ರಾದುರ್ಬಭೂವ ತೇಜಸ್ವೀ ಹನೂಮಾನ್ವಾನರೇಶ್ವರಃ ॥ ೬೨ ॥

ತೇ ತಸ್ಯಾಭಿಗಮಾದೇವ ರಾಜಾನೋ ಜಾತಸಂಭ್ರಮಾಃ ।
ಪ್ರತ್ಯುತ್ಥಾಯ ನಮಶ್ಚಕ್ರುರ್ಭಕ್ತಿನಮ್ರಾತ್ಮಮೂರ್ತಯಃ ॥ ೬೩ ॥

ತೇಷಾಂ ಮಧ್ಯೇ ಸಮಾಸೀನಃ ಪೂಜಿತಃ ಪ್ಲವಗೇಶ್ವರಃ ।
ಗೋಪಾತ್ಮಜಂ ತಮಾಲಿಂಗ್ಯ ರಾಜ್ಞೋ ವೀಕ್ಷ್ಯೇದಮಬ್ರವೀತ್ ॥ ೬೪ ॥

॥ ಹನೂಮಾನುವಾಚ ॥

ಸರ್ವೇ ಶೃಣ್ವಂತು ಭದ್ರಂ ವೋ ರಾಜಾನೋ ಯೇ ಚ ದೇಹಿನಃ ।
ಋತೇ ಶಿವಂ ನಾನ್ಯತಮೋ ಗತಿರಸ್ತಿ ಶರೀರಿಣಾಂ ॥ ೬೫ ॥

ಏವಂ ಗೋಪಸುತೋ ದಿಷ್ಟ್ಯಾ ಶಿವಪೂಜಾಂ ವಿಲೋಕ್ಯ ಚ ।
ಅಮಂತ್ರೇಣಾಪಿ ಸಂಪೂಜ್ಯ ಶಿವಂ ಶಿವಮವಾಪ್ತವಾನ್ ॥ ೬೬ ॥

ಏಷ ಭಕ್ತವರಶ್ಶಂಭೋರ್ಗೋಪಾನಾಂ ಕೀರ್ತಿವರ್ಧನಃ ।
ಇಹ ಭುಕ್ತ್ವಾಖಿಲಾನ್ಭೋಗಾನಂತೇ ಮೋಕ್ಷಮವಾಪ್ಸ್ಯತಿ ॥ ೬೭ ॥

---

೬೨-೬೪. ಈ ಸಂದರ್ಭದಲ್ಲಿ ಸಮಸ್ತ ದೇವತೆಗಳಪೂಜೆಗೂ ಪಾತ್ರನಾದ ತೇಜೋವಂತನೂ, ಕಪಿಗಳಿಗೊಡೆಯನೂ ಆದ ಹನುಮಂತನು ಅಲ್ಲಿ ಕಾಣಿಸಿಕೊಂಡನು. ರಾಜರು, ಹನುಮಂತನು ಬಂದುದರಿಂದ ಸಂಭ್ರಮದಿಂದ ಎದುರುಗೊಂಡು ಭಕ್ತಿಯಿಂದ ನಮ್ರರಾಗಿ ನಮಸ್ಕರಿಸಿದರು.. ಕಪೀಶ್ವರನಾದ ಹನುಮಂತನು ಆ ರಾಜರ ನಡುವೆ ಕುಳಿತು, ಅವರ ಪೂಜೆಯನ್ನು ಸ್ವೀಕರಿಸಿ ಆ ಗೊಲ್ಲರ ಹುಡುಗನನ್ನು ತಬ್ಬಿಕೊಂಡು ರಾಜರನ್ನು ಕುರಿತು,

೬೫-೬೭. ಎಲೈ ರಾಜರೇ ಕೇಳಿ. ಜೀವರುಗಳಿಗೆ ಶಿವನನ್ನು ಬಿಟ್ಟು ಬೇರೆ ಗತಿಯಿಲ್ಲ. ಈ ಗೊಲ್ಲರ ಹುಡುಗನು ಮತ್ತೊಬ್ಬರು ಮಾಡುತ್ತಿದ್ದ ಶಿವಪೂಜೆಯನ್ನು ನೋಡಿ ತಾನೂ ಮಂತ್ರವಿಲ್ಲದೆ ಶಿವಪೂಜೆಯನ್ನು ಮಾಡಿ ಮಂಗಳವನ್ನು ಹೊಂದಿದನು. ಇವನು ಶಿವಭಕ್ತರಲ್ಲಿ ಶ್ರೇಷ್ಠನು. ಗೊಲ್ಲರಲ್ಲಿ ಕೀರ್ತಿವಂತನು. ಇಹ ಲೋಕದಲ್ಲಿ ಸಕಲ ಸುಖಗಳನ್ನೂ ಅನುಭವಿಸಿ ಕೊನೆಯಲ್ಲಿ ಮೋಕ್ಷವನ್ನು ಹೊಂದು

ಅಸ್ಯ ವಂಶೇऽಷ್ಟಮೋ ಭಾವೀ ನಂದೋ ನಾಮ ಮಹಾಯಶಾಃ ।
ಪ್ರಾಪ್ಸ್ಯತೇ ತಸ್ಯ ಪುತ್ರತ್ವಂ ಕೃಷ್ಣೋ ನಾರಾಯಣಸ್ಸ್ವಯಂ ॥ ೬೮ ॥

ಅದ್ಯ ಪ್ರಭೃತಿ ಲೋಕೇಽಸ್ಮಿನ್ನೇಷ ಗೋಪಕುಮಾರಕಃ ।
ನಾಮ್ನಾ ಶ್ರೀಕರ ಇತ್ಯುಚ್ಚೈರ್ಲೋಕಖ್ಯಾತಿಂ ಗಮಿಷ್ಯತಿ ॥ ೬೯ ॥

॥ ಸೂತ ಉವಾಚ ॥

ಏವಮುಕ್ತ್ವಾಂಜನೀಸೂನುಃ ಶಿವರೂಪೋ ಹರೀಶ್ವರಃ ।
ಸರ್ವಾನ್ರಾಜ್ಞಶ್ಚಂದ್ರಸೇನಂ ಕೃಪಾದೃಷ್ಟ್ಯಾ ದದರ್ಶ ಹ ॥ ೭೦ ॥

ಅಥ ತಸ್ಮೈ ಶ್ರೀಕರಾಯ ಗೋಪಪುತ್ರಾಯ ಧೀಮತೇ ।
ಉಪಾದಿದೇಶ ಸುಪ್ರೀತ್ಯಾ ಶಿವಾಚಾರಂ ಶಿವಪ್ರಿಯಂ ॥ ೭೧ ॥

ಹನೂಮಾನಥ ಸುಪ್ರೀತಃ ಸರ್ವೇಷಾಂ ಪಶ್ಯತಾಂ ದ್ವಿಜಾಃ ।
ಚಂದ್ರಸೇನಂ ಶ್ರೀಕರಂ ಚ ತತ್ರೈವಾಂತರಧೀಯತ ॥ ೭೨ ॥

---

ವನು. ಇವನ ವಂಶದಲ್ಲಿ ಎಂಟನೆಯವನಾಗಿ ನಂದಗೋಪನೆಂಬ ಕೀರ್ತಿಶಾಲಿಯು ಹುಟ್ಟುವನು. ಅವನಿಗೆ ನಾರಾಯಣನು, ಕೃಷ್ಣನೆಂಬ ಹೆಸರಿನಿಂದ ಮಗನಾಗುವನು. ಈ ದಿನ ಮೊದಲುಗೊಂಡು ಈ ಭೂಲೋಕದಲ್ಲಿ ಈ ಗೊಲ್ಲರ ಹುಡುಗನು ಶ್ರೀಕರನೆಂಬ ಹೆಸರಿನಿಂದ ಪ್ರಸಿದ್ಧನಾಗುವನು ಎಂದನು.

೭೦-೭೨. ಹೀಗೆಂದು ಹೇಳಿ ಕಪೀಶ್ವರನಾದ ಹನುಮಂತನು, ತಾನು ಶಿವನ ಅವತಾರವಾದುದರಿಂದ ಸಮಸ್ತ ರಾಜರನ್ನೂ ಚಂದ್ರಸೇನನನ್ನೂ ಕೃಪಾದೃಷ್ಟಿಯಿಂದ ನೋಡಿದನು. ಆಮೇಲೆ ಆ ಶ್ರೀಕರನೆಂಬ ಬುದ್ಧಿವಂತನಾದ ಗೊಲ್ಲರ ಹುಡುಗನಿಗೆ ಸಂತೋಷದಿಂದ ಶಿವನಿಗೆ ಪ್ರೀತಿಪಾತ್ರವಾದ ಶಿವಧರ್ಮವನ್ನು ಉಪದೇಶಮಾಡಿದನು. ಬಳಿಕ ಚಂದ್ರಸೇನ, ಶ್ರೀಕರ ಮುಂತಾದ ಸಮಸ್ತ ರಾಜರೂ ನೋಡುತ್ತಿದ್ದ ಹಾಗೆಯೇ ಹನುಮಂತನು ಅಲ್ಲಿಯೇ ಅದೃಶ್ಯನಾದನು.

ತೇ ಸರ್ವೇ ಚ ಮಹೀಪಾಲಾಸ್ಸಂಹೃಷ್ಟಾಃ ಪ್ರತಿಪೂಜಿತಾಃ ।
ಚಂದ್ರಸೇನಂ ಸಮಾಮಂತ್ರ್ಯ ಪ್ರತಿಜಗ್ಮುರ್ಯಥಾಗತಂ ॥ ೭೩ ॥

ಶ್ರೀಕರೋಽಪಿ ಮಹಾತೇಜಾ ಉಪದಿಷ್ಟೋ ಹನೂಮತಾ ।
ಬ್ರಾಹ್ಮಣೈಸ್ಸಹ ಧರ್ಮಜ್ಞೈಶ್ಚಕ್ರೇ ಶಂಭೋಸ್ಸಮರ್ಹಣಂ ॥ ೭೪ ॥

ಚಂದ್ರಸೇನೋ ಮಹಾರಾಜಃ ಶ್ರೀಕರೋ ಗೋಪಬಾಲಕಃ ।
ಉಭಾವಪಿ ಪರಪ್ರೀತ್ಯಾ ಮಹಾಕಾಲಂ ಚ ಭೇಜತುಃ ॥ ೭೫ ॥

ಕಾಲೇನ ಶ್ರೀಕರಸ್ಸೋಽಪಿ ಚಂದ್ರಸೇನಶ್ಚ ಭೂಪತಿಃ ।
ಸಮಾರಾಧ್ಯ ಮಹಾಕಾಲಂ ಭೇಜತುಃ ಪರಮಂ ಪದಂ ॥ ೭೬ ॥

ಏವಂ ವಿಧೋ ಮಹಾಕಾಲಶ್ಶಿವಲ್ಲಿಂಗಸ್ಸತಾಂ ಗತಿಃ ।
ಸರ್ವಥಾ ದುಷ್ಟಹಂತಾ ಚ ಶಂಕರೋ ಭಕ್ತವತ್ಸಲಃ ॥ ೭೭ ॥

---

೭೩-೭೬. ಚಂದ್ರಸೇನರಾಜನಿಂದ ಗೌರವಿಸಲ್ಪಟ್ಟ ಆ ರಾಜರೆಲ್ಲರೂ, ಅವನ ಅನುಮತಿಯನ್ನು ಪಡೆದು ತಂತಮ್ಮ ಸ್ಥಳಗಳಿಗೆ ಹೊರಟುಹೋದರು. ಮಹಾ ತೇಜಸ್ವಿಯಾದ ಶ್ರೀಕರನು ಹನುಮಂತನ ಉಪದೇಶದಿಂದ ಧರ್ಮವನ್ನು ತಿಳಿದ ಬ್ರಾಹ್ಮಣರೊಡನೆ ಶಿವನ ಪೂಜೆಯನ್ನು ಮಾಡಿದನು. ಚಂದ್ರಸೇನರಾಜನೂ, ಗೊಲ್ಲರ ಬಾಲಕನಾದ ಶ್ರೀಕರನೂ ಇಬ್ಬರೂ ಅತ್ಯಂತ ಪ್ರೀತಿಯಿಂದ ಮಹಾಕಾಲನ ಸಮೀಪಕ್ಕೆ ಹೋದರು. ಕೆಲವು ಕಾಲದಮೇಲೆ ಶ್ರೀಕರನೂ, ಚಂದ್ರಸೇನರಾಜನೂ ಮಹಾಕಾಲನನ್ನು ಪೂಜಿಸಿ ಮೋಕ್ಷವನ್ನು ಹೊಂದಿದರು.

೭೭. ಈ ರೀತಿಯಾದ ಮಹಾಕಾಲನೆಂಬ ಶಿವಲಿಂಗವು ಸಜ್ಜನರಿಗೆ ಉತ್ತಮ ಗತಿಯನ್ನು ಕೊಡತಕ್ಕುದಾಗಿರುವುದು. ಆ ಶಂಕರನು ಭಕ್ತರಲ್ಲಿ ಪ್ರೀತಿಯುಳ್ಳವನು. ದುಷ್ಟರನ್ನು ಸಂಪೂರ್ಣವಾಗಿ ನಾಶಮಾಡತಕ್ಕವನು.

ಇದಂ ಪವಿತ್ರಂ ಪರಮಂ ರಹಸ್ಯಂ ಸರ್ವಸೌಖ್ಯದಂ ।
ಆಖ್ಯಾನಂ ಕಥಿತಂ ಸ್ವರ್ಗ್ಯಂ ಶಿವಭಕ್ತಿವಿವರ್ಧನಂ ॥ ೭೮ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಮಹಾಕಾಲಜ್ಯೋತಿರ್ಲಿಂಗಮಾಹಾತ್ಮ್ಯವರ್ಣನಂ ನಾಮ
ಸಪ್ತದಶೋಽಧ್ಯಾಯಃ



---

೭೮. ಈ ಮಹಾಕಾಲಶಿವಲಿಂಗದ ಆಖ್ಯಾನವು, ಪರಿಶುದ್ಧವೂ, ಶ್ರೇಷ್ಠವೂ, ಗೋಪ್ಯವೂ [ಆದುದು. ಸಮಸ್ತ ಸೌಖ್ಯಗಳನ್ನೂ ಕೊಡುವುದು. ಸ್ವರ್ಗಸುಖವನ್ನುಂಟುಮಾಡುವುದು. ಶಿವಭಕ್ತಿಯನ್ನು ಹೆಚ್ಚಿಸುವುದು. ಇಂತಹ ಈ ಕಥೆಯನ್ನು ನಿಮಗೆ ಹೇಳಿರುವೆನು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಮಹಾಕಾಲಜ್ಯೋತಿರ್ಲಿಂಗ ಮಹಿಮಾವರ್ಣನೆಯೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಅಷ್ಟಾದಶೋಽಧ್ಯಾಯಃ

॥ ಋಷಯ ಊಚುಃ ॥

ಸೂತ ಸೂತ ಮಹಾಭಾಗ ಶ್ರಾವಿತಾ ಹ್ಯದ್ಭುತಾ ಕಥಾ ।
ಮಹಾಕಾಲಾಖ್ಯಲಿಂಗಸ್ಯ ನಿಜಭಕ್ತಸುರಕ್ಷಿಣಃ ॥ ೧ ॥

ಜ್ಯೋತಿರ್ಲಿಂಗಂ ಚತುರ್ಥಂ ಚ ಕೃಪಯಾ ವದ ವಿತ್ತಮ ।
ಓಂಕಾರೇ ಪರಮೇಶಸ್ಯ ಸರ್ವಪಾತಕಹಾರಿಣಃ ॥ ೨ ॥

---

## ಹದಿನೆಂಟನೆಯ ಅಧ್ಯಾಯವು

೧-೨. ಋಷಿಗಳು ಪ್ರಶ್ನೆಮಾಡಿದರು.—ಮಹಾಪುಣ್ಯವಂತನಾದ ಓ ಸೂತನೇ! ತನ್ನ ಭಕ್ತರನ್ನು ರಕ್ಷಿಸುವ ಮಹಾಕಾಲನೆಂಬ ಜ್ಯೋತಿರ್ಲಿಂಗದ ಆಶ್ಚರ್ಯಕರವಾದ ಕಥೆಯನ್ನು ಹೇಳಿದೆ. ಈಗ ಸಮಸ್ತ ಪಾಪಗಳನ್ನೂ ನಾಶಮಾಡುವ ಓಂಕಾರ ಕ್ಷೇತ್ರದಲ್ಲಿರುವ ಪರಮೇಶ್ವರನ ನಾಲ್ಕನೆಯ ಜ್ಯೋತಿರ್ಲಿಂಗದ ಕಥೆಯನ್ನು ದಯವಿಟ್ಟು ನಮಗೆ ಹೇಳಬೇಕು ಎಂದರು.

॥ ಸೂತ ಉವಾಚ ॥

ಓಂಕಾರೇ ಪರಮೇಶಾಖ್ಯೇ ಲಿಂಗಮಾಸೀದ್ಯಥಾ ದ್ವಿಜಾಃ ।
ತಥಾ ವಕ್ಷ್ಯಾಮಿ ವಃ ಪ್ರೀತ್ಯಾ ಶ್ರೂಯತಾಂ ಪರಮರ್ಷಯಃ ॥ ೩ ॥

ಕಸ್ಮಿಂಶ್ಚಿತ್ಸಮಯೇ ಚಾತ್ರ ನಾರದೋ ಭಗವಾನ್ಮುನಿಃ ।
ಗೋಕರ್ಣಾಖ್ಯಂ ಶಿವಂ ಗತ್ವಾ ಸಿಷೇವೇ ಪರಭಕ್ತಿಮಾನ್ ॥ ೪ ॥

ತತಸ್ಸ ಆಗತೋ ವಿಂಧ್ಯಂ ನಗೇಶಂ ಮುನಿಸತ್ತಮಃ ।
ತತ್ರೈವ ಪೂಜಿತಸ್ತೇನ ಬಹುಮಾನಪುರಸ್ಸರಂ ॥ ೫ ॥

ಮಯಿ ಸರ್ವಂ ವಿದ್ಯತೇ ಚ ನ ನ್ಯೂನಂ ಹಿ ಕದಾಚನ ।
ಇತಿ ಭಾವಂ ಸಮಾಸ್ಥಾಯ ಸಂಸ್ಥಿತೋ ನಾರದಾಗ್ರತಃ ॥ ೬ ॥

ತನ್ಮಾನಂ ತತ್ತದಾ ಶ್ರುತ್ವಾ ನಾರದೋ ಮಾನಹಾ ತತಃ ।
ನಿಶ್ಶ್ವಸ್ಯ ಸಂಸ್ಥಿತಸ್ತತ್ರ ಶ್ರುತ್ವಾ ವಿಂಧ್ಯೋಽಬ್ರವೀದಿದಂ ॥ ೭ ॥

---

೩-೬. ಸೂತನು ಹೇಳಿದನು.—ಎಲೈ ಋಷಿಶ್ರೇಷ್ಠರಾದ ಬ್ರಾಹ್ಮಣರೇ! ಓಂಕಾರಕ್ಷೇತ್ರದಲ್ಲಿ ಪರಮೇಶ್ವರನೆಂಬ ಹೆಸರಿನ ಲಿಂಗವು ಹೇಗೆ ಉತ್ಪತ್ತಿಯಾಯಿತೆಂಬುದನ್ನು ನಿಮಗೆ ಪ್ರೀತಿಯಿಂದ ಹೇಳುವೆನು. ಕೇಳಿರಿ. ಒಂದಾನೊಂದು ಕಾಲದಲ್ಲಿ ಮಹಾಮಹಿಮನಾದ ನಾರದಮುನಿಯು ಗೋಕರ್ಣಕ್ಷೇತ್ರಕ್ಕೆ ಹೋಗಿ ಅಲ್ಲಿ ಅತ್ಯಂತ ಭಕ್ತಿಯಿಂದ ಶಿವನನ್ನು ಪೂಜಿಸಿದನು. ಆಮೇಲೆ ಆ ಋಷಿಶ್ರೇಷ್ಠನು ವಿಂಧ್ಯ ಪರ್ವತಕ್ಕೆ ಬಂದನು. ಅಲ್ಲಿ ಪರ್ವರಾಜನಾದ ವಿಂಧ್ಯನು ನಾರದನಿಗೆ ಪೂಜೆಯನ್ನು ಮಾಡಿ, ನನ್ನಲ್ಲಿ ಸಕಲವಸ್ತು ಸಮೃದ್ಧಿಯೂ ಇರುವುದು. ಇದು ಇಲ್ಲ. ಎಂಬುದು ಎಂದಿಗೂ ನನ್ನಲ್ಲಿ ಇಲ್ಲ. ಎಂಬ ಅಹಂಭಾವವನ್ನು ಹೊಂದಿ ನಾರದನ ಇದುರಿಗೆ ನಿಂತುಕೊಂಡನು.

೭. ಆ ವಿಂಧ್ಯನಿಗಿರುವ ಅಹಂಭಾವವನ್ನು ನಾರದನು ನೋಡಿ, ಆ ಅಹಂಕಾರವನ್ನು ನಾಶಮಾಡಬೇಕೆಂದು ಯೋಚಿಸಿ ಅವನೆದುರಿಗೆ ನಿಟ್ಟುಸಿರನ್ನು ಬಿಟ್ಟು ಅಲ್ಲಿಯೇ ನಿಂತನು. ಇದನ್ನು ಕೇಳಿ ವಿಂಧ್ಯನು,

॥ ವಿಂಧ್ಯ ಉವಾಚ ॥

ಕಿಂ ನ್ಯೂನಂ ಚ ತ್ವಯಾ ದೃಷ್ಟಂ ಮಯಿ ನಿಶ್ವಾಸಕಾರಣಂ ।
ತಚ್ಛ್ರುತ್ವಾ ನಾರದೋ ವಾಕ್ಯಮಬ್ರವೀತ್ಸ ಮಹಾಮುನಿಃ ॥ ೮ ॥

॥ ನಾರದ ಉವಾಚ ॥

ವಿದ್ಯತೇ ತ್ವಯಿ ಸರ್ವಂ ಹಿ ಮೇರುರುಚ್ಚತರಃ ಪುನಃ ।
ದೇವೇಷ್ವಪಿ ವಿಭಾಗೋಽಸ್ಯ ನ ತವಾಸ್ತಿ ಕದಾಚನ ॥ ೯ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ನಾರದಸ್ತಸ್ಮಾಜ್ಜಗಾಮ ಚ ಯಥಾಗತಂ ।
ವಿಂಧ್ಯಶ್ಚ ಪರಿತಪ್ತೋ ವೈ ಧಿಗ್ವೈ ಮೇ ಜೀವಿತಾದಿಕಂ ॥ ೧೦ ॥

ವಿಶ್ವೇಶ್ವರಂ ತಥಾ ಶಂಭುಮಾರಾಧ್ಯ ಚ ತಪಾಮ್ಯಹಂ ।
ಇತಿ ನಿಶ್ಚಿತ್ಯ ಮನಸಾ ಶಂಕರಂ ಶರಣಂ ಗತಃ ॥ ೧೧ ॥

ಜಗಾಮ ತತ್ರ ಸುಪ್ರೀತ್ಯಾ ಹ್ಯೋಂಕಾರೋ ಯತ್ರ ವೈ ಸ್ವಯಂ ।
ಚಕಾರ ಚ ಪುನಸ್ತತ್ರ ಶಿವಮೂರ್ತಿಂ ಚ ಪಾರ್ಥಿವೀಂ ॥ ೧೨ ॥

---

೮. ಎಲೈ, ನಾರದಮುನಿಯೇ! ನನ್ನಲ್ಲಿ ಏನು ನ್ಯೂನತೆಯನ್ನು ಕಂಡಿರುವೆ? ನಿಟ್ಟುಸಿರನ್ನು ಬಿಡಲು ಕಾರಣವೇನು? ಎನ್ನಲು, ನಾರದನಿಂತೆಂದನು.

೯. ಎಲೈ, ವಿಂಧ್ಯನೇ! ನಿನ್ನಲ್ಲಿ ಎಲ್ಲವೂ ಇರುವುದು. ಆದರೆ ಮೇರುಪರ್ವತವು ನಿನಗಿಂತ ಉತ್ತಮವು. ಅಲ್ಲಿ ದೇವತೆಗಳು ವಾಸವಾಗಿರುವರು. ಆ ಪುಣ್ಯವು ನಿನಗೆಂದಿಗೂ ಇಲ್ಲವಲ್ಲಾ ಎಂದನು.

೧೦-೧೨. ಹೀಗೆಂದು ಹೇಳಿ ನಾರದನು ಹೊರಟು ಹೋದನು. ವಿಂಧ್ಯನು ಸಂತಾಪದಿಂದ ಕೂಡಿ, ನಾನು ಬದುಕಿದುದು ವ್ಯರ್ಥವು. ಪ್ರಪಂಚಕ್ಕೆ ಅಧಿಪತಿಯಾದ ಶಿವನನ್ನು ಪೂಜಿಸಿ ತಪಸ್ಸನ್ನು ಮಾಡುವೆನು. ಹೀಗೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಶಿವನನ್ನು ಶರಣು ಹೊಂದಿದನು. ಬಳಿಕ ಸಂತೋಷದಿಂದ ಓಂಕಾರಕ್ಷೇತ್ರಕ್ಕೆ ಹೋಗಿ ಅಲ್ಲಿ ಪಾರ್ಥಿವಲಿಂಗವನ್ನು ಮಾಡಿ ಪೂಜಿಸಿದನು.

ಆರಾಧ್ಯ ಚ ತದಾ ಶಂಭುಂ ಷಣ್ಮಾಸಂ ಸ ನಿರಂತರಂ ।
ನ ಚಚಾಲ ತಪಃಸ್ಥಾನಾಚ್ಛಿವಧ್ಯಾನಪರಾಯಣಃ ॥ ೧೩ ॥

ಏವಂ ವಿಂಧ್ಯತಪೋ ದೃಷ್ಟ್ವಾ ಪ್ರಸನ್ನಃ ಪಾರ್ವತೀಪತಿಃ ।
ಸ್ವರೂಪಂ ದರ್ಶಯಾಮಾಸ ದುರ್ಲ್ಲಭಂ ಯೋಗಿನಾಮಪಿ ॥ ೧೪

ಪ್ರಸನ್ನಸ್ಸ ತದೋವಾಚ ಬ್ರೂಹಿ ತ್ವಂ ಮನಸೇಪ್ಸಿತಂ ।
ತಪಸಾ ತೇ ಪ್ರಸನ್ನೋಽಸ್ಮಿ ಭಕ್ತಾನಾಮಿಪ್ಸಿತಪ್ರದಃ ॥ ೧೫ ॥

॥ ವಿಂಧ್ಯ ಉವಾಚ ॥

ಯದಿ ಪ್ರಸನ್ನೋ ದೇವೇಶ ಬುದ್ಧಿಂ ದೇಹಿ ಯಥೇಪ್ಸಿತಾಂ ।
ಸ್ವಕಾರ್ಯಸಾಧಿನೀಂ ಶಂಭೋ ತ್ವಂ ಸದಾ ಭಕ್ತವತ್ಸಲಃ ॥ ೧೬ ॥

॥ ಸೂತ ಉವಾಚ ॥

ತಚ್ಛ್ರುತ್ವಾ ಭಗವಾನ್ಶಂಭುಶ್ಚಿಚೇತ ಹೃದಯೇ ಚಿರಂ ।
ಪರೋಪತಾಪದಂ ವಿಂಧ್ಯೋ ವರಮಿಚ್ಛತಿ ಮೂಢಧೀಃ ॥ ೧೭ ॥

---

೧೩-೧೫. ಆರು ತಿಂಗಳವರೆಗೆ ಪ್ರತಿದಿನವೂ ಅಲ್ಲಿ ಶಿವನನ್ನು ಪೂಜಿಸಿ ಧ್ಯಾನ ಮಾಡುತ್ತಾ ತಾನು ತಪಸ್ಸು ಮಾಡುತ್ತಿದ್ದ ಸ್ಥಳವನ್ನು ಬಿಟ್ಟು ಚಲಿಸದಿದ್ದನು. ಈ ರೀತಿಯಾದ ವಿಂಧ್ಯನ ತಪಸ್ಸನ್ನು ನೋಡಿ ಪಾರ್ವತೀಪತಿಯಾದ ಶಿವನು ಸಂತೋಷ ಪಟ್ಟು ಯೋಗಿಗಳಿಗೂ ದುರ್ಲಭವಾದ ತನ್ನ ಸ್ವರೂಪವನ್ನು ತೋರಿಸಿದನು. ಪ್ರಸನ್ನ ನಾದ ಶಿವನು, ನಿನ್ನ ತಪಸ್ಸಿಗೆ ನಾನು ಮೆಚ್ಚಿರುವೆನು. ನಿನ್ನ ಮನಸ್ಸಿನಲ್ಲಿ ಅಪೇಕ್ಷೆ ಯಿರುವುದನ್ನು ಹೇಳು, ಭಕ್ತರ ಇಷ್ಟಾರ್ಥವನ್ನು ನಾನು ಕೊಡತಕ್ಕವನು, ಎಂದು ಹೇಳಿದನು.

೧೬. ವಿಂಧ್ಯನು ಹೇಳಿದನು.—ಓ ಶಿವನೇ, ನೀನು ಯಾವಾಗಲೂ ಭಕ್ತರಲ್ಲಿ ಪ್ರೀತಿಯುಳ್ಳವನು. ದೇವತೆಗಳಿಗೆಲ್ಲಾ ಸ್ವಾಮಿಯಾದ ನೀನು ಪ್ರಸನ್ನನಾಗಿದ್ದರೆ ನಾನು ಅಪೇಕ್ಷಿಸುವ ಸ್ವಕಾರ್ಯವನ್ನು ಸಾಧಿಸುವ ಬುದ್ಧಿಯನ್ನು ನನಗೆ ಕರುಣಿಸು ಎಂದು ಕೇಳಿದನು.

೧೭-೧೮. ಈ ಮಾತನ್ನು ಕೇಳಿ ಮಹಾತ್ಮನಾದ ಶಿವನು ತನ್ನ ಮನದಲ್ಲೇ ಯೋಚಿಸಿದನು. ಈ ಮೂಢಬುದ್ಧಿಯುಳ್ಳ ವಿಂಧ್ಯನು ಇತರರಿಗೆ ತೊಂದರೆಯು

ಕಿಂ ಕರೋಮಿ ಯದೇತಸ್ಮೈ ವರದಾನಂ ಭವೇಚ್ಛುಭಂ ।
ಮದ್ದತ್ತಂ ಪರದುಃಖಾಯ ವರದಾನಂ ಯಥಾ ನ ಹಿ ॥ ೧೮ ॥

॥ ಸೂತ ಉವಾಚ ॥

ತಥಾಪಿ ದತ್ತವಾನ್ಶಂಭುಸ್ತಸ್ಮೈ ತದ್ವರಮುತ್ತಮಂ ।
ವಿಂಧ್ಯ ಪರ್ವತರಾಜ ತ್ವಂ ಯಥೇಚ್ಛಸಿ ತಥಾ ಕುರು ॥ ೧೯ ॥

ಏವಂ ಚ ಸಮಯೇ ದೇವಾ ಋಷಯಶ್ಚಾಮಲಾಶಯಾಃ ।
ಸಂಪೂಜ್ಯ ಶಂಕರಂ ತತ್ರ ಸ್ಥಾತವ್ಯಮಿತಿ ಚಾಬ್ರುವನ್ ॥ ೨೦ ॥

ತಚ್ಛ್ರುತ್ವಾ ದೇವವಚನಂ ಪ್ರಸನ್ನಃ ಪರಮೇಶ್ವರಃ ।
ತಥೈವ ಕೃತವಾನ್ಪ್ರೀತ್ಯಾ ಲೋಕಾನಾಂ ಸುಖಹೇತವೇ ॥ ೨೧ ॥

ಓಂಕಾರಂ ಚೈವ ಯಲ್ಲಿಂಗಮೇಕಂ ತಚ್ಚ ದ್ವಿಧಾ ಗತಂ ।
ಪ್ರಣವೇ ಚೈವ ಓಂಕಾರನಾಮಾಸೀತ್ಸ ಸದಾ ಶಿವಃ ॥ ೨೨ ॥

---

ನ್ನುಂಟುಮಾಡುವ ವರವನ್ನೇ ಕೇಳುತ್ತಾನೆ. ಇವನಿಗೆ ನಾನು ಕೊಡುವ ವರವು ಶುಭವಾಗಬೇಕಾದರೆ ಏನು ಮಾಡಲಿ? ನಾನು ಕೊಡುವ ವರವು ಇತರರಿಗೆ ದುಃಖ ಕೊಡುವುದಾಗಬಾರದು! ಎಂದು ಯೋಚಿಸಿದನು.

೧೯. ಹಾಗಾದರೂ ಶಿವನು ಆ ವಿಂಧ್ಯನಿಗೆ ಅವನು ಕೇಳಿದ ಉತ್ತಮವಾದ ವರವನ್ನೇ ಕೊಟ್ಟನು. ಎಲೈ ಪರ್ವತರಾಜನಾದ ವಿಂಧ್ಯನೇ ನಿನ್ನ ಇಷ್ಟಬಂದಂತೆ ಮಾಡು ಎಂದನು.

೨೦-೨೧. ಈ ಸಮಯದಲ್ಲಿ ಋಷಿಗಳೂ, ದೇವತೆಗಳೂ ಪರಿಶುದ್ಧವಾದ ಬುದ್ಧಿಯುಳ್ಳವರಾಗಿ ಶಿವನನ್ನು ಪೂಜಿಸಿ ಈ ಓಂಕಾರಕ್ಷೇತ್ರದಲ್ಲಿಯೇ ನೆಲಸಬೇಕೆಂದು ಕೇಳಿಕೊಂಡರು. ಆ ಮಾತನ್ನು ಕೇಳಿ ಪರಮೇಶ್ವರನು ಪ್ರಸನ್ನನಾಗಿ ಲೋಕಸುಖ ಕ್ಕಾಗಿ ಹಾಗೆಯೇ ಮಾಡಿದನು.

೨೨-೨೫. ಓಂಕಾರದಲ್ಲಿದ್ದ ಆ ಲಿಂಗವು ಎರಡು ಭಾಗವಾಯಿತು. ಪ್ರಣವಾ ಕ್ಷರಕ್ಕೆ ಓಂಕಾರವೆಂದು ಹೆಸರು ಬಂದಿತು. ಅದೇ ಸದಾ ಶಿವನು. ಪಾರ್ಥಿವಲಿಂಗಕ್ಕೂ

ಪಾರ್ಥಿವೇ ಚೈವ ಯಜ್ಞಾತಂ ತದಾಸೀತ್ಪರಮೇಶ್ವರಃ ।
ಭಕ್ತಾಭೀಷ್ಟಪ್ರದೌ ಚೋಭೌ ಭುಕ್ತಿಮುಕ್ತಿಪ್ರದೌ ದ್ವಿಜಾಃ ॥ ೨೩ ॥

ತತ್ಪೂಜಾಂ ಚ ತದಾ ಚಕ್ರುರ್ದೇವಾಶ್ಚ ಋಷಯಸ್ತಥಾ ।
ಪ್ರಾಪುರ್ವರಾನನೇಕಾಂಶ್ಚ ಸಂತೋಷ್ಯ ವೃಷಭಧ್ವಜಂ ॥ ೨೪ ॥

ಸ್ವಸ್ವಸ್ಥಾನಂ ಯಯುರ್ದೇವಾ ವಿಂಧ್ಯೋಽಪಿ ಮುದಿತೋಽಧಿಕಂ ।
ಕಾರ್ಯಂ ಸಾಧಿತವಾನ್ಸ್ವೀಯಂ ಪರಿತಾಪಂ ಜಹೌ ದ್ವಿಜಾಃ ॥ ೨೫ ॥

ಯ ಏವಂ ಪೂಜಯೇಚ್ಛಂಭುಂ ಮಾತೃಗರ್ಭಂ ವಸೇನ್ನ ಹಿ ।
ಯದಭೀಷ್ಟಂ ಫಲಂ ತಚ್ಚ ಪ್ರಾಪ್ನುಯಾನ್ನಾತ್ರ ಸಂಶಯಃ ॥ ೨೬ ॥

---

ಓಂಕಾರೇಶ್ವರನೆಂಬ ಹೆಸರಾಯಿತು. ಅದೇ ಪರಮೇಶ್ವರನು. ಇಬ್ಬರೂ ಭುಕ್ತಿ ಮುಕ್ತಿ ರೂಪವಾದ ಭಕ್ತರ ಇಷ್ಟಾರ್ಥಗಳನ್ನು ಕೊಡತಕ್ಕವರು. ಎಲೈ, ಬ್ರಾಹ್ಮಣರೇ! ಆಗ ದೇವತೆಗಳೂ, ಋಷಿಗಳೂ, ಋಷಭಧ್ವಜನಾದ ಪರಮೇಶ್ವರನನ್ನು ಪೂಜಿಸಿ ಅವನನ್ನು ಸಂತೋಷಪಡಿಸಿ ಅನೇಕ ವರಗಳನ್ನು ಪಡೆದು ತಂತಮ್ಮ ಸ್ಥಳಗಳಿಗೆ ಹೊರಟುಹೋದರು. ವಿಂಧ್ಯನೂ ಅಧಿಕ ಸಂತೋಷದಿಂದ ತನ್ನ ಕಾರ್ಯವನ್ನು ಸಾಧಿಸಿ ನಿಶ್ಚಿಂತನಾಗಿದ್ದನು.

೨೬. ಈ ರೀತಿಯಲ್ಲಿ ಯಾವನು ಶಿವನನ್ನು ಪೂಜಿಸುವನೋ ಅವನಿಗೆ ಮತ್ತೆ ತಾಯಿಯ ಗರ್ಭವಾಸವಿರುವುದಿಲ್ಲ. ಅವನು ಇಷ್ಟಾರ್ಥವನ್ನು ಪಡೆಯುವ ವಿಷಯದಲ್ಲಿ ಸಂದೇಹವಿರುವುದಿಲ್ಲ.

॥ ಸೂತ ಉವಾಚ ॥

ಏತತ್ತೇ ಸರ್ವಮಾಖ್ಯಾತಮೋಂಕಾರಪ್ರಭವೇ ಫಲಂ ।
ಅತಃ ಪರಂ ಪ್ರವಕ್ಷ್ಯಾಮಿ ಕೇದಾರಂ ಲಿಂಗಮುತ್ತಮಂ ॥ ೨೭ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಓಂಕಾರೇಶ್ವರಜ್ಯೋತಿರ್ಲಿಂಗಮಾಹಾತ್ಮ್ಯವರ್ಣನಂ ನಾಮ
ಅಷ್ಟಾದಶೋಽಧ್ಯಾಯಃ



೨೭. ಸೂತನು ಹೇಳಿದನು.—ಎಲೈ ಋಷಿಗಳೇ, ಈ ರೀತಿ ನಿಮಗೆ ಓಂಕಾರೇಶ್ವರನ ಮಹಿಮೆಯನ್ನೆಲ್ಲಾ ಹೇಳಿದೆನು. ಇನ್ನು ಮುಂದೆ ಕೇದಾರೇಶ್ವರಲಿಂಗದ ಶ್ರೇಷ್ಠವಾದ ಮಹಿಮೆಯನ್ನು ಹೇಳುವೆನು ಕೇಳಿ ಎಂದನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಓಂಕಾರೇಶ್ವರಜ್ಯೋತಿರ್ಲಿಂಗಮಾಹಾತ್ಮ್ಯವರ್ಣನೆಯೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಏಕೋನವಿಂಶೋಽಧ್ಯಾಯಃ



॥ ಸೂತ ಉವಾಚ ॥

ನಾರಾಯಣಾಖ್ಯೌ ಯಾವವತಾರೌ ಹರೇರ್ದ್ವಿಜಾಃ ।
ತೇಪಾತೇ ಭಾರತೇ ಖಂಡೇ ಬದರ್ಯಾಶ್ರಮ ಏವ ಹಿ ॥ ೧ ॥

ತಾಭ್ಯಾಂ ಸಂಪ್ರಾರ್ಥಿತಶ್ಶಂಭುಃ ಪಾರ್ಥಿವೇ ಪೂಜನಾಯ ವೈ ।
ಆಯಾತಿ ನಿತ್ಯಂ ತಲ್ಲಿಂಗೇ ಭಕ್ತಾಧೀನತಯಾ ಶಿವಃ ॥ ೨ ॥

ಏವಂ ಪೂಜಯತೋಶ್ಶಂಭುಂ ತಯೋರ್ವಿಷ್ಣ್ವವತಾರಯೋಃ ।
ಚಿರಕಾಲೋ ವ್ಯತೀತಾಯ ಶೈವಯೋರ್ಧರ್ಮಪುತ್ರಯೋಃ ॥ ೩ ॥

---

### ಹತ್ತೊಂಭತ್ತನೆಯ ಅಧ್ಯಾಯವು

೧-೫. ಸೂತನು ಹೇಳಿದನು.—ಎಲೈ ಬ್ರಾಹ್ಮಣರೇ! ವಿಷ್ಣುವಿನ ಅವತಾರವಾದ ನರನಾರಾಯಣರೆಂಬ ಋಷಿಗಳು ಭರತಖಂಡದ ಬದರೀಕಾಶ್ರಮದಲ್ಲಿ ತಪಸ್ಸು ಮಾಡುತ್ತಿದ್ದರು. ಅವರು ಪಾರ್ಥಿವಲಿಂಗದ ಪೂಜೆಯನ್ನು ಮಾಡುವುದಕ್ಕಾಗಿ ಶಿವನನ್ನು ಪ್ರಾರ್ಥಿಸಿದರು. ಭಕ್ತರ ಅಧೀನನಾದ ಶಿವನು ಪ್ರತಿದಿನವೂ ಅವರು ಮಾಡುವ ಪಾರ್ಥಿವಲಿಂಗದಲ್ಲಿ ನೆಲಸಿ ಅವರ ಪೂಜೆಯನ್ನು ಸ್ವೀಕರಿಸುತ್ತಿದ್ದನು. ಈ ರೀತಿಯಲ್ಲಿ

ಏಕಸ್ಮಿನ್ಸಮಯೇ ತತ್ರ ಪ್ರಸನ್ನಃ ಪರಮೇಶ್ವರಃ ।
ಪ್ರತ್ಯುವಾಚ ಪ್ರಸನ್ನೋಽಸ್ಮಿ ವರೋ ಮೇ ವ್ರಿಯತಾಮತಿ ॥ ೪ ॥

ಇತ್ಯುಕ್ತೇ ಚ ತದಾ ತೇನ ನರೋ ನಾರಾಯಣಸ್ಸ್ವಯಂ ।
ಊಚತುರ್ವಚನಂ ತತ್ರ ಲೋಕಾನಾಂ ಹಿತಕಾಮ್ಯಯಾ ॥ ೫ ॥

॥ ನರನಾರಾಯಣಾವೂಚತುಃ ॥

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರಸ್ತ್ವಯಾ ।
ಸ್ಥೀಯತಾಂ ಸ್ವೇನ ರೂಪೇಣ ಪೂಜಾರ್ಥಂ ಶಂಕರಸ್ಸ್ವಯಂ ॥ ೬ ॥

॥ ಸೂತ ಉವಾಚ ॥

ಇತ್ಯುಕ್ತಸ್ತು ತದಾ ತಾಭ್ಯಾಂ ಕೇದಾರೇ ಹಿಮಸಂಶ್ರಯೇ ।
ಸ್ವಯಂ ಚ ಶಂಕರಸ್ತಸ್ಥೌ ಜ್ಯೋತೀರೂಪೋ ಮಹೇಶ್ವರಃ ॥ ೭ ॥

ತಾಭ್ಯಾಂ ಚ ಪೂಜಿತಶ್ಚೈವ ಸರ್ವದುಃಖಭಯಾಪಹಃ ।
ಲೋಕಾನಾಮುಪಕಾರಾರ್ಥಂ ಭಕ್ತಾನಾಂ ದರ್ಶನಾಯ ವೈ ॥ ೮ ॥

---

ಅವರು ಶಿವನನ್ನು ಪೂಜಿಸುತ್ತಾ ಇರಲು ಬಹಳ ಕಾಲವು ಕಳೆಯಿತು. ಒಂದಾನೊಂದು ದಿನ ಶಿವನು ಭಕ್ತರೂ ಧರ್ಮನ ಮಕ್ಕಳೂ ಆದ ಅವರಿಗೆ ಶಿವನು ಪ್ರತ್ಯಕ್ಷನಾಗಿ, ನಾನು ಸಂತೋಷಗೊಂಡೆನು. ನಿಮಗೆ ಇಷ್ಟವಾದ ವರವನ್ನು ಕೇಳಿರಿ ಎಂದನು. ಹೀಗೆ ಶಿವನು ಹೇಳುತ್ತಲು ನರನಾರಾಯಣರಿಬ್ಬರೂ ಲೋಕಹಿತಕ್ಕಾಗಿ ಇಂತು ನುಡಿದರು.

೬. ದೇವತೆಗಳಿಗೆ ಸ್ವಾಮಿಯಾದ ಓ ಶಿವನೇ, ನೀನು ಪ್ರಸನ್ನನಾಗಿ ವರವನ್ನು ಕೊಡುವುದಾದರೆ ನಿನ್ನ ಸ್ವಸ್ವರೂಪದಿಂದ ನಮ್ಮ ಪೂಜಾರ್ಥವಾಗಿ ಇಲ್ಲಿಯೇ ನೆಲಸಬೇಕು ಎಂದರು.

೭-೯. ಅವರ ಇಷ್ಟದಂತೆ ಹಿಮವತ್ಪರ್ವತದ ಕೇದಾರವೆಂಬ ಕ್ಷೇತ್ರದಲ್ಲಿ ಶಿವನು ಜ್ಯೋತೀರೂಪದಿಂದ ನೆಲಸಿದನು. ಇವರಿಬ್ಬರೂ ಅವನನ್ನು ಪೂಜಿಸಿದರು. ಸಮಸ್ತ ದುಃಖಗಳನ್ನೂ ಭಯವನ್ನೂ ಪರಿಹಾರಮಾಡುತ್ತಾ ಲೋಕೋಪಕಾರಾರ್ಥ

ಸ್ವಯಂ ಸ್ಥಿತಸ್ತದಾ ಶಂಭುಃ ಕೇದಾರೇಶ್ವರಸಂಜ್ಞಕಃ ।
ಭಕ್ತಾಭೀಷ್ಟಪ್ರದೋ ನಿತ್ಯಂ ದರ್ಶನಾದರ್ಚನಾದಪಿ ॥ ೯ ॥

ದೇವಾಶ್ಚ ಪೂಜಯಂತೀಹ ಋಷಯಶ್ಚ ಪುರಾತನಾಃ ।
ಮನೋಭೀಷ್ಟಂ ಫಲಂ ತೇ ತೇ ಸುಪ್ರಸನ್ನಾನ್ಮಹೇಶ್ವರಾತ್ ॥ ೧೦ ॥

ಭವಸ್ಯ ಪೂಜನನ್ನಾನಿತ್ಯಂ ಬದರ್ಯಾಶ್ರಮವಾಸಿನಃ ।
ಪ್ರಾಪ್ನುವಂತಿ ಯತಃ ಸೋಽಂ ಭಕ್ತಾಭೀಷ್ಟಪ್ರದಃ ಸದಾ ॥ ೧೧ ॥

ತದ್ದಿನಂ ಹಿ ಸಮಾರಭ್ಯ ಕೇದಾರೇಶ್ವರ ಏವ ಚ ।
ಪೂಜಿತೋ ಯೇನ ಭಕ್ತ್ಯಾ ವೈ ದುಃಖಂ ಸ್ವಪ್ನೇಽಪಿ ದುರ್ಲಭಂ ॥ ೧೨ ॥

ಯೋ ವೈ ಹಿ ಪಾಂಡವಾನ್ದೃಷ್ಟ್ವಾ ಮಾಹಿಷಂ ರೂಪಮಾಸ್ಥಿತಃ ।
ಮಾಯಾಮಾಸ್ಥಾಯ ತತ್ರೈವ ಪಲಾಯನಪರೋಽಭವತ್ ॥ ೧೩ ॥

---

ವಾಗಿಯೂ ಭಕ್ತರ ದರ್ಶನಾರ್ಥವಾಗಿಯೂ ತಾನೇ ಕೇದಾರೇಶ್ವರನೆಂಬ ಹೆಸರಿನಿಂದ ದರ್ಶನಮಾಡಿದವರಿಗೂ, ಪೂಜಿಸಿದವರಿಗೂ ಇಷ್ಟಾರ್ಥಗಳನ್ನು ಕೊಡುತ್ತ ಅಲ್ಲಿ ನೆಲಸಿದನು.

೧೦-೧೨. ಋಷಿಗಳೂ ದೇವತೆಗಳೂ ಆ ಕೇದಾರೇಶ್ವರನನ್ನು ಪೂಜಿಸಿ ಪ್ರಸನ್ನನಾದ ಆ ಮಹೇಶ್ವರನಿಂದ ಅವರವರ ಇಷ್ಟಾರ್ಥಗಳನ್ನು ಪಡೆಯುವರು. ಆದುದರಿಂದ ಆ ಕೇದಾರೇಶ್ವರನು ಆ ದಿನ ಮೊದಲುಗೊಂಡು ಭಕ್ತರ ಇಷ್ಟಾರ್ಥಗಳನ್ನು ಕೊಡತಕ್ಕವನಾಗಿರುವನು. ಅವನನ್ನು ಪೂಜಿಸಿದವರಿಗೆ ಸ್ವಪ್ನದಲ್ಲಿಯೂ ದುಃಖವು ಬರುವುದಿಲ್ಲ.

೧೩-೧೬. ಪಾಂಡವರು ಕೇದಾರಕ್ಷೇತ್ರಕ್ಕೆ ಹೋದಾಗ ಶಿವನು ಪಾಂಡವರನ್ನು ಕಂಡು ಮಾಯೆಯಿಂದ ಅಲ್ಲಿಯೇ ಎಮ್ಮೆಯ ಆಕಾರವನ್ನು ಹೊಂದಿ ಓಡುವುದಕ್ಕೆ

ಧೃತಶ್ಚ ಪಾಂಡವೈಸ್ತತ್ರ ಹ್ಯವಾಙ್ಮುಖತಯಾ ಸ್ಥಿತಃ ।
ಪುಚ್ಛಂ ಚೈವ ಧೃತಂ ತೈಸ್ತು ಪ್ರಾರ್ಥಿತಶ್ಚ ಪುನಃ ಪುನಃ ॥ ೧೪ ॥

ತದ್ರೂಪೇಣ ಸ್ಥಿತಸ್ತತ್ರ ಭಕ್ತವತ್ಸಲನಾಮಭಾಕ್ ।
ನಯಪಾಲೇ ಶಿರೋಭಾಗೋ ಗತಸ್ತದ್ರೂಪತಃ ಸ್ಥಿತಃ ೧೫ ॥

ತಥೈವ ಪೂಜನಾನ್ನಿತ್ಯಮಾಜ್ಞಾಂ ಚೈವಾಪ್ಯದಾತ್ತಥಾ ।
ಪೂಜಿತಶ್ಚ ಸ್ವಯಂ ಶಂಭುಸ್ತತ್ರ ತಸ್ಥೌ ವರಾನದಾತ್ ॥ ೧೬ ॥

ಪೂಜಯಿತ್ವಾ ಗತಾಸ್ತೇ ತು ಪಾಂಡವಾ ಮುದಿತಾಸ್ತದಾ ।
ಲಬ್ಧ್ವಾ ಚಿತ್ತೇಪ್ಸಿತಂ ಸರ್ವಂ ವಿಮುಕ್ತಾಸ್ಸರ್ವದುಃಖತಃ ॥ ೧೭ ॥

ತತ್ರ ನಿತ್ಯಂ ಹರಸ್ಸಾಕ್ಷಾತ್ಕ್ಷೇತ್ರೇ ಕೇದಾರಸಂಜ್ಞಿಕೇ ।
ಭಾರತೀಭಿಃ ಪ್ರಜಾಭಿಶ್ಚ ತಥೈವ ಪರಿಭುಜ್ಯತೇ ॥ ೧೮ ॥

---

ಮೊದಲುಮಾಡಿದನು. ಪಾಂಡವರು ಅದನ್ನು ಹಿಡಿದುಕೊಳ್ಳಲು ಎಮ್ಮೆಯ ಆಕಾರದ ಶಿವನು ಮುಖವನ್ನು ನೆಲದಕಡೆಗೆ ಮಾಡಿಕೊಂಡು ನಿಂತನು. ಅವರು ಬಾಲವನ್ನು ಹಿಡಿದುಕೊಂಡು ಅನೇಕ ಸಾರಿ ಪ್ರಾರ್ಥನೆ ಮಾಡಿದರು. ಶಿವನು ಅದೇ ರೂಪದಿಂದ ಅಲ್ಲಿ ನಿಂತು ಭಕ್ತವತ್ಸಲನೆಂಬ ಹೆಸರನ್ನು ಹೊಂದಿ ನಯಪಾಲವೆಂಬ ಶಿಖರದಲ್ಲಿ ಅದೇ ರೂಪದಿಂದ ನೆಲಸಿದನು. ಹಾಗೆಯೇ ತನ್ನನ್ನು ಪ್ರತಿದಿವಸವೂ ಪೂಜಿಸಬೇಕೆಂದು ಆಜ್ಞೆಯನ್ನು ಮಾಡಿದನು. ಅವರು ಪೂಜೆಮಾಡುತ್ತಲು ಶಿವನು ಅಲ್ಲಿಯೇ ನೆಲಸಿ ಆ ಪಾಂಡವರಿಗೆ ವರಗಳನ್ನು ಕೊಟ್ಟನು.

೧೭. ಆ ಪಾಂಡವರು ಶಿವನನ್ನು ಪೂಜಿಸಿ ಸಂತೋಷದಿಂದ ತಮ್ಮ ಮನಸ್ಸಿನ ಇಷ್ಟಾರ್ಥಗಳನ್ನೆಲ್ಲಾ ಪಡೆದು ಸಮಸ್ತ ದುಃಖಗಳನ್ನು ಕಳೆದುಕೊಂಡು ತಮ್ಮ ಸ್ಥಳಗಳಿಗೆ ಹೊರಟುಹೋದರು.

೧೮. ಆ ಕೇದಾರಕ್ಷೇತ್ರದಲ್ಲಿ ಶಿವನು ಪ್ರತಿದಿನವೂ ಭರತಖಂಡದ ಪ್ರಜೆಗಳ ಪೂಜೆಯನ್ನು ಸ್ವೀಕರಿಸುತ್ತಿರುವನು.

ತತ್ರತ್ಯಂ ವಲಯಂ ಯೋ ವೈ ದದಾತಿ ಹರವಲ್ಲಭಃ ।
ಹರರೂಪಾಂತಿಕಂ ತಚ್ಚ ಹರರೂಪಸಮನ್ವಿತಂ ॥ ೧೯ ॥

ತಥೈವ ರೂಪಂ ದೃಷ್ಟ್ವಾ ಚ ಸರ್ವಪಾಪೈಃ ಪ್ರಮುಚ್ಯತೇ ।
ಜೀವನ್ಮುಕ್ತೋ ಭವೇತ್ಸೋಽಪಿ ಯೋ ಗತೋ ಬದರೀವನೇ ॥ ೨೦ ॥

ದೃಷ್ಟ್ವಾ ರೂಪಂ ನರಸ್ಯೈವ ತಥಾ ನಾರಾಯಣಸ್ಯ ಹಿ ।
ಕೇದಾರೇಶ್ವರಶಂಭೋಶ್ಚ ಮುಕ್ತಿಭಾಗೀ ನ ಸಂಶಯಃ ॥ ೨೧ ॥

ಕೇದಾರೇಶಸ್ಯ ಭಕ್ತಾ ಯೇ ಮಾರ್ಗಸ್ಥಾಸ್ತಸ್ಯ ವೈ ಮೃತಾಃ ।
ತೇಽಪಿ ಮುಕ್ತಾ ಭವಂತ್ಯೇವ ನಾತ್ರ ಕಾರ್ಯಾ ವಿಚಾರಣಾ ॥ ೨೨ ॥

ಗತ್ವಾ ತತ್ರ ಪ್ರೀತಿಯುಕ್ತಃ ಕೇದಾರೇಶಂ ಪ್ರಪೂಜ್ಯ ಚ ।
ತತ್ರತ್ಯಮುದಕಂ ಪೀತ್ವಾ ಪುನರ್ಜನ್ಮ ನ ವಿಂದತಿ ॥ ೨೩ ॥

---

೧೯. ಆ ಕೇದಾರಕ್ಷೇತ್ರದಲ್ಲಿರುವ, ಶಿವನಿಗೆ ಪ್ರೀತಿಪಾತ್ರವಾದ, ಶಿವಸಾರೂಪ್ಯವನ್ನೂ, ಶಿವಸಾಮೀಪ್ಯವನ್ನೂ ಉಂಟುಮಾಡುವ ಬಳೆಯನ್ನು ಯಾವನು ಕೊಡುವನೋ ಅವನು ಶಿವನಿಗೆ ಪ್ರಿಯನಾಗುತ್ತಾನೆ.

೨೦. ಬದರೀ ವನಕ್ಕೆ ಹೋಗಿ ಶಿವರೂಪವನ್ನು ಯಾವನು ನೋಡುವನೋ ಅವನು ಸಮಸ್ತ ಪಾಪಗಳ ಬಿಡುಗಡೆಯನ್ನು ಹೊಂದಿ ಜೀವನ್ಮುಕ್ತನಾಗುವನು.

೨೧. ಆ ಬದರಿಕಾಶ್ರಮದಲ್ಲಿ ನರನಾರಾಯಣರ ಸ್ವರೂಪವನ್ನೂ, ಕೇದಾರೇಶ್ವರನ ಸ್ವರೂಪವನ್ನೂ ನೋಡಿದವರು ಮೋಕ್ಷವನ್ನು ಪಡೆಯುವರೆಂಬಲ್ಲಿ ಸಂದೇಹವಿಲ್ಲ.

೨೨–೨೩. ಕೇದಾರೇಶ್ವರನ ಭಕ್ತರಾಗಿ ದಾರಿಯಲ್ಲಿ ಪ್ರಯಾಣಮಾಡುತ್ತ ಮರಣವನ್ನು ಹೊಂದಿದರೆ ಅವರೂ ಮುಕ್ತರಾಗುವುದರಲ್ಲಿ ಸಂದೇಹವಿಲ್ಲ. ಕೇದಾರ ಕ್ಷೇತ್ರಕ್ಕೆ ಹೋಗಿ ಪ್ರೀತಿಯಿಂದ ಕೇದಾರೇಶ್ವರನನ್ನು ಪೂಜಿಸಿ ಅಲ್ಲಿರುವ ನೀರನ್ನು ಕುಡಿದರೆ ಪುನರ್ಜನ್ಮವು ಬರುವುದಿಲ್ಲ.

ಖಂಡೇಸ್ಮಿನ್ಭಾರತೇ ವಿಪ್ರಾ ನರನಾರಾಯಣೇಶ್ವರಃ ।
ಕೇದಾರೇಶಃ ಪ್ರಪೂಜ್ಯಶ್ಚ ಸರ್ವೈರ್ಜೀವೈಸ್ಸಭಕ್ತಿತಃ ॥ ೨೪ ॥

ಅಸ್ಯ ಖಂಡಸ್ಯ ಸ ಸ್ವಾಮೀ ಸರ್ವೇಶೋಽಪಿ ವಿಶೇಷತಃ
ಸರ್ವಕಾಮಪ್ರದಶ್ಶಂಭುಃ ಕೇದಾರಾಖ್ಯೋ ನ ಸಂಶಯಃ ॥ ೨೫ ॥

ಏತದ್ವಚಸ್ಸಮಾಖ್ಯಾತಂ ಯತ್ಪೃಷ್ಟಮೃಷಿಸತ್ತಮಾಃ ।
ಶ್ರುತ್ವಾ ಪಾಪಂ ಹರೇತ್ಸರ್ವಂ ನಾತ್ರ ಕಾರ್ಯಾ ವಿಚಾರಣಾ ॥ ೨೬ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಕೇದಾರೇಶ್ವರಜ್ಯೋತಿರ್ಲಿಂಗಮಾಹಾತ್ಮ್ಯವರ್ಣನಂ
ನಾಮೈಕೋನವಿಂಶೋಽಧ್ಯಾಯಃ

---

೨೪–೨೫. ಈ ಭರತಖಂಡದಲ್ಲಿ ನರನಾರಾಯಣೇಶ್ವರನನ್ನೂ, ಕೇದಾರೇಶ್ವರನನ್ನೂ ಸಮಸ್ತ ಜೀವರೂ ಭಕ್ತಿಯಿಂದ ಪೂಜಿಸಬೇಕು. ಈ ಭರತಖಂಡಕ್ಕೆ ಕೇದಾರೇಶ್ವರನೇ ಸ್ವಾಮಿಯಾಗಿಯೂ, ಸರ್ವೇಶ್ವರನಾಗಿಯೂ, ಸಕಲ ಇಷ್ಟಾರ್ಥಗಳನ್ನು ಕೊಡತಕ್ಕವನಾಗಿಯೂ ಇರುವನು. ಈ ವಿಷಯದಲ್ಲಿ ಸಂದೇಹವಿರುವುದಿಲ್ಲ.

೨೬. ಎಲೈ ಋಷಿಶ್ರೇಷ್ಠರೇ, ನೀವು ಪ್ರಶ್ನೆ ಮಾಡಿದುದಕ್ಕೆ ಉತ್ತರವಾಗಿ ಇದನ್ನು ಹೇಳಿರುವೆನು. ಇದನ್ನು ಕೇಳಿದರೆ ಸಮಸ್ತ ಪಾಪಗಳೂ ನಾಶವಾಗುವುವು. ಸಂದೇಹಪಡಬೇಕಾದುದಿಲ್ಲ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಕೇದಾರೇಶ್ವರ ಜ್ಯೋತಿರ್ಲಿಂಗ ಮಾಹಾತ್ಮ್ಯವರ್ಣನೆಯೆಂಬ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ವಿಂಶೋಽಧ್ಯಾಯಃ

॥ ಸೂತ ಉವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಭೈಮಶಂಕರಂ ।**
**ಯಸ್ಯ ಶ್ರವಣಮಾತ್ರೇಣ ಸರ್ವಾಭೀಷ್ಟಂ ಲಭೇನ್ನರಃ ॥ ೧ ॥**

**ಕಾಮರೂಪಾಭಿದೇ ದೇಶೇ ಶಂಕರೋ ಲೋಕಕಾಮ್ಯಯಾ ।**
**ಅವತೀರ್ಣಃ ಸ್ವಯಂ ಸಾಕ್ಷಾತ್ಕಲ್ಯಾಣಸುಖಭಾಜನಂ ॥ ೨ ॥**

**ಯದರ್ಥಮವತೀರ್ಣೋಽಸೌ ಶಂಕರೋ ಲೋಕಶಂಕರಃ ।**
**ಶೃಣುತಾದರತಸ್ತಚ್ಚ ಕಥಯಾಮಿ ಮುನೀಶ್ವರಾಃ ॥ ೩ ॥**

---

## ಇಪ್ಪತ್ತನೆಯ ಅಧ್ಯಾಯವು.

೧-೩. ಸೂತನು ಹೇಳಿದನು.—ಇಲ್ಲಿಂದ ಮುಂದೆ ಭೀಮಶಂಕರನ ಮಾಹಾತ್ಮೆಯನ್ನು ಹೇಳುವೆನು. ಇದನ್ನು ಕೇಳಿದ ಮಾತ್ರದಿಂದಲೇ ಮನುಷ್ಯನು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು. ಕಾಮರೂಪವೆಂಬ ದೇಶದಲ್ಲಿ ಶಿವನು ಲೋಕದ ಜನರಿಗೆ ಮಂಗಳವನ್ನೂ ಸುಖವನ್ನೂ ಉಂಟುಮಾಡುವುದಕ್ಕಾಗಿ ಅವತಾರಮಾಡಿದ ಆ ಕಥೆಯನ್ನು ಹೇಳುವೆನು. ಎಲೈ ಋಷಿಶ್ರೇಷ್ಠರೇ, ಆದರದಿಂದ ಅದನ್ನು ಕೇಳಿರಿ.

ಭೀಮೋ ನಾಮ ಮಹಾವೀರ್ಯೋ ರಾಕ್ಷಸೋಽಭೂತ್ಪುರಾ ದ್ವಿಜಾಃ ।
ದುಃಖದಸ್ಸರ್ವಭೂತಾನಾಂ ಧರ್ಮಧ್ವಂಸಕರಸ್ಸದಾ ॥ ೪ ॥

ಕುಂಭಕರ್ಣಾತ್ಸಮುತ್ಪನ್ನಃ ಕರ್ಕಟ್ಯಾಂ ಸುಮಹಾಬಲಃ ।
ಸಹ್ಯೇ ಚ ಪರ್ವತೇ ಸೋಽಪಿ ಮಾತ್ರಾ ವಾಸಂ ಚಕಾರ ಹ ॥ ೫ ॥

ಕುಂಭಕರ್ಣೇ ಚ ರಾಮೇಣ ಹತೇ ಲೋಕಭಯಂಕರೇ ।
ರಾಕ್ಷಸೀ ಪುತ್ರಸಂಯುಕ್ತಾ ಸಹ್ಯೇಽತಿಷ್ಠತ್ಸ್ವಯಂ ತದಾ ॥ ೬ ॥

ಸ ಬಾಲ ಏಕದಾ ಭೀಮಃ ಕರ್ಕಟೀಂ ಮಾತರಂ ದ್ವಿಜಾಃ ।
ಪಪ್ರಚ್ಛ ಚ ಖಲೋ ಲೋಕದುಃಖದೋ ಭೀಮವಿಕ್ರಮಃ ॥ ೭ ॥

॥ ಭೀಮ ಉವಾಚ ॥

ಮಾತರ್ಮೇ ಕಃ ಪಿತಾ ಕುತ್ರ ಕಥಂ ವೈಕಾಕಿನೀ ಸ್ಥಿತಾ ।
ಜ್ಞಾತುಮಿಚ್ಛಾಮಿ ತತ್ಸರ್ವಂ ಯಥಾರ್ಥಂ ತ್ವಂ ವದಾಧುನಾ ॥ ೮ ॥

॥ ಸೂತ ಉವಾಚ ॥

ಏವಂ ಪೃಷ್ಟಾ ತದಾ ತೇನ ಪುತ್ರೇಣ ರಾಕ್ಷಸೀ ಚ ಸಾ ।
ಉವಾಚ ಪುತ್ರಂ ಸಾ ದುಷ್ಟಾ ಶ್ರೂಯತಾಂ ಕಥಯಾಮ್ಯಹಂ ॥ ೯ ॥

---

೪-೭. ಪೂರ್ವದಲ್ಲಿ ಭೀಮನೆಂಬ ಮಹಾಬಲಶಾಲಿಯಾದ ಓರ್ವ ರಾಕ್ಷಸ ನಿದ್ದನು. ಅವನು ಸಮಸ್ತ ಪ್ರಾಣಿಗಳಿಗೂ ದುಃಖವನ್ನುಂಟುಮಾಡುತ್ತ ಧರ್ಮವನ್ನು ಯಾವಾಗಲೂ ನಾಶಮಾಡುತ್ತಿದ್ದನು. ಅವನು ಕುಂಭಕರ್ಣನಿಂದ ಕರ್ಕಟಿ ಎಂಬ ರಾಕ್ಷಸಿಯಲ್ಲಿ ಹುಟ್ಟಿದವನು. ಸಹ್ಯಪರ್ವತದಲ್ಲಿ ತನ್ನ ತಾಯಿಯೊಡನೆ ವಾಸವಾಗಿದ್ದನು. ಲೋಕಕ್ಕೆ ಭಯವನ್ನುಂಟುಮಾಡುವ ಕುಂಭಕರ್ಣನನ್ನು ರಾಮನು ಕೊಂದಮೇಲೆ ಕರ್ಕಟಿ ಎಂಬ ರಾಕ್ಷಸಿಯು ಮಗನೊಡನೆ ಸಹ್ಯಪರ್ವತದಲ್ಲಿದ್ದಳು. ಒಂದಾನೊಂದು ದಿನ ಭಯಂಕರವಾದ ಪರಾಕ್ರಮವುಳ್ಳ ಆ ಭೀಮನು ತಾಯಿಯನ್ನು ಕುರಿತು,

೮-೯. ಅಮ್ಮಾ ನನ್ನ ತಂದೆಯಾರು? ನೀನೊಬ್ಬಳೇ ಇಲ್ಲಿರಲು ಕಾರಣ ವೇನು? ಇವೆಲ್ಲವನ್ನೂ ನಾನು ತಿಳಿಯಬೇಕೆಂದಿರುವೆನು. ನೀನು ನಿಜವನ್ನು ಹೇಳಬೇಕು, ಎಂದನು. ಹೀಗೆಂದು ಕೇಳುತ್ತಲು, ಆ ದುಷ್ಟಳಾದ ರಾಕ್ಷಸಿಯು—ಅಪ್ಪಾ ಮಗನೇ, ಹೇಳುವೆನು ಕೇಳು !

॥ ಕರ್ಕಟ್ಯುವಾಚ ॥

**ಪಿತಾ ತೇ ಕುಂಭಕರ್ಣಶ್ಚ ರಾವಣಾನುಜ ಏವ ಚ ।**
**ರಾಮೇಣ ಮಾರಿತಸ್ಸೋಽಯಂ ಭ್ರಾತ್ರಾ ಸಹ ಮಹಾಬಲಃ ॥ ೧೦ ॥**

**ಅತ್ರಾಗತಃ ಕದಾಚಿದ್ವೈ ಕುಂಭಕರ್ಣಸ್ಸ ರಾಕ್ಷಸಃ ।**
**ಮದ್ಭೋಗಂ ಕೃತವಾಂಸ್ತಾತ ಪ್ರಸಹ್ಯ ಬಲವಾನ್ಪುರಾ ॥ ೧೧ ॥**

**ಲಂಕಾಂ ಸ ಗತವಾನ್ಮಾಂ ಚ ತ್ಯಕ್ತ್ವಾತ್ರೈವ ಮಹಾಬಲಃ ।**
**ಮಯಾ ನ ದೃಷ್ಟಾ ಸಾ ಲಂಕಾ ಹ್ಯತ್ರೈವ ನಿವಸಾಮ್ಯಹಂ ॥ ೧೨ ॥**

**ಪಿತಾ ಮೇ ಕರ್ಕಟೋ ನಾಮ ಮಾತಾ ಮೇ ಪುಷ್ಕಸೀ ಮತಾ ।**
**ಭರ್ತಾ ಮಮ ವಿರಾಧೋ ಹಿ ರಾಮೇಣ ನಿಹತಃ ಪುರಾ ॥ ೧೩ ॥**

**ಪಿತ್ರೋಃ ಪಾರ್ಶ್ವೇ ಸ್ಥಿತಾ ಚಾಹಂ ನಿಹತೇ ಸ್ವಾಮಿನಿ ಪ್ರಿಯೇ ।**
**ಪಿತರೌ ಮೇ ಮೃತೌ ಚಾತ್ರ ಋಷಿಣಾ ಭಸ್ಮಸಾತ್ಕೃತೌ ॥ ೧೪ ॥**

**ಭಕ್ಷಣಾರ್ಥಂ ಗತೌ ತತ್ರ ಕ್ರುದ್ಧೇನ ಸುಮಹಾತ್ಮನಾ ।**
**ಸುತೀಕ್ಷ್ಣೇನ ಸುತಪಸಾಽಗಸ್ತ್ಯಶಿಷ್ಯೇಣ ವೈ ತದಾ ॥ ೧೫ ॥**

---

೧೦–೧೮. ನಿನ್ನ ತಂದೆಯು ರಾವಣನ ತಮ್ಮನಾದ ಕುಂಭಕರ್ಣನು. ಮಹಾ ಬಲಶಾಲಿಯಾದ ಅವನನ್ನು ಅವನಣ್ಣನೊಡನೆ ರಾಮನು ಕೊಂದುಹಾಕಿದನು. ಹಿಂದೆ ಇಲ್ಲಿಗೆ ಬಂದ ಕುಂಭಕರ್ಣನು ಬಲಾತ್ಕಾರವಾಗಿ ನನ್ನಲ್ಲಿ ರಮಿಸಿ ನನ್ನನ್ನು ಇಲ್ಲಿಯೇ ಬಿಟ್ಟು ಲಂಕೆಗೆ ಹೊರಟುಹೋದನು. ನಾನು ಆ ಲಂಕೆಯನ್ನು ನೋಡಿಯೇ ಇಲ್ಲ. ಇಲ್ಲಿಯೇ ವಾಸವಾಗಿರುವೆನು. ನನ್ನ ತಂದೆ ಕರ್ಕಟನೆಂಬ ರಾಕ್ಷಸನು, ತಾಯಿಯು ಪುಷ್ಕಸಿ ಎಂಬುವಳು. ನನ್ನ ಗಂಡನು ವಿರಾಧನು. ಹಿಂದೆ ರಾಮನು ಅವನನ್ನು ಕೊಂದನು. ನನ್ನ ಗಂಡನು ಸತ್ತಮೇಲೆ ತಾಯಿ ತಂದೆಗಳ ಸಮೀಪದಲ್ಲಿದ್ದೆನು. ನನ್ನ ತಾಯಿ ತಂದೆಗಳು ಆಹಾರಾರ್ಥವಾಗಿ ಋಷಿಗಳ ಆಶ್ರಮಕ್ಕೆ ನುಗ್ಗಿದಾಗ ಅಗಸ್ತ್ಯಋಷಿಯ ಶಿಷ್ಯನೂ ಮಹಾತಪಸ್ವಿಯೂ ಆದ ಸುತೀಕ್ಷ್ಣನು ಕೋಪ

ಸಾಽಹಮೇಕಾಕಿನೀ ಜಾತಾ ದುಃಖಿತಾ ಪರ್ವತೇ ಪುರಾ ।
ನಿವಸಾಮಿ ಸ್ಮ ದುಃಖಾರ್ತಾ ನಿರಾಲಂಬಾ ನಿರಾಶ್ರಯಾ ॥ ೧೬ ॥

ಏತಸ್ಮಿನ್ಸಮಯೇ ಹ್ಯತ್ರ ರಾಕ್ಷಸೋ ರಾವಣಾನುಜಃ ।
ಆಗತ್ಯ ಕೃತವಾನ್ಸಂಗಂ ಮಾಂ ವಿಹಾಯ ಗತೋ ಹಿ ಸಃ ॥ ೧೭ ॥

ತತಸ್ತ್ವಂ ಚ ಸಮುತ್ಪನ್ನೋ ಮಹಾಬಲಪರಾಕ್ರಮಃ ।
ಅವಲಂಬ್ಯ ಪುನಸ್ತ್ವಾಂ ಚ ಕಾಲಕ್ಷೇಪಂ ಕರೋಮ್ಯಹಂ ॥ ೧೮ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯಾ ಭೀಮೋ ಭೀಮಪರಾಕ್ರಮಃ ।
ಕ್ರುದ್ಧಶ್ಚ ಚಿಂತಯಾಮಾಸ ಕಿಂ ಕರೋಮಿ ಹರಿಂ ಪ್ರತಿ ॥ ೧೯ ॥

ಪಿತಾನೇನ ಹತೋ ಮೇ ಹಿ ತಥಾ ಮಾತಾಮಹಾ ಅಪಿ ।
ವಿರಾಧಶ್ಚ ಹತೋಽನೇನ ದುಃಖಂ ಬಹುತರಂ ಕೃತಂ ॥ ೨೦ ॥

ತತ್ಪುತ್ರೋಽಹಂ ಭವೇಯಂ ಚೇದ್ಧರಿಂ ತಂ ಪೀಡಯಾಮ್ಯಹಂ ।
ಇತಿ ಕೃತ್ವಾ ಮತಿಂ ಭೀಮಸ್ತಪಸ್ತಪ್ತುಂ ಮಹದ್ಯಯೌ ॥ ೨೧ ॥

---

ದಿಂದ ಅವರನ್ನು ಭಸ್ಮಮಾಡಿದನು. ಆಮೇಲೆ ನಾನೊಬ್ಬಳೇ ಯಾರ ಆಶ್ರಯವೂ ಇಲ್ಲದೆ ದುಃಖಿಸುತ್ತ ಈ ಪರ್ವತದಲ್ಲಿ ವಾಸವಾಗಿದ್ದೆನು. ಈ ಸಮಯದಲ್ಲಿ ರಾವಣನ ತಮ್ಮನಾದ ಕುಂಭಕರ್ಣನೆಂಬ ರಾಕ್ಷಸನು ಬಂದು, ನನ್ನ ಸಂಗವನ್ನು ಮಾಡಿ ನನ್ನನ್ನು ಇಲ್ಲಿಯೇ ಬಿಟ್ಟು ಹೊರಟುಹೋದನು. ಆಮೇಲೆ ಮಹಾಬಲಪರಾಕ್ರಮಿಯಾದ ನೀನು ಹುಟ್ಟಿದೆ. ನಿನ್ನನ್ನು ಆಶ್ರಯಿಸಿ ನಾನು ಕಾಲವನ್ನು ಕಳೆಯುತ್ತಿರುವೆನು ಎಂದಳು.

೧೯-೨೧. ಹೀಗೆಂದು ಹೇಳಲು ಅವಳ ಮಾತನ್ನು ಕೇಳಿ ಭಯಂಕರ ಪರಾಕ್ರಮವುಳ್ಳ ಆ ಭೀಮನು, ಕೋಪದಿಂದ–ವಿಷ್ಣುವನ್ನು ಏನು ಮಾಡಲಿ? ಅವನು ನನ್ನ ತಂದೆಯನ್ನು ಕೊಂದಿರುವನು. ವಿರಾಧನನ್ನೂ ನನ್ನ ತಾಯಿಯ ತಂದೆಯನ್ನೂ ಕೊಂದು ಬಹಳ ದುಃಖವನ್ನು ಕೊಟ್ಟನು. ನಾನು ಕುಂಭಕರ್ಣನ ಮಗನೇ ಆಗಿದ್ದರೆ, ಆ ಹರಿಯನ್ನು ಹಿಂಸಿಸುತ್ತೇನೆ. ಎಂದು ಮನಸ್ಸಿನಲ್ಲಿ ಯೋಚಿಸಿ ಮಹಾತಪಸ್ಸನ್ನು ಮಾಡುವುದಕ್ಕಾಗಿ ಹೊರಟು ಹೋದನು.

ಬ್ರಹ್ಮಾಣಂ ಚ ಸಮುದ್ದಿಶ್ಯ ವರ್ಷಾಣಾಂ ಚ ಸಹಸ್ರಕಂ ।
ಮನಸಾ ಧ್ಯಾನಮಾಶ್ರಿತ್ಯ ತಪಶ್ಚಕ್ರೇ ಮಹತ್ತದಾ ॥ ೨೨ ॥

ಊರ್ಧ್ವಬಾಹುಶ್ಚೈಕಪಾದಸ್ಸೂರ್ಯೇ ದೃಷ್ಟಿಂ ದಧತ್ಪುರಾ ।
ಸಂಸ್ಥಿತಸ್ಸ ಬಭೂವಾಥ ಭೀಮೋ ರಾಕ್ಷಸಪುತ್ರಕಃ ॥ ೨೩ ॥

ಶಿರಸಸ್ತಸ್ಯ ಸಂಜಾತಂ ತೇಜಃ ಪರಮದಾರುಣಂ ।
ತೇನ ದಗ್ಧಾಸ್ತದಾ ದೇವಾ ಬ್ರಹ್ಮಾಣಂ ಶರಣಂ ಯಯುಃ ॥ ೨೪ ॥

ಪ್ರಣಮ್ಯ ವೇಧಸಂ ಭಕ್ತ್ಯಾ ತುಷ್ಟುವುರ್ವಿವಿಧೈಃ ಸ್ತವೈಃ ।
ದುಃಖಂ ನಿವೇದಯಾಂಚಕ್ರುರ್ಬ್ರಹ್ಮಣೇ ತೇ ಸವಾಸವಾಃ ॥ ೨೫ ॥

॥ ದೇವಾ ಊಚುಃ ॥

ಬ್ರಹ್ಮನ್ವೈ ರಕ್ಷಸಸ್ತೇಜೋ ಲೋಕಾನ್ಪೀಡಿತುಮುದ್ಯತಂ ।
ಯತ್ಪ್ರಾರ್ಥ್ಯತೇ ಚ ದುಷ್ಟೇನ ತತ್ತ್ವಂ ದೇಹಿ ವರಂ ವಿಧೇ ॥ ೨೬ ॥

ನೋ ಚೇದದ್ಯ ವಯಂ ದಗ್ಧಾಸ್ತೀವ್ರತತ್ತೇಜಸಾ ಪುನಃ ।
ಯಾಸ್ಯಾಮಸ್ಸಂಕ್ಷಯಂ ಸರ್ವೇ ತಸ್ಮಾತ್ತಂ ದೇಹಿ ಪ್ರಾರ್ಥಿತಂ ॥ ೨೭ ॥

---

೨೨-೨೫. ಬ್ರಹ್ಮನನ್ನು ಕುರಿತು ಮನಸ್ಸಿನಲ್ಲಿ ಧ್ಯಾನಮಾಡುತ್ತ ಒಂದು ಸಾವಿರ ವರ್ಷದವರೆಗೆ ಕಠಿಣವಾದ ತಪಸ್ಸನ್ನು ಮಾಡಿದನು. ಕೈಗಳನ್ನು ಮೇಲಕ್ಕೆ ಎತ್ತಿ ಒಂದು ಕಾಲಿನಲ್ಲಿ ನಿಂತುಕೊಂಡು ಸೂರ್ಯನನ್ನು ನೋಡುತ್ತ ತಪಸ್ಸು ಮಾಡುತ್ತಿರಲು ಆ ರಾಕ್ಷಸನ ತಲೆಯಲ್ಲಿ ಕ್ರೂರವಾದ ತೇಜಸ್ಸೊಂದು ಹುಟ್ಟಿ ದೇವತೆಗಳನ್ನು ಸುಡುತ್ತಿರಲು, ಅವರು ಬ್ರಹ್ಮನನ್ನು ಮರೆಹೊಕ್ಕರು. ದೇವೇಂದ್ರನೊಡನೆಕೂಡಿದ ದೇವತೆಗಳು ಬ್ರಹ್ಮನಿಗೆ ನಮಸ್ಕರಿಸಿ ಭಕ್ತಿಯಿಂದ ಅನೇಕ ಬಗೆಯಲ್ಲಿ ಸ್ತೋತ್ರವನ್ನು ಮಾಡಿ ತಮ್ಮ ದುಃಖವನ್ನು ಹೇಳಿಕೊಂಡರು.

೨೬-೨೭. ಎಲೈ, ಬ್ರಹ್ಮನೇ! ಭೀಮನೆಂಬ ರಾಕ್ಷಸನ ತೇಜಸ್ಸು ಲೋಕವನ್ನು ಪೀಡಿಸುತ್ತಿದೆ. ಆ ದುಷ್ಟನು ಏನು ವರವನ್ನು ಕೇಳುವನೋ ಅದನ್ನು ನೀನು ಕೊಡು. ಹಾಗಿಲ್ಲದಿದ್ದರೆ ಆ ಕ್ರೂರವಾದ ತೇಜಸ್ಸಿನಿಂದ ನಾವೆಲ್ಲ ಸುಟ್ಟು ಹೋಗುವೆವು. ಆದುದರಿಂದ ಅವನ ಇಷ್ಟವನ್ನು ನೆರವೇರಿಸು ಎಂದು ಪ್ರಾರ್ಥಿಸಿದರು.

॥ ಸೂತ ಉವಾಚ ॥

ಇತಿ ತೇಷಾಂ ವಚಶ್ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಜಗಾಮ ಚ ವರಂ ದಾತುಂ ವಚನಂ ಚೇದಮಬ್ರವೀತ್ ॥ ೨೮ ॥

॥ ಬ್ರಹ್ಮೋವಾಚ ॥

ಪ್ರಸನ್ನೋಽಸ್ಮಿ ವರಂ ಬ್ರೂಹಿ ಯತ್ತೇ ಮನಸಿ ವರ್ತತೇ ।
ಇತಿ ಶ್ರುತ್ವಾ ವಿಧೇರ್ವಾಕ್ಯಮಬ್ರವೀದ್ರಾಕ್ಷಸೋ ಹಿ ಸಃ ॥ ೨೯ ॥

॥ ಭೀಮ ಉವಾಚ ॥

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರಸ್ತ್ವಯಾ ।
ಅತುಲಂ ಚ ಬಲಂ ಮೇಽದ್ಯ ದೇಹಿ ತ್ವಂ ಕಮಲಾಸನ ॥ ೩೦ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ತು ನಮಶ್ಚಕ್ರೇ ಬ್ರಹ್ಮಣೇ ಸ ಹಿ ರಾಕ್ಷಸಃ ।
ಬ್ರಹ್ಮಾ ಚಾಪಿ ತದಾ ತಸ್ಮೈ ವರಂ ದತ್ವಾ ಗೃಹಂ ಯಯೌ ॥ ೩೧ ॥

---

೨೮-೩೦. ಬ್ರಹ್ಮನು ಆ ದೇವತೆಗಳ ಮಾತನ್ನು ಕೇಳಿ ವರವನ್ನು ಕೊಡುವುದಕ್ಕಾಗಿ ರಾಕ್ಷಸನ ಸಮೀಪಕ್ಕೆ ಹೋಗಿ ಎಲೈ ದೈತ್ಯೇಂದ್ರನೇ, ನಾನು ಪ್ರಸನ್ನನಾಗಿರುವೆನು. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳು, ಎಂದನು. ಬ್ರಹ್ಮನ ಮಾತನ್ನು ಕೇಳಿ ಆ ರಾಕ್ಷಸನು ಎಲೈ, ದೇವತೆಗಳಿಗೆ ಒಡೆಯನಾದ ಬ್ರಹ್ಮನೇ, ನೀನು ಪ್ರಸನ್ನನಾಗಿ ವರಕೊಡುವಿಯಾದರೆ ಅಸಮಾನವಾದ, ಯಾರಿಗೂ ಇಲ್ಲದ ಬಲವನ್ನು ನನಗೆ ಕರುಣಿಸು ಎಂದನು.

೩೧. ಹೀಗೆಂದು ಹೇಳಿ ರಾಕ್ಷಸನು ಬ್ರಹ್ಮನಿಗೆ ನಮಸ್ಕಾರವನ್ನು ಮಾಡಿದನು. ಬ್ರಹ್ಮನು ಆಗ ಅವನಿಗೆ ವರವನ್ನು ಕೊಟ್ಟು ತನ್ನ ಸ್ಥಾನಕ್ಕೆ ಹೊರಟುಹೋದನು.

೩೨-೩೩. ಇತ್ತ ಭೀಮರಾಕ್ಷಸನು ಬ್ರಹ್ಮನಿಂದ ವರವನ್ನು ಪಡೆದು ಮನೆಗೆ ಬಂದು, ತಾಯಿಗೆ ನಮಸ್ಕರಿಸಿ ಅಮ್ಮಾ, ನನ್ನ ಬಲವನ್ನು ನೋಡು! ದೇವೇಂದ್ರನೇ

ರಾಕ್ಷಸೋ ಗೃಹಮಾಗತ್ಯ ಬ್ರಹ್ಮಾಸ್ತ್ರಾತಿಬಲಸ್ತದಾ ।
ಮಾತರಂ ಪ್ರಣಿಪತ್ಯಾಶು ಸ ಭೀಮಃ ಪ್ರಾಹ ಗರ್ವವಾನ್ ॥ ೩೨ ॥

॥ ಭೀಮ ಉವಾಚ ॥

ಪಶ್ಯ ಮಾತರ್ಬಲಂ ಮೇಽದ್ಯ ಕರೋಮಿ ಪ್ರಲಯಂ ಮಹತ್ ।
ದೇವಾನಾಂ ಶಕ್ರಮುಖ್ಯಾನಾಂ ಹರೇರ್ವೈ ತತ್ಸಹಾಯಿನಃ ॥ ೩೩ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಪ್ರಥಮಂ ಭೀಮೋ ಜಿಗ್ಯೇ ದೇವಾನ್ಸವಾಸವಾನ್ ।
ಸ್ಥಾನಾನ್ನಿಸ್ಸಾರಯಾಮಾಸ ಸ್ವಾತ್ಸ್ವಾತ್ತಾನ್ಭೀಮವಿಕ್ರಮಃ ॥ ೩೪ ॥

ತತೋ ಜಿಗ್ಯೇ ಹರಿಂ ಯುದ್ಧೇ ಪ್ರಾರ್ಥಿತಂ ನಿರ್ಜರೈರಪಿ ।
ತತೋ ಜೇತುಂ ರಸಾಂ ದೈತ್ಯಃ ಪ್ರಾರಂಭಂ ಕೃತವಾನ್ಮುದಾ ॥ ೩೫ ॥

ಪುರಾ ಸುದಕ್ಷಿಣಾಂ ತತ್ರ ಕಾಮರೂಪೇಶ್ವರಂ ಪ್ರಭುಂ ।
ಜೇತುಂ ಗತಸ್ತತಸ್ತೇನ ಯುದ್ಧಮಾಸೀದ್ಭಯಂಕರಂ ॥ ೩೬ ॥

ಭೀಮೋಽಥ ತಂ ಮಹಾರಾಜಂ ಪ್ರಭಾವಾದ್ಬ್ರಹ್ಮಣೋಽಸುರಃ ।
ಜಿಗ್ಯೇ ವರಪ್ರಭಾವೇಣ ಮಹಾವೀರಂ ಶಿವಾಶ್ರಯಂ ॥ ೩೭ ॥

---

ಮೊದಲಾದ ದೇವತೆಗಳಿಗೂ, ಅವರ ಸಹಾಯಕ್ಕೆ ಬರುವ ಹರಿಗೂ ನಾಶವನ್ನುಂಟು ಮಾಡುವೆನು ಎಂದು ಗರ್ವದಿಂದ ನುಡಿದನು.

೩೪–೩೭. ಹೀಗೆಂದು ಹೇಳಿ ಭೀಮನು ಮೊದಲು ದೇವೇಂದ್ರನೊಡನೆ ಕೂಡಿದ ದೇವತೆಗಳನ್ನು ಗೆದ್ದನು. ಅವರನ್ನು ಅವರವರ ಸ್ಥಳಗಳಿಂದ ಓಡಿಸಿದನು. ಆಮೇಲೆ ಹರಿಯನ್ನು ಯುದ್ಧದಲ್ಲಿ ಗೆದ್ದನು. ಆಮೇಲೆ ಸಂತೋಷದಿಂದ ಭೂಮಿಯನ್ನು ಜಯಿಸುವುದಕ್ಕೆ ಪ್ರಾರಂಭಿಸಿ, ಕಾಮರೂಪದೇಶಾಧಿಪತಿಯಾದ ಸುದಕ್ಷಿಣನೆಂಬ ರಾಜನನ್ನು ಜಯಿಸುವುದಕ್ಕೆ ಹೋದನು. ಅವರಿಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಭೀಮರಾಕ್ಷಸನು ಬ್ರಹ್ಮನ ವರದ ಮಹಿಮೆಯಿಂದ ಶಿವಭಕ್ತನೂ ಮಹಾಪರಾಕ್ರಮಿಯೂ ಆದ ರಾಜನನ್ನು ಜಯಿಸಿದನು.

ಸ ಹಿ ಜಿತ್ವಾ ತತಸ್ತಂ ಚ ಕಾಮರೂಪೇಶ್ವರಂ ಪ್ರಭುಂ ।
ಬಬಂಧ ತಾಡಯಾಮಾಸ ಭೀಮೋ ಭೀಮಪರಾಕ್ರಮಃ ॥ ೩೮ ॥

ಗೃಹೀತಂ ತಸ್ಯ ಸರ್ವಸ್ವಂ ರಾಜ್ಯಂ ಸೋಪಸ್ಕರಂ ದ್ವಿಜಾಃ ।
ತೇನ ಭೀಮೇನ ದುಷ್ಟೇನ ಶಿವದಾಸಸ್ಯ ಭೂಪತೇಃ ॥ ೩೯ ॥

ರಾಜಾ ಚಾಪಿ ಸುಧರ್ಮಿಷ್ಠಃ ಪ್ರಿಯಧರ್ಮೋ ಹರಪ್ರಿಯಃ ।
ಗೃಹೀತೋ ನಿಗಡೈಸ್ತೇನ ಹ್ಯೇಕಾಂತೇ ಸ್ಥಾಪಿತಶ್ಚ ಸಃ ॥ ೪೦ ॥

ತತ್ರ ತೇನ ತದಾ ಕೃತ್ವಾ ಪಾರ್ಥಿವೀಂ ಮೂರ್ತಿಮುತ್ತಮಾಂ ।
ಭಜನಂ ಚ ಶಿವಸ್ಯೈವ ಪ್ರಾರಬ್ಧಂ ಪ್ರಿಯಕಾಮ್ಯಯಾ ॥ ೪೧ ॥

ಗಂಗಾಯಾಸ್ತವನಂ ತೇನ ಬಹುಧಾ ಚ ತದಾ ಕೃತಂ ।
ಮಾನಸಂ ಸ್ನಾನಕರ್ಮಾದಿ ಕೃತ್ವಾ ಶಂಕರಪೂಜನಂ ॥ ೪೨ ॥

ಪಾರ್ಥಿವೇನ ವಿಧಾನೇನ ಚಕಾರ ನೃಪಸತ್ತಮಃ ।
ತದ್ಧ್ಯಾನಂ ಚ ಯಥಾ ಸ್ಯಾದ್ವೈ ಕೃತ್ವಾ ಚ ವಿಧಿಪೂರ್ವಕಂ ॥ ೪೩ ॥

---

೩೮-೪೦. ಮಹಾಪರಾಕ್ರಮಿಯಾದ ಭೀಮನು, ಕಾಮರೂಪದೇಶದ ರಾಜನನ್ನು ಜಯಿಸಿ, ಅವನನ್ನು ಸೆರೆ ಹಿಡಿದು ಕಟ್ಟಿ ಹೊಡೆದನು. ಅವನ ರಾಜ್ಯವನ್ನೂ, ಸಮಸ್ತ ಸಂಪತ್ತನ್ನೂ ದೋಚಿಕೊಂಡನು. ಆ ರಾಜನು ಶಿವಭಕ್ತನು, ಧರ್ಮಾತ್ಮನು, ಶಿವನಿಗೆ ಪ್ರೀತಿಪಾತ್ರನು. ಇಂಥವನನ್ನು ಹಿಡಿದು ಸಂಕೋಲೆಯನ್ನು ಹಾಕಿ, ಜನಸಂಚಾರವಿಲ್ಲದ ಪ್ರದೇಶದಲ್ಲಿ ಬಂಧನದಲ್ಲಿಟ್ಟನು.

೪೧-೪೪. ಆ ಸೆರೆಮನೆಯಲ್ಲಿ ರಾಜನು ಪಾರ್ಥಿವಲಿಂಗವನ್ನು ಮಾಡಿ ತನ್ನ ಹಿತಕ್ಕಾಗಿ ಶಿವಪೂಜೆಯನ್ನು ಮಾಡಲು ಪ್ರಾರಂಭಿಸಿದನು. ಆ ರಾಜನು ಗಂಗೆಯನ್ನು ಅನೇಕ ಬಗೆಯಲ್ಲಿ ಸ್ತೋತ್ರಮಾಡಿ, ಮನಸ್ಸಿನಲ್ಲಿಯೇ ಸ್ನಾನವನ್ನೂ, ನಿತ್ಯಕರ್ಮಗಳನ್ನೂ, ಪಾರ್ಥಿವಲಿಂಗಪೂಜಾವಿಧಾನದಿಂದ ಲಿಂಗಪೂಜೆಯನ್ನೂ ವಿಧಿಗನುಸಾರ

ಪ್ರಣಿಪಾತೈಸ್ತಥಾ ಸ್ತೋತ್ರೈರ್ಮುದ್ರಾಸನಪುರಸ್ಸರಂ ।
ಕೃತ್ವಾ ಹಿ ಸಕಲಂ ತಚ್ಚ ಸ ಭೇಜೇ ಶಂಕರಂ ಮುದಾ ॥ ೪೪ ॥

ಪಂಚಾಕ್ಷರಮಯೀಂ ವಿದ್ಯಾಂ ಜಜಾಪ ಪ್ರಣವಾನ್ವಿತಾಂ ।
ನಾನ್ಯತ್ಕಾರ್ಯಂ ಸ ವೈ ಕರ್ತುಂ ಲಬ್ಧವಾನಂತರಂ ತದಾ ॥ ೪೫ ॥

ತತ್ಪತ್ನೀ ಚ ತದಾ ಸಾಧ್ವೀ ದಕ್ಷಿಣಾ ನಾಮ ವಿಶ್ರುತಾ ।
ವಿಧಾನಂ ಪಾರ್ಥಿವಂ ಪ್ರೀತ್ಯಾ ಚಕಾರ ನೃಪವಲ್ಲಭಾ ॥ ೪೬ ॥

ದಂಪತೀ ತ್ವೇಕಭಾವೇನ ಶಂಕರಂ ಭಕ್ತಶಂಕರಂ ।
ಭೇಜಾತೇ ತತ್ರ ತೌ ನಿತ್ಯಂ ಶಿವಾರಾಧನತತ್ಪರೌ ॥ ೪೭ ॥

ರಾಕ್ಷಸೋ ಯಜ್ಞಕರ್ಮಾದಿವರದರ್ಪವಿಮೋಹಿತಃ ।
ಲೋಪಯಾಮಾಸ ತತ್ಸರ್ವಂ ಮಹ್ಯಂ ವೈ ದೀಯತಾಮಿತಿ ॥ ೪೮ ॥

ಬಹುಸೈನ್ಯಸಮಾಯುಕ್ತೋ ರಾಕ್ಷಸಾನಾಂ ದುರಾತ್ಮನಾಂ ।
ಚಕಾರ ವಸುಧಾಂ ಸರ್ವಾಂ ಸ್ವವಶೇ ಚರ್ಷಿಸತ್ತಮಾಃ ॥ ೪೯ ॥

---

ವಾಗಿ ಶಿವಧ್ಯಾನವನ್ನೂ ಮಾಡಿದನು. ನಮಸ್ಕಾರಗಳಿಂದಲೂ, ಸ್ತೋತ್ರಗಳಿಂದಲೂ, ಮುದ್ರೆಗಳಿಂದಲೂ, ಆಸನಗಳಿಂದಲೂ ಶಿವಪೂಜೆಯನ್ನೆಲ್ಲಾ ಮಾಡಿ ಶಂಕರನನ್ನೇ ಶರಣುಹೊಂದಿದನು.

೪೫-೪೭. ಓಂಕಾರದಿಂದ ಕೂಡಿದ ಶಿವಪಂಚಾಕ್ಷರಮಂತ್ರವನ್ನು ಜಪಿಸಿದನು. ಮತ್ತಾವ ಕೆಲಸವನ್ನು ಮಾಡುವುದಕ್ಕೂ ಅವನಿಗೆ ಅವಕಾಶ ದೊರೆಯಲಿಲ್ಲ. ಅವನ ಹೆಂಡತಿಯೂ, ಪತಿವ್ರತೆಯೂ ಆದ ದಕ್ಷಿಣಾ ಎಂಬುವಳು ರಾಜನಿಗೆ ಪ್ರೀತಿಪಾತ್ರಳಾಗಿ ಪಾರ್ಥಿವಪೂಜಾವಿಧಿಗೆ ಬೇಕಾದುದನ್ನು ಮಾಡಿಕೊಡುತ್ತಿದ್ದಳು. ದಂಪತಿಗಳಿಬ್ಬರೂ ಒಂದೇ ಮನಸ್ಸಿನಿಂದ ಭಕ್ತರಿಗೆ ಸುಖವನ್ನುಂಟುಮಾಡುವ ಶಿವನನ್ನು ಪ್ರತಿದಿನವೂ ಪೂಜಿಸುತ್ತಾ ಅವನನ್ನೇ ಶರಣು ಹೊಂದಿದರು.

೪೮-೫೦. ಭೀಮರಾಕ್ಷಸನಾದರೋ ವರದ ಗರ್ವದಿಂದ ಕೊಬ್ಬಿ ಅಜ್ಞಾನಿಯಾಗಿ ಭೂಮಿಯಲ್ಲಿ ಯಜ್ಞಕರ್ಮಾದಿಗಳು ನಡೆಯದಂತೆ ಮಾಡಿ, ಹವಿರ್ಭಾಗಗಳನ್ನು ತನಗೇ ಕೊಡಬೇಕೆಂದು ಹೇಳುತ್ತಿದ್ದನು. ಎಲೈ ಋಷಿಶ್ರೇಷ್ಠರೇ, ಕೇಳಿರಿ!

ವೇದಧರ್ಮಂ ಶಾಸ್ತ್ರಧರ್ಮಂ ಸ್ಮೃತಿಧರ್ಮಂ ಪುರಾಣಜಂ ।
ಲೋಪಯಿತ್ವಾ ಚ ತತ್ಸರ್ವಂ ಬುಭುಜೇ ಸ್ವಯಮೂರ್ಜಿತಃ ॥ ೫೦ ॥

ದೇವಾಶ್ಚ ಪೀಡಿತಾಸ್ತೇನ ಸಶಕ್ರಾ ಋಷಯಸ್ತಥಾ ।
ಅತ್ಯಂತಂ ದುಃಖಮಾಪನ್ನಾ ಲೋಕಾನ್ನಿಸರತಾ ದ್ವಿಜಾಃ ॥ ೫೧ ॥

ತೇ ತತೋ ವಿಕುಲಾಸ್ಸರ್ವೇ ಸವಾಸವಸುರರ್ಷಯಃ ।
ಬ್ರಹ್ಮವಿಷ್ಣೂ ಪುರೋಧಾಯ ಶಂಕರಂ ಶರಣಂ ಯಯುಃ ॥ ೫೨ ॥

ಸ್ತುತ್ವಾ ಸ್ತೋತ್ರೈರನೇಕೈಶ್ಚ ಶಂಕರಂ ಲೋಕಶಂಕರಂ ।
ಪ್ರಸನ್ನಂ ಕೃತವಂತಸ್ತೇ ಮಹಾಕೋಶ್ಯಾಸ್ತಟೇ ಶುಭೆ ॥ ೫೩ ॥

ಕೃತ್ವಾ ಚ ಪಾರ್ಥಿವೀಂ ಮೂರ್ತಿಂ ಪೂಜಯಿತ್ವಾ ವಿಧಾನತಃ ।
ತುಷ್ಟುವುರ್ವಿವಿಧೈಃ ಸ್ತೋತ್ರನಮಸ್ಕಾರಾದಿಭಿಃ ಕ್ರಮಾತ್ ॥ ೫೪ ॥

ಏವಂ ಸ್ತುತಸ್ತದಾ ಶಂಭುರ್ದೇವಾನಾಂ ಸ್ತವನಾದಿಭಿಃ ।
ಸುಪ್ರಸನ್ನತರೋ ಭೂತ್ವಾ ತಾನ್ಸುರಾನಿದಮಬ್ರವೀತ್ ॥ ೫೫ ॥

---

ಭೀಮನು ಅನೇಕ ದುಷ್ಟರಾದ ರಾಕ್ಷಸರ ಸೇನೆಯನ್ನು ಕೂಡಿಸಿ ಭೂಮಿಯೆಲ್ಲವನ್ನೂ ತನ್ನ ವಶಮಾಡಿಕೊಂಡನು. ವೇದ, ಶಾಸ್ತ್ರ, ಸ್ಮೃತಿ, ಪುರಾಣ ಇವುಗಳಲ್ಲಿ ಹೇಳುವ ಧರ್ಮಗಳನ್ನೆಲ್ಲಾ ಭೂಮಿಯಲ್ಲಿ ನಾಶಮಾಡಿ ತಾನೇ ಎಲ್ಲವನ್ನೂ ಅನುಭವಿಸುತ್ತಿದ್ದನು.

೫೧-೫೩. ದೇವೇಂದ್ರನೊಡನೆಕೂಡಿದ ದೇವತೆಗಳೂ, ಋಷಿಗಳೂ ಅವನ ಬಾಧೆಯಿಂದ ಬಹಳವಾಗಿ ದುಃಖಪಡುತ್ತ ಓಡಿಹೋದರು. ಅವರೆಲ್ಲರೂ ಭ್ರಾಂತರಾಗಿ ಬ್ರಹ್ಮ, ವಿಷ್ಣುಗಳನ್ನು ಮುಂದುಮಾಡಿಕೊಂಡು ಶಿವನನ್ನು ಶರಣು ಹೊಂದಿದರು. ಅನೇಕ ಸ್ತೋತ್ರಗಳಿಂದ ಶಿವನನ್ನು ಹೊಗಳಿ ಮಂಗಳಕರವಾದ ಮಹಾಕೋಶೀ ಎಂಬ ನದಿಯ ದಡದಲ್ಲಿ ಶಿವನನ್ನು ಪ್ರಸನ್ನನನ್ನಾಗಿ ಮಾಡಿಕೊಂಡರು.

೫೪-೫೫. ಅವರೆಲ್ಲರೂ ನದಿಯ ದಡದಲ್ಲಿ ಪಾರ್ಥಿವ ಲಿಂಗವನ್ನು ಮಾಡಿ, ವಿಧಿಗನುಸಾರವಾಗಿ ಪೂಜೆಯನ್ನೂ ಕ್ರಮವಾಗಿ ನಮಸ್ಕಾರವನ್ನೂ ಮಾಡಿ ಬಗೆ ಬಗೆಯಿಂದ ಸ್ತೋತ್ರವನ್ನು ಮಾಡಿದರು. ದೇವತೆಗಳ ಸ್ತೋತ್ರಗಳಿಂದ ಶಿವನು ಸಂತುಷ್ಟನಾಗಿ ಅವರಿಗೆ ಪ್ರತ್ಯಕ್ಷನಾಗಿ ಅವರನ್ನು ಕುರಿತು

॥ ಶಿವ ಉವಾಚ ॥

ಹೇ ಹರೇ ಹೇ ವಿಧೇ ದೇವಾ ಋಷಯಶ್ಚಾಖಿಲಾ ಅಹಂ ।
ಪ್ರಸನ್ನೋಽಸ್ಮಿ ವರಂ ಬ್ರೂತ ಕಿಂ ಕಾರ್ಯಂ ಕರವಾಣಿ ವಃ ॥ ೫೬ ॥

॥ ಸೂತ ಉವಾಚ ॥

ಇತ್ಯುಕ್ತೇ ಚ ತದಾ ತೇನ ಶಿವೇನ ವಚನೇ ದ್ವಿಜಾಃ ।
ಸುಪ್ರಣಮ್ಯ ಕರೌ ಬಧ್ವಾ ದೇವಾ ಊಚುಶ್ಶಿವಂ ತದಾ ॥ ೫೭ ॥

॥ ದೇವಾ ಊಚುಃ ॥

ಸರ್ವಂ ಜಾನಾಸಿ ದೇವೇಶ ಸರ್ವೇಷಾಂ ಮನಸಿ ಸ್ಥಿತಂ ।
ಅಂತರ್ಯಾಮೀ ಚ ಸರ್ವಸ್ಯ ನಾಜ್ಞಾತಂ ವಿದ್ಯತೇ ತವ ॥ ೫೮ ॥

ತಥಾಪಿ ಶ್ರೂಯತಾಂ ನಾಥ ಸ್ವದುಃಖಂ ಬ್ರೂಮಹೇ ವಯಂ ।
ತ್ವದಾಜ್ಞಯಾ ಮಹಾದೇವ ಕೃಪಾದೃಷ್ಟ್ಯಾ ವಿಲೋಕಯ ॥ ೫೯ ॥

ರಾಕ್ಷಸಃ ಕರ್ಕಟೀಪುತ್ರಃ ಕುಂಭಕರ್ಣೋದ್ಭವೋ ಬಲೀ ।
ಪೀಡಯತ್ಯನಿಶಂ ದೇವಾನ್ಬ್ರಹ್ಮದತ್ತವರೋರ್ಜಿತಃ ॥ ೬೦ ॥

---

೫೬. ಶಿವನು ಹೇಳಿದನು.—ಎಲೈ, ಹರಿವಿಧಿಗಳೇ! ದೇವತೆಗಳೇ, ಮತ್ತು ಋಷಿಗಳೇ, ನಾನು ನಿಮಗೆ ಪ್ರಸನ್ನನಾಗಿರುವೆನು. ವರವನ್ನು ಕೇಳಿಕೊಳ್ಳಿರಿ. ನಿಮಗೆ ನನ್ನಿಂದ ಆಗುವ ಕೆಲಸವೇನು? ಹೇಳಿರಿ ಎಂದನು.

೫೭. ಹೀಗೆ ಶಿವನು ಹೇಳಲು ದೇವತೆಗಳು ನಮಸ್ಕರಿಸಿ ಕೈಮುಗಿದುಕೊಂಡು ಶಿವನನ್ನೇ ಕುರಿತು ಹೇಳಿದರು.

೫೮–೬೧. ದೇವತೆಗಳು ಹೇಳಿದರು.—ದೇವತೆಗಳಿಗೆ ಸ್ವಾಮಿಯಾದ ಓ ಶಿವನೇ, ನಮ್ಮೆಲ್ಲರ ಮನಸ್ಸಿನಲ್ಲಿರುವುದನ್ನು ನೀನು ತಿಳಿದೇ ಇರುವೆ. ಎಲ್ಲರಿಗೂ ನೀನು ಅಂತರ್ಯಾಮಿಯಾಗಿರುವುದರಿಂದ ನಿನಗೆ ತಿಳಿಯದಿರುವ ಅಂಶವೇ ಇಲ್ಲ. ಹಾಗಾದರೂ ನಮ್ಮ ದುಃಖವನ್ನು ಹೇಳುವೆವು. ಸ್ವಾಮಿಯಾದ ನೀನು ಕೇಳಬೇಕು. ನಿನ್ನಪ್ಪಣೆಯಂತೆ ನಡೆವ ನಮ್ಮನ್ನು ದಯಾದೃಷ್ಟಿಯಿಂದ ನೋಡಬೇಕು. ಕುಂಭ ಕರ್ಣನಿಂದ ಹುಟ್ಟಿದ ಕರ್ಕಟೀಪುತ್ರನಾದ, ಬಲಶಾಲಿಯಾದ ಭೀಮನೆಂಬ ರಾಕ್ಷಸನು

ತಮಿಮಂ ಜಹಿ ಭೀಮಾಹ್ವಂ ರಾಕ್ಷಸಂ ದುಃಖದಾಯಕಂ ।
ಕೃಪಾಂ ಕುರು ಮಹೇಶಾನ ವಿಲಂಬಂ ನ ಕುರು ಪ್ರಭೋ ॥ ೬೧ ॥

॥ ಸೂತ ಉವಾಚ ॥

ಇತ್ಯುಕ್ತಸ್ತು ಸುರೈಸ್ಸರ್ವೈಶ್ಶಂಭುರ್ವ್ಯೈ ಭಕ್ತವತ್ಸಲಃ ।
ವಧಂ ತಸ್ಯ ಕರಿಷ್ಯಾಮೀತ್ಯುಕ್ತ್ವಾ ದೇವಾಂಸ್ತತೋಽಬ್ರವೀತ್ ॥ ೬೨ ॥

॥ ಶಂಭುರುವಾಚ ॥

ಕಾಮರೂಪೇಶ್ವರೋ ರಾಜಾ ಮದೀಯೋ ಭಕ್ತ ಉತ್ತಮಃ ।
ತಸ್ಮೈ ಬ್ರೂತೇತಿ ವೈ ದೇವಾಃ ಕಾರ್ಯಂ ಶೀಘ್ರಂ ಭವಿಷ್ಯತಿ ॥ ೬೩ ॥

ಸುದಕ್ಷಿಣ ಮಹಾರಾಜ ಕಾಮರೂಪೇಶ್ವರ ಪ್ರಭೋ ।
ಮದ್ಭಕ್ತಸ್ತ್ವಂ ವಿಶೇಷೇಣ ಕುರು ಮದ್ಭಜನಂ ರತೇಃ ॥ ೬೪ ॥

ದೈತ್ಯಂ ಭೀಮಾಹ್ವಯಂ ದುಷ್ಟಂ ಬ್ರಹ್ಮಪ್ರಾಪ್ತವರೋರ್ಜಿತಂ ।
ಹನಿಷ್ಯಾಮಿ ನ ಸಂದೇಹಸ್ತ್ವತ್ತಿರಸ್ಕಾರಕಾರಿಣಂ ॥ ೬೫ ॥

---

ಬ್ರಹ್ಮನ ವರಬಲದಿಂದ ಕೊಬ್ಬಿ ಯಾವಾಗಲೂ ದೇವತೆಗಳನ್ನು ಪೀಡಿಸುತ್ತಿರುವನು. ನಮ್ಮಲ್ಲಿ ದಯೆಯಿಟ್ಟು ದುಃಖವನ್ನು ಕೊಡುವ ಆ ಭೀಮನೆಂಬ ರಾಕ್ಷಸನನ್ನು ನಾಶ ಮಾಡು ಎಂದರು.

೬೨. ಸೂತನು ಹೇಳಿದನು.—ದೇವತೆಗಳೆಲ್ಲರೂ ಹೀಗೆ ಹೇಳಲು, ಭಕ್ತ ವತ್ಸಲನಾದ ಶಿವನು ಅವನನ್ನು ಕೊಲ್ಲುವೆನೆಂದು ಹೇಳಿ ದೇವತೆಗಳನ್ನು ಕುರಿತು,

೬೩ ೬೫. ಕಾಮರೂಪದೇಶದ ರಾಜನು ಶ್ರೇಷ್ಠನಾದ ನನ್ನ ಭಕ್ತನು. ಎಲೈ, ದೇವತೆಗಳೇ! ಅವನಿಗೆ ಈ ವಿಚಾರವನ್ನು ಹೇಳಿರಿ. ನಿಮ್ಮ ಕಾರ್ಯವು ಬೇಗನೆ ಸಫಲವಾಗುವುದು-ಎಲೈ, ಕಾಮರೂಪದೇಶಾಧಿಪತಿಯಾದ ಸುದಕ್ಷಿಣಮಹಾರಾಜನೇ! ನೀನು ನನ್ನ ಭಕ್ತನು. ವಿಶೇಷ ರೀತಿಯಿಂದ ನನ್ನ ಪೂಜೆಯನ್ನು ಮಾಡು. ಬ್ರಹ್ಮನ ವರದಿಂದ ಗರ್ವಿತನಾದ, ನಿನ್ನನ್ನು ತಿರಸ್ಕರಿಸಿದ ದುಷ್ಟನಾದ ಭೀಮನೆಂಬ ದೈತ್ಯನನ್ನು ಕೊಲ್ಲುವೆನು ಸಂದೇಹಪಡಬೇಡ, ಎಂದು ಹೇಳಿರಿ ಎಂದು ದೇವತೆಗಳನ್ನು ಸಮಾಧಾನಪಡಿಸಿದನು.

॥ ಸೂತ ಉವಾಚ ॥

**ಅಥ ತೇ ನಿರ್ಜರಾಸ್ಸರ್ವೇ ತತ್ರ ಗತ್ವಾ ಮುದಾನ್ವಿತಾಃ ।**
**ತಸ್ಮೈ ಮಹಾನೃಪಾಯೋಚುರ್ಯದುಕ್ತಂ ಶಂಭುನಾ ಚ ತತ್ ॥ ೬೬ ॥**

**ತಮಿತ್ಯುಕ್ತ್ವಾ ಚ ವೈ ದೇವಾ ಆನಂದಂ ಪರಮಂ ಗತಾಃ ।**
**ಮಹರ್ಷಯಶ್ಚ ತೇ ಸರ್ವೇ ಯಯುಶ್ಶೀಘ್ರಂ ನಿಜಾಶ್ರಮಾನ್ ॥ ೬೭ ॥**

**ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ ಭೀಮೇಶ್ವರಜ್ಯೋತಿರ್ಲಿಂಗಮಾಹಾತ್ಮ್ಯೇ ಭೀಮಾಸುರಕೃತೋಪದ್ರವವರ್ಣನಂ ನಾಮ ವಿಂಶೋಽಧ್ಯಾಯಃ**

---

೬೬. ಆಮೇಲೆ ಆ ದೇವತೆಗಳೆಲ್ಲಾ ಸಂತೋಷದಿಂದ ಅಲ್ಲಿಗೆ ಹೋಗಿ ಶಿವನು ಹೇಳಿದ ಮಾತನ್ನು ಆ ಮಹಾರಾಜನಿಗೆ ಹೇಳಿದರು.

೬೭. ದೇವತೆಗಳು ರಾಜನಿಗೆ ಈ ಮಾತನ್ನು ಹೇಳಿ ಬಹಳ ಸಂತೋಷವನ್ನು ಹೊಂದಿದರು. ಮಹರ್ಷಿಗಳೆಲ್ಲರೂ ತಂತಮ್ಮ ಆಶ್ರಮಗಳಿಗೆ ಹೋದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ ಭೀಮೇಶ್ವರಜ್ಯೋತಿರ್ಲಿಂಗ ಮಾಹಾತ್ಮ್ಯೆಯಲ್ಲಿ ಭೀಮಾಸುರನ ಉಪದ್ರವ ವರ್ಣನೆಯೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಏಕವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಶಿವೋಽಪಿ ಚ ಗಣೈಸ್ಸಾರ್ಧಂ ಜಗಾಮ ಹಿತಕಾಮ್ಯಯಾ ।
ಸ್ವಭಕ್ತನಿಕಟಂ ಗುಪ್ತಸ್ತಸ್ಥೌ ರಕ್ಷಾರ್ಥಮಾದರಾತ್ ॥ ೧ ॥

ಏತಸ್ಮಿನ್ನಂತರೇ ತತ್ರ ಕಾಮರೂಪೇಶ್ವರೇಣ ಚ ।
ಅತ್ಯಂತಂ ಧ್ಯಾನಮಾರಬ್ಧಂ ಪಾರ್ಥಿವಸ್ಯ ಪುರಸ್ತದಾ ॥ ೨ ॥

ಕೇನಚಿತ್ತತ್ರ ಗತ್ವಾ ಚ ರಾಕ್ಷಸಾಯ ನಿವೇದಿತಂ ।
ರಾಜಾ ಕಿಂಚಿತ್ಕರೋತ್ಯೇವಂ ತ್ವದರ್ಥಂ ಹ್ಯಭಿಚಾರಿಕಂ ॥ ೩ ॥

---

### ಇಪ್ಪತ್ತೊಂದನೆಯ ಅಧ್ಯಾಯವು.

೧-೩. ಸೂತನು ಹೇಳಿದನು.—ಶಿವನು ತನ್ನ ಭಕ್ತನಿಗೆ ಹಿತವನ್ನು ಮಾಡಬೇಕೆಂದು ಬಯಸಿ ತನ್ನ ಗಣಗಳೊಡನೆ ರಾಜನ ಸಮೀಪಕ್ಕೆ ಹೋಗಿ ಅವನ ರಕ್ಷಣೆಗಾಗಿ ಪ್ರೀತಿಯಿಂದ ಅಲ್ಲಿಯೇ ಗೋಪ್ಯವಾಗಿದ್ದನು. ಈ ಸಮಯದಲ್ಲಿ ಅಲ್ಲಿ ಸೆರೆಯಲ್ಲಿದ್ದ ಕಾಮರೂಪದೇಶದ ರಾಜನು ತಾನು ಪೂಜೆಮಾಡುವ ಪಾರ್ಥಿವಲಿಂಗದ ಎದುರಿಗೆ ಧ್ಯಾನವನ್ನು ಆರಂಭಿಸಿದನು. ಇದನ್ನು ನೋಡಿ ಯಾವನೋ ಒಬ್ಬನು ರಾಕ್ಷಸನ ಸಮೀಪಕ್ಕೆ ಹೋಗಿ ರಾಜನು ನಿನಗೋಸ್ಕರವಾಗಿ ಆಭಿಚಾರಿಕ ಕೃತ್ಯವನ್ನು (ಮಾಟವನ್ನು) ಮಾಡುತ್ತಿರುವನೆಂದು ಹೇಳಿದನು.

॥ ಸೂತ ಉವಾಚ ॥

ರಾಕ್ಷಸಸ್ಸ ಚ ತಚ್ಛ್ರುತ್ವಾ ಕ್ರುದ್ಧಸ್ತದ್ಧನನೇಚ್ಛಯಾ ।
ಗೃಹೀತ್ವಾ ಕರವಾಲಂ ಚ ಜಗಾಮ ನೃಪತಿಂ ಪ್ರತಿ ॥ ೪ ॥

ತದ್ದೃಷ್ಟ್ವಾ ರಾಕ್ಷಸಸ್ತತ್ರ ಪಾರ್ಥಿವಾದಿ ಸ್ಥಿತಂ ಚ ಯತ್ ।
ತದರ್ಥಂ ತತ್ಸ್ವರೂಪಂ ಚ ದೃಷ್ಟ್ವಾ ಕಿಂಚಿತ್ಕರೋತ್ಯಸೌ ॥ ೫ ॥

ಅತ ಏನಂ ಬಲಾದದ್ಯ ಹನ್ಮಿ ಸೋಪಸ್ಕರಂ ನೃಪಂ ।
ವಿಚಾರ್ಯೇತಿ ಮಹಾಕ್ರುದ್ಧೋ ರಾಕ್ಷಸಃ ಪ್ರಾಹ ತಂ ನೃಪಂ ॥ ೬ ॥

॥ ಭೀಮ ಉವಾಚ ॥

ರೇ ರೇ ಪಾರ್ಥಿವ ದುಷ್ಟಾತ್ಮನ್ ಕ್ರಿಯತೇ ಕಿಂ ತ್ವಯಾಧುನಾ ।
ಸತ್ಯಂ ವದ ನ ಹನ್ಯಾಂ ತ್ವಾಮನ್ಯಥಾ ಹನ್ಮಿ ನಿಶ್ಚಿತಂ ॥ ೭ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಕಾಮರೂಪೇಶ್ವರಶ್ಚ ಸಃ ।
ಮನಸೀತಿ ಚಿಚಿಂತಾಶು ಶಿವವಿಶ್ವಾಸಪೂರಿತಃ ॥ ೮ ॥

---

೪-೬. ಆ ರಾಕ್ಷಸನು ಆ ಮಾತನ್ನು ಕೇಳಿ ಕೋಪದಿಂದ ಆ ರಾಜನನ್ನು ಕೊಲ್ಲಬೇಕೆಂದು ಕತ್ತಿಯನ್ನು ಹಿಡಿದುಕೊಂಡು ರಾಜನ ಸಮೀಪಕ್ಕೆ ಹೋದನು. ಅಲ್ಲಿ ರಾಕ್ಷಸನು, ಪಾರ್ಥಿವಲಿಂಗವೇ ಮೊದಲಾದುವು ಇದ್ದುದನ್ನು ನೋಡಿ, ಈ ರಾಜನು ನನಗೆ ಅಹಿತವಾದುದೇನನ್ನೋ ಮಾಡುತ್ತಿರುವನು. ಆದುದರಿಂದ ಈ ದಿನವೇ ಇವನನ್ನು ಬಲಾತ್ಕಾರವಾಗಿ ಕೊಲ್ಲುವೆನು ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಕೋಪದಿಂದ ರಾಜನನ್ನು ಕುರಿತು,

೭. ಎಲೋ, ದುಷ್ಟರಾಜನೆ, ಈಗ ನೀನು ಏನು ಮಾಡುತ್ತಿರುವೆ? ನಿಜವನ್ನು ಹೇಳಿದರೆ ನಾನು ನಿನ್ನನ್ನು ಕೊಲ್ಲುವುದಿಲ್ಲ. ಇಲ್ಲದಿದ್ದರೆ ಕೊಲ್ಲುವೆನು ಎಂದನು.

೮-೧೧. ರಾಕ್ಷಸನ ಮಾತನ್ನು ಕೇಳಿ ಕಾಮರೂಪದೇಶಾಧಿಪತಿಯಾದ ಆ ರಾಜನು ಶಿವನಲ್ಲಿ ನಂಬಿಕೆಯಿಂದಕೂಡಿ ತನ್ನ ಮನಸ್ಸಿನಲ್ಲಿ ಬೇಗನೆ ಹೀಗೆಂದು ಯೋಚಿಸಿದನು. ಈಗ ಆಗಬೇಕಾದುದು ಆಗಿಯೇ ಆಗುವುದು. ಅದನ್ನು ತಡೆ

ಭವಿಷ್ಯಂ ಯದ್ಭವತ್ಯೇವ ನಾಸ್ತಿ ತಸ್ಯ ನಿವರ್ತಕಃ ।
ಪ್ರಾರಬ್ಧಾಧೀನಮೇವಾತ್ರ ಪ್ರಾರಬ್ಧಸ್ಸ ಶಿವಃ ಸ್ಮೃತಃ ॥ ೯ ॥

ಕೃಪಾಲುಶ್ಶಂಕರಶ್ಚಾತ್ರ ಪಾರ್ಥಿವೇ ವರ್ತತೇ ಧ್ರುವಂ ।
ಮದರ್ಥಂ ನ ಕರೋತೀಹ ಕುತಃ ಕೋಽಯಂ ಚ ರಾಕ್ಷಸಃ ॥ ೧೦ ॥

ಸ್ವಾನುರೂಪಾಂ ಪ್ರತಿಜ್ಞಾಂ ಸ ನಿತ್ಯಂ ಚೈವ ಕರಿಷ್ಯಸಿ ।
ಸತ್ಯಪ್ರತಿಜ್ಞೋ ಭಗವಾಞ್ಛಿವಶ್ಚೇತಿ ಶ್ರುತೌ ಶ್ರುತಃ ॥ ೧೧ ॥

ಮಮ ಭಕ್ತಂ ಯದಾ ಕಶ್ಚಿತ್ಪೀಡಯತ್ಯತಿದಾರುಣಃ ।
ತದಾಹಂ ತಸ್ಯ ರಕ್ಷಾರ್ಥಂ ದುಷ್ಟಂ ಹನ್ಮಿ ನ ಸಂಶಯಃ ॥ ೧೨ ॥

ಏವಂ ಧೈರ್ಯಂ ಸಮಾಲಂಬ್ಯ ಧ್ಯಾತ್ವಾ ದೇವಂ ಚ ಶಂಕರಂ ।
ಪ್ರಾರ್ಥಯಾಮಾಸ ಸದ್ಭಕ್ತ್ಯಾ ಮನಸೈವ ರಸೇಶ್ವರಃ ॥ ೧೩ ॥

ತ್ವದೀಯೋಽಸ್ಮಿ ಮಹಾರಾಜ ಯಥೇಚ್ಛಸಿ ತಥಾ ಕುರು ।
ಸತ್ಯಂ ಚ ವಚನಂ ಹ್ಯತ್ರ ಬ್ರವೀಮಿ ಕುರು ಮೇ ಹಿತಂ ॥ ೧೪ ॥

---

ಯಾರೂ ಇಲ್ಲ. ಎಲ್ಲವೂ ಪ್ರಾರಬ್ಧಕರ್ಮಫಲವೇ ಸರಿ. ಆ ಪ್ರಾರಬ್ಧಕರ್ಮಫಲ ಸ್ವರೂಪನೂ ಶಿವನೇ ಆಗಿರುವನು. ದಯಾನಿಧಿಯಾದ ಶಿವನು ಈ ಪಾರ್ಥಿವಲಿಂಗ ದಲ್ಲಿ ನನಗೋಸ್ಕರವಾಗಿ ಇದ್ದೇ ಇರುವನು. ಶಿವನು ತಾನು ಮಾಡಿದ ಪ್ರತಿಜ್ಞೆ ಯನ್ನು ನಿಶ್ಚಯವಾಗಿ ನೆರವೇರಿಸುವನು. ಶಿವನು ಸತ್ಯಪ್ರತಿಜ್ಞೆಯುಳ್ಳವನೆಂದು ವೇದವು ಹೇಳುವುದು. ಹೀಗಿರುವಲ್ಲಿ ರಾಕ್ಷಸನು ಎಷ್ಟರವನು ?

೧೨-೧೪. ನನ್ನ ಭಕ್ತನನ್ನು ಅತ್ಯಂತ ದುಷ್ಟನಾದವನು ಯಾವಾಗ ಪೀಡಿಸು ವನೋ ಆಗ ನಾನು ಆ ಭಕ್ತನನ್ನು ಕಾಪಾಡುವುದಕ್ಕಾಗಿ ಆ ದುಷ್ಟನನ್ನು ಕೊಲ್ಲು ವೆನು. ಸಂದೇಹವಿಲ್ಲ, ಎಂದು ಶಿವನೇ ಹೇಳಿರುವನು. ಹೀಗೆಂದು ಧೈರ್ಯವನ್ನು ತಂದುಕೊಂಡು ಶಿವನನ್ನು ಧ್ಯಾನಿಸಿ ತನ್ನ ಮನಸ್ಸಿನಲ್ಲಿಯೇ ಭಕ್ತಿಯಿಂದ ಶಿವನನ್ನು ಪ್ರಾರ್ಥಿಸಿದನು. ಎಲೈ, ಸ್ವಾಮಿಯೇ! ನಾನು ನಿನ್ನವನಾಗಿರುವೆನು. ನಿನ್ನಿಷ್ಟ

ಏವಂ ಮನಸಿ ಸ ಧ್ಯಾತ್ವಾ ಸತ್ಯಪಾಶೇನ ಮಂತ್ರಿತಃ ।
ಪ್ರಾಹ ಸತ್ಯಂ ವಚೋ ರಾಜಾ ರಾಕ್ಷಸಂ ಚಾವಮಾನಯನ್ ॥ ೧೫ ॥

॥ ನೃಪ ಉವಾಚ ॥

ಭಜಾಮಿ ಶಂಕರಂ ದೇವಂ ಸ್ವಭಕ್ತಪರಿಪಾಲಕಂ ।
ಚರಾಚರಾಣಾಂ ಸರ್ವೇಷಾಮೀಶ್ವರಂ ನಿರ್ವಿಕಾರಕಂ ॥ ೧೬ ॥

॥ ಸೂತ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಕಾಮರೂಪೇಶ್ವರಸ್ಯ ಸಃ ।
ಕ್ರೋಧೇನ ಪ್ರಚಲದ್ಗಾತ್ರೋ ಭೀಮೋ ವಚನಮಬ್ರವೀತ್ ॥ ೧೭ ॥

॥ ಭೀಮ ಉವಾಚ ॥

ಶಂಕರಸ್ತೇ ಮಯಾ ಜ್ಞಾತಃ ಕಿಂ ಕರಿಷ್ಯತಿ ವೈ ಮಮ ।
ಯೋ ಮೇ ಪಿತೃವ್ಯಕೇನೈವ ಸ್ಥಾಪಿತಃ ಕಿಂಕರೋ ಯಥಾ ॥ ೧೮ ॥

ತದ್ಬಲಂ ಹಿ ಸಮಾಶ್ರಿತ್ಯ ವಿಜೇತುಂ ತ್ವಂ ಸಮೀಹಸೇ ।
ತರ್ಹಿ ತ್ವಯಾ ಜಿತಂ ಸರ್ವಂ ನಾತ್ರ ಕಾರ್ಯಾ ವಿಚಾರಣಾ ॥ ೧೯ ॥

---

ಬಂದಂತೆ ಮಾಡು. ನಿಜವಾದ ಮಾತನ್ನು ಹೇಳುವೆನು. ನನಗೆ ಹಿತವನ್ನು ಮಾಡು. ಹೀಗೆಂದು ರಾಜನು ಮನಸ್ಸಿನಲ್ಲಿ ಧ್ಯಾನಮಾಡಿ ಸತ್ಯಕ್ಕೆ ಕಟ್ಟುಬಿದ್ದು ರಾಕ್ಷಸನನ್ನು ಕುರಿತು ನಿರ್ಭಯನಾಗಿ ಇಂತು ನುಡಿದನು.

೧೬. ರಾಜನು ಹೇಳಿದನು.—ಈಗ ನಾನು ಭಕ್ತವತ್ಸಲನಾದ ಶಿವನನ್ನು ಪೂಜಿಸುತ್ತಿರುವೆನು. ಆ ಶಿವನು ಸಮಸ್ತ ಚರಾಚರಪ್ರಪಂಚಕ್ಕೂ ಒಡೆಯನು. ವಿಕಾರರಹಿತನಾದವನು. ಅವನು ನನ್ನನ್ನು ಕಾಪಾಡುವನು ಎಂದನು.

೧೭-೨೨. ಹೀಗೆಂದು ಹೇಳಿದ ಕಾಮರೂಪದೇಶದ ರಾಜನ ಮಾತನ್ನು ಕೇಳಿ ಭೀಮರಾಕ್ಷಸನು ಮಹಾಕೋಪದಿಂದ ನಿನ್ನ ಶಿವನನ್ನು ನಾನು ಬಲ್ಲೆನು. ಅವನು ನನ್ನನ್ನೇನು ಮಾಡಬಲ್ಲನು ? ಆ ಶಿವನನ್ನು ನಮ್ಮ ದೊಡ್ಡಪ್ಪನಾದ ರಾವಣನು ತನ್ನ ಸೇವಕನಂತೆ ಇಟ್ಟಿದ್ದನು. ಅಂಥವನ ಬಲವನ್ನು ಆಶ್ರಯಿಸಿ ನೀನು ಜಯವನ್ನು ಹೊಂದಬೇಕೆಂದು ಅಪೇಕ್ಷಿಸುವೆ. ಹಾಗಾದರೆ ನೀನು ಎಲ್ಲವನ್ನೂ ಜಯಿಸಿದವ

ಯಾವನ್ಮಯಾ ನ ದೃಷ್ಟೋ ಹಿ ಶಂಕರಸ್ತ್ವತ್ಪ್ರಪಾಲಕಃ ।
ತಾವತ್ತ್ವಂ ಸ್ವಾಮಿನಂ ಮತ್ವಾ ಸೇವಸೇ ನಾನ್ಯಥಾ ಕ್ವಚಿತ್ ॥ ೨೦ ॥

ಮಯಾ ದೃಷ್ಟೇ ಚ ತತ್ಸರ್ವಂ ಸ್ಫುಟಂ ಸ್ಯಾತ್ಸರ್ವಥಾ ನೃಪ ।
ತಸ್ಮಾತ್ತ್ವಂ ವೈ ಶಿವಸ್ಯೇದಂ ರೂಪಂ ದೂರತರಂ ಕುರು ॥ ೨೧ ॥

ಅನ್ಯಥಾ ಹಿ ಭಯಂ ತೇಽದ್ಯ ಭವಿಷ್ಯತಿ ನ ಸಂಶಯಃ ।
ಸ್ವಾಮಿನಸ್ತೇ ಕರಂ ತೀಕ್ಷ್ಣಂ ದಾಸ್ಯೇಽಹಂ ಭೀಮವಿಕ್ರಮಃ ॥ ೨೨ ॥

॥ ಸೂತ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಕಾಮರೂಪೇಶ್ವರೋ ನೃಪಃ ।
ದೃಢಂ ಶಂಕರವಿಶ್ವಾಸೋ ದ್ರುತಂ ವಾಕ್ಯಮುವಾಚ ತಂ ॥ ೨೩ ॥

॥ ರಾಜೋವಾಚ ॥

ಅಹಂ ಚ ಪಾಮರೋ ದುಷ್ಟೋ ನ ಮೋಕ್ಷ್ಯೇ ಶಂಕರಂ ಪುನಃ ।
ಸರ್ವೋತ್ಕೃಷ್ಟಶ್ಚ ಮೇ ಸ್ವಾಮೀ ನ ಮಾಂ ಮುಂಚತಿ ಕರ್ಹಿಚಿತ್ ॥ ೨೪ ॥

---

ನಾಗುವೆ. ಈ ವಿಷಯದಲ್ಲಿ ಸಂದೇಹವಿಲ್ಲ. ನಿನ್ನನ್ನು ಕಾಪಾಡುವ ಶಂಕರನನ್ನು ನಾನು ನೋಡುವವರೆಗೆ ನೀನು ಅವನನ್ನೇ ದೇವರೆಂದು ತಿಳಿದು ಪೂಜಿಸುತ್ತಿರುವೆ. ನಾನು ಅವನನ್ನು ನೋಡಿದಮೇಲೆ ಎಲ್ಲವೂ ವ್ಯಕ್ತವಾಗುವುದು. ಆದುದರಿಂದ ಎಲೈ, ರಾಜನೇ! ನೀನು ಈ ಶಿವನ ರೂಪವನ್ನು ದೂರಮಾಡು. ಹಾಗೆ ಮಾಡದಿದ್ದರೆ ಖಂಡಿತವಾಗಿ ನಿನಗೆ ಭಯವುಂಟಾಗುವುದು. ನಿನ್ನ ಸ್ವಾಮಿಗೆ ಕ್ರೂರವಾದ ನನ್ನ ಕೈಚಳಕವನ್ನು ತೋರಿಸುವೆನು ಎಂದು ಗರ್ಜಿಸಿದನು.

೨೩. ಆ ಭೀಮನ ಮಾತನ್ನು ಕೇಳಿ ರಾಜನು ಶಿವನಲ್ಲಿ ದೃಢವಾದ ನಂಬಿಕೆಯಿಟ್ಟು ಬೇಗನೆ ಆ ಭೀಮನಿಗೆ ಉತ್ತರವನ್ನು ಹೇಳಿದನು.

೨೪. ನಾನು ತಿಳುವಳಿಕೆಯಿಲ್ಲದವನು ಮತ್ತು ದುಷ್ಟನು. ನನ್ನ ಸ್ವಾಮಿಯಾದ ಶಿವನು ಸರ್ವಶ್ರೇಷ್ಠನು. ನಾನು ಅವನನ್ನೇ ನಂಬಿರುವೆನು. ನನ್ನ ಸ್ವಾಮಿಯಾದ ಆ ಶಂಕರನು ನನ್ನನ್ನು ಎಂದಿಗೂ ಕೈ ಬಿಡುವುದಿಲ್ಲ ಎಂದನು.

॥ ಸೂತ ಉವಾಚ ॥

ಏವಂ ವಚಸ್ತದಾ ಶ್ರುತ್ವಾ ತಸ್ಯ ರಾಜ್ಞಶ್ಶಿವಾತ್ಮನಃ ।
ತಂ ಪ್ರಹಸ್ಯ ದ್ರುತಂ ಭೀಮೋ ಭೂಪತಿಂ ರಾಕ್ಷಸೋಽಬ್ರವೀತ್ ॥ ೨೫ ॥

॥ ಭೀಮ ಉವಾಚ ॥

ಮತ್ತೋ ಭಿಕ್ಷಯತೇ ನಿತ್ಯಂ ಸ ಕಿಂ ಜಾನಾತಿ ಸ್ವಾಕೃತಿಂ ।
ಯೋಗಿನಾಂ ಕಾ ಚ ನಿಷ್ಠಾ ವೈ ಭಕ್ತಾನಾಂ ಪ್ರತಿಪಾಲನೇ ॥ ೨೬ ॥

ಇತಿ ಕೃತ್ವಾ ಮತಿಂ ತ್ವಂ ಚ ದೂರತೋ ಭವ ಸರ್ವಥಾ ।
ಅಹಂ ಚ ತವ ಸ ಸ್ವಾಮೀ ಯುದ್ಧಂ ವೈ ಕರವಾವಹೈ ॥ ೨೭ ॥

॥ ಸೂತ ಉವಾಚ ॥

ಇತ್ಯುಕ್ತಸ್ಸ ನೃಪಶ್ರೇಷ್ಠಶ್ಶಂಭುಭಕ್ತೋ ದೃಢವ್ರತಃ ।
ಪ್ರತ್ಯುವಾಚಾಭಯೋ ಭೀಮಂ ದುಃಖದಂ ಜಗತಾಂ ಸದಾ ॥ ೨೮ ॥

॥ ರಾಜೋವಾಚ ॥

ಶೃಣು ರಾಕ್ಷಸ ದುಷ್ಟಾತ್ಮನ್ಮಯಾ ಕರ್ತುಂ ನ ಶಕ್ಯತೇ ।
ತ್ವಯಾ ವಿಕ್ರಿಯತೇ ತರ್ಹಿ ಕುತಸ್ತ್ವಂ ಶಕ್ತಿಮಾನಸಿ ॥ ೨೯ ॥

---

೨೫. ಸೂತನು ಹೇಳಿದನು.—ಶಿವಸ್ವರೂಪನಾದ ಆ ರಾಜನ ಈ ಮಾತನ್ನು ಕೇಳಿ ಭೀಮನು ಅವನನ್ನು ಹಾಸ್ಯಮಾಡಿ ಹೇಳಿದನು.

೨೬–೨೭. ನಿಮ್ಮ ಶಿವನು ಪ್ರತಿದಿನವೂ ನನ್ನಲ್ಲಿ ಭಿಕ್ಷೆ ಬೇಡುವನು. ಹೀಗಿರುವಲ್ಲಿ ಯೋಗಿಗಳನ್ನೂ, ಭಕ್ತರನ್ನೂ ಕಾಪಾಡುವ ಶಕ್ತಿಯು ಅವನಿಗೆಲ್ಲಿರುವುದು? ನನ್ನ ಶಕ್ತಿಯನ್ನು ತಾನೇ ಅವನೇನು ಬಲ್ಲನು? ಇದನ್ನು ತಿಳಿದು, ನೀನು, ಶಿವನನ್ನು ಬಿಟ್ಟುಬಿಡು. ನಾನೂ, ನಿನ್ನ ಸ್ವಾಮಿಯಾದ ಶಿವನೂ ಯುದ್ಧವನ್ನು ಮಾಡುತ್ತೇವೆ.

೨೮. ಹೀಗೆಂದು ರಾಕ್ಷಸನು ಹೇಳುತ್ತಲು ಶಿವಭಕ್ತನೂ ದೃಢವಾದ ವ್ರತವನ್ನು ಮಾಡತಕ್ಕವನೂ ಆದ ರಾಜನು ಲೋಕಕ್ಕೆ ಯಾವಾಗಲೂ ದುಃಖವನ್ನು ಕೊಡುವ ಭೀಮನನ್ನು ಕುರಿತು ನಿರ್ಭಯನಾಗಿ ಮಾತನಾಡಿದನು.

೨೯. ಎಲೋ ದುಷ್ಟನೇ, ಕೇಳು. ನೀನು ಹೇಳಿದಂತೆ ನಾನು ಮಾಡಲಾರೆ. ನಿನ್ನ ಮನಸ್ಸೇ ವಿಕಾರವಾಗಿರುವುದು. ನಿನಗೆ ಶಕ್ತಿಯೆಲ್ಲಿರುವುದು? ಎಂದನು.

॥ ಸೂತ ಉವಾಚ ॥

ಇತ್ಯುಕ್ತಸ್ಸೈನ್ಯಮಾದಾಯ ರಾಜಾನಂ ಪರಿಭರ್ತ್ಸ್ಯ ತಂ ।
ಕರಾಲಂ ಕರವಾಲಂ ಚ ಪಾರ್ಥಿವೇ ಪ್ರಾಕ್ಷಿಪತ್ತದಾ ॥ ೩೦ ॥

ಪಶ್ಯ ತ್ವಂ ಸ್ವಾಮಿನೋಽದ್ಯೈವ ಬಲಂ ಭಕ್ತಸುಖಾವಹಂ ।
ಇತ್ಯುವಾಚ ವಿಹಸ್ಯೈವ ರಾಕ್ಷಸೈಸ್ಸ ಮಹಾಬಲಃ ॥ ೩೧ ॥

ಕರವಾಲಃ ಪಾರ್ಥಿವಂ ಚ ಯಾವತ್ಸ್ಪೃಶತಿ ನೋ ದ್ವಿಜಾಃ ।
ತಾವಚ್ಚ ಪಾರ್ಥಿವಾತ್ತಸ್ಮಾದಾವಿರಾಸೀತ್ಸ್ವಯಂ ಹರಃ ॥ ೩೨ ॥

ಪಶ್ಯ ಭೀಮೇಶ್ವರೋಽಹಂ ಚ ರಕ್ಷಾರ್ಥಂ ಪ್ರಕಟೋಽಭವಂ ।
ಮಮ ಪೂರ್ವವ್ರತಂ ಹ್ಯೇತದ್ರಕ್ಷ್ಯೋ ಭಕ್ತೋ ಮಯಾ ಸದಾ ॥ ೩೩ ॥

ಏತಸ್ಮಾತ್ಪಶ್ಯ ಮೇ ಶೀಘ್ರಂ ಬಲಂ ಭಕ್ತಸುಖಾವಹಂ ।
ಇತ್ಯುಕ್ತ್ವಾ ಸ ಪಿನಾಕೇನ ಕರವಾಲೋ ದ್ವಿಧಾ ಕೃತಃ ॥ ೩೪ ॥

---

೩೦–೩೧. ಈ ಮಾತನ್ನು ಕೇಳಿ ಭೀಮನು ಕೋಪದಿಂದ ಸೈನ್ಯವನ್ನು ತಂದು ಆ ರಾಜನನ್ನು ಹೆದರಿಸಿ, ನಿನ್ನ ಸ್ವಾಮಿಯ ಭಕ್ತರಿಗೆ ಸುಖವನ್ನುಂಟುಮಾಡುವ ಶಕ್ತಿಯನ್ನು ಈಗ ನೋಡು ಎಂದು ಹಾಸ್ಯವಾಗಿ ನಗುತ್ತ ಕತ್ತಿಯನ್ನು ಅವನ ಮೇಲೆ ಪ್ರಯೋಗಿಸಿದನು.

೩೨–೩೪. ಎಲೈ ಬ್ರಾಹ್ಮಣರೇ ಕೇಳಿ, ರಾಕ್ಷಸನು ಎಸೆದ ಕತ್ತಿಯು ರಾಜನನ್ನು ಮುಟ್ಟುವುದರೊಳಗಾಗಿ, ರಾಜನು ಪೂಜಿಸುತ್ತಿದ್ದ ಪಾರ್ಥಿವಲಿಂಗದಿಂದ ಶಿವನು ಪ್ರಾದುರ್ಭವಿಸಿ ಇಂತೆಂದನು. ಎಲೈ ಭೀಮನೇ! ನಾನೇ ಈಶ್ವರನು. ಭಕ್ತರ ರಕ್ಷಣೆಗಾಗಿ ವ್ಯಕ್ತನಾದೆನು. ಭಕ್ತರನ್ನು ರಕ್ಷಿಸುವುದೇ ನನ್ನ ಪುರಾತನವಾದ ವ್ರತವು. ಭಕ್ತರಿಗೆ ಸುಖವನ್ನುಂಟುಮಾಡುವ ನನ್ನ ಬಲವನ್ನು ಬೇಗ ನೋಡು, ಎಂದು ಹೇಳಿ ಪಿನಾಕಧನುಸ್ಸಿನಿಂದ ಆ ಕತ್ತಿಯನ್ನು ಎರಡು ತುಂಡು ಮಾಡಿದನು.

ಪುನಶ್ಚೈವ ತ್ರಿಶೂಲಂ ಸ್ವಂ ಚಿಕ್ಷಿಪೇ ತೇನ ರಕ್ಷಸಾ ।
ತಚ್ಛೂಲಂ ಶತಧಾ ನೀತಮಪಿ ದುಷ್ಟಸ್ಯ ಶಂಭುನಾ ॥ ೩೫ ॥

ಪುನಶ್ಶಕ್ತಿಶ್ಚ ನಿಃಕ್ಷಿಪ್ತಾ ತೇನ ಶಂಭೂಪರಿ ದ್ವಿಜಾಃ ।
ಶಂಭುನಾ ಸಾಪಿ ಬಾಣೈಸ್ಸ್ವೈರ್ಲಕ್ಷಧಾ ಚ ಕೃತಾ ದ್ರುತಂ ॥ ೩೬ ॥

ಪಟ್ಟಿಶಶ್ಚ ತತಸ್ತೇನ ನಿಃಕ್ಷಿಪ್ತೋ ಹಿ ಶಿವೋಪರಿ ।
ಶಿವೇನ ಸ ತ್ರಿಶೂಲೇನ ತಿಲಶಶ್ಚ ಕೃತಂ ಕ್ಷಣಾತ್ ॥ ೩೭ ॥

ತತಶ್ಶಿವಗಣಾನಾಂ ಚ ರಾಕ್ಷಸಾನಾಂ ಪರಸ್ಪರಂ ।
ಯುದ್ಧಮಾಸೀತ್ತದಾ ಘೋರಂ ಪಶ್ಯತಾಂ ದುಃಖಕಾವಹಂ ॥ ೩೮ ॥

ತತಶ್ಚ ಪೃಥಿವೀ ಸರ್ವಾ ವ್ಯಾಕುಲಾ ಚಾಭವತ್ಕ್ಷಣಾತ್ ।
ಸಮುದ್ರಾಶ್ಚ ತದಾ ಸರ್ವೇ ಚುಕ್ಷುಭುಸ್ಸಮಹೀಧರಾಃ ॥ ೩೯ ॥

ದೇವಾಶ್ಚ ಋಷಯಸ್ಸರ್ವೇ ಬಭೂವುರ್ವಿಕಲಾ ಅತಿ ।
ಊಚುಃ ಪರಸ್ಪರಂ ಚೇತಿ ವ್ಯರ್ಥಂ ವೈ ಪ್ರಾರ್ಥಿತಶ್ಶಿವಃ ॥ ೪೦ ॥

---

೩೫-೩೮. ಇದನ್ನು ನೋಡಿ ಆ ರಾಕ್ಷಸನು ತನ್ನ ತ್ರಿಶೂಲವನ್ನೆಸೆದನು. ಶಿವನು ಆ ದುಷ್ಟನ ತ್ರಿಶೂಲವನ್ನು ನೂರು ತುಂಡು ಮಾಡಿದನು. ಮತ್ತೆ ರಾಕ್ಷಸನು ಶಿವನ ಮೇಲೆ ಶಕ್ತ್ಯಾಯುಧವನ್ನು ಬೀಸಿ ಬಿಟ್ಟನು. ಶಿವನು ಅದನ್ನು ಬಾಣಗಳಿಂದ ಲಕ್ಷ ಪಾಲು ಮಾಡಿದನು. ಬಳಿಕ ರಾಕ್ಷಸನು ಪಟ್ಟಿಶಾಯುಧವನ್ನು ಪ್ರಯೋಗಿಸಿದನು. ಶಿವನು ಅದನ್ನು ಎಳ್ಳಿನಂತೆ ಸಣ್ಣ ಚೂರುಗಳನ್ನಾಗಿ ಮಾಡಿದನು. ಆಮೇಲೆ ಶಿವಗಣಗಳಿಗೂ, ರಾಕ್ಷಸರಿಗೂ ಪರಸ್ಪರ ಘೋರವಾದ ಯುದ್ಧವಾಯಿತು. ಆ ಯುದ್ಧವು ನೋಡುವವರಿಗೆ ಬಹಳ ಭಯಂಕರವಾಗಿದ್ದಿತು.

೩೯-೪೧. ಒಂದು ಕ್ಷಣದೊಳಗಾಗಿ ಭೂಮಂಡಲವೆಲ್ಲಾ ತಲ್ಲಣಿಸಿಹೋಯಿತು. ಸಮುದ್ರಗಳೂ, ಪರ್ವತಗಳೂ ಅಲ್ಲಾಡಿದವು. ದೇವತೆಗಳೂ, ಋಷಿಗಳೂ ಎಲ್ಲರೂ ಭ್ರಾಂತರಾದರು. ಶಿವನನ್ನು ಪ್ರಾರ್ಥನೆ ಮಾಡಿದುದು ವ್ಯರ್ಥವಾಯಿತೆಂದುಕೊಳ್ಳು

ನಾರದಶ್ಚ ಸಮಾಗತ್ಯ ಶಂಕರಂ ದುಃಖದಾಹಕಂ ।
ಪ್ರಾರ್ಥಯಾಮಾಸ ತತ್ರೈವ ಸಾಂಜಲಿರ್ನತಮಸ್ತಕಃ ॥ ೪೧ ॥

॥ ನಾರದ ಉವಾಚ ॥

ಕ್ಷಮ್ಯತಾಂ ಕ್ಷಮ್ಯತಾಂ ನಾಥ ತ್ವಯಾ ವಿಭ್ರಮಕಾರಕ ।
ತೃಣೇ ಕಶ್ಚ ಕುಠಾರೋ ವೈ ಹನ್ಯತಾಂ ಶೀಘ್ರಮೇವ ಹಿ ॥ ೪೨ ॥

ಇತಿ ಸಂಪ್ರಾರ್ಥಿತಶ್ಶಂಭುಃ ಸರ್ವಾನ್ರಕ್ಷೋಗಣಾನ್ಪ್ರಭುಃ ।
ಹುಂಕಾರೇಣೈವ ಚಾಸ್ತ್ರೇಣ ಭಸ್ಮಸಾತ್ಕೃತವಾಂಸ್ತದಾ ॥ ೪೩ ॥

ಸರ್ವೇ ತೇ ರಾಕ್ಷಸಾ ದಗ್ಧಾಃ ಶಂಕರೇಣ ಕ್ಷಣಂ ಮುನೇ ।
ಬಭೂವುಸ್ತತ್ರ ಸರ್ವೇಷಾಂ ದೇವಾನಾಂ ಪಶ್ಯತಾಂ ದ್ರುತಂ ॥ ೪೪ ॥

ದಾವಾನಲಗತೋ ವಹ್ನಿರ್ಯಥಾ ಚ ವನಮಾದಹೇತ್ ।
ತಥಾ ಶಿವೇನ ಕ್ರುದ್ಧೇನ ರಾಕ್ಷಸಾನಾಂ ಬಲಂ ಕ್ಷಣಾತ್ ॥ ೪೫ ॥

ಭೀಮಸ್ಯೈವ ಚ ಕಿಂ ಭಸ್ಮ ನ ಜ್ಞಾತಂ ಕೇನಚಿತ್ತದಾ ।
ಪರಿವಾರಯುತೋ ದಗ್ಧೋ ನಾಮ ನ ಶ್ರೂಯತೇ ಕ್ವಚಿತ್ ॥ ೪೬ ॥

---

ತ್ತಿದ್ದರು. ಈ ಸಮಯದಲ್ಲಿ ನಾರದಮುನಿಯು ಅಲ್ಲಿಗೆ ಬಂದು ಕೈ ಜೋಡಿಸಿಕೊಂಡು ತಲೆಯನ್ನು ಬಗ್ಗಿಸಿ ದುಃಖನಿವಾರಕನಾದ ಶಿವನನ್ನು ಪ್ರಾರ್ಥನೆ ಮಾಡಿದನು.

೪೨-೪೬. ಎಲೈ, ಸ್ವಾಮಿಯೇ! ಕ್ಷಮಾಗುಣವನ್ನು ವಹಿಸು. ಪ್ರಪಂಚಕ್ಕೆ ಭ್ರಾಂತಿಯನ್ನುಂಟುಮಾಡಿರುವೆ. ಹುಲ್ಲನ್ನು ನಾಶಮಾಡುವುದಕ್ಕೆ ಕೊಡಲಿಯು ಬೇಕೇ? ಬೇಗನೆ ಈ ದುಷ್ಟ ರಾಕ್ಷಸನನ್ನು ಕೊಲ್ಲು ಎಂದು ಪ್ರಾರ್ಥಿಸಲು, ಶಿವನು ಸಮಸ್ತ ರಾಕ್ಷಸಗಣಗಳನ್ನೂ ಹುಂಕಾರವೆಂಬ ಅಸ್ತ್ರದಿಂದಲೇ ಭಸ್ಮವಾಗಿ ಮಾಡಿದನು. ಎಲೈ ಋಷಿಗಳೇ, ಕೇಳಿ. ಒಂದು ಕ್ಷಣದೊಳಗಾಗಿ ದೇವತೆಗಳು ನೋಡುತ್ತಿದ್ದ ಹಾಗೆಯೇ, ಕಾಡುಕಿಚ್ಚು ವನವನ್ನು ಸುಡುವಂತೆ, ಕೋಪಗೊಂಡ ಶಿವನಿಂದ ರಾಕ್ಷಸರೆಲ್ಲ ಸುಟ್ಟು ಬೂದಿಯಾದರು. ಭೀಮರಾಕ್ಷಸನ ಬೂದಿಯು ಯಾವುದೆಂದು ಯಾರೂ ಗೊತ್ತುಮಾಡಲಾಗಲಿಲ್ಲ. ತನ್ನ ಪರಿವಾರದೊಡನೆ ಸುಟ್ಟು ಅವನು ಹೆಸರಿಲ್ಲದಂತೆ ಆದನು.

ತತಶ್ಶಿವಸ್ಯ ಕೃಪಯಾ ಶಾಂತಿಂ ಪ್ರಾಪ್ತಾ ಮುನೀಶ್ವರಾಃ ।
ದೇವಾಸ್ಸರ್ವೇ ಚ ಶಕ್ರಾದ್ಯಾಸ್ಸ್ವಾಸ್ಥ್ಯಂ ಪ್ರಾಪಾಖಿಲಂ ಜಗತ್ ॥ ೪೭ ॥

ಕ್ರೋಧಜ್ವಾಲಾ ಮಹೇಶಸ್ಯ ನಿಸ್ಸಸಾರ ವನಾದ್ವನಂ ।
ರಾಕ್ಷಸಾನಾಂ ಚ ತದ್ಭಸ್ಮ ಸರ್ವಂ ವ್ಯಾಪ್ತಂ ವನೇಽಖಿಲಂ ॥ ೪೮ ॥

ತತಶ್ಚೌಷಧಯೋ ಜಾತಾ ನಾನಾಕಾರ್ಯಕರಾಸ್ತಥಾ ।
ರೂಪಾಂತರಂ ತತೋ ನೄಣಾಂ ಭವೇದ್ವೇಷಾಂತರಂ ತಥಾ ॥ ೪೯ ॥

ಭೂತಪ್ರೇತಪಿಶಾಚಾದಿ ದೂರತಶ್ಚ ತತೋ ವ್ರಜೇತ್ ।
ತನ್ನ ಕಾರ್ಯಂ ಚ ಯಚ್ಚೈವ ತತೋ ನ ಭವತಿ ದ್ವಿಜಾಃ ॥ ೫೦ ॥

ತೈರ್ದೇವೈಃ ಪ್ರಾರ್ಥಿತಶ್ಶಂಭುರ್ಮುನಿಭಿಶ್ಚ ವಿಶೇಷತಃ ।
ಸ್ಥಾತವ್ಯಂ ಸ್ವಾಮಿನಾ ಹ್ಯತ್ರ ಲೋಕಾನಾಂ ಸುಖಹೇತವೇ ॥ ೫೧ ॥

ಅಯಂ ವೈ ಕುತ್ಸಿತೋ ದೇಶ ಅಯೋಧ್ಯಾಲೋಕದುಃಖದಃ ।
ಭವಂತಂ ಚ ತದಾ ದೃಷ್ಟ್ವಾ ಕಲ್ಯಾಣಂ ಸಂಭವಿಷ್ಯತಿ ॥ ೫೨ ॥

---

೪೭-೪೮. ಆಮೇಲೆ ಶಿವನ ಅನುಗ್ರಹದಿಂದ ಋಷಿಗಳು ಶಾಂತಿಯನ್ನು ಪಡೆದರು. ಇಂದ್ರಾದಿದೇವತೆಗಳೂ, ಸಮಸ್ತ ಜಗತ್ತೂ, ಸ್ವಸ್ಥತೆಯನ್ನು ಹೊಂದಿತು. ಮಹೇಶ್ವರನ ಕೋಪವೆಂಬ ಉರಿಯು ವನದಿಂದ ವನಕ್ಕೆ ವ್ಯಾಪಿಸಿತು, ರಾಕ್ಷಸರ ಬೂದಿಯು ಆ ವನದಲ್ಲೆಲ್ಲಾ ಹರಡಿತು.

೪೯-೫೦. ಎಲೈ, ಬ್ರಾಹ್ಮಣರೇ! ಆಮೇಲೆ ಆ ಪ್ರದೇಶದಲ್ಲಿ ಅನೇಕ ಕೆಲಸಗಳಿಗೆ ಉಪಯೋಗವಾಗುವ ಮೂಲಿಕೆಗಳು ಹುಟ್ಟಿದುವು. ಮನುಷ್ಯರು ಬೇರೆ ರೂಪವನ್ನೂ, ಬೇರೆ ವೇಷಗಳನ್ನೂ ಪಡೆದರು. ಭೂತ, ಪ್ರೇತ, ಪಿಶಾಚಾದಿಗಳು ಆ ಪ್ರದೇಶದಿಂದ ದೂರಕ್ಕೆ ಹೊರಟುಹೋದವು. ಅಕಾರ್ಯಗಳು ಆ ಪ್ರದೇಶದಲ್ಲಿ ಯಾವುವೂ ನಡೆಯುವುದಿಲ್ಲ.

೫೧-೫೨. ಅಲ್ಲಿದ್ದ ದೇವತೆಗಳೂ, ಮುನಿಗಳೂ ಲೋಕಹಿತಕ್ಕಾಗಿ ಸ್ವಾಮಿಯಾದ ನೀನು ಇಲ್ಲಿಯೇ ನೆಲಸಬೇಕೆಂದು ಶಿವನನ್ನು ಕೇಳಿಕೊಂಡರು. ಜನರಿಗೆ ದುಃಖವನ್ನುಂಟುಮಾಡುವ ಈ ಕೆಟ್ಟ ಪ್ರದೇಶವು, ಅಯೋಧ್ಯೆ ಎಂದು ಹೆಸರನ್ನು

ಭೀಮಶಂಕರನಾಮಾ ತ್ವಂ ಭವಿತಾ ಸರ್ವಸಾಧಕಃ ।
ಏತಲ್ಲಿಂಗಂ ಸದಾ ಪೂಜ್ಯಂ ಸರ್ವಾಪದ್ವಿನಿವಾರಕಂ ॥ ೫೩ ॥

॥ ಸೂತ ಉವಾಚ ॥
ಇತ್ಯೇವಂ ಪ್ರಾರ್ಥಿತಶ್ಶಂಭುರ್ಲೋಕಾನಾಂ ಹಿತಕಾರಕಃ ।
ತತ್ರೈವಾಸ್ಥಿತವಾನ್ಪ್ರೀತ್ಯಾ ಸ್ವತಂತ್ರೋ ಭಕ್ತವತ್ಸಲಃ ॥ ೫೪ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ ಭೀಮೇಶ್ವರಜ್ಯೋತಿರ್ಲಿಂಗೋತ್ಪತ್ತಿಮಾಹಾತ್ಮ್ಯವರ್ಣನಂ ನಾಮ ಏಕವಿಂಶೋಽಧ್ಯಾಯಃ

---

ಹೊಂದಲಿ. ಇಲ್ಲಿರುವ ನಿನ್ನನ್ನು ಜನರು ದರ್ಶನಮಾಡಿ ಮಂಗಳವನ್ನು ಪಡೆಯಲಿ. ನೀನು ಭೀಮಶಂಕರನೆಂಬ ಹೆಸರಿನಿಂದ ಸಕಲೇಷ್ಟಾರ್ಥಗಳನ್ನು ಕೊಡುವವನಾಗು. ಈ ಲಿಂಗವು ಸಮಸ್ತ ವಿಪತ್ತುಗಳನ್ನು ಪರಿಹರಿಸುತ್ತಾ ಯಾವಾಗಲೂ ಪೂಜ್ಯವಾದುದಾಗಿರಲಿ ಎಂದು ಪ್ರಾರ್ಥಿಸಿದರು.

೫೪. ಸೂತನು ಹೇಳಿದನು.-- ಹೀಗೆಂದು ಶಿವನನ್ನು ಪ್ರಾರ್ಥಿಸಲು ಸರ್ವತಂತ್ರಸ್ವತಂತ್ರನೂ ಭಕ್ತವತ್ಸಲನೂ ಆದ ಆ ಶಿವನು ಲೋಕಹಿತಕ್ಕಾಗಿ ಸಂತೋಷದಿಂದ ಅಲ್ಲಿಯೇ ನೆಲಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ ಭೀಮೇಶ್ವರಜ್ಯೋತಿರ್ಲಿಂಗೋತ್ಪತ್ತಿ ಮಾಹಾತ್ಮ್ಯ ವರ್ಣನೆ ಎಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ದ್ವಾವಿಂಶೋಽಧ್ಯಾಯಃ

|| ಸೂತ ಉವಾಚ ||

ಅತಃ ಪರಂ ಪ್ರವಕ್ಷ್ಯಾಮಿ ಶ್ರೂಯತಾಮೃಷಿಸತ್ತಮಾಃ ।
ವಿಶ್ವೇಶ್ವರಸ್ಯ ಮಾಹಾತ್ಮ್ಯಂ ಮಹಾಪಾತಕನಾಶನಂ || ೧ ||

ಯದಿದಂ ದೃಶ್ಯತೇ ಕಿಂಚಿಜ್ಜಗತ್ಯಾಂ ವಸ್ತುಮಾತ್ರಕಂ ।
ಚಿದಾನಂದಸ್ವರೂಪಂ ಚ ನಿರ್ವಿಕಾರಂ ಸನಾತನಂ || ೨ ||

ತಸ್ಯೈವ ಕೈವಲ್ಯರತೋಽದ್ವಿತೀಯೇಚ್ಛಾ ತತೋಽಭವತ್ ।
ಸ ಏವ ಸಗುಣೋ ಜಾತಶ್ಶಿವ ಇತ್ಯಭಿಧೀಯತೇ || ೩ ||

---

## ಇಪ್ಪತ್ತೆರಡನೆಯ ಅಧ್ಯಾಯವು.

೧. ಸೂತನು ಹೇಳಿದನು.—ಎಲೈ ಋಷಿಶ್ರೇಷ್ಠರೇ ! ಇನ್ನು ಮುಂದೆ ಮಹಾಪಾಪಗಳನ್ನು ನಾಶಮಾಡುವ ವಿಶ್ವೇಶ್ವರನ ಮಹಿಮೆಯನ್ನು ಹೇಳುವೆನು, ಕೇಳಿರಿ.

೨-೬. ಈ ಪ್ರಪಂಚದಲ್ಲಿ ಕಾಣುವ ವಸ್ತುಗಳೆಲ್ಲವೂ ಅನಾದಿಯೂ, ನಿರ್ವಿಕಾರವೂ, ಜ್ಞಾನಾನಂದಸ್ವರೂಪವೂ ಆದ ಪರಬ್ರಹ್ಮಸ್ವರೂಪವಾಗಿರುವವು. ಅದ್ವಿತೀ

ಸ ಏವ ಹಿ ದ್ವಿಜೋ ಜಾತಃ ಪುಂಸ್ತ್ರೀರೂಪಪ್ರಭೇದತಃ ।
ಯಃ ಪುಮಾನ್ಸ ಶಿವಃ ಖ್ಯಾತಃ ಸ್ತ್ರೀಶಕ್ತಿಸ್ಸಾ ಹಿ ಕಥ್ಯತೇ ॥ ೪ ॥

ಚಿದಾನಂದಸ್ವರೂಪಾಭ್ಯಾಂ ಪುರುಷಾವಪಿ ನಿರ್ಮಿತೌ ॥ ೫ ॥

ಅದೃಷ್ಟಾಭ್ಯಾಂ ತದಾ ತಾಭ್ಯಾಂ ಸ್ವಭಾವಾನ್ಮುನಿಸತ್ತಮಾಃ ।
ತಾವದ್ದೃಷ್ಟ್ವಾ ತದಾ ತೌ ಚ ಸ್ವಮಾತೃಪಿತರೌ ದ್ವಿಜಾಃ ॥ ೬ ॥

ಮಹಾಸಂಶಯಮಾಪನ್ನೌ ಪ್ರಕೃತಿಃ ಪುರುಷಶ್ಚ ತೌ ।
ತದಾ ವಾಣೀ ಸಮುತ್ಪನ್ನಾ ನಿರ್ಗುಣಾತ್ಪರಮಾತ್ಮನಃ ॥ ೭ ॥

॥ ಪ್ರಕೃತಿಪುರುಷಾವೂಚತುಃ ॥

ತಪಸಸ್ತು ಸ್ಥಲಂ ನಾಸ್ತಿ ಕುತ್ರಾವಾಭ್ಯಾಂ ಪ್ರಭೋಽಧುನಾ ।
ಸ್ಥಿತ್ವಾ ತಪಃ ಪ್ರಕರ್ತವ್ಯಂ ತವ ಶಾಸನತಶ್ಶಿವ ॥ ೮ ॥

---

ಯವಾದ ಆ ಚಿದಾನಂದ ವಸ್ತುವಿಗೆ, ಎರಡನೆಯ ವಸ್ತುವಾಗಬೇಕೆಂಬ ಇಚ್ಛೆಯುಂಟಾಯಿತು. ಆಗ ಆ ಆತ್ಮವಸ್ತುವೇ ಗುಣಗಳಿಂದಕೂಡಿ ಶಿವವೆಂಬ ಹೆಸರನ್ನು ಹೊಂದಿರುವುದು. ಆ ಶಿವನೇ ಪುರುಷ ಸ್ತ್ರೀ ರೂಪದಿಂದ ಎರಡು ಭಾಗವಾಗಿ, ಪುರುಷನೇ ಶಿವನೆಂದೂ, ಸ್ತ್ರೀಯೇ ಶಕ್ತಿಯೆಂದೂ ಹೆಸರನ್ನು ಹೊಂದಿದರು. ಚಿದಾನಂದ ಸ್ವರೂಪರೂ, ಅದೃಶ್ಯರೂ ಆದ ಈ ಅರ್ಧನಾರೀಶ್ವರರು ಸ್ವಾಭಾವಿಕವಾದ ಪುರುಷ ಸ್ತ್ರೀಯನ್ನು ಸೃಷ್ಟಿಸಿದರು. ಇವರೇ ಪ್ರಕೃತಿಪುರುಷರು. ಈ ಪ್ರಕೃತಿಪುರುಷರು ತಮ್ಮನ್ನು ಸೃಷ್ಟಿಸಿದ ತಾಯಿ ತಂದೆಗಳನ್ನು ಕಾಣದೆ ಮಹಾಸಂದೇಹವನ್ನು ಹೊಂದಿದರು.

೭. ಆಗ ನಿರ್ಗುಣನಾದ ಪರಮಾತ್ಮನ ದೆಸೆಯಿಂದ ಒಂದು ಮಾತು ಕೇಳಬಂದಿತು—ಎಲೈ ಪ್ರಕೃತಿ ಮತ್ತು ಪುರುಷರೇ ಈಗ ನೀವು ತಪಸ್ಸನ್ನೇ ಮಾಡಿರಿ. ಆದರಿಂದ ಶ್ರೇಷ್ಠವಾದ ಸೃಷ್ಟಿಯಾಗುವುದು ! ಎಂಬ ಮಾತು ಕೇಳಿಸಿತು.

೮. ಪ್ರಕೃತಿಪುರುಷರು ಕೇಳಿದರು.–ಎಲೈ, ಸ್ವಾಮಿಯೇ ! ತಪಸ್ಸು ಮಾಡಲು ಸ್ಥಳವೇ ಇಲ್ಲವಲ್ಲಾ. ನಾವಿಬ್ಬರೂ ಎಲ್ಲಿ ತಪಸ್ಸನ್ನು ಮಾಡಬೇಕು. ಅಪ್ಪಣೆ ಮಾಡು ಎಂದರು.

**ಅವಿಮುಕ್ತಂ ಸ್ವಯಂ ಲಿಂಗಂ ಸ್ಥಾಪಿತಂ ಪರಮಾತ್ಮನಾ ।**
**ನ ಕದಾಚಿತ್ತ್ವಯಾ ತ್ಯಾಜ್ಯಮಿದಂ ಕ್ಷೇತ್ರಂ ಮಮಾಂಶಕೆ ॥ ೨೧ ॥**

**ಇತ್ಯುಕ್ತ್ವಾ ಚ ತ್ರಿಶೂಲಾತ್ಪ್ರದವತಾರ್ಯ ಹರಸ್ಸ್ವಯಂ ।**
**ಮೋಚಯಾಮಾಸ ಭುವನೇ ಮರ್ತ್ಯಲೋಕೇ ಹಿ ಕಾಶಿಕಾಂ ॥ ೨೨ ॥**

**ಬ್ರಹ್ಮಣಶ್ಚ ದಿನೇ ಸಾ ಹಿ ನ ವಿನಶ್ಯತಿ ನಿಶ್ಚಿತಂ ।**
**ತದಾ ಶಿವಸ್ತ್ರಿಶೂಲೇನ ದಧಾತಿ ಮುನಯಶ್ಚ ತಾಂ ॥ ೨೩ ॥**

**ಪುನಶ್ಚ ಬ್ರಹ್ಮಣಾ ಸೃಷ್ಟೌ ಕೃತಾಯಾಂ ಸ್ಥಾಪ್ಯತೇ ದ್ವಿಜಾಃ ।**
**ಕರ್ಮಣಾಂ ಕರ್ಷಣಾಚ್ಚೈವ ಕಾಶೀತಿ ಪರಿಪಠ್ಯತೇ ॥ ೨೪ ॥**

**ಅವಿಮುಕ್ತೇಶ್ವರಂ ಲಿಂಗಂ ಕಾಶ್ಯಾಂ ತಿಷ್ಠತಿ ಸರ್ವದಾ ।**
**ಮುಕ್ತಿದಾತೃ ಚ ಲೋಕಾನಾಂ ಮಹಾಪಾತಕಿನಾಮಪಿ ॥ ೨೫ ॥**

**ಅನ್ಯತ್ರ ಪ್ರಾಪ್ಯತೇ ಮುಕ್ತಿಸ್ಸಾರೂಪ್ಯಾದಿರ್ಮುನೀಶ್ವರಾಃ ।**
**ಅತ್ರೈವ ಪ್ರಾಪ್ಯತೇ ಜೀವೈಃ ಸಾಯುಜ್ಯಾ ಮುಕ್ತಿರುತ್ತಮಾ ॥ ೨೬ ॥**

---

ವನ್ನೂ ಕೊಡತಕ್ಕುದಾಗಿ ನನಗೆ ಪ್ರೀತಿಪಾತ್ರವಾಗಿರುವುವು. ಇಲ್ಲಿ ಪರಮಾತ್ಮನು ತಾನೇ ಅವಿಮುಕ್ತವೆಂಬ ಲಿಂಗವನ್ನು ಸ್ಥಾಪಿಸಿದನು. ಈ ಕ್ಷೇತ್ರವು ನನ್ನ ಅಂಶ ಸ್ವರೂಪವಾದುದು. ಆದುದರಿಂದ ಇದನ್ನು ನೀನು ಎಂದಿಗೂ ಬಿಡಬಾರದು. ಹೀಗೆಂದು ಹೇಳಿ ಶಿವನು ತನ್ನ ತ್ರಿಶೂಲದ ತುದಿಯಿಂದ ಕಾಶೀಕ್ಷೇತ್ರವನ್ನು ಇಳಿಸಿ ಮನುಷಳಿ ಲೋಕದಲ್ಲಿ ಭೂಮಿಯಮೇಲೆ ಇಟ್ಟನು.

೨೩-೨೬. ಆ ಕಾಶೀಪಟ್ಟಣವು ಬ್ರಹ್ಮನ ದಿನಾಂತ್ಯದಲ್ಲಿ ಆಗುವ ಪ್ರಳಯ ದಲ್ಲಿಯೂ ನಾಶವಾಗುವುದಿಲ್ಲ. ಆಗ ಶಿವನು ಈ ಪಟ್ಟಣವನ್ನು ತ್ರಿಶೂಲದ ತುದಿ ಯಲ್ಲಿ ಧರಿಸಿರುವನು. ಮತ್ತೆ ಬ್ರಹ್ಮನ ಸೃಷ್ಟಿಯಲ್ಲಿ ಕೃತಯುಗ ಪ್ರಾರಂಭದಲ್ಲಿ ಭೂಮಿಯಲ್ಲಿ ಸ್ಥಾಪಿಸುವನು. ಕರ್ಮಗಳನ್ನು ಕೃಶ ಮಾಡುವುದರಿಂದ ಕಾಶಿಯೆಂದು ಅನ್ವರ್ಥವಾದ ಹೆಸರು ಈ ಪಟ್ಟಣಕ್ಕಿರುವುದು. ಕಾಶಿಯಲ್ಲಿ ಯಾವಾಗಲೂ ಅವಿ ಮುಕ್ತೇಶ್ವರನೆಂಬ ಲಿಂಗವಿರುವುದು. ಈ ಲಿಂಗವು ಲೋಕದಲ್ಲಿ ಮಹಾಪಾಪಗಳನ್ನು ಮಾಡಿದವರಿಗೂ ಮುಕ್ತಿಯನ್ನು ಕೊಡುವುದು. ಎಲೈ ಋಷಿಶ್ರೇಷ್ಠರೇ, ಜೀವರು

ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ವಾರಾಣಸೀ ಪುರೀ ।
ಪಂಚಕ್ರೋಶೀ ಮಹಾಪುಣ್ಯಾ ಹತ್ಯಾಕೋಟಿವಿನಾಶಿನೀ ॥ ೨೭ ॥

ಅಮರಾ ಮರಣಂ ಸರ್ವೇ ವಾಂಛಂತೀಹ ಪರೇ ಚ ಕೇ ।
ಭುಕ್ತಿಮುಕ್ತಿಪ್ರದಾ ಚೈಷಾ ಸರ್ವದಾ ಶಂಕರಪ್ರಿಯಾ ॥ ೨೮ ॥

ಬ್ರಹ್ಮಾ ಚ ಶ್ಲಾಘತೇ ಚಾಮುಂ ವಿಷ್ಣುಸ್ಸಿದ್ಧಾಶ್ಚ ಯೋಗಿನಃ ।
ಮುನಯಶ್ಚ ತಥೈವಾನ್ಯೇ ತ್ರಿಲೋಕಸ್ಥಾ ಜನಾಃ ಸದಾ ॥ ೨೯ ॥

ಕಾಶ್ಯಾಶ್ಚ ಮಹಿಮಾನಂ ವೈ ವಕ್ತುಂ ವರ್ಷಶತೈರಪಿ ।
ಶಕ್ನೋಮ್ಯಹಂ ನ ಸರ್ವಂ ಹಿ ಯಥಾಶಕ್ತಿ ಬ್ರುವೇ ತತಃ ॥ ೩೦ ॥

---

ಗಳಿಗೆ ಬೇರೆಕ್ಷೇತ್ರಗಳಲ್ಲಿ ಸಾರೂಪ್ಯಾದಿ ಮುಕ್ತಿಗಳುಂಟಾಗುವುವು. ಆದರೆ ಶ್ರೇಷ್ಠವಾದ ಸಾಯುಜ್ಯಮುಕ್ತಿಯು ಇಲ್ಲಿಯೇ ದೊರೆಯುವುದು. ಯಾರಿಗೆ ಯಾವ ಕ್ಷೇತ್ರದಲ್ಲಿಯೂ ಸದ್ಗತಿಯು ದೊರೆಯುವುದಿಲ್ಲವೋ ಅವರಿಗೆ, ಈ ವಾರಾಣಸೀ ಪಟ್ಟಣವೇ ಸದ್ಗತಿಯನ್ನು ಕೊಡುವುದು. ಈ ಪಂಚಕ್ರೋಶಕ್ಷೇತ್ರವು ಮಹಾಪುಣ್ಯಫಲವನ್ನು ಕೊಡತಕ್ಕುದಾಗಿಯೂ ಕೋಟಿಬ್ರಹ್ಮಹತ್ಯಾದಿಗಳನ್ನು ನಾಶಮಾಡತಕ್ಕುದಾಗಿಯೂ ಇರುವುದು.

೨೮-೩೦. ದೇವತೆಗಳು ತಮಗೆ ಮರಣವಿಲ್ಲದಿದ್ದರೂ ಈ ಸ್ಥಳದಲ್ಲಿ ಮರಣವನ್ನಪೇಕ್ಷಿಸುವರು. ಎಂದಮೇಲೆ ಮಿಕ್ಕವರ ವಿಷಯವನ್ನು ಹೇಳಬೇಕಾದುದೇನು? ಈ ಕ್ಷೇತ್ರವು ಯಾವಾಗಲೂ ಶಿವನಿಗೆ ಪ್ರೀತಿಪಾತ್ರವಾಗಿ ಭುಕ್ತಿ, ಮುಕ್ತಿರೂಪವಾದ ಫಲಗಳನ್ನು ಕೊಡತಕ್ಕುದಾಗಿರುವುದು. ಬ್ರಹ್ಮನೂ, ವಿಷ್ಣುವೂ, ಸಿದ್ಧರೂ, ಯೋಗಿಗಳೂ, ಮುನಿಗಳೂ, ಮೂರು ಲೋಕಗಳಲ್ಲಿಯೂ ಇರುವ ಇತರರೂ ಯಾವಾಗಲೂ ಈ ಕ್ಷೇತ್ರವನ್ನು ಹೊಗಳುತ್ತಿರುವರು. ಕಾಶಿಯ ಮಹಿಮೆಯನ್ನು ಒಂದುನೂರು ವರ್ಷಗಳವರೆಗೂ ಹೇಳಿದರೂ ನಾನು ಮುಗಿಸಲಾರೆನು. ಆದುದರಿಂದ ನನ್ನ ಶಕ್ತಿಗನುಸಾರವಾಗಿ ಹೇಳುವೆನು.

ಕೈಲಾಸಸ್ಯ ಪತಿರ್ಯೋ ವೈ ಹ್ಯಂತಸ್ಸತ್ತ್ವೋ ಬಹಿಸ್ತಮಾಃ ।
ಕಾಲಾಗ್ನಿರ್ನಾಮತಃ ಖ್ಯಾತೋ ನಿರ್ಗುಣೋ ಗುಣವಾನ್ಭವಃ ।
ಪ್ರಣಿಪಾತೈರನೇಕೈಶ್ಚ ವಚನಂ ಚೇದಮಬ್ರವೀತ್ ॥ ೩೧ ॥

॥ ರುದ್ರ ಉವಾಚ ॥

ವಿಶ್ವೇಶ್ವರ ಮಹೇಶಾನ ತ್ವದೀಯೋಽಸ್ಮಿ ನ ಸಂಶಯಃ ।
ಕೃಪಾಂ ಕುರು ಮಹಾದೇವ ಮಯಿ ತ್ವಂ ಸಾಂಬ ಆತ್ಮಜೇ ॥ ೩೨ ॥

ಸ್ಥಾತವ್ಯಂ ಚ ಸದಾತ್ರೈವ ಲೋಕಾನಾಂ ಹಿತಕಾಮ್ಯಯಾ ।
ತಾರಯಸ್ವ ಜಗನ್ನಾಥ ಪ್ರಾರ್ಥಯಾಮಿ ಜಗತ್ಪತೇ ॥ ೩೩ ॥

॥ ಸೂತ ಉವಾಚ ॥

ಅವಿಮುಕ್ತೋಽಪಿ ದಾಂತಾತ್ಮಾ ತಂ ಸಂಪ್ರಾರ್ಥ್ಯ ಪುನಃ ಪುನಃ ।
ನೇತ್ರಾಶ್ರೂಣಿ ಪ್ರಮುಚ್ಯೈವ ಪ್ರೀತಃ ಪ್ರೋವಾಚ ಶಂಕರಂ ॥ ೩೪ ॥

---

೩೧. ಆ ಕೈಲಾಸಪತಿಯು ಒಳಗೆ ಸತ್ತ್ವಗುಣವೂ, ಹೊರಗೆ ತಮೋಗುಣವೂ ಉಳ್ಳವನಾಗಿರುವನು. ನಿರ್ಗುಣನಾದರೂ ಸಗುಣಸ್ವರೂಪವನ್ನು ಧರಿಸುವನು. ಅವನಿಗೆ ಕಾಲಾಗ್ನಿರುದ್ರನೆಂದು ಹೆಸರು. ಆ ರುದ್ರನೆಂಬುವನು ಅನೇಕ ನಮಸ್ಕಾರಗಳನ್ನು ಮಾಡಿ ಹೀಗೆ ಹೇಳಿದನು ಎಂದನು.

೩೨-೩೩. ರುದ್ರನು ಹೇಳಿದನು.—ಪ್ರಪಂಚಕ್ಕೆಲ್ಲ ಸ್ವಾಮಿಯಾದ ಓ ವಿಶ್ವೇಶ್ವರನೇ! ಅಂಬಾಸಹಿತನಾದ ನೀನು ನಿನ್ನ ಪುತ್ರನಾದ ನನ್ನಲ್ಲಿ ದಯೆಯನ್ನು ತೋರಿಸಬೇಕು. ಲೋಕಹಿತಕ್ಕಾಗಿ ನೀನು ಯಾವಾಗಲೂ ಇಲ್ಲಿಯೇ ಇರಬೇಕು. ಲೋಕಕ್ಕೆಲ್ಲ ಸ್ವಾಮಿಯಾದ ನಿನ್ನನ್ನು ಪ್ರಾರ್ಥನೆ ಮಾಡುವೆನು. ನನ್ನನ್ನು ದುಃಖಸಾಗರದಿಂದ ದಾಟಿಸು ಎಂದನು.

೩೪. ಅವಿಮುಕ್ತೇಶ್ವರನು ಶಿವನನ್ನು ಮತ್ತೆ ಮತ್ತೆ ಈರೀತಿ ಪ್ರಾರ್ಥಿಸಿ ಸಂತೋಷದಿಂದ ಆನಂದಬಾಷ್ಪಗಳು ಸುರಿಯುತ್ತಿರಲು ಶಿವನನ್ನು ಕುರಿತು ಇಂತೆಂದನು.

॥ ಅವಿಮುಕ್ತ ಉವಾಚ ॥

ದೇವದೇವ ಮಹಾದೇವ ಕಾಲಾಮಯಸುಭೇಷಜ ।
ತ್ವಂ ತ್ರಿಲೋಕಪತಿಸ್ಸತ್ಯಂ ಸೇವ್ಯೋ ಬ್ರಹ್ಮಾಚ್ಯುತಾದಿಭಿಃ ॥ ೩೫ ॥

ಕಾಶ್ಯಾಂ ಪುರ್ಯಾಂ ತ್ವಯಾ ದೇವ ರಾಜಧಾನೀ ಪ್ರಗೃಹ್ಯತಾಂ ।
ಮಯಾ ಧ್ಯಾನತಯಾ ಸ್ಥೇಯಮಚಿಂತ್ಯಸುಖಹೇತವೇ ॥ ೩೬ ॥

ಮುಕ್ತಿದಾತಾ ಭವಾನೇಹ ಕಾಮದಶ್ಚ ನ ಚಾಪರಃ ।
ತಸ್ಮಾತ್ತ್ವಮುಪಕಾರಾಯ ತಿಷ್ಠೋಮಾಸಹಿತಸ್ಸದಾ ॥ ೩೭ ॥

ಜೀವಾನ್ಭವಾಬ್ಧೇರಖಿಲಾಂಸ್ತಾರಯ ತ್ವಂ ಸದಾಶಿವ ।
ಭಕ್ತಕಾರ್ಯಂ ಕುರು ಹರ ಪ್ರಾರ್ಥಯಾಮಿ ಪುನಃ ಪುನಃ ॥ ೩೮ ॥

---

೩೫–೩೮. ಓ ಮಹಾದೇವನೇ, ನೀನು ಮೃತ್ಯುವೆಂಬ ರೋಗಕ್ಕೆ ಒಳ್ಳೆಯ ಔಷಧ ಸ್ವರೂಪನು, ಮೂರು ಲೋಕಕ್ಕೂ ಒಡೆಯನಾಗಿ ಬ್ರಹ್ಮ, ವಿಷ್ಣುಗಳೇ ಮೊದಲಾದ ದೇವತೆಗಳ ಸೇವೆಯನ್ನು ಸ್ವೀಕರಿಸುತ್ತಿರುವೆ. ಎಲೈ, ಸ್ವಾಮಿಯೇ! ಕಾಶೀ ಪಟ್ಟಣವೇ ನಿನ್ನ ರಾಜಧಾನಿಯಾಗಿ ಮಾಡಿಕೊಂಡು ನನ್ನ ಧ್ಯಾನಗೋಚರನಾಗಿ ಶಾಶ್ವತವಾದ ಸುಖವನ್ನು ಕೊಡುತ್ತಿರು. ಮುಕ್ತಿಯನ್ನೂ, ಇಷ್ಟಾರ್ಥಗಳನ್ನೂ, ಕೊಡುತ್ತಾ ಲೋಕೋಪಕಾರಾರ್ಥವಾಗಿ ಯಾವಾಗಲೂ ಉಮಾದೇವೀ ಸಹಿತನಾಗಿ ಇಲ್ಲಿಯೇ ನೆಲಸಿರು. ಸದಾಶಿವನಾದ ನೀನು ಸಕಲ ಜೀವರುಗಳನ್ನೂ ಸಂಸಾರ ಸಮುದ್ರದಿಂದ ದಾಟಿಸು. ಭಕ್ತರ ಕಾರ್ಯವನ್ನು ನೆರವೇರಿಸು. ನಿನ್ನನ್ನು ಮತ್ತೆ ಮತ್ತೆ ಪ್ರಾರ್ಥಿಸುವೆನು ಎಂದನು.

॥ ಸೂತ ಉವಾಚ ॥

ಇತ್ಯೇವಂ ಪ್ರಾರ್ಥಿತಸ್ತೇನ ವಿಶ್ವನಾಥೇನ ಶಂಕರಃ ।
ಲೋಕಾನಾಮುಪಕಾರಾರ್ಥಂ ತಸ್ಥೌ ತತ್ರಾಪಿ ಸರ್ವರಾಟ್ ॥ ೩೯ ॥

ಯದ್ದಿನಂ ಹಿ ಸಮಾರಭ್ಯ ಹರಃ ಕಾಶ್ಯಾಮುಪಾಗತಃ ।
ತದಾರಭ್ಯ ಚ ಸಾ ಕಾಶೀ ಸರ್ವಶ್ರೇಷ್ಠತರಾಭವತ್ ॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ ವಿಶ್ವೇಶ್ವರಮಾಹಾತ್ಮ್ಯೇ ಕಾಶ್ಯಾಂ ರುದ್ರಗಮನವರ್ಣನಂ ನಾಮ ದ್ವಾವಿಂಶೋಽಧ್ಯಾಯಃ

---

೩೯-೪೦. ಸೂತನು ಹೇಳಿದನು.—ಹೀಗೆಂದು ವಿಶ್ವನಾಥನು, ಶಿವನನ್ನು ಪ್ರಾರ್ಥಿಸಲು ಲೋಕೋಪಕಾರಾರ್ಥವಾಗಿ ಆ ಸರ್ವೇಶ್ವರನು ಅಲ್ಲಿಯೇ ನೆಲಸಿದನು. ಯಾವದಿನ ಶಿವನು ಕಾಶಿಗೆ ಬಂದನೋ ಅದು ಮೊದಲಾಗಿ ಕಾಶಿಯು ಸರ್ವೋತ್ತಮವಾದ ಕ್ಷೇತ್ರವಾಯಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ ವಿಶ್ವೇಶ್ವರಮಾಹಾತ್ಮ್ಯೆಯಲ್ಲಿ ಕಾಶಿಗೆ ಶಿವನು ಬಂದುದನ್ನು ವರ್ಣಿಸಿರುವ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ತ್ರಯೋವಿಂಶೋಽಧ್ಯಾಯಃ

---

**|| ಋಷಯ ಊಚುಃ ||**

**ಏವಂ ವಾರಾಣಸೀ ಪುಣ್ಯಾ ಯದಿ ಸೂತ ಮಹಾಪುರೀ ।**
**ತತ್ಪ್ರಭಾವಂ ವದಾಸ್ಮಾಕಮವಿಮುಕ್ತಸ್ಯ ಚ ಪ್ರಭೋ ॥ ೧ ॥**

**|| ಸೂತ ಉವಾಚ ||**

**ವಕ್ಷ್ಯೇ ಸಂಕ್ಷೇಪತಸ್ಸಮ್ಯಗ್ವಾರಾಣಸ್ಯಾಸ್ಸುಶೋಭನಂ ।**
**ವಿಶ್ವೇಶ್ವರಸ್ಯ ಮಾಹಾತ್ಮ್ಯಂ ಶ್ರೂಯತಾಂ ಚ ಮುನೀಶ್ವರಾಃ ॥ ೨ ॥**

---

## ಇಪ್ಪತ್ತಮೂರನೆಯ ಅಧ್ಯಾಯವು

೧. ಋಷಿಗಳು ಕೇಳಿದರು—ಎಲೈ, ಸೂತನೇ! ಮಹಾಪಟ್ಟಣವಾದ ವಾರಾಣಸೀಕ್ಷೇತ್ರವು ಈ ರೀತಿ ಪುಣ್ಯಕರವಾದುದಾರೆ ನಮಗೆ ಅದರ ಪ್ರಭಾವನ್ನೂ, ಅವಿಮುಕ್ತೇಶ್ವರನ ಮಹಿಮೆಯನ್ನೂ ಹೇಳಬೇಕು ಎನ್ನಲು,

೨-೩. ಸೂತನು ಹೇಳಿದನು.—ಎಲೈ ಋಷಿಗಳೇ ಕೇಳಿರಿ! ವಾರಾಣಸೀಕ್ಷೇತ್ರದ ಮಹಿಮೆಯನ್ನೂ ಮಂಗಳಕರವಾದ ವಿಶ್ವೇಶ್ವರನ ಮಾಹಾತ್ಮ್ಯೆಯನ್ನೂ ಸಂಕ್ಷೇಪವಾಗಿ ಹೇಳುವೆನು. ಒಂದಾನೊಂದು ದಿನ ಪಾರ್ವತೀದೇವಿಯೂ ಅತ್ಯಂತ ಪ್ರೀತಿ

ಕದಾಚಿತ್ಪಾರ್ವತೀ ದೇವೀ ಶಂಕರಂ ಪರಯಾ ಮುದಾ ।
ಲೋಕಕಾಮನಯಾಪೃಚ್ಛನ್ಮಾಹಾತ್ಮ್ಯಮವಿಮುಕ್ತಯೋಃ ॥ ೩ ॥

॥ ಪಾರ್ವತ್ಯುವಾಚ ॥

ಅಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಂ ವಕ್ತುಮರ್ಹಸ್ಯಶೇಷತಃ ।
ಮಮೋಪರಿ ಕೃಪಾಂ ಕೃತ್ವಾ ಲೋಕಾನಾಂ ಹಿತಕಾಮ್ಯಯಾ ॥ ೪ ॥

॥ ಸೂತ ಉವಾಚ ॥

ದೇವ್ಯಾಸ್ತದ್ವಚನಂ ಶ್ರುತ್ವಾ ದೇವದೇವೋ ಜಗತ್ಪ್ರಭುಃ ।
ಪ್ರತ್ಯುವಾಚ ಭವಾನೀಂ ತಾಂ ಜೀವಾನಾಂ ಪ್ರಿಯಹೇತವೇ ॥ ೫ ॥

॥ ಪರಮೇಶ್ವರ ಉವಾಚ ॥

ಸಾಧು ಪೃಷ್ಟಂ ತ್ವಯಾ ಭದ್ರೇ ಲೋಕಾನಾಂ ಸುಖದಂ ಶುಭಂ ।
ಕಥಯಾಮಿ ಯಥಾರ್ಥಂ ವೈ ಮಾಹಾತ್ಮ್ಯಮವಿಮುಕ್ತಯೋಃ ॥ ೬ ॥

ಇದಂ ಗುಹ್ಯತಮಂ ಕ್ಷೇತ್ರಂ ಸದಾ ವಾರಾಣಸೀ ಮಮ ।
ಸರ್ವೇಷಾಮೇವ ಜಂತೂನಾಂ ಹೇತುರ್ಮೋಕ್ಷಸ್ಯ ಸರ್ವಥಾ ॥ ೭ ॥

---

ಯಿಂದ ಲೋಕೋಪಕಾರಾರ್ಥವಾಗಿ ಅವಿಮುಕ್ತಲಿಂಗದ ಮಾಹಾತ್ಮ್ಯೆಯ ವಿಷಯದಲ್ಲಿ ಶಿವನನ್ನು ಪ್ರಶ್ನೆ ಮಾಡಿದಳು.

೪. ಎಲೈ ಶಿವನೇ! ನನ್ನ ಮೇಲೆ ದಯವಿಟ್ಟು ಲೋಕೋಪಕಾರಾರ್ಥವಾಗಿ ಈ ಕಾಶೀಕ್ಷೇತ್ರದ ಮಾಹಾತ್ಮ್ಯೆಯನ್ನು ಸಂಪೂರ್ಣವಾಗಿ ಹೇಳಬೇಕು ಎಂದಳು.

೫. ದೇವಿಯ ಮಾತನ್ನು ಕೇಳಿ ಸಮಸ್ತ ದೇವತೆಗಳಿಗೂ ಸ್ವಾಮಿಯೂ ಲೋಕಕ್ಕೆಲ್ಲ ಒಡೆಯನೂ ಆದ ಶಿವನು ಜೀವರುಗಳ ಹಿತಕ್ಕಾಗಿ ದೇವಿಗೆ ಪ್ರತ್ಯುತ್ತರವಾಗಿ ಇಂತೆಂದನು.

೬-೯. ಮಂಗಳಸ್ವರೂಪಿಯಾದ ಎಲೌ ಪಾರ್ವತಿಯೇ! ಲೋಕಸುಖಕ್ಕಾಗಿ ಉತ್ತಮವಾದ ಪ್ರಶ್ನೆಯನ್ನು ಕೇಳಿದೆ. ಅವಿಮುಕ್ತೇಶ್ವರನ ಮಹಿಮೆಯನ್ನು ಯಥಾಸ್ಥಿತವಾಗಿರುವಂತೆ ಹೇಳುವೆನು. ಈ ವಾರಾಣಸೀಕ್ಷೇತ್ರವು ನನಗೆ ಅತ್ಯಂತ ರಹಸ್ಯ

ಅಸ್ಮಿನ್ಸಿದ್ಧಾಸ್ಸದಾ ಕ್ಷೇತ್ರೇ ಮದೀಯಂ ವ್ರತಮಾಶ್ರಿತಾಃ ।
ನಾನಾಲಿಂಗಧರಾ ನಿತ್ಯಂ ಮಮ ಲೋಕಾಭಿಕಾಂಕ್ಷಿಣಃ ॥ ೮ ॥

ಅಭ್ಯಸ್ಯಂತಿ ಮಹಾಯೋಗಂ ಜಿತಾತ್ಮಾನೋ ಜಿತೇಂದ್ರಿಯಾಃ ।
ಪರಂ ಪಾಶುಪತಂ ಶ್ರೌತಂ ಭುಕ್ತಿಮುಕ್ತಿಫಲಪ್ರದಂ ॥ ೯ ॥

ರೋಚತೇ ಮೇ ಸದಾ ವಾಸೋ ವಾರಾಣಸ್ಯಾಂ ಮಹೇಶ್ವರಿ ।
ಹೇತುನಾ ಯೇನ ಸರ್ವಾಣಿ ವಿಹಾಯ ಶೃಣು ತದ್ಧ್ರುವಂ ॥ ೧೦ ॥

ಯೋ ಮೇ ಭಕ್ತಶ್ಚ ವಿಜ್ಞಾನೀ ತಾವುಭೌ ಮುಕ್ತಿಭಾಗಿನೌ ।
ತೀರ್ಥಾಪೇಕ್ಷಾ ಚ ನ ತಯೋರ್ವಿಹಿತಾವಿಹಿತೇ ಸಮೌ ॥ ೧೧ ॥

ಜೀವನ್ಮುಕ್ತೌ ತು ತೌ ಜ್ಞೇಯೌ ಯತ್ರ ಕುತ್ರಾಪಿ ವೈ ಮೃತೌ ।
ಪ್ರಾಪ್ನುತೋ ಮೋಕ್ಷಮಾಶ್ವೇವ ಮಯೋಕ್ತಂ ನಿಶ್ಚಿತಂ ವಚಃ ॥ ೧೨ ॥

---

ವಾದ ಪ್ರದೇಶವಾಗಿರುವುದು. ಸಮಸ್ತ ಪ್ರಾಣಿಗಳಿಗೂ ಇದು ಯಾವಾಗಲೂ ಮೋಕ್ಷ ಕಾರಣವಾಗಿರುವುದು. ಈ ಕ್ಷೇತ್ರದಲ್ಲಿ ಸಿದ್ಧರು ನನ್ನ ವ್ರತದಲ್ಲಿ ಆಸಕ್ತರಾಗಿ ಬಗೆ ಬಗೆಯ ಚಿಹ್ನೆಗಳನ್ನು ಧರಿಸಿ ನನ್ನ ಲೋಕವಾಸವನ್ನಪೇಕ್ಷಿಸುತ್ತಾ, ಇಂದ್ರಿಯಗಳನ್ನೂ, ಮನಸ್ಸನ್ನೂ ಜಯಿಸಿ ಮಹಾಯೋಗವನ್ನು ಅಭ್ಯಾಸಮಾಡುತ್ತಾ ವೇದೋಕ್ತವಾದ ಭುಕ್ತಿ ಮುಕ್ತಿ ಫಲಗಳನ್ನು ಕೊಡತಕ್ಕ ಶ್ರೇಷ್ಠವಾದ ಪಾಶುಪತವ್ರತವನ್ನು ಆಚರಿಸುತ್ತಿರುವರು.

೧೦-೧೨. ಎಲೌ ಮಹಾದೇವಿಯೇ, ನನಗೆ ಯಾವಾಗಲೂ ವಾರಾಣಸಿಯಲ್ಲಿ ವಾಸಮಾಡುವುದೇ ಇಷ್ಟವಾಗಿರುವುದು. ಎಲ್ಲಾ ಸ್ಥಳಗಳನ್ನು ಬಿಟ್ಟು ಯಾವ ಕಾರಣದಿಂದ ಇಲ್ಲಿ ನೆಲಸಿರುವೆನೋ ಅದನ್ನು ಹೇಳುವೆನು ಕೇಳು. ನನ್ನ ಭಕ್ತನೂ, ಜ್ಞಾನಿಯೂ ಇಬ್ಬರೂ ಮುಕ್ತಿಗೆ ಯೋಗ್ಯರು. ಅವರಿಬ್ಬರಿಗೂ ಪಾಪನಿವಾರಣೆಗಾಗಿ ತೀರ್ಥಸ್ನಾನಾದಿಗಳ ಅಪೇಕ್ಷೆಯು ಇದ್ದರೂ, ಇಲ್ಲದಿದ್ದರೂ ಒಂದೇ ಆಗಿರುವುದು. ಅವರಿಬ್ಬರೂ ಜೀವನ್ಮುಕ್ತರೆನಿಸುವರು. ಅವರು ಎಲ್ಲಿ ಮರಣವನ್ನು ಹೊಂದಿದರೂ ಬೇಗನೆ ಮೋಕ್ಷವನ್ನು ಪಡೆವರು. ನಿಶ್ಚಯವಾದ ಈ ಸಂಗತಿಯನ್ನು ನಾನು ಹೇಳಿರುವೆನು.

ಅತ್ರ ತೀರ್ಥೇ ವಿಶೇಷೋಽಸ್ತ್ಯವಿಮುಕ್ತಾಖ್ಯೇ ಪರೋತ್ತಮೇ ।
ಶ್ರೂಯತಾಂ ತತ್ತ್ವಯಾ ದೇವಿ ಪರಶಕ್ತೇ ಸುಚಿತ್ತಯಾ ॥ ೧೩ ॥

ಸರ್ವೇ ವರ್ಣಾ ಆಶ್ರಮಾಶ್ಚ ಬಾಲಯೌವನವಾರ್ಧಕಾಃ ।
ಅಸ್ಯಾಂ ಪುರ್ಯಾಂ ಮೃತಾಶ್ಚೇತ್ಸ್ಯುರ್ಮುಕ್ತಾ ಏವ ನ ಸಂಶಯಃ ॥ ೧೪ ॥

ಅಶುಚಿಶ್ಚ ಶುಚಿರ್ವಾಪಿ ಕನ್ಯಾ ಪರಿಣತಾ ತಥಾ ।
ವಿಧವಾ ವಾಥ ವಾ ವಂಧ್ಯಾ ರಜೋದೋಷಯುತಾಪಿ ವಾ ॥ ೧೫ ॥

ಪ್ರಸೂತಾಸಂಸ್ಕೃತಾ ಕಾಪಿ ಯಾದೃಶೀ ತಾದೃಶೀ ದ್ವಿಜಾಃ ।
ಅತ್ರ ಕ್ಷೇತ್ರೇ ಮೃತಾ ಚೇತ್ಸ್ಯಾನ್ಮೋಕ್ಷಭಾಙ್ನಾತ್ರ ಸಂಶಯಃ ॥ ೧೬ ॥

ಸ್ವೇದಜಶ್ಚಾಂಡಜೋ ವಾಪಿ ಹ್ಯುದ್ಭಿಜ್ಜೋಽಥ ಜರಾಯುಜಃ ।
ಮೃತೋ ಮೋಕ್ಷಮವಾಪ್ನೋತಿ ಯಥಾತ್ರ ನ ತಥಾ ಕ್ವಚಿತ್ ॥ ೧೭ ॥

ಜ್ಞಾನಾಪೇಕ್ಷಾ ನ ಚಾತ್ರೈವ ಭಕ್ತ್ಯಪೇಕ್ಷಾ ನ ವೈ ಪುನಃ ।
ಕರ್ಮಾಪೇಕ್ಷಾ ನ ದೇವ್ಯತ್ರ ದಾನಾಪೇಕ್ಷಾ ನ ಚೈವಹಿ ॥ ೧೮ ॥

---

೧೩-೧೬. ಅವಿಮುಕ್ತವೆಂಬ ಈ ಉತ್ತಮ ಕ್ಷೇತ್ರದಲ್ಲಿ ಮತ್ತೊಂದು ವಿಶೇಷ ವಿರುವುದು. ಪರಾಶಕ್ತಿಸ್ವರೂಪೆಯಾದ ನೀನು ಮನಸಿಟ್ಟು ಕೇಳು. ಸಮಸ್ತ ವರ್ಣ ದವರೂ, ಆಶ್ರಮದವರೂ, ಬಾಲ್ಯಯೌವನವಾರ್ಧಕಾವಸ್ಥೆಯಲ್ಲಿರುವವರೂ, ಯಾರೇ ಆದರೂ ಈ ಪಟ್ಟಣದಲ್ಲಿ ಮರಣ ಹೊಂದಿದರೆ ಮೋಕ್ಷವನ್ನೇ ಪಡೆಯುವರು. ಸಂದೇ ಹವಿರುವುದಿಲ್ಲ. ಶುಚಿಯಾಗಿರಲಿ, ಅಶುಚಿಯಾಗಿರಲಿ, ಕನ್ಯೆಯಾಗಲಿ, ಮದುವೆಯಾದ ಸ್ತ್ರೀಯಾಗಲಿ, ವಿಧವೆಯಾಗಲಿ, ಬಂಜೆಯಗಲಿ, ಮಕ್ಕಳನ್ನು ಹೆತ್ತು ಸಂಸ್ಕಾರವಿಲ್ಲದವ ಳಾಗಲಿ, ಯಾರೇ ಆದರೂ ಈ ಕ್ಷೇತ್ರದಲ್ಲಿ ಮರಣ ಹೊಂದಿದರೆ ಅವರೆಲ್ಲರೂ ಮೋಕ್ಷ ವನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

೧೭-೨೦. ಸ್ವೇದಜ, ಅಂಡಜ, ಉದ್ಭಿಜ, ಜರಾಯುಜ, ಎಂಬ ನಾಲ್ಕುವಿಧ ಪ್ರಾಣಿಗಳೂ ಇಲ್ಲಿ ಮರಣ ಹೊಂದಿದರೆ ಮೋಕ್ಷವನ್ನು ಹೊಂದುವುವು. ಈ ಪ್ರದೇಶ ದಲ್ಲಿ ವಾಸಮಾಡುವುದೊಂದೇ ಸಾಕು. ಧ್ಯಾನ, ಜ್ಞಾನ, ಭಕ್ತಿ, ಕರ್ಮ, ದಾನ,

ಸಂಸ್ಕೃತ್ಯಪೇಕ್ಷಾ ನೈವಾತ್ರ ಧ್ಯಾನಾಪೇಕ್ಷಾ ನ ಕರ್ಹಿಚಿತ್ ।
ನಾಮಾಪೇಕ್ಷಾರ್ಚನಾಪೇಕ್ಷಾ ಸುಜಾತೀನಾಂ ತಥಾತ್ರ ನ ॥ ೧೯ ॥

ಮಮ ಕ್ಷೇತ್ರೇ ಮೋಕ್ಷದೇ ಹಿ ಯೋ ವಾ ವಸತಿ ಮಾನವಃ ।
ಯಥಾ ತಥಾ ಮೃತಃ ಸ್ಯಾಚ್ಚೇನ್ಮೋಕ್ಷಮಾಪ್ನೋತಿ ನಿಶ್ಚಿತಂ ॥ ೨೦ ॥

ಏತನ್ಮಮ ಪುರಂ ದಿವ್ಯಂ ಗುಹ್ಯಾದ್ಗುಹ್ಯತರಂ ಪ್ರಿಯೇ ।
ಬ್ರಹ್ಮಾದಯೋಽಪಿ ಜಾನಂತಿ ಮಾಹಾತ್ಮ್ಯಂ ನಾಸ್ಯ ಪಾರ್ವತಿ ॥ ೨೧ ॥

ಮಹತ್ಕ್ಷೇತ್ರಮಿದಂ ತಸ್ಮಾದವಿಮುಕ್ತಮಿತಿ ಸ್ಮೃತಂ ।
ಸರ್ವೇಭ್ಯೋ ನೈಮಿಷಾದಿಭ್ಯಃ ಪರಂ ಮೋಕ್ಷಪ್ರದಂ ಮೃತೇ ॥ ೨೨ ॥

ಧರ್ಮಸ್ಯೋಪನಿಷತ್ಸತ್ಯಂ ಮೋಕ್ಷಸ್ಯೋಪನಿಷತ್ಸಮಂ ।
ಕ್ಷೇತ್ರತೀರ್ಥೋಪನಿಷದಮವಿಮುಕ್ತಂ ವಿದುರ್ಬುಧಾಃ ॥ ೨೩ ॥

---

ಸಂಸ್ಕಾರ, ನಾಮಸ್ಮರಣೆ, ಪೂಜೆ, ಉತ್ತಮವರ್ಣ ಧರ್ಮ, ಇವುಗಳಲ್ಲಿ ಒಂದರ ಅಪೇಕ್ಷೆಯೂ ಇಲ್ಲದೆ ನನ್ನ ಕ್ಷೇತ್ರದಲ್ಲಿ ವಾಸಮಾಡುತ್ತ, ಮನುಜನು ಹೇಗಿದ್ದು ಮರಣ ಹೊಂದಿದರೂ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ.

೨೧-೨೨. ಎಲೌ ಪ್ರಿಯೆಯಾದ ಪಾರ್ವತಿಯೇ, ನನ್ನ ಪಟ್ಟಣವಾದ ಈ ಕಾಶೀಕ್ಷೇತ್ರದ ಅತ್ಯಂತ ಗೋಪ್ಯವಾದ ಮಹಾಮಹಿಮೆಯನ್ನು ಬ್ರಹ್ಮಾದಿಗಳೂ ತಿಳಿಯಲಾರರು. ಆ ಕಾರಣದಿಂದಲೇ ಈ ಮಹಾಕ್ಷೇತ್ರಕ್ಕೆ ಅವಿಮುಕ್ತಕ್ಷೇತ್ರವೆಂದು ಹೆಸರು ಬಂದಿರುವುದು. ಮರಣ ಹೊಂದಿದವರಿಗೆ ನೈಮಿಷಾದಿ ಸಮಸ್ತ ಕ್ಷೇತ್ರಗಳಿಗಿಂತ ಉತ್ತಮವಾದ ಮೋಕ್ಷವನ್ನು ಕೊಡುವ ಕ್ಷೇತ್ರವೇ ಇದು.

೨೩. ವೇದಗಳಲ್ಲಿ ಉಪನಿಷತ್ತು ಹೇಗೆ ಮುಖ್ಯವೋ ಹಾಗೆ ಧರ್ಮಗಳಲ್ಲಿ ಸತ್ಯವೂ, ಮೋಕ್ಷಕ್ಕೆ ಸರ್ವಸಮತ್ವವೂ ಕ್ಷೇತ್ರ ತೀರ್ಥಗಳಲ್ಲಿ ಅವಿಮುಕ್ತಕ್ಷೇತ್ರವೂ ಮುಖ್ಯವಾದವು ಎಂದು ವಿದ್ವಾಂಸರು ತಿಳಿದಿರುವರು.

ಕಾಮಂ ಭುಂಜನ್ಸ್ವಪನ್ಕ್ರೀಡನ್ಕುರ್ವನ್ವಿವಿಧಾಃ ಕ್ರಿಯಾಃ ।
ಅವಿಮುಕ್ತೇ ತ್ಯಜನ್ಪ್ರಾಣಾಂಜಂತುರ್ಮೋಕ್ಷಾಯ ಕಲ್ಪತೇ ॥ ೨೪ ॥

ಕೃತ್ವಾ ಪಾಪಸಹಸ್ರಾಣಿ ಪಿಶಾಚತ್ವಂ ವರಂ ನೃಣಾಂ ।
ನ ಚ ಕ್ರತುಸಹಸ್ರತ್ವಂ ಸ್ವರ್ಗೇ ಕಾಶೀಂ ಪುರೀಂ ವಿನಾ ॥ ೨೫ ॥

ತಸ್ಮಾತ್ಸರ್ವಪ್ರಯತ್ನೇನ ಸೇವ್ಯತೇ ಕಾಶಿಕಾ ಪುರೀ ।
ಅವ್ಯಕ್ತಲಿಂಗಂ ಮುನಿಭಿರ್ಧ್ಯಾಯತೇ ಚ ಸದಾಶಿವಃ ॥ ೨೬ ॥

ಯದ್ಯತ್ಫಲಂ ಸಮುದ್ದಿಶ್ಯ ತಪಸ್ತ್ಯತ್ರ ನರಾಃ ಪ್ರಿಯೇ ।
ತೇಭ್ಯಶ್ಚಾಹಂ ಪ್ರಯಚ್ಛಾಮಿ ಸಮ್ಯಕ್ತತ್ತತ್ಫಲಂ ಧ್ರುವಂ ॥ ೨೭ ॥

ಸಾಯುಜ್ಯಮಾತ್ಮನಃ ಪಶ್ಚಾದೀಪ್ಸಿತಂ ಸ್ಥಾನಮೇವ ಚ ।
ನ ಕುತಶ್ಚಿತ್ಕರ್ಮಬಂಧಸ್ತ್ಯಜತಾಮತ್ರ ವೈ ತನುಂ ॥ ೨೮ ॥

---

೨೪-೨೫. ಕಾಮಭೋಗಗಳನ್ನು ಅನುಭವಿಸುತ್ತಾ ವಿಧವಿಧವಾಗಿ ವಿಹಾರ ಮಾಡುತ್ತಾ ಭೋಜನಮಾಡುತ್ತಲೂ, ನಿದ್ರೆಮಾಡುತ್ತಲೂ, ಆಟವಾಡುತ್ತಲೂ, ಬೇರೆ ಬೇರೆ ಕೆಲಸಗಳನ್ನು ಮಾಡುತ್ತಲೂ ಇದ್ದರೂ ಪ್ರಾಣಿಗಳು ಅವಿಮುಕ್ತಕ್ಷೇತ್ರಗಳಲ್ಲಿ ಮೃತರಾದರೆ ಅವರಿಗೆ ಮೋಕ್ಷವೇ ಬರುವುದು. ಮನುಷ್ಯರು ಅನೇಕ ಯಜ್ಞಗಳನ್ನು ಮಾಡಿ ಕಾಶೀಪಟ್ಟಣವಿಲ್ಲದ ಸ್ವರ್ಗದಲ್ಲಿರುವುದಕ್ಕಿಂತ ಅನೇಕ ಪಾಪಗಳನ್ನು ಮಾಡಿ ಪಿಶಾಚಿಯಾಗಿ ಕಾಶೀಪಟ್ಟಣದಲ್ಲಿರುವುದೇ ಶ್ರೇಷ್ಠವೆನಿಸುವುದು.

೨೬-೨೮. ಆದುದರಿಂದ ಜನರು ಸರ್ವಪ್ರಯತ್ನಗಳಿಂದ ಕಾಶಿಯಲ್ಲಿ ವಾಸ ಮಾಡಬೇಕು. ಅವ್ಯಕ್ತಲಿಂಗರೂಪನಾದ ಸದಾಶಿವನನ್ನು ಅಲ್ಲಿ ಮುನಿಗಳು ಧ್ಯಾನಮಾಡುವರು. ಪ್ರಿಯೆಯಾದ ಎಲೌ ಪಾರ್ವತಿ, ಇಲ್ಲಿ ಮನುಜರು ಯಾವ ಯಾವ ಫಲವನ್ನುದ್ದೇಶಿಸಿ ತಪಸ್ಸು ಮಾಡುವರೋ ಅವರಿಗೆ ನಾನು ಅದೇ ಫಲವನ್ನು ಖಂಡಿತವಾಗಿಯೂ ಕೊಡುವೆನು. ಅವರಿಗೆ ಇಷ್ಟವಾದ ಸ್ಥಾನವನ್ನೂ ಕೊನೆಯಲ್ಲಿ ನನ್ನ ಸಾಯುಜ್ಯಮುಕ್ತಿಯನ್ನೂ ಕೊಡುವೆನು. ಇಲ್ಲಿ ಶರೀರವನ್ನು ಬಿಟ್ಟವರಿಗೆ ಯಾವ ಕರ್ಮ ಬಂಧವೂ ಇರುವುದಿಲ್ಲ.

ಬ್ರಹ್ಮಾ ದೇವರ್ಷಿಭಿಸ್ಸಾರ್ಧಂ ವಿಷ್ಣುರ್ವಾಪಿ ದಿವಾಕರಃ ।
ಉಪಾಸತೇ ಮಹಾತ್ಮಾನಸ್ಸರ್ವೇ ಮಾಮಿಹ ಚಾಪರೇ ॥ ೨೯ ॥

ವಿಷಯಾಸಕ್ತಚಿತ್ತೋಽಪಿ ತ್ಯಕ್ತಧರ್ಮರುಚಿರ್ನರಃ ।
ಇಹ ಕ್ಷೇತ್ರೇ ಮೃತೋ ಯೋ ವೈ ಸಂಸಾರಂ ನ ಪುನರ್ವಿಶೇತ್ ॥ ೩೦ ॥

ಕಿಂ ಪುನರ್ನಿರ್ಮಮಾ ಧೀರಾಸ್ಸತ್ತ್ವಸ್ಥಾ ದಂಭವರ್ಜಿತಾಃ ।
ಕೃತಿನಶ್ಚ ನಿರಾರಂಭಾಸ್ಸರ್ವೇ ತೇ ಮಯಿ ಭಾವಿತಾಃ ॥ ೩೧ ॥

ಜನ್ಮಾಂತರಸಹಸ್ರೇಷು ಜನ್ಮ ಯೋಗೀ ಸಮಾಪ್ನುಯಾತ್ ।
ತದಿಹೈವ ಪರಂ ಮೋಕ್ಷಂ ಮರಣಾದಧಿಗಚ್ಛತಿ ॥ ೩೨ ॥

ಅತ್ರ ಲಿಂಗಾನ್ಯನೇಕಾನಿ ಭಕ್ತೈಸ್ಸಂಸ್ಥಾಪಿತಾನಿ ಹಿ ।
ಸರ್ವಕಾಮಪ್ರದಾನೀಹ ಮೋಕ್ಷದಾನಿ ಚ ಪಾರ್ವತಿ ॥ ೩೩ ॥

---

೨೯-೩೧. ಬ್ರಹ್ಮ, ವಿಷ್ಣು, ಸೂರ್ಯರೂ ಇತರ ಮಹಾತ್ಮರೂ ಈ ಕ್ಷೇತ್ರದಲ್ಲಿ ನನ್ನ ಪೂಜೆಯನ್ನು ಸದಾ ಮಾಡುವರು. ಮನುಷ್ಯನು ಇಂದ್ರಿಯಾದಿವಿಷಯೋಪಭೋಗಗಳಲ್ಲಿ ಆಸಕ್ತನಾಗಿದ್ದರೂ, ಧರ್ಮದಲ್ಲಿ ಆಸಕ್ತಿಯನ್ನು ಬಿಟ್ಟಿದ್ದರೂ ಆ ಕ್ಷೇತ್ರದಲ್ಲಿ ಮರಣವನ್ನು ಹೊಂದಿದರೆ ಮತ್ತೆ ಪುನರ್ಜನ್ಮವನ್ನು ಪಡೆಯುವುದಿಲ್ಲ. ಹೀಗೆಂದಮೇಲೆ ಅಹಂಭಾವವಿಲ್ಲದವರೂ, ಧೈರ್ಯಶಾಲಿಗಳೂ, ಸಾತ್ವಿಕಮಾರ್ಗದಲ್ಲಿ ನಡೆವವರೂ. ಡಂಭವಿಲ್ಲದವರೂ, ಕರ್ಮಮಾಡತಕ್ಕವರೂ, ಯತಿಗಳೂ, ಇವರೆಲ್ಲರೂ ನನ್ನ ಸ್ವರೂಪರೇ ಆಗುವರೆಂಬುದನ್ನು ಹೇಳಬೇಕಾದುದೇಯಿಲ್ಲ.

೩೨. ಯೋಗಿಯಾದವನು ಸಾವಿರಜನ್ಮಗಳಲ್ಲಿ ಯೋಗಾಭ್ಯಾಸಮಾಡಿದರೂ ಮತ್ತೆ ಪುನರ್ಜನ್ಮವನ್ನು ಹೊಂದುವನು. ಆದರೆ ಕಾಶಿಯಲ್ಲಿ ಮರಣ ಹೊಂದಿದರೆ ಪುನರ್ಜನ್ಮವಿಲ್ಲದೆ ಈ ಜನ್ಮದಲ್ಲಿಯೇ ಮುಕ್ತಿಯನ್ನು ಹೊಂದುವನು.

೩೩-೩೭. ಎಲೌ, ಪಾರ್ವತಿ, ಈ ಕಾಶೀಕ್ಷೇತ್ರದಲ್ಲಿ ಭಕ್ತರು ಪ್ರತಿಷ್ಠೆ ಮಾಡಿದ ಅನೇಕ ಲಿಂಗಗಳಿರುವುವು. ಅವೆಲ್ಲವೂ ಸಮಸ್ತ ಇಷ್ಟಾರ್ಥಗಳನ್ನೂ, ಮೋಕ್ಷವನ್ನೂ ಕೊಡತಕ್ಕವುಗಳು. ಈ ಪಟ್ಟಣಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಐದು

ಪಂಚಕ್ರೋಶಂ ಚತುರ್ದಿಕ್ಷು ಕ್ಷೇತ್ರಮೇತತ್ಪ್ರಕೀರ್ತಿತಂ ।
ಸಮಂತಾಚ್ಚ ತಥಾ ಜಂತೋರ್ಮೃತಿಕಾಲೇಽಮೃತಪ್ರದಂ ॥ ೩೪ ॥

ಅಪಾಪಶ್ಚ ಮೃತೋ ಯೋ ವೈ ಸದ್ಯೋ ಮೋಕ್ಷಂ ಸಮಶ್ನುತೇ ।
ಸಪಾಪಶ್ಚ ಮೃತೋ ಯಸ್ಸ್ಯಾತ್ಕಾಯವ್ಯೂಹಾನ್ಸಮಶ್ನುತೇ ॥ ೩೫ ॥

ಯಾತನಾಂ ಸೋಽನುಭೂಯೈವ ಪಶ್ಚಾನ್ಮೋಕ್ಷಮವಾಪ್ನುಯಾತ್ ।
ಪಾತಕಂ ಯೋಽವಿಮುಕ್ತಾಖ್ಯೇ ಕ್ಷೇತ್ರೇಽಸ್ಮಿನ್ಕುರುತೇ ಧ್ರುವಂ ॥ ೩೬ ॥

ಭೈರವೀಂ ಯಾತನಾಂ ಪ್ರಾಪ್ಯ ವರ್ಷಾಣಾಮಯುತೇ ಪುನಃ ।
ತತೋ ಮೋಕ್ಷಮವಾಪ್ನೋತಿ ಭುಕ್ತ್ವಾ ಪಾಪಂ ಚ ಸುಂದರಿ ॥ ೩೭ ॥

ಇತಿ ತೇ ಚ ಸಮಾಖ್ಯಾತಾ ಪಾಪಾಚಾರೇ ಚ ಯಾ ಗತಿಃ ।
ಏವಂ ಜ್ಞಾತ್ವಾ ನರಸ್ಸಮ್ಯಕ್ಸೇವಯೇದವಿಮುಕ್ತಕಂ ॥ ೩೮ ॥

ಕೃತಕರ್ಮಕ್ಷಯೋ ನಾಸ್ತಿ ಕಲ್ಪಕೋಟಿಶತೈರಪಿ ।
ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ॥ ೩೯ ॥

---

ಹರಿದಾರಿ ದೂರದಲ್ಲಿರುವ ಪ್ರದೇಶಗಳೆಲ್ಲವೂ ಸೇರಿ ಅವಿಮುಕ್ತಕ್ಷೇತ್ರವೆನಿಸಿಕೊಂಡಿರುವುದು. ಇದು ಪ್ರಾಣಿಗಳಿಗೆ ಮರಣಕಾಲದಲ್ಲಿ ಮೋಕ್ಷವನ್ನು ಕೊಡುವುದು. ಪಾಪವಿಲ್ಲದವರು ಈ ಪ್ರದೇಶದಲ್ಲಿ ಮರಣವನ್ನು ಹೊಂದಿದರೆ ಆ ಕ್ಷಣದಲ್ಲಿಯೇ ಅವರಿಗೆ ಮೋಕ್ಷ ಉಂಟಾಗುವುದು. ಪಾಪಿಗಳು ಅಲ್ಲಿ ಮೃತರಾದರೆ ಅನೇಕ ಜನ್ಮಗಳನ್ನು ಪಡೆದು ಪಾಪಫಲಗಳಾದ ದುಃಖ ಯಾತನೆಗಳನ್ನು ಅನುಭವಿಸಿದಮೇಲೆ ಮೋಕ್ಷವನ್ನು ಹೊಂದುವರು. ಈ ಅವಿಮುಕ್ತ ಕ್ಷೇತ್ರದಲ್ಲಿ ಯಾವನಾದರೂ ಪಾಪಗಳನ್ನು ಮಾಡಿದರೆ ಭಯಂಕರವಾದ ಯಾತನೆಯನ್ನು ಹತ್ತು-ಸಾವಿರ ವರ್ಷಗಳವರಿಗೆ ಅನುಭವಿಸಿ ಆಮೇಲೆ ಮೋಕ್ಷ ಹೊಂದುವನು.

೩೮-೩೯. ಪಾಪ ಕಾರ್ಯಗಳನ್ನು ಮಾಡುವವನಿಗೆ ಯಾವ ಗತಿಯುಂಟಾಗುವುದೆಂಬುದನ್ನು ನಿನಗೆ ಹೇಳಿದೆನು. ಮನುಷ್ಯನು ಇವುಗಳನ್ನೆಲ್ಲಾ ಚನ್ನಾಗಿ ತಿಳಿದು ಅವಿಮುಕ್ತಕ್ಷೇತ್ರಸೇವೆಯನ್ನು ಮಾಡಬೇಕು. ನೂರುಕೋಟಿ ಕಲ್ಪಗಳಾದರೂ ಮಾಡಿದ ಕರ್ಮವು ನಾಶವಾಗುವುದಿಲ್ಲ. ಮಾಡಿದ ಕರ್ಮಫಲರೂಪವಾದ ಶುಭಾಶುಭಗಳನ್ನು ಮನುಷ್ಯನು ಅನುಭವಿಸಿಯೇ ತೀರಬೇಕು.

ಕೇವಲಂ ಚಾಶುಭಂ ಕರ್ಮ ನರಕಾಯ ಭವೇದಿಹ ।
ಶುಭಂ ಸ್ವರ್ಗಾಯ ಜಾಯೇತ ದ್ವಾಭ್ಯಾಂ ಮಾನುಷ್ಯಮೀರಿತಂ　　॥ ೪೦ ॥

ಜನ್ಮ ಸಮ್ಯಗಸಮ್ಯಕ್ಚ ನ್ಯೂನಾಧಿಕ್ಯೇ ಭವೇದಿಹ ।
ಉಭಯೋಶ್ಚ ಕ್ಷಯೋ ಮುಕ್ತಿರ್ಭವೇತ್ಸತ್ಯಂ ಹಿ ಪಾರ್ವತಿ　　॥ ೪೧ ॥

ಕರ್ಮ ಚ ತ್ರಿವಿಧಂ ಪ್ರೋಕ್ತಂ ಕರ್ಮಕಾಂಡೇ ಮಹೇಶ್ವರಿ ।
ಸಂಚಿತಂ ಕ್ರಿಯಮಾಣಂ ಚ ಪ್ರಾರಬ್ಧಂ ಚೇತಿ ಬಂಧಕೃತ್　　॥ ೪೨ ॥

ಪೂರ್ವಜನ್ಮಸಮುದ್ಭೂತಂ ಸಂಚಿತಂ ಸಮುದಾಹೃತಂ ।
ಭುಜ್ಯತೇ ಚ ಶರೀರೇಣ ಪ್ರಾರಬ್ಧಂ ಪರಿಕೀರ್ತಿತಂ　　॥ ೪೩ ॥

ಅನೇನ ಜನ್ಮನಾ ಯಚ್ಚ ಕ್ರಿಯತೇ ಕರ್ಮ ಸಾಂಪ್ರತಂ ।
ಶುಭಾಶುಭಂ ಚ ದೇವೇಶಿ ಕ್ರಿಯಮಾಣಂ ವಿದುರ್ಬುಧಾಃ　　॥ ೪೪ ॥

---

೪೦-೪೧. ಕೇವಲ ಪಾಪಕಾರ್ಯಗಳನ್ನೇ ಮಾಡಿದವನಿಗೆ ನರಕವೂ, ಶುಭ ಕಾರ್ಯವನ್ನು ಮಾಡಿದವನಿಗೆ ಸ್ವರ್ಗವೂ, ಶುಭಾ ಶುಭಕರ್ಮಗಳೆರಡನ್ನೂ ಮಾಡಿದವನಿಗೆ ಮನುಷ್ಯಲೋಕವಾಸವೂ ಉಂಟಾಗುವುದು. ಅವರ ಪುಣ್ಯ ಪಾಪಗಳ ಹೆಚ್ಚು ಕಡಿಮೆಗಳಿಗನುಸಾರವಾಗಿ ಆ ಲೋಕಗಳಲ್ಲಿ ಜನ್ಮವನ್ನು ಪಡೆಯುವರು. ಎಲೌ, ಪಾರ್ವತಿಯೇ, ಶುಭಾ ಶುಭಕರ್ಮಗಳೆರಡೂ ನಾಶವಾದಮೇಲೆ ಮುಕ್ತಿಯುಂಟಾಗುವುದು. ಇದು ನಿಶ್ಚಯವಾದ ವಿಷಯವು.

೪೨-೪೪. ಓ ಮಹೇಶ್ವರಿ, ಪ್ರಾಣಿಗಳಿಗೆ ಸಂಸಾರಬಂಧವನ್ನುಂಟುಮಾಡುವ ಕರ್ಮಗಳು ಸಂಚಿತ, ಆಗಾಮಿ, ಪ್ರಾರಬ್ಧ ಎಂದು ಮೂರು ವಿಧಗಳಾಗಿರುವುವೆಂದು ಕರ್ಮ ಕಾಂಡದಲ್ಲಿ ಹೇಳಿರುವುದು. ಹಿಂದಿನ ಜನ್ಮದಲ್ಲಿ ಮಾಡಿದುದೇ ಸಂಚಿತವೆನಿಸುವುದು. ಈ ಶರೀರದಲ್ಲಿ ಈ ಜನ್ಮದಲ್ಲಿ ಅನುಭವಿಸುತ್ತಿರುವ ಕರ್ಮಫಲವೇ ಪ್ರಾರಬ್ಧವೆನಿಸುವುದು. ಈ ಜನ್ಮದಲ್ಲಿ ಮಾಡುವ ಶುಭಾ ಶುಭಕರ್ಮಫಲವೇ ಆಗಾಮಿಯೆನಿಸುವುದು.

ಪ್ರಾರಬ್ಧಕರ್ಮಣೋ ಭೋಗಾತ್ಸ್ಕ್ಷಯಶ್ಚೈವ ನ ಚಾನ್ಯಥಾ ।
ಉಪಾಯೇನ ದ್ವಯೋರ್ನಾಶಃ ಕರ್ಮಣೋಃ ಪೂಜನಾದಿನಾ ॥ ೪೫ ॥

ಸರ್ವೇಷಾಂ ಕರ್ಮಣಾಂ ನಾಶೋ ನಾಸ್ತಿ ಕಾಶೀಂ ಪುರೀಂ ವಿನಾ ।
ಸರ್ವಂ ಚ ಸುಲಭಂ ತೀರ್ಥಂ ದುರ್ಲ್ಲಭಾ ಕಾಶಿಕಾ ಪುರೀ ॥ ೪೬ ॥

ಪೂರ್ವಜನ್ಮಕೃತಂ ಚೇದ್ವೈ ಕಾಶೀದರ್ಶನಮಾದರಾತ್ ।
ತದಾ ಕಾಶೀಂ ಚ ಸಂಪ್ರಾಪ್ಯ ಲಭೇನ್ಮೃತ್ಯುಂ ನ ಚಾನ್ಯಥಾ ॥ ೪೭ ॥

ಕಾಶೀಂ ಪ್ರಾಪ್ಯ ನರೋ ಯಸ್ತು ಗಂಗಾಯಾಂ ಸ್ನಾನಮಾಚರೇತ್ ।
ತದಾ ಚ ಕ್ರಿಯಮಾಣಸ್ಯ ಸಂಚಿತಸ್ಯಾಪಿ ಸಂಕ್ಷಯಃ ॥ ೪೮ ॥

ಪ್ರಾರಬ್ಧಂ ನ ವಿನಾ ಭೋಗಂ ನಶ್ಯತೀತಿ ಸುನಿಶ್ಚಿತಂ ।
ಮತಿಶ್ಚ ತಸ್ಯ ಸಂಜಾತಾ ತದಾ ತಸ್ಯ ಕ್ಷಯೋ ಭವೇತ್ ॥ ೪೯ ॥

---

೪೫. ಇವುಗಳಲ್ಲಿ ಪ್ರಾರಬ್ಧಕರ್ಮಫಲವನ್ನು ಅನುಭವಿಸಿಯೇ ಮುಗಿಸಬೇಕು. ತಪ್ಪಿನುದಲ್ಲ ಮಿಕ್ಕ ಎರಡು ಕರ್ಮಫಲಗಳನ್ನೂ ಪೂಜಾದಿ ಉಪಾಯಗಳಿಂದ ನಾಶಮಾಡಿಕೊಳ್ಳಬಹುದು.

೪೬-೪೭. ಕಾಶೀ ಪಟ್ಟಣವನ್ನು ಬಿಟ್ಟು ಮತ್ತೆಲ್ಲಿಯೂ ಸರ್ವಕರ್ಮಗಳ ನಾಶವಾಗುವುದಿಲ್ಲ. ಸಮಸ್ತ ತೀರ್ಥಗಳೂ ಸುಲಭವಾಗಿ ದೊರೆಯುವುವು. ಕಾಶೀ ಪಟ್ಟಣವು ಮಾತ್ರ ದುರ್ಲಭವಾದುದು. ಹಿಂದಿನ ಜನ್ಮದಲ್ಲಿ ಕಾಶೀ ಪಟ್ಟಣವನ್ನು ಪ್ರೀತಿಯಿಂದ ನೋಡಿದ್ದರೆ ಈ ಜನ್ಮದಲ್ಲಿ ಕಾಶೀಪಟ್ಟಣದಲ್ಲಿಯೇ ಮರಣವು ಪ್ರಾಪ್ತಿಯಾಗುವುದು.

೪೮-೪೯. ಯಾವ ಮನುಷ್ಯನು ಕಾಶೀಪಟ್ಟಣಕ್ಕೆ ಹೋಗಿ ಗಂಗೆಯಲ್ಲಿ ಸ್ನಾನ ಮಾಡುವನೋ ಅವನ ಸಂಚಿತ ಆಗಾಮಿ ಕರ್ಮಗಳು ಕೂಡಲೇ ನಾಶವಾಗುವುವು. ಪ್ರಾರಬ್ಧಕರ್ಮಫಲವನ್ನು ಮಾತ್ರ ಅನುಭವಿಸಿಯೇ ತೀರಬೇಕು.

ಪೂರ್ವಂ ಚೈವ ಕೃತಾ ಕಾಶೀ ಪಶ್ಚಾತ್ಪಾಪಂ ಸಮಾಚರೇತ್ ।
ತದ್ಬೀಜೇನ ಬಲವತಾ ನೀಯತೇ ಕಾಶಿಕಾ ಪುನಃ ॥ ೫೦ ॥

ತದಾ ಸರ್ವಾಣಿ ಪಾಪಾನಿ ಭಸ್ಮಸ್ಸಾಚ್ಚ ಭವಂತಿ ಹಿ ।
ತಸ್ಮಾತ್ಕಾಶೀಂ ನರಸ್ಸೇವೇತ್ಕರ್ಮನಿರ್ಮೂಲನೀಂ ಧ್ರುವಂ ॥ ೫೧ ॥

ಏಕೋಽಪಿ ಬ್ರಾಹ್ಮಣೋ ಯೇನ ಕಾಶ್ಯಾಂ ಸಂವಾಸಿತಃ ಪ್ರಿಯೇ ।
ಕಾಶೀವಾಸಮವಾಪ್ಯೈವ ತತೋ ಮುಕ್ತಿಂ ಸ ವಿಂದತಿ ॥ ೫೨ ॥

ಕಾಶ್ಯಾಂ ಯೋ ವೈ ಮೃತಶ್ಚೈವ ತಸ್ಯ ಜನ್ಮ ಪುನರ್ನ ಹಿ ।
ಸಮುದ್ದಿಶ್ಯ ಪ್ರಯಾಗೇ ಚ ಮೃತಸ್ಯ ಕಾಮನಾಫಲೇ ॥ ೫೩ ॥

ಸಂಯೋಗಶ್ಚ ತಯೋಶ್ಚೇತ್ಸ್ಯಾತ್ಕಾಶೀಜನ್ಯಂ ಫಲಂ ವೃಥಾ ।
ಯದಿ ನ ಸ್ಯಾತ್ತಯೋರ್ಯೋಗಸ್ತೀರ್ಥರಾಜಫಲಂ ವೃಥಾ ॥ ೫೪ ॥

---

೫೦-೫೧. ಮೊದಲು ಕಾಶೀಪಟ್ಟಣವನ್ನು ಸ್ಮರಿಸಿ ಆಮೇಲೆ ಪಾಪವನ್ನು ಮಾಡಿದರೆ ಈ ಬಲವಾದ ಕಾರಣದಿಂದ (ಸ್ಮರಿಸಿದಕಾರಣ) ಮತ್ತೆ ಆ ಮನುಜನು ಕಾಶೀಪಟ್ಟಣಕ್ಕೆ ಹೋಗುವನು. ಆಮೇಲೆ ಅವನ ಸಮಸ್ತ ಪಾಪಗಳೂ ಬೂದಿಯಂತಾಗುವುವು. ಆದುದರಿಂದ ಮನುಷ್ಯನು ಕರ್ಮವನ್ನು ನಾಶಮಾಡುವ ಕಾಶೀಪಟ್ಟಣವನ್ನು ಅವಶ್ಯಕವಾಗಿ ಸೇವಿಸಬೇಕು.

೫೨-೫೪. ಓ ಪ್ರಿಯಳಾದ ಪಾರ್ವತಿಯೇ, ಒಬ್ಬ ಬ್ರಾಹ್ಮಣನನ್ನಾದರೂ ಕಾಶಿಯಲ್ಲಿ ವಾಸಮಾಡುವಂತೆ ಮಾಡಿದ ಮನುಷ್ಯನು ಕಾಶಿಯ ವಾಸವನ್ನೇ ಮಾಡಿದಂತಾಗಿ ಮುಕ್ತಿಯನ್ನು ಪಡೆವನು. ಕಾಶಿಯಲ್ಲಿಯೇ ಯಾವನು ಮರಣ ಹೊಂದುವನೋ ಅವನಿಗೆ ಪುನರ್ಜನ್ಮವು ಬರುವುದಿಲ್ಲ. ಪ್ರಯಾಗ ಕ್ಷೇತ್ರಕ್ಕೆ ಹೋಗಬೇಕೆಂದು ಉದ್ದೇಶಿಸಿ ಕಾಶಿಯಲ್ಲಿಯೇ ಮೃತನಾದರೆ ಈ ಎರಡು ಕ್ಷೇತ್ರಗಳ ಸಂಯೋಗವಿಲ್ಲದಿದ್ದಲ್ಲಿ ತೀರ್ಥಶ್ರೇಷ್ಠವಾದ ಪ್ರಯಾಗ ಕ್ಷೇತ್ರದ ಫಲವು ವ್ಯರ್ಥವಾಗುವುದು.

ತಸ್ಮಾನ್ಮಚ್ಛಾಸನಾದ್ವಿಷ್ಣುಸ್ಸೃಷ್ಟಿಂ ಸಾಕ್ಷಾದ್ಧಿ ನೂತನಾಂ ।
ವಿಧಾಯ ಮನಸೋದ್ದಿಷ್ಟಾಂ ತತ್ಸಿದ್ಧಿಂ ಯಚ್ಛತಿ ಧ್ರುವಂ ॥ ೫೫ ॥

॥ ಸೂತ ಉವಾಚ ॥

ಇತ್ಯಾದಿ ಬಹು ಮಾಹಾತ್ಮ್ಯಂ ಕಾಶ್ಯಾಂ ವೈ ಮುನಿಸತ್ತಮಾಃ ।
ತಥಾ ವಿಶ್ವೇಶ್ವರಸ್ಯಾಪಿ ಭುಕ್ತಿಮುಕ್ತಿಪ್ರದಂ ಸತಾಂ ॥ ೫೬ ॥

ಅತಃ ಪರಂ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ತ್ರ್ಯಂಬಕಸ್ಯ ಚ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಮಾನವಃ ಕ್ಷಣಾತ್ ॥ ೫೭ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಕಾಶೀವಿಶ್ವೇಶ್ವರಜ್ಯೋತಿರ್ಲಿಂಗಮಾಹಾತ್ಮ್ಯವರ್ಣನಂ ನಾಮ
ತ್ರಯೋವಿಂಶೋಽಧ್ಯಾಯಃ

---

೫೫. ಈ ಕಾರಣದಿಂದ ನನ್ನ ಅಪ್ಪಣೆಯಿಂದ ವಿಷ್ಣುವು ನೂತನ ಸೃಷ್ಟಿಯನ್ನು ಮಾಡಿ ಮನಸ್ಸಿನಲ್ಲಿ ಅಪೇಕ್ಷಿಸಿದ ಪ್ರಯಾಗಾದಿಗಳ ಕ್ಷೇತ್ರಗಳ ಫಲವನ್ನು ಈ ಕಾಶೀಯಲ್ಲಿಯೇ ಕೊಡುವನು.

೫೬-೫೭. ಸೂತನು ಹೇಳಿದನು.—ಎಲೈ ಋಷಿಶ್ರೇಷ್ಠರೇ ಕೇಳಿ. ಮೇಲೆ ಹೇಳಿದುದೇ ಮುಂತಾದ ಅನೇಕ ಮಹಾತ್ಮೆಗಳು ಕಾಶೀಕ್ಷೇತ್ರದಲ್ಲಿರುವುವು. ಅಲ್ಲಿರುವ ವಿಶ್ವೇಶ್ವರಲಿಂಗಕ್ಕೂ ಸಜ್ಜನರಿಗೆ ಭುಕ್ತಿ, ಮುಕ್ತಿಗಳನ್ನು ಕೊಡುವ ಮಹಾತ್ಮೆಯು ಇರುವುದು. ಇಲ್ಲಿಂದ ಮುಂದೆ ತ್ರ್ಯಂಬಕೇಶ್ವರನ ಮಹಾತ್ಮೆಯನ್ನು ಹೇಳುವೆನು. ಅದನ್ನು ಕೇಳಿದರೆ ಮನುಷ್ಯನು ಒಂದು ಕ್ಷಣದೊಳಗಾಗಿ ಸಮಸ್ತ ಪಾಪಗಳ ಬಿಡುಗಡೆಯನ್ನು ಹೊಂದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಕಾಶೀವಿಶ್ವೇಶ್ವರಜ್ಯೋತಿರ್ಲಿಂಗ ಮಾಹಾತ್ಮ್ಯ ವರ್ಣನೆಯೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಚತುರ್ವಿಂಶೋಽಧ್ಯಾಯಃ

॥ ಸೂತ ಉವಾಚ ॥

ಶ್ರೂಯತಾಮೃಷಯಃ ಶ್ರೇಷ್ಠಾಃ ಕಥಾಂ ಪಾಪಪ್ರಣಾಶಿನೀಂ ।
ಕಥಯಾಮಿ ಯಥಾ ವ್ಯಾಸಾತ್ಸದ್ಗುರೋಶ್ಚ ಶ್ರುತಾ ಮಯಾ ॥ ೧ ॥

ಪುರಾ ಋಷಿವರಶ್ಚಾಸೀದ್ಗೌತಮೋ ನಾಮ ವಿಶ್ರುತಃ ।
ಅಹಲ್ಯಾ ನಾಮ ತಸ್ಯಾಸೀತ್ಪತ್ನೀ ಪರಮಧಾರ್ಮಿಕೀ ॥ ೨ ॥

ದಕ್ಷಿಣಸ್ಯಾಂ ದಿಶಿ ಹಿ ಯೋ ಗಿರಿರ್ಬ್ರಹ್ಮೇತಿಸಂಜ್ಞಕಃ ।
ತತ್ರ ತೇನ ತಪಸ್ತಪ್ತಂ ವರ್ಷಾಣಾಮಯುತಂ ತಥಾ ॥ ೩ ॥

---

### ಇಪ್ಪತ್ತನಾಲ್ಕನೆಯ ಅಧ್ಯಾಯವು.

೧. ಸೂತನು ಹೇಳಿದನು.—ಎಲೈ ಋಷಿಶ್ರೇಷ್ಠರೇ, ನಮ್ಮ ಗುರುವಾದ ವ್ಯಾಸಮಹರ್ಷಿಯು ಹೇಳಿದ ಪಾಪಪರಿಹಾರಕವಾದ ಮತ್ತೊಂದು ಕಥೆಯನ್ನು ಹೇಳುವೆನು ಕೇಳಿರಿ.

೨-೪. ಹಿಂದೆ ಗೌತಮನೆಂಬ ಪ್ರಸಿದ್ಧನಾದ ಋಷಿಶ್ರೇಷ್ಠನಿದ್ದನು. ಅವನಿಗೆ ಅತ್ಯಂತ ಧರ್ಮಿಷ್ಠಳಾದ ಅಹಲ್ಯೆ ಎಂಬ ಪತ್ನಿಯಿದ್ದಳು. ಆ ಗೌತಮನು ದಕ್ಷಿಣ ದಿಕ್ಕಿನಲ್ಲಿರುವ ಬ್ರಹ್ಮಗಿರಿಯಲ್ಲಿ ಹತ್ತುಸಾವಿರ ವರ್ಷ ತಪಸ್ಸನ್ನು ಮಾಡಿದನು. ಒಂದಾ

ಕದಾಚಿಚ್ಚ ಹ್ಯನಾವೃಷ್ಟಿರಭವತ್ತತ್ರ ಸುವ್ರತಾಃ ।
ವರ್ಷಾಣಾಂ ಚ ಶತಂ ರೌದ್ರೀ ಲೋಕಾ ದುಃಖಮುಪಾಗತಾಃ ॥ ೪ ॥

ಆರ್ದ್ರಂ ಚ ಪಲ್ಲವಂ ನ ಸ್ಮ ದೃಶ್ಯತೇ ಪೃಥಿವೀತಲೇ ।
ಕುತೋ ಜಲಂ ವಿದೃಶ್ಯೇತ ಜೀವಾನಾಂ ಪ್ರಾಣಧಾರಕಂ ॥ ೫ ॥

ತದಾ ತೇ ಮುನಯಶ್ಚೈವ ಮನುಷ್ಯಾಃ ಪಶವಸ್ತಥಾ ।
ಪಕ್ಷಿಣಶ್ಚ ಮೃಗಾಸ್ತತ್ರ ಗತಾಶ್ಚೈವ ದಿಶೋ ದಶ ॥ ೬ ॥

ತಾಂ ದೃಷ್ಟ್ವಾ ಚರ್ಷಯೋ ವಿಪ್ರಾಃ ಪ್ರಾಣಾಯಾಮಪರಾಯಣಾಃ ।
ಧ್ಯಾನೇನ ಚ ತದಾ ಕೇಚಿತ್ಕಾಲಂ ನಿನ್ಯುಸ್ಸುದಾರುಣಂ ॥ ೭ ॥

ಗೌತಮೋಽಪಿ ಸ್ವಯಂ ತತ್ರ ವರುಣಾರ್ಥೇ ತಪಶ್ಶುಭಂ ।
ಚಕಾರ ಚೈವ ಷಣ್ಮಾಸಂ ಪ್ರಾಣಾಯಾಮಪರಾಯಣಃ ॥ ೮ ॥

ತತಶ್ಚ ವರುಣಸ್ತಸ್ಮೈ ವರಂ ದಾತುಂ ಸಮಾಗತಃ ।
ಪ್ರಸನ್ನೋಽಸ್ಮಿ ವರಂ ಬ್ರೂಹಿ ದದಾಮಿ ಚ ವಚೋಽಬ್ರವೀತ್ ॥ ೯ ॥

---

ನೊಂದು ಕಾಲದಲ್ಲಿ ಆ ಪ್ರದೇಶದಲ್ಲಿ ಅನಾವೃಷ್ಟಿಯು ಪ್ರಾಪ್ತಿಯಾಯಿತು. ನೂರು ವರ್ಷಗಳವರಿಗೆ ಭಯಂಕರವಾದ ಆ ಅನಾವೃಷ್ಟಿಯಲ್ಲಿ ಜನರು ಬಹಳ ದುಃಖವನ್ನು ಹೊಂದಿದರು.

೫-೧೦. ಭೂಮಿಯಲ್ಲಿ ಹಸಿಯ ಎಲೆಯು ಕಾಣಿಸಲಿಲ್ಲ. ಜೀವರುಗಳಿಗೆ ಪ್ರಾಣಧಾರಣೆಗಾಗಿ ನೀರು ಎಲ್ಲಿಯೂ ಸಿಕ್ಕಲಿಲ್ಲ. ಆಗ ಆ ಮುನಿಗಳೂ, ಮನುಷ್ಯರೂ, ಪಶು, ಪಕ್ಷಿ, ಮೃಗಗಳೂ ಹತ್ತುದಿಕ್ಕಿಗೂ ಚದುರಿ ಹೊರಟುಹೋದುವು. ಅದನ್ನು ನೋಡಿ ಋಷಿಗಳೆಲ್ಲರೂ ಪ್ರಾಣಾಯಾಮವನ್ನು ಮಾಡಿ ಆ ಕಷ್ಟವಾದ ಕೆಲವು ಕಾಲ ವನ್ನು ಧ್ಯಾನಾಸಕ್ತರಾಗಿ ಕಳೆದರು. ಗೌತಮನೂ ಅಲ್ಲಿ ವರುಣನನ್ನು ಕುರಿತು ಪ್ರಾಣಾಯಾಮಾಸಕ್ತನಾಗಿ ಆರು ತಿಂಗಳವರಿಗೆ ಧ್ಯಾನಮಾಡಿದನು. ಆಮೇಲೆ ವರು ಣನು ವರವನ್ನು ಕೊಡುವುದಕ್ಕಾಗಿ, ಅಲ್ಲಿಗೆ ಬಂದು—ನಾನು ಸಂತುಷ್ಟನಾದೆನು ವರವನು ಕೇಳು ಕೊಡುವೆನು ಎಂದು ಹೇಳಲು ಗೌತಮನು ಮಳೆಯನ್ನು ಕರುಣಿ

ತತಶ್ಚ ಗೌತಮಸ್ತಂ ವೈ ವೃಷ್ಟಿಂ ಚ ಪ್ರಾರ್ಥಯತ್ತದಾ ।
ತತಸ್ಸ ವರುಣಸ್ತಂ ವೈ ಪ್ರತ್ಯುವಾಚ ಮುನಿಂ ದ್ವಿಜಾಃ ॥ ೧೦ ॥

॥ ವರುಣ ಉವಾಚ ॥

ದೇವಾಜ್ಞಾಂ ಚ ಸಮುಲ್ಲಂಘ್ಯ ಕಥಂ ಕುರ್ಯಾಮಹಂ ಚ ತಾಂ ।
ಅನ್ಯತ್ಪ್ರಾರ್ಥಯ ಸುಜ್ಞೋಽಸಿ ಯದಹಂ ಕರವಾಣಿ ತೇ ॥ ೧೧ ॥

॥ ಸೂತ ಉವಾಚ ॥

ಇತ್ಯೇತದ್ವಚನಂ ತಸ್ಯ ವರುಣಸ್ಯ ಮಹಾತ್ಮನಃ ।
ಪರೋಪಕಾರೀ ತಚ್ಛ್ರುತ್ವಾ ಗೌತಮೋ ವಾಕ್ಯಮಬ್ರವೀತ್ ॥ ೧೨ ॥

॥ ಗೌತಮ ಉವಾಚ ॥

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರೋ ಮಮ ।
ಯದಹಂ ಪ್ರಾರ್ಥಯಾಮ್ಯದ್ಯ ಕರ್ತವ್ಯಂ ಹಿ ತ್ವಯಾ ತಥಾ ॥ ೧೩ ॥

ಯತಸ್ತ್ವಂ ಜಲರಾಶೀಶಸ್ತಸ್ಮಾದ್ದೇಯಂ ಜಲಂ ಮಮ ।
ಅಕ್ಷಯಂ ಸರ್ವದೇವೇಶ ದಿವ್ಯಂ ನಿತ್ಯಫಲಪ್ರದಂ ॥ ೧೪ ॥

---

ಸೆಂದು ಕೇಳಿದನು. ವರುಣನು ಆ ಮುನಿಗೆ ಪ್ರತ್ಯುತ್ತರವನ್ನು ಹೇಳಿದನು.

೧೧. ದೇವತೆಗಳ ಆಜ್ಞೆಯನ್ನು ಮೀರಿ ನಾನು ಹೇಗೆ ಮಳೆಯನ್ನು ಕೊಡಲಿ? ನೀನು ಜ್ಞಾನಿಯಾಗಿರುವೆ. ಬೇರೊಂದು ವರವನ್ನು ಕೇಳು. ಅದನ್ನು ನಾನು ಕೊಡುವೆನು ಎಂದನು.

೧೨. ಹೀಗೆ ಹೇಳಿದ ಮಹಾತ್ಮನಾದ ವರುಣನ ಮಾತನ್ನು ಕೇಳಿ ಗೌತಮನು ಪರೋಪಕಾರವನ್ನು ಮಾಡುವ ಅಭಿಪ್ರಾಯವುಳ್ಳವನಾಗಿ

೧೩-೧೪. ಎಲೈ, ದೇವತೆಗಳಿಗೆ ಒಡೆಯನಾದ ವರುಣನೇ, ನೀನು ಪ್ರಸನ್ನನಾಗಿ ನನಗೆ ವರವನ್ನು ಕೊಡುವುದಾಗಿದ್ದರೆ, ನಾನು ಕೇಳಿಕೊಂಡುದ್ದನ್ನು ನೀನಡೆಸಿಕೊಡಬೇಕು. ನೀನು ನೀರಿಗೆ ಅಧಿಪತಿಯಾಗಿರುವುದರಿಂದ ನನಗೆ ನೀರನ್ನು ಕೊಡಬೇಕು. ಆ ನೀರು ಶ್ರೇಷ್ಠವಾದುದಾಗಿಯೂ, ಯಾವಾಗಲೂ ಫಲವನ್ನು ಕೊಡುತಕ್ಕದಾಗಿಯೂ, ಅಕ್ಷಯವಾದುದಾಗಿಯೂ ಇರಬೇಕು. ಇಂತಹ ವರವೇ ಬೇಕು ಎಂದನು.

॥ ಸೂತ ಉವಾಚ ॥

ಇತಿ ಸಂಪ್ರಾರ್ಥಿತಸ್ತೇನ ವರುಣೋ ಗೌತಮೇನ ವೈ ।
ಉವಾಚ ವಚನಂ ತಸ್ಮೈ ಗರ್ತಶ್ಚ ಕ್ರಿಯತಾಂ ತ್ವಯಾ ॥ ೧೫ ॥

ಇತ್ಯುಕ್ತೇ ಚ ಕೃತಸ್ತೇನ ಗರ್ತೋ ಹಸ್ತಪ್ರಮಾಣತಃ ।
ಜಲೇನ ಪೂರಿತಸ್ತೇನ ದಿವ್ಯೇನ ವರುಣೇನ ಸಃ ॥ ೧೬ ॥

ಅಥೋವಾಚ ಮುನಿಂ ದೇವೋ ವರುಣೋ ಹಿ ಜಲಾಧಿಪಃ ।
ಗೌತಮಂ ಮುನಿಶಾರ್ದೂಲಂ ಪರೋಪಕೃತಿಶಾಲಿನಂ ॥ ೧೭ ॥

॥ ವರುಣ ಉವಾಚ ॥

ಅಕ್ಷಯಂ ಚ ಜಲಂ ತೇಽಸ್ತು ತೀರ್ಥಭೂತಂ ಮಹಾಮುನೇ ।
ತವ ನಾಮ್ನಾ ಚ ವಿಖ್ಯಾತಂ ಕ್ಷಿತಾವೇತದ್ಭವಿಷ್ಯತಿ ॥ ೧೮ ॥

ಅತ್ರ ದತ್ತಂ ಹುತಂ ತಪ್ತಂ ಸುರಾಣಾಂ ಯಜನಂ ಕೃತಂ ।
ಪಿತೄಣಾಂ ಚ ಕೃತಂ ಶ್ರಾದ್ಧಂ ಸರ್ವಮೇವಾಕ್ಷಯಂ ಭವೇತ್ ॥ ೧೯ ॥

---

೧೫-೧೭. ಗೌತಮನು ವರುಣನನ್ನು ಕುರಿತು ಈರೀತಿ ಪ್ರಾರ್ಥನೆ ಮಾಡಲು, ವರುಣನು ಗೌತಮನನ್ನು ಕುರಿತು ಒಂದು ಹಳ್ಳವನ್ನು ಮಾಡು ಎಂದನು. ಗೌತಮನು ಒಂದು ಮೊಳ ಆಳವಾದ ಹಳ್ಳವನ್ನು ಮಾಡಿದನು. ವರುಣನು ಆ ಹಳ್ಳದಲ್ಲಿ ದಿವ್ಯವಾದ ನೀರನ್ನು ತುಂಬಿದನು. ಆಮೇಲೆ ಪರೋಪಕಾರನಿರತನಾದ ಆ ಗೌತಮನನ್ನು ಕುರಿತು ಜಲಾಧಿಪತಿಯಾದ ವರುಣನಿಂತೆಂದನು.

೧೮-೧೯. ಎಲೈ, ಮಹಾ ಮುನಿಯಾದ ಗೌತಮನೆ! ನಿನಗೆ ಈ ಪ್ರದೇಶದಲ್ಲಿ ಪುಣ್ಯತೀರ್ಥಸ್ವರೂಪವಾದ ಅಕ್ಷಯವಾದ ನೀರು ಉಂಟಾಗಲಿ. ಭೂಮಿಯಲ್ಲಿ ಇದು ನಿನ್ನ ಹೆಸರಿನಿಂದ ಪ್ರಸಿದ್ಧವಾಗುವುದು. ಈ ಪ್ರದೇಶದಲ್ಲಿ ಹೋಮಮಾಡಿದುದೂ, ದಾನಮಾಡಿದುದೂ, ತಪಸ್ಸು ಮಾಡಿದುದೂ, ದೇವತಾ ಪೂಜೆಯನ್ನು ಮಾಡಿದುದೂ, ಪಿತೃಗಳಿಗೆ ಶ್ರಾದ್ಧ ಮಾಡಿದುದೂ ಎಲ್ಲವೂ ಅಕ್ಷಯವಾಗುವುದು ಎಂದನು.

॥ ಸೂತ ಉವಾಚ ॥

ಇತ್ಯುಕ್ತ್ವಾಂತರ್ದಧೇ ದೇವಸ್ತುತಸ್ತೇನ ಮಹರ್ಷಿಣಾ ।
ಗೌತಮೋಽಪಿ ಸುಖಂ ಪ್ರಾಪ ಕೃತ್ವಾನ್ಯೋಪಕೃತಿಂ ಮುನಿಃ ॥ ೨೦ ॥

ಮಹತೋ ಹ್ಯಾಶ್ರಯಃ ಪುಂಸಾಂ ಮಹತ್ವಾಯೋಪಜಾಯತೇ ।
ಮಹಾಂತಸ್ತತ್ಸ್ವರೂಪಂ ಚ ಪಶ್ಯಂತಿ ನೇತರೇಽಶುಭಾಃ ॥ ೨೧ ॥

ಯಾದೃಙ್ನರಂ ಚ ಸೇವೇತ ತಾದೃಶಂ ಫಲಮಶ್ನುತೇ ।
ಮಹತಸ್ಸೇವಯೋಚ್ಚತ್ವಂ ಕ್ಷುದ್ರಸ್ಯ ಕ್ಷುದ್ರತಾ ತಥಾ ॥ ೨೨ ॥

ಸಿಂಹಸ್ಯ ಮಂದಿರೇ ಸೇವಾ ಮುಕ್ತಾಫಲಕರೀ ಮತಾ ।
ಶೃಂಗಾಲಮಂದಿರೇ ಸೇವಾ ತ್ವಸ್ಥಿಲಾಭಕರೀ ಸ್ಮೃತಾ ॥ ೨೩ ॥

ಉತ್ತಮಾನಾಂ ಸ್ವಭಾವೋಽಯಂ ಪರದುಃಖಾಸಹಿಷ್ಣುತಾ ।
ಸ್ವಯಂ ದುಃಖಂ ಚ ಸಂಪ್ರಾಪ್ತಂ ಮನ್ಯತೇಽನ್ಯಸ್ಯ ವಾರ್ಯತೇ ॥ ೨೪ ॥

---

೨೦-೨೩. ಮಹರ್ಷಿಯಾದ ಗೌತಮನು ಸ್ತೋತ್ರಮಾಡಿದಮೇಲೆ ವರುಣನು ಅಂತರ್ಧಾನನಾದನು. ಈರೀತಿ ಆ ಗೌತಮನು ಪರೋಪಕಾರವನ್ನು ಮಾಡಿ ಸುಖವನ್ನು ಹೊಂದಿದನು. ಮನುಷ್ಯರು ಮಹಾತ್ಮರನ್ನಾಶ್ರಯಿಸಿದರೆ ತಾವೂ ಮಹಾತ್ಮರಾಗುವರು. ಮಹಾತ್ಮರೇ ಮಹಾತ್ಮರ ಸ್ವರೂಪವನ್ನು ತಿಳಿಯುವರು. ಇತರ ದುಷ್ಟರು ತಿಳಿಯಲಾರರು. ಜನರು ಎಂತಹ ಮನುಷ್ಯನನ್ನು ಸೇವಿಸುವರೋ ಅಂತಹ ಫಲವನ್ನೇ ಅನುಭವಿಸುವರು. ಮಹಾತ್ಮರ ಸೇವೆಯಿಂದ ದೊಡ್ಡತನವೂ ನೀಚರ ಸೇವೆಯಿಂದ ದುಷ್ಟತನವೂ ಉಂಟಾಗುವುದು. ಸಿಂಹದ ಮನೆಯಲ್ಲಿ ಸೇವೆ ಮಾಡಿಕೊಂಡಿದ್ದರೆ ಶ್ರೇಷ್ಠವಾದ ಮುತ್ತುಗಳು ದೊರೆವುವು. ನರಿಯ ಮನೆಯಲ್ಲಿ ಸೇವೆ ಮಾಡಿಕೊಂಡಿದ್ದರೆ ಮೂಳೆಗಳು ದೊರೆವುವು.

೨೪. ಪರರಿಗೆ ದುಃಖವು ಬಂದರೆ ತಮಗೇ ದುಃಖ ಬಂದಂತೆ ಭಾವಿಸಿ ಅವರ ದುಃಖವನ್ನು ನಿವಾರಣೆ ಮಾಡುವುದು ಉತ್ತಮರ ಸ್ವಭಾವವಾಗಿರುವುದು.

ವೃಕ್ಷಾಶ್ಚ ಹಾಟಕಂ ಚೈವ ಚಂದನಂ ಚೈಕ್ಷುಕಸ್ತಥಾ ।
ಏತೇ ಭುವಿ ಪರಾರ್ಥೇ ಚ ದಕ್ಷಾ ಏವಂ ನ ಕೇಚನ ॥ ೨೫ ॥

ದಯಾಲುರಮದಸ್ಪರ್ಶ ಉಪಕಾರೀ ಜಿತೇಂದ್ರಿಯಃ ।
ಏತೈಶ್ಚ ಪುಣ್ಯಸ್ತಂಭೈಸ್ತು ಚತುರ್ಭಿರ್ಧಾರ್ಯತೇ ಮಹೀ ॥ ೨೬ ॥

ತತಶ್ಚ ಗೌತಮಸ್ತತ್ರ ಜಲಂ ಪ್ರಾಪ್ಯ ಸುದುರ್ಲಭಂ ।
ನಿತ್ಯನೈಮಿತ್ತಿಕಂ ಕರ್ಮ ಚಕಾರ ವಿಧಿವತ್ತದಾ ॥ ೨೭ ॥

ತತೋ ವ್ರೀಹೀನ್ಯವಾಂಶ್ಚೈವ ನೀವಾರಾನಪ್ಯನೇಕಧಾ ।
ವಾಪಯಾಮಾಸ ತತ್ರೈವ ಹವನಾರ್ಥಂ ಮುನೀಶ್ವರಃ ॥ ೨೮ ॥

ಧಾನ್ಯಾನಿ ವಿವಿಧಾನೀಹ ವೃಕ್ಷಾಶ್ಚ ವಿವಿಧಾಸ್ತಥಾ ।
ಪುಷ್ಪಾಣಿ ಚ ಫಲಾನ್ಯೇವ ಹ್ಯಾಸಂಸ್ತತ್ರಾಪ್ಯನೇಕಶಃ ॥ ೨೯ ॥

ತಚ್ಛ್ರುತ್ವಾ ಋಷಯಶ್ಚಾನ್ಯೇ ತತ್ರಾಯಾತಾಸ್ಸಹಸ್ರಶಃ ।
ಪಶವಃ ಪಕ್ಷಿಣಶ್ಚಾನ್ಯೇ ಜೀವಾಶ್ಚ ಬಹವೋಽಗಮನ್ ॥ ೩೦ ॥

---

೨೫. ವೃಕ್ಷಗಳು, ಚಿನ್ನ, ಶ್ರೀಗಂಧ, ಕಬ್ಬು, ಇವುಗಳು ಇತರ ಪ್ರಯೋಜನಕ್ಕಾಗಿಯೇ ಭೂಮಿಯಲ್ಲಿ ಕಷ್ಟವನ್ನು ಅನುಭವಿಸುವುವು.

೨೬. ದಯಾಶಾಲಿ, ಅಹಂಕಾರವಿಲ್ಲದವನು, ಉಪಕಾರ ಮಾಡತಕ್ಕವನು, ಇಂದ್ರಿಯಗಳನ್ನು ಜಯಿಸಿದವನು ಈ ನಾಲ್ವರೂ ಭೂಮಿಗೆ ನಾಲ್ಕು ಸ್ತಂಭಗಳಂತಿರುವರು. ಈ ನಾಲ್ವರ ಪುಣ್ಯದಿಂದ ಭೂಮಿಯು ಸ್ಥಿರವಾಗಿರುವುದು.

೨೭-೩೦. ಆಮೇಲೆ ಗೌತಮನು ಅಲ್ಲಿಯೇ ದುರ್ಲಭವಾದ ನೀರನ್ನು ಪಡೆದು, ನಿತ್ಯನೈಮಿತ್ತಿಕ ಕರ್ಮಗಳನ್ನು ವಿಧಿಗನುಸಾರವಾಗಿ ಮಾಡಿದನು. ಹೋಮಕ್ಕಾಗಿ ಭತ್ತ, ಯವೆ, ಗೋಧಿ, ಸಾವೆ ಮುಂತಾದ ಅನೇಕ ಧಾನ್ಯಗಳನ್ನು ಬಿತ್ತಿದನು. ಬಗೆ ಬಗೆಯ ಧಾನ್ಯಗಳೂ, ಮರಗಳೂ, ಹೂಗಳೂ, ಹಣ್ಣುಗಳೂ, ಅಲ್ಲಿ ಬೆಳೆದವು. ಇದನ್ನು ಕೇಳಿ, ಇತರ ಸಾವಿರಾರು ಜನ ಋಷಿಗಳು ಗೌತಮನ ಆಶ್ರಮಕ್ಕೆ ಬಂದರು. ಪಶು, ಪಕ್ಷಿಗಳೇ ಮುಂತಾದ ಅನೇಕ ಪ್ರಾಣಿಗಳೂ ಅಲ್ಲಿಗೆ ಬಂದುವು.

ತದ್ವನಂ ಸುಂದರಂ ಹ್ಯಾಸೀತ್ಪೃಥಿವ್ಯಾ ಮಂಡಲೇ ಪರಂ ।
ತದಕ್ಷಯಂಕಂಭಾಯೋಗಾದನಾವೃಷ್ಟಿರ್ನ ದುಃಖದಾ ॥ ೩೧ ॥

ಋಷಯೋಽಪಿ ವನೇ ತತ್ರ ಶುಭಕರ್ಮಪರಾಯಣಾಃ ।
ವಾಸಂ ಚಕ್ರುರನೇಕೇ ಚ ಶಿಷ್ಯಭಾರ್ಯಾಸುತಾನ್ವಿತಾಃ ॥ ೩೨ ॥

ಧಾನ್ಯಾನಿ ವಾಪಯಾಮಾಸುಃ ಕಾಲಕ್ರಮಣಹೇತವೇ ।
ಆನಂದಸ್ತದ್ವನೇ ಹ್ಯಾಸೀತ್ಪ್ರಭಾವಾದ್ಗೌತಮಸ್ಯ ಚ ॥ ೩೩ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ತ್ರ್ಯಂಬಕೇಶ್ವರಮಾಹಾತ್ಮ್ಯೇ ಗೌತಮಪ್ರಭಾವವರ್ಣನಂ ನಾಮ
ಚತುರ್ವಿಂಶೋಽಧ್ಯಾಯಃ

---

೩೧. ಆ ತಪೋವನವು ಭೂಮಂಡಲದಲ್ಲಿ ಅತ್ಯಂತ ಸುಂದರವಾಗಿ ಪ್ರಕಾಶಿಸುತ್ತಿದ್ದಿತು. ಅಕ್ಷಯವಾದ ನೀರಿನ ಸಂಬಂಧದಿಂದ ಅನಾವೃಷ್ಟಿಯು ಅಲ್ಲಿ ದುಃಖವನ್ನು ಉಂಟು ಮಾಡಲಿಲ್ಲ.

೩೨. ಅನೇಕ ಋಷಿಗಳು ಹೆಂಡತಿ, ಮಕ್ಕಳು ಶಿಷ್ಯರೊಡನೆ ಶುಭಕರ್ಮಗಳನ್ನು ಮಾಡುತ್ತ ಆ ಗೌತಮಮುನಿಯ ವನದಲ್ಲಿಯೇ ವಾಸವಾಗಿದ್ದರು.

೩೩. ಋಷಿಗಳು ಕಾಲಕ್ಷೇಪ ಮಾಡುವುದಕ್ಕಾಗಿ ಧಾನ್ಯಗಳನ್ನು ಬಿತ್ತಿ ಬೆಳೆಯುತ್ತಿದ್ದರು. ಗೌತಮನ ಮಹಿಮೆಯಿಂದ ಆ ವನದಲ್ಲಿ ಎಲ್ಲೆಲ್ಲಿಯೂ ಆನಂದವು ನೆಲೆಸಿದ್ದಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ತ್ರ್ಯಂಬಕೇಶ್ವರ ಮಹಾತ್ಮೆಯಲ್ಲಿ ಗೌತಮರ ಮಹಿಮೆಯನ್ನು ವರ್ಣಿಸಿರುವ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಪಂಚವಿಂಶೋಽಧ್ಯಾಯಃ



॥ ಸೂತ ಉವಾಚ ॥

ಕದಾಚಿದ್ಗೌತಮೋಽಸ್ಯೈವ ಜಲಾರ್ಥಂ ಪ್ರೇಷಿತಾ ನಿಜಾಃ ।
ಶಿಷ್ಯಾಸ್ತತ್ರ ಗತಾ ಭಕ್ತ್ಯಾ ಕಮಂಡಲುಕರಾ ದ್ವಿಜಾಃ ॥ ೧ ॥

ಶಿಷ್ಯಾ ಜ್ಞಲಸಮೀಪೇ ತು ಗತಾಸ್ತ್ವೃಷ್ಯಾಶ್ಚ ನ್ಯಷೇಧಯನ್ ।
ಜಲಾರ್ಥಮಾಗತಾಸ್ತತ್ರ ಚರ್ಷಿಪತ್ನ್ಯೋಽಪ್ಯನೇಕಶಃ ॥ ೨ ॥

---

## ಇಪ್ಪತ್ತೈದನೆಯ ಅಧ್ಯಾಯವು.

೧-೨. ಸೂತನು ಹೇಳಿದನು.—ಒಂದಾನೊಂದು ದಿನ ಗೌತಮನು ತನ್ನ ಶಿಷ್ಯರನ್ನು ನೀರು ತರುವುದಕ್ಕೆ ಕಳುಹಿಸಿದನು. ಆ ಶಿಷ್ಯರು ಭಕ್ತಿಯಿಂದ ನೀರನ್ನು ತರುವುದಕ್ಕಾಗಿ ಕಮಂಡಲವನ್ನು ಹಿಡಿದುಕೊಂಡು ಹೋದರು. ಅಲ್ಲಿಗೆ ನೀರಿಗಾಗಿ ಬಂದ ಅನೇಕ ಋಷಿಪತ್ನಿಯರು ನೀರಿನ ಸಮೀಪಕ್ಕೆ ಬರುತ್ತಿದ್ದ ಗೌತಮನ ಶಿಷ್ಯರನ್ನು ತಡೆದರು.

ಋಷಿಪತ್ನ್ಯೋ ವಯಂ ಪೂರ್ವಂ ಗ್ರಹೀಷ್ಯಾಮೋ ವಿದೂರತಃ ।
ಪಶ್ಚಾಚ್ಚೈವ ಜಲಂ ಗ್ರಾಹ್ಯಮಿತ್ಯೇವಂ ಪರ್ಯಭರ್ತ್ಸಯನ್ ॥ ೩ ॥

ಪರಾವೃತ್ಯ ತದಾ ತೈಶ್ಚ ಋಷಿಪತ್ನ್ಯೈ ನಿವೇದಿತಂ ।
ಸಾ ಚಾಪಿ ತಾನ್ಸಮಾದಾಯ ಸಮಾಶ್ವಾಸ್ಯ ಚ ತೈಃ ಸ್ವಯಂ ॥ ೪ ॥

ಜಲಂ ನೀತ್ವಾ ದದೌ ತಸ್ಮೈ ಗೌತಮಾಯ ತಪಸ್ವಿನೀ ।
ನಿತ್ಯಂ ನಿರ್ವಾಹಯಾಮಾಸ ಜಲೇನ ಋಷಿಸತ್ತಮಃ ॥ ೫ ॥

ತಾಶ್ಚೈವಮೃಷಿಪತ್ನ್ಯಸ್ತು ಕ್ರುದ್ಧಾಸ್ತಾಂ ಪರ್ಯಭರ್ತ್ಸಯನ್ ।
ಪರಾವೃತ್ಯ ಗತಾಸ್ಸರ್ವಾಸ್ತುಟಜಾನ್ಕುಟಿಲಾಶಯಾಃ ॥ ೬ ॥

ಸ್ವಾಮ್ಯಗ್ರೇ ವಿಪರೀತಂ ಚ ತದ್ವೃತ್ತಂ ನಿಖಿಲಂ ತತಃ ।
ದುಷ್ಟಾಶಯಾಭಿಃ ಸ್ತ್ರೀಭಿಶ್ಚ ತಾಭಿರ್ವೈ ವಿನಿವೇದಿತಂ ॥ ೭ ॥

ಅಥ ತಾಸಾಂ ವಚಃ ಶ್ರುತ್ವಾ ಭಾವಿಕರ್ಮವಶಾತ್ತದಾ ।
ಗೌತಮಾಯ ಚ ಸಂಕ್ರುದ್ಧಾಶ್ಚಾಸಂಸ್ತೇ ಪರಮರ್ಷಯಃ ॥ ೮ ॥

---

೩-೫. ನಾವು ಋಷಿಪತ್ನಿಯರು. ಮೊದಲು ನಾವು ನೀರನ್ನು ತೆಗೆದುಕೊಳ್ಳುತ್ತೇವೆ. ನೀವು ಆಮೇಲೆ ತೆಗೆದುಕೊಳ್ಳಿರೆಂದು ನಿಷ್ಠುರವಾದ ಮಾತನಾಡಿದರು. ಆ ಶಿಷ್ಯರು ಹಿಂದಿರುಗಿ ಹೋಗಿ ಇದನ್ನು ಗೌತಮರ ಪತ್ನಿಗೆ ಹೇಳಿದರು. ಆಕೆಯು ಶಿಷ್ಯರೊಡನೆ ಬಂದು ಅವರಿಗೆ ಸಮಾಧಾನವಾದ ಮಾತನ್ನು ಹೇಳಿ ನೀರನ್ನು ತೆಗೆದುಕೊಂಡು ಹೋಗಿ ತಪಸ್ವಿಯಾದ ಗೌತಮುನಿಗೆ ಕೊಟ್ಟಳು. ಆ ನೀರಿನಿಂದ ಗೌತಮನು ನಿತ್ಯಕರ್ಮವನ್ನು ಮಾಡಿದನು.

೬-೧೦. ಮಿಕ್ಕ ಋಷಿಪತ್ನಿಯರಾದರೋ ಕೋಪದಿಂದ ಗೌತಮಮುನಿಯ ಪತ್ನಿಯನ್ನು ನಿಷ್ಠುರವಾಗಿ ನಿಂದಿಸಿದರು. ಆಮೇಲೆ ವಕ್ರಬುದ್ಧಿಯುಳ್ಳ ಆ ದುಷ್ಟಸ್ತ್ರೀಯರೆಲ್ಲರೂ ತಂತಮ್ಮ ಗಂಡಂದಿರೊಡನೆ ಜಲಾಶಯದಲ್ಲಿ ನಡೆದ ವೃತ್ತಾಂತವನ್ನು ಹೇಳಿದರು. ಆ ಋಷಿಗಳೆಲ್ಲರೂ ತಮ್ಮ ಹೆಂಡಿರ ಮಾತನ್ನು ಕೇಳಿ ಗೌತಮನಮೇಲೆ ಕೋಪಮಾಡಿಕೊಂಡರು. ದುರ್ಬುದ್ಧಿಯುಳ್ಳವರಾಗಿ ಗೌತಮನ ತಪಸ್ಸಿಗೆ ವಿಘ್ನ ಮಾಡಬೇಕೆಂದು, ಕೋಪದಿಂದ ಅನೇಕ ಬಗೆಯ ಪೂಜಾ ಸಾಮಗ್ರಿಗಳಿಂದ ಗಣೇಶ

ವಿಘ್ನಾರ್ಥಂ ಗೌತಮಸ್ಯೈವ ನಾನಾಪೂಜೋಪಹಾರಕೈಃ ।
ಗಣೇಶಂ ಪೂಜಯಾಮಾಸುಸ್ಸಂಕ್ರುದ್ಧಾಸ್ತಂ ಕುಬುದ್ಧಯಃ ॥ ೯ ॥

ಆವಿರ್ಬಭೂವ ಚ ತದಾ ಪ್ರಸನ್ನೋ ಹಿ ಗಣೇಶ್ವರಃ ।
ಉವಾಚ ವಚನಂ ತತ್ರ ಭಕ್ತಾಧೀನಃ ಫಲಪ್ರದಃ ॥ ೧೦ ॥

॥ ಗಣೇಶ ಉವಾಚ ॥

ಪ್ರಸನ್ನೋಽಸ್ಮಿ ವರಂ ಬ್ರೂತ ಯೂಯಂ ಕಿಂ ಕರವಾಣ್ಯಹಂ ।
ತದೀಯಂ ತದ್ವಚಃ ಶ್ರುತ್ವಾ ಋಷಯಸ್ತೇಽಬ್ರುವಂಸ್ತದಾ ॥ ೧೧ ॥

॥ ಋಷಯ ಊಚುಃ ॥

ತ್ವಯಾ ಯದಿ ವರೋ ದೇಯೋ ಗೌತಮಸ್ಸ್ವಾಶ್ರಮಾದ್ಬಹಿಃ ।
ನಿಷ್ಕಾಶ್ಯ ನೋ ಋಷಿಭಿಃ ಪರಿಭರ್ತ್ಸ್ಯ ತಥಾ ಕುರು ॥ ೧೨ ॥

॥ ಸೂತ ಉವಾಚ ॥

ಸ ಏವಂ ಪ್ರಾರ್ಥಿತಸ್ತೈಸ್ತು ವಿಹಸ್ಯ ವಚನಂ ಪುನಃ ।
ಪ್ರೋವಾಚೇಭಮುಖಃ ಪ್ರೀತ್ಯಾ ಬೋಧಯಂಸ್ತಾನ್ಸತಾಂ ಗತಿಃ ॥ ೧೩ ॥

---

ನನ್ನು ಪೂಜಿಸಿದರು. ಗಣಪತಿಯು ಪ್ರಸನ್ನನಾಗಿ ಆ ಋಷಿಗಳಿಗೆ ಪ್ರತ್ಯಕ್ಷನಾಗಿ ಬಂದು ಭಕ್ತಾಧೀನನಾದುದರಿಂದ ವರವನ್ನು ಕೊಡುವುದಕ್ಕಾಗಿ ಋಷಿಗಳನ್ನು ಕುರಿತು

೧೧. ಎಲೈ ಋಷಿಗಳಿರಾ, ನಾನು ಪ್ರಸನ್ನನಾಗಿರುವೆನು. ನನ್ನಿಂದ ನಿಮಗಾಗಬೇಕಾದ ಕಾರ್ಯವೇನು? ವರವನ್ನು ಕೇಳಿರಿ ಎಂದನು. ಈ ಮಾತನ್ನು ಕೇಳಿ ಋಷಿಗಳು,

೧೨-೧೩. ಎಲೈ ಗಣಪತಿಯೇ, ನೀನು ವರವನ್ನು ಕೊಡುವುದಾದರೆ ಗೌತಮನನ್ನು ಈ ಆಶ್ರಮದಿಂದ ಹೊರಕ್ಕೆ ಓಡಿಸು ಎಂದರು. ಈ ಮಾತನ್ನು ಕೇಳಿ ಸಜ್ಜನರಲ್ಲಿ ಪ್ರೀತಿಯುಳ್ಳ ಗಣಪತಿಯು ನಕ್ಕು ಅವರಿಗೆ ತಿಳುವಳಿಕೆಯನ್ನುಂಟುಮಾಡಲು ಇಂತೆಂದನು.

॥ ಗಣೇಶ ಉವಾಚ ॥

ಶ್ರೂಯತಾಮೃಷಯಸ್ಸರ್ವೇ ಯುಕ್ತಂ ನ ಕ್ರಿಯತೇಽಧುನಾ ।
ಅಪರಾಧಂ ವಿನಾ ತಸ್ಮೈ ಕ್ರುಧ್ಯತಾಂ ಹಾನಿರೇವ ಚ ॥ ೧೪ ॥

ಉಪಸ್ಕೃತಂ ಪುರಾ ಯೈಸ್ತು ತೇಭ್ಯೋ ದುಃಖಂ ಹಿತಂ ನ ಹಿ ।
ಯದಾ ಚ ದೀಯತೇ ದುಃಖಂ ತದಾ ನಾಶೋ ಭವೇದಿಹ ॥ ೧೫ ॥

ಈದೃಶಂ ಚ ತಪಃ ಕೃತ್ವಾ ಸಾಧ್ಯತೇ ಫಲಮುತ್ತಮಂ ।
ಶುಭಂ ಫಲಂ ಸ್ವಯಂ ಹಿತ್ವಾ ಸಾಧ್ಯತೇ ನಾಹಿತಂ ಪುನಃ ॥ ೧೬ ॥

॥ ಸೂತ ಉವಾಚ ॥

ಇತ್ಯೇವಂ ವಚನಂ ಶ್ರುತ್ವಾ ತಸ್ಯ ತೇ ಮುನಿಸತ್ತಮಾಃ ।
ಬುದ್ಧಿಮೋಹಂ ತದಾ ಪ್ರಾಪ್ತಾ ಇದಮೇವ ವಚೋಽಬ್ರುವನ್ ॥ ೧೭ ॥

॥ ಋಷಯ ಊಚುಃ ॥

ಕರ್ತವ್ಯಂ ಹಿ ತ್ವಯಾ ಸ್ವಾಮಿನ್ನಿದಮೇವ ನ ಚಾನ್ಯಥಾ ।
ಇತ್ಯುಕ್ತಸ್ತು ತದಾ ದೇವೋ ಗಣೇಶೋ ವಾಕ್ಯಮಬ್ರವೀತ್ ॥ ೧೮ ॥

---

೧೪-೧೫. ಎಲೈ ಋಷಿಗಳೇ ಕೇಳಿರಿ. ನೀವು ಈಗ ಯೋಗ್ಯವಾದ ಕೆಲಸವನ್ನು ಮಾಡುತ್ತಿಲ್ಲ. ತಪ್ಪಿಲ್ಲದೆ ಗೌತಮನಮೇಲೆ ಕೋಪಿಸಿಕೊಂಡ ನಿಮಗೆ ಕೇಡುಂಟಾಗುವುದು. ಹಿಂದೆ ಉಪಕಾರವನ್ನು ಮಾಡಿದವರಿಗೆ ದುಃಖವನ್ನುಂಟುಮಾಡುವುದು ಹಿತಕರವಾದುದಲ್ಲ. ಅಂಥವರಿಗೆ ಕೇಡನ್ನು ಬಯಸಿದರೆ ನಿಮಗೇ ನಾಶವುಂಟಾಗುವುದು.

೧೬-೧೭. ನೀವು ಇಂತಹ ತಪಸ್ಸನ್ನು ಮಾಡಿ ಶುಭಕರವಾದ ಒಳ್ಳೆಯ ಫಲಗಳನ್ನು ಸಾಧಿಸುವುದು ಬಿಟ್ಟು, ದುಷ್ಟ ಫಲವನ್ನು ಸಾಧಿಸಬಾರದು ಎನ್ನಲು ಗಣಪತಿಯ ಮಾತನ್ನು ಕೇಳಿ ಆ ಋಷಿಗಳು ಅಜ್ಞಾನದಿಂದ ಭ್ರಾಂತರಾಗಿ,

೧೮. ಎಲೈ, ಸ್ವಾಮಿಯೇ! ನೀನು ವರವನ್ನು ಕೊಡುವುದಾದರೆ ಇದೇ ವರವನ್ನೇ ಕೊಡಬೇಕು. ನಮಗೆ ಬೇರೆ ವರವು ಬೇಕಾಗಿಲ್ಲ ಎಂದು ಹಠಹಿಡಿದರು. ಇದನ್ನು ನೋಡಿ ಗಣಪತಿಯು ಮತ್ತಿಂತೆಂದನು.

॥ ಗಣೇಶ ಉವಾಚ ॥

ಅಸಾಧುಸ್ಸಾಧುತಾಂ ಚೈವ ಸಾಧುಶ್ಚಾಸಾಧುತಾಂ ತಥಾ ।
ಕದಾಚಿದಪಿ ನಾಪ್ನೋತಿ ಬ್ರಹ್ಮೋಕ್ತಮಿತಿ ನಿಶ್ಚಿತಂ ॥ ೧೯ ॥

ಯದಾ ಚ ಭವತಾಂ ದುಃಖಂ ಜಾತಂ ಚಾನಶನಾತ್ಪುರಾ ।
ತದಾ ಸುಖಂ ಪ್ರದತ್ತಂ ವೈ ಗೌತಮೇನ ಮಹರ್ಷಿಣಾ ॥ ೨೦ ॥

ಇದಾನೀಂ ವೈ ಭವದ್ಭಿಶ್ಚ ತಸ್ಮೈ ದುಃಖಂ ಪ್ರದೀಯತೇ ।
ನೈತದ್ಯುಕ್ತತಮಂ ಲೋಕೇ ಸರ್ವಥಾ ಸುವಿಚಾರ್ಯತಾಂ ॥ ೨೧ ॥

ಸ್ತ್ರೀಬಲಾನ್ಮೋಹಿತಾ ಯೂಯಂ ನ ಮೇ ವಾಕ್ಯಂ ಕರಿಷ್ಯಥ ।
ಏತದ್ಧಿತತಮಂ ತಸ್ಯ ಭವಿಷ್ಯತಿ ನ ಸಂಶಯಃ ॥ ೨೨ ॥

ಪುನಶ್ಚಾಯಮೃಷಿಶ್ರೇಷ್ಠೋ ದಾಸ್ಯತೇ ವಸ್ಸುಖಂ ಧ್ರುವಂ ।
ಕಾರಣಂ ನ ಚ ಯುಕ್ತಂ ಸ್ಯಾದ್ವರಮನ್ಯಂ ವೃಣೀತ ವೈ ॥ ೨೩ ॥

---

೧೯–೨೩. ಅಯೋಗ್ಯನು ಯೋಗ್ಯನಾಗಿಯೂ, ಯೋಗ್ಯನು ಅಯೋಗ್ಯನಾಗಿಯೂ ಎಂದಿಗೂ ಆಗಲಾರನು. ಇದು ಬ್ರಹ್ಮನ ನಿಯಮವು. ಹಿಂದೆ ನಿಮಗೆ ಆಹಾರಕ್ಕಿಲ್ಲದೆ ದುಃಖಪಡುತ್ತಿದ್ದಾಗ ಮಹರ್ಷಿಯಾದ ಗೌತಮನು ಸುಖವನ್ನುಂಟು ಮಾಡಲಿಲ್ಲವೆ? ಈಗ ನೀವು ಅವನಿಗೆ ದುಃಖವನ್ನುಂಟುಮಾಡುವಿರಿ. ಇದು ಲೋಕ ವ್ಯವಹಾರದಲ್ಲಿ ಯುಕ್ತವಾದ ಕೆಲಸವಲ್ಲ. ಚೆನ್ನಾಗಿ ವಿಚಾರಮಾಡಿರಿ. ಸ್ತ್ರೀಯರ ಅಧೀನಕ್ಕೆ ಮೋಹಿತರಾಗಿ ನೀವು ನನ್ನ ಮಾತನ್ನು ನಡೆಸುವುದಿಲ್ಲ. ಇದು ಕೊನೆಗೆ ಗೌತಮನಿಗೇ ಅತ್ಯಂತ ಹಿತವಾದುದಾಗುವುದು. ಈ ವಿಷಯದಲ್ಲಿ ಸಂದೇಹವಿರುವುದಿಲ್ಲ. ಪುನಃ ಶ್ರೇಷ್ಠನಾದ ಆ ಗೌತಮಮುನಿಯು ನಿಮಗೆ ಸುಖವನ್ನುಂಟು ಮಾಡುವನು. ಇದು ದೃಢವಾದ ಮಾತು. ಮೋಸಮಾಡುವುದು ಯೋಗ್ಯವಾದುದಲ್ಲ. ಆದುದರಿಂದ ನೀವು ಬೇರೆ ವರವನ್ನು ಕೇಳಿಕೊಳ್ಳಿರಿ.

॥ ಸೂತ ಉವಾಚ ॥

ಇತ್ಯೇವಂ ವಚನಂ ತೇನ ಗಣೇಶೇನ ಮಹಾತ್ಮನಾ ।
ಯದ್ಯಪ್ಯುಕ್ತಮೃಷಿಭ್ಯಶ್ಚ ತದಪ್ಯೇತೇ ನ ಮೇನಿರೇ ॥ ೨೪ ॥

ಭಕ್ತಾಧೀನತಯಾ ಸೋಽಥ ಶಿವಪುತ್ರೋಽಬ್ರವೀತ್ತದಾ ।
ಉದಾಸೀನೇನ ಮನಸಾ ತಾನೃಷೀನ್ದುಷ್ಟಶೇಮುಷೀನ್ ॥ ೨೫ ॥

॥ ಗಣೇಶ ಉವಾಚ ॥

ಭವದ್ಭಿಃ ಪ್ರಾರ್ಥ್ಯತೇ ಯಚ್ಚ ಕರಿಷ್ಯೇಽಹಂ ತಥಾ ಖಲು ।
ಪಶ್ಚಾದ್ಭಾವಿ ಭವೇದೇವ ಇತ್ಯುಕ್ತ್ವಾಂತರ್ದಧೇ ಪುನಃ ॥ ೨೬ ॥

ಗೌತಮಸ್ಸ ನ ಜಾನಾತಿ ಮುನೀನಾಂ ವೈ ದುರಾಶಯಂ ।
ಆನಂದಮನಸಾ ನಿತ್ಯಂ ಪತ್ನ್ಯಾ ಕರ್ಮ ಚಕಾರ ತತ್ ॥ ೨೭ ॥

ತದಂತರೇ ಚ ಯಜ್ಜಾತಂ ಚರಿತ್ರಂ ವರಯೋಗತಃ ।
ತದ್ದುಷ್ಟರ್ಷಿಪ್ರಭಾವಾತ್ತು ಶ್ರೂಯತಾಂ ತನ್ಮುನೀಶ್ವರಾಃ ॥ ೨೮ ॥

---

೨೪–೨೫. ಹೀಗೆಂದು ಮಹಾತ್ಮನಾದ ಗಣೇಶನು ಋಷಿಗಳಿಗೆ ಹೇಳಿದರೂ ಅದನ್ನು ಅವರು ಒಪ್ಪಲಿಲ್ಲ. ಭಕ್ತರ ಅಧೀನನಾದುದರಿಂದ ಶಿವಪುತ್ರನಾದ ಗಣೇಶನು ಉದಾಸೀನಭಾವದಿಂದ ದುಷ್ಟಬುದ್ಧಿಯುಳ್ಳ ಆ ಋಷಿಗಳಿಗೆ ಹೇಳಿದನು.

೨೬–೨೭. ನೀವು ಏನು ವರವನ್ನು ಕೇಳಿಕೊಳ್ಳುವಿರೋ ನಾನು ಹಾಗೆಯೇ ಮಾಡುವೆನು. ಆಮೇಲೆ ಮುಂದೆ ಆಗತಕ್ಕದು ಆಗಿಯೇ ಆಗುವುದು. ಹೀಗೆಂದು ಹೇಳಿ ಗಣೇಶನು ಅಂತರ್ಧಾನನಾದನು. ಗೌತಮನು ಮುನಿಗಳ ದುರಭಿಪ್ರಾಯ ವನ್ನು ತಿಳಿದಿರಲಿಲ್ಲ. ಅವನು ತನ್ನ ಪತ್ನಿಯೊಡನೆ ಸಂತೋಷಚಿತ್ತದಿಂದ ನಿತ್ಯ ಕರ್ಮವನ್ನು ಮಾಡುತ್ತಿದ್ದನು.

೨೮–೩೨. ಎಲೈ ಋಷಿಶ್ರೇಷ್ಠರೇ, ಗಣೇಶನು ಕೊಟ್ಟ ವರದಿಂದ ಮುಂದೇನು ನಡೆಯಿತೆಂಬುದನ್ನು ಹೇಳುವೆನು ಕೇಳಿ. ಗೌತಮನ ಹೊಲಗದ್ದೆಗಳಲ್ಲಿ ಗೋಧಿ ಮತ್ತು ಬತ್ತದ ಪೈರುಗಳು ಬೆಳೆದಿದ್ದುವು. ಗಣೇಶನು ದುರ್ಬಲವಾದ ಹಸುವಿನ ಆಕಾರದಿಂದ ಅಲ್ಲಿಗೆ ಹೋದನು. ಆ ಹಸುವು ನಡುಗುತ್ತ ಅಲ್ಲಿಗೆ ಹೋಗಿ ಗೋಧಿ

ಗೌತಮಸ್ಯ ಚ ಕೇದಾರೇ ತತ್ರಾಸನ್ನಿ ್ರೀಹಯೋ ಯವಾಃ ।
ಗಣೇಶಸ್ತತ್ರ ಗೌರ್ಭೂತ್ವಾ ಜಗಾಮ ಕಿಲ ದುರ್ಬಲಾ ॥ ೨೯ ॥

ಕಂಪಮಾನಾ ಚ ಸಾ ಗತ್ವಾ ತತ್ರ ತದ್ವರಯೋಗತಃ ।
ವ್ರೀಹೀನ್ಸಂಭಕ್ಷಯಾಮಾಸ ಯವಾಂಶ್ಚ ಮುನಿಸತ್ತಮಾಃ ॥ ೩೦ ॥

ಏತಸ್ಮಿನ್ನಂತರೇ ದೈವಾದ್ಗೌತಮಸ್ತತ್ರ ಚಾಗತಃ ।
ಸ ದಯಾಲುಸ್ತೃಣಸ್ತಂಬೈರ್ವಾರಯಾಮಾಸ ತಾಂ ತದಾ ॥ ೩೧ ॥

ತೃಣಸ್ತಂಬೇನ ಸಾ ಸ್ಪೃಷ್ಟ್ವಾ ಪಪಾತ ಪೃಥಿವೀತಲೇ ।
ಮೃತಾ ಚ ತತ್ಕ್ಷಣಾದೇವ ತದೃಷೇಃ ಪಶ್ಯತಸ್ತದಾ ॥ ೩೨ ॥

ಋಷಯಶ್ಛನ್ನರೂಪಾಸ್ತೇ ಋಷಿಪತ್ನ್ಯಸ್ತಥಾಶುಭಾಃ ।
ಊಚುಸ್ತತ್ರ ತದಾ ಸರ್ವೇ ಕಿಂ ಕೃತಂ ಗೌತಮೇನ ಚ ॥ ೩೩ ॥

ಗೌತಮೋಽಪಿ ತಥಾಹಲ್ಯಾಮಾಹೂಯಾಸೀತ್ಸುವಿಸ್ಮಿತಃ ।
ಉವಾಚ ದುಃಖಿತೋ ವಿಪ್ರಾ ದೂಯಮಾನೇನ ಚೇತಸಾ ॥ ೩೪ ॥

---

ಮತ್ತು ಬತ್ತದ ಪೈರನ್ನು ತಿನ್ನುತ್ತಿತ್ತು. ಈ ಸಮಯಕ್ಕೆ ಸರಿಯಾಗಿ ದೈವಯೋಗದಿಂದ ಗೌತಮನು ಅಲ್ಲಿಗೆ ಬಂದನು. ದಯಾಶಾಲಿಯಾದ ಅವನು ಒಂದು ಹುಲ್ಲುಕಡ್ಡಿಯಿಂದ ಆ ಹಸುವನ್ನು ಮೆಲ್ಲಗೆ ಹೊಡೆದನು. ಹುಲ್ಲುಕಡ್ಡಿಯು ತಗುಲುತ್ತಲು ಹಸುವು ಭೂಮಿಯಮೇಲೆ ಬಿದ್ದು ಸತ್ತು ಹೋಯಿತು. ಋಷಿಯು ಇದನ್ನು ನೋಡಿದನು.

೩೩–೩೪. ಇತ್ತ ಋಷಿಗಳೂ, ಋಷಿಪತ್ನಿಯರೂ ಮರೆಯಲ್ಲಿದ್ದು ಗೌತಮನು ಎಂತಹ ಕೆಲಸವನ್ನು ಮಾಡಿದನು ಎಂದು ತಂತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಗೌತಮನು ಪತ್ನಿಯಾದ ಅಹಲ್ಯೆಯನ್ನು ಕರೆದು ಹಸುವು ಸತ್ತುದಕ್ಕೆ ಅತ್ಯಂತ ಆಶ್ಚರ್ಯಪಡುತ್ತಿದ್ದನು ಮತ್ತು ಅತ್ಯಂತ ದುಃಖದಿಂದ

॥ ಗೌತಮ ಉವಾಚ ॥

ಕಿಂ ಜಾತಂ ಚ ಕಥಂ ದೇವಿ ಕುಪಿತಃ ಪರಮೇಶ್ವರಃ ।
ಕಿಂ ಕರ್ತವ್ಯಂ ಕ್ವ ಗಂತವ್ಯಂ ಹತ್ಯಾ ಚ ಸಮುಪಸ್ಥಿತಾ ॥ ೩೫ ॥

॥ ಸೂತ ಉವಾಚ ॥

ಏತಸ್ಮಿನ್ನಂತರೇ ವಿಪ್ರಾ ಗೌತಮಂ ಪರ್ಯಭರ್ತ್ಸಯನ್ ।
ವಿಪ್ರಪತ್ನ್ಯಸ್ತಥಾऽಹಲ್ಯಾಂ ದುರ್ವಚೋಭಿರ್ವ್ಯಥಾಂ ದದುಃ ॥ ೩೬ ॥

ದುರ್ಬುದ್ಧಯಶ್ಚ ತಚ್ಛಿಷ್ಯಾಃ ಸುತಾಸ್ತೇಷಾಂ ತಥೈವ ಚ ।
ಗೌತಮಂ ಪರಿಭರ್ತ್ಸ್ಯೈವ ಪ್ರತ್ಯೂಚುರ್ದಿಗ್ವಚೋ ಮುಹುಃ ॥ ೩೭ ॥

॥ ಋಷಯ ಊಚುಃ ॥

ಮುಖಂ ನ ದರ್ಶನೀಯಂ ತೇ ಗಮ್ಯತಾಂ ಗಮ್ಯತಾಮಿತಿ ।
ದೃಷ್ಟ್ವಾ ಗೋಘ್ನಮುಖಂ ಸದ್ಯಸ್ಸಚೈಲಂ ಸ್ನಾನಮಾಚರೇತ್ ॥ ೩೮ ॥

ಯಾವದಾಶ್ರಮಮಧ್ಯೇ ತ್ವಂ ತಾವದೇವ ಹವಿರ್ಭುಜಃ ।
ಪಿತರಶ್ಚ ನ ಗೃಹ್ಣಂತಿ ಹ್ಯಸ್ಮದ್ದತ್ತಂ ಹಿ ಕಿಂಚನ ॥ ೩೯ ॥

---

೩೫. ಗೌತಮನು ಹೇಳಿದನು.—ಎಲೌ, ದೇವಿಯೇ! ಇದೇನು, ಏಕೆ ಹೀಗಾಯಿತು? ಪರಮೇಶ್ವರನಿಗೆ ನನ್ನಮೇಲೆ ಕೋಪವು ಬಂದಿರುವುದೆ? ಗೋಹತ್ಯೆ ಪ್ರಾಪ್ತವಾಯಿತಲ್ಲಾ? ಈಗ ಮಾಡಬೇಕಾದುದೇನು? ಎಲ್ಲಿಗೆ ಹೋಗಲಿ! ಎಂದು ಪ್ರಲಾಪಿಸಿದನು.

೩೬–೪೦. ಹೀಗೆಂದು ಗೌತಮನು ಚಿಂತಿಸುತ್ತಿರುವಲ್ಲಿ ಆ ಋಷಿಗಳೆಲ್ಲರೂ ಗೌತಮನನ್ನು ವಿಶೇಷವಾಗಿ ದೂಷಿಸಿದರು. ಋಷಿಪತ್ನಿಯರು ಅಹಲ್ಯೆಯನ್ನು ಕೆಟ್ಟ ಮಾತುಗಳಿಂದ ನಿಂದಿಸಿದರು. ದುರ್ಬುದ್ಧಿಗಳಾದ ಅವರ ಶಿಷ್ಯರೂ, ಅವರ ಮಕ್ಕಳೂ ಗೌತಮನನ್ನು ಕುರಿತು ಕೆಟ್ಟ ಮಾತುಗಳನ್ನಾಡಿದರು. ಎಲೈ, ಗೌತಮನೆ, ನಿನ್ನ ಮುಖವನ್ನು ನೋಡಬಾರದು. ಹೊರಟುಹೋಗು. ಗೋಹತ್ಯ ಮಾಡಿದವನ ಮುಖವನ್ನು ನೋಡಿದರೆ ಆ ಕ್ಷಣದಲ್ಲಿ ಉಟ್ಟ ಬಟ್ಟೆಗಳೊಡನೆ ಸ್ನಾನಮಾಡಬೇಕು. ನೀನು ಈ ಆಶ್ರಮದಲ್ಲಿರುವವರೆಗೂ, ದೇವತೆಗಳೂ, ಪಿತೃಗಳೂ ನಾವು ಕೊಟ್ಟ ಹವಿರ್ಭಾಗಗಳನ್ನು ತೆಗೆದುಕೊಳ್ಳುವುದಿಲ್ಲ. ಆದುದರಿಂದ, ನೀನು ನಿನ್ನ ಪರಿವಾರ

ತಸ್ಮಾದ್ಗಚ್ಛಾನ್ಯತಸ್ತ್ವಂ ಚ ಪರಿವಾರಸಮನ್ವಿತಃ ।
ವಿಲಂಬಂ ಕುರು ನೈವ ತ್ವಂ ಧೇನುಹನ್ಪಾಪಕಾರಕ ॥ ೪೦ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ತೇ ಚ ತಂ ಸರ್ವೇ ಪಾಷಾಣೈಸ್ಸಮತಾಡಯನ್ ।
ವ್ಯಥಾಂ ದದುರತೀವಾಸ್ಮೈ ತ್ವಹಲ್ಯಾಂ ಚ ದುರುಕ್ತಿಭಿಃ ॥ ೪೧ ॥

ತಾಡಿತೋ ಭರ್ತ್ಸಿತೋ ದುಷ್ಟೈರ್ಗೌತಮೋ ಗಿರಮಬ್ರವೀತ್ ।
ಇತೋ ಗಚ್ಛಾಮಿ ಮುನಯೋ ಹ್ಯನ್ಯತ್ರ ನಿವಸಾಮ್ಯಹಂ ॥ ೪೨ ॥

ಇತ್ಯುಕ್ತ್ವಾ ಗೌತಮಸ್ತಸ್ಮಾತ್ಸ್ಥಾನಾಚ್ಚ ನಿರ್ಗತಸ್ತದಾ ।
ಗತ್ವಾ ಕ್ರೋಶಂ ತದಾ ಚಕ್ರೇ ಹ್ಯಾಶ್ರಮಂ ತದನುಜ್ಞಯಾ ॥ ೪೩ ॥

ಯಾವಚ್ಚೈವಾಭಿಶಾಪೋ ವೈ ತಾವತ್ಕಾರ್ಯಂ ನ ಕಿಂಚನ ।
ನ ಕರ್ಮಣ್ಯಧಿಕಾರೋಽಸ್ತಿ ದೈವೇ ಪಿತ್ರ್ಯೇಽಥ ವೈದಿಕೇ ॥ ೪೪ ॥

---

ದೊಡನೆ ಬೇರೆಕಡೆಗೆ ಹೊರಟು ಹೋಗು. ನೀನು ಗೋಹತ್ಯೆಯನ್ನು ಮಾಡಿದ ಪಾಪಿಯು. ಸಾವಕಾಶವನ್ನು ಮಾಡಬೇಡ, ಬೇಗನೆ ತೊಲಗು ಎಂದರು.

೪೧. ಹೀಗೆಂದು ಹೇಳಿ ಅವನನ್ನು ಎಲ್ಲರೂ ಕಲ್ಲುಗಳಿಂದ ಹೊಡೆದರು. ಅಹಲ್ಯೆಯನ್ನೂ ಕೆಟ್ಟ ಮಾತುಗಳಿಂದ ಬೈದು ಅವರಿಬ್ಬರಿಗೂ ದುಃಖವನ್ನುಂಟು ಮಾಡಿದರು.

೪೨-೪೬. ಗೌತಮನು ದುಷ್ಟರಾದ ಋಷಿಗಳ ಏಟನ್ನೂ, ನಿಂದೆಯನ್ನೂ ತಡೆಯಲಾರದೆ, ಎಲೈ, ಮುನಿಗಳೇ ನಾನು ಇಲ್ಲಿಂದ ಹೊರಟು ಹೋಗಿ ಬೇರೆ ಕಡೆ ಯಲ್ಲಿ ವಾಸಮಾಡುತ್ತೇನೆ ಎಂದು ಹೇಳಿ ಆ ಸ್ಥಳಕ್ಕೆ ಒಂದು ಹರಿದಾರಿ ದೂರದಲ್ಲಿ ಆಶ್ರಮವನ್ನು ಮಾಡಿಕೊಂಡನು. ಈ ನಿಂದೆಯು ಇರುವವರೆಗೂ ವೇದೋಕ್ತವಾದ ದೇವ, ಪಿತೃಕಾರ್ಯಗಳಲ್ಲಿ ನನಗೆ ಅಧಿಕಾರವಿರುವುದಿಲ್ಲವೆಂದು, ಹದಿನೈದು ದಿನಗ ಳನ್ನು ಕಳೆದಮೇಲೆ ಋಷಿಶ್ರೇಷ್ಠನಾದ ಗೌತಮನು ಅತ್ಯಂತ ದುಃಖದಿಂದ ಆ ಋಷಿ

ಮಾಸಾರ್ಧಂ ಚ ತತೋ ನೀತ್ವಾ ಮುನೀನ್ಸಂಪ್ರಾರ್ಥಯತ್ತದಾ ।
ಗೌತಮೋ ಮುನಿವರ್ಯಸ್ಸ ತೇನ ದುಃಖೇನ ದುಃಖಿತಃ ॥ ೪೫ ॥

॥ ಗೌತಮ ಉವಾಚ ॥

ಅನುಕಂಪ್ಯೋ ಭವದ್ಭಿಶ್ಚ ಕಥ್ಯತಾಂ ಕ್ರಿಯತೇ ಮಯಾ ।
ಯಥಾ ಮದೀಯಂ ಪಾಪಂ ಚ ಗಚ್ಛತ್ವಿತಿ ನಿವೇದ್ಯತಾಂ ॥ ೪೬ ॥

॥ ಸೂತ ಉವಾಚ ॥

ಇತ್ಯುಕ್ತಾಸ್ತೇ ತದಾ ವಿಪ್ರಾ ನೋಚುಶ್ಚೈವ ಪರಸ್ಪರಂ ।
ಅತ್ಯಂತಂ ಸೇವಯಾ ಪೃಷ್ಟಾ ಮಿಲಿತಾ ಹ್ಯೇಕತಃ ಸ್ಥಿತಾಃ ॥ ೪೭ ॥

ಗೌತಮೋ ದೂರತಃ ಸ್ಥಿತ್ವಾ ನತ್ವಾ ತಾನೃಷಿಸತ್ತಮಾನ್ ।
ಪಪ್ರಚ್ಛ ವಿನಯಾವಿಷ್ಟಃ ಕಿಂ ಕಾರ್ಯಂ ಹಿ ಮಯಾಧುನಾ ॥ ೪೮ ॥

ಇತ್ಯುಕ್ತೇ ಮುನಿನಾ ತೇನ ಗೌತಮೇನ ಮಹಾತ್ಮನಾ ।
ಮಿಲಿತಾಸ್ಸಕಲಾಸ್ತೇ ವೈ ಮುನಯೋ ವಾಕ್ಯಮಬ್ರುವನ್ ॥ ೪೯ ॥

॥ ಋಷಯ ಊಚುಃ ॥

ನಿಷ್ಕೃತಿಂ ಹಿ ವಿನಾ ಶುದ್ಧಿರ್ಜಾಯತೇ ನ ಕದಾಚನ ।
ತಸ್ಮಾತ್ತ್ವಂ ದೇಹಶುದ್ಧ್ಯರ್ಥಂ ಪ್ರಾಯಶ್ಚಿತ್ತಂ ಸಮಾಚರ ॥ ೫೦ ॥

---

ಗಳನ್ನು ಕೇಳಿಕೊಂಡನು. ಎಲೈ, ಋಷಿಗಳೇ! ನನ್ನ ಪಾಪವು ಹೋಗುವುದಕ್ಕೆ ಯಾವ ಪ್ರಾಯಶ್ಚಿತ್ತವು ಇರುವುದೋ ಅದನ್ನು ದಯವಿಟ್ಟು ಹೇಳಿರಿ. ನಾನು ಅದನ್ನು ಮಾಡಿಕೊಳ್ಳುವೆನು ಎಂದನು.

೪೭–೪೯. ಹೀಗೆ ಕೇಳಿಕೊಂಡರೂ ಆ ಬ್ರಾಹ್ಮಣರು ಯಾವ ಉತ್ತರವನ್ನೂ ಹೇಳಲಿಲ್ಲ. ಗೌತಮನು ವಿಶೇಷವಾಗಿ ಬ್ರಾಹ್ಮಣರ ಸೇವೆಯನ್ನು ಮಾಡಿದ ಮೇಲೆ ಅವರೆಲ್ಲರೂ ಸೇರಿದರು. ಗೌತಮನು ದೂರದಲ್ಲಿ ನಿಂತು ಅವರಿಗೆಲ್ಲ ನಮಸ್ಕರಿಸಿ ಅತ್ಯಂತ ವಿನಯದಿಂದ ನಾನು ಏನು ಮಾಡಬೇಕೆಂದು ಕೇಳಿಕೊಳ್ಳಲು, ಅವರೆಲ್ಲರೂ ಗೌತಮನನ್ನು ಕುರಿತು ಹೇಳಿದರು.

೫೦–೫೫. ನಿಷ್ಕೃತಿಯಿಲ್ಲದೆ ನೀನು ಶುದ್ಧನಾಗಲಾರೆ. ಆದುದರಿಂದ ದೇಹ ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ನಿನ್ನ ಪಾಪವನ್ನು ಹೇಳಿ

ತ್ರಿವಾರಂ ಪೃಥಿವೀಂ ಸರ್ವಾಂ ಕ್ರಮ ಪಾಪಂ ಪ್ರಕಾಶಯನ್ ।
ಪುನರಾಗತ್ಯ ಚಾತ್ರೈವ ಚರ ಮಾಸವ್ರತಂ ತಥಾ ॥ ೫೧ ॥

ಶತಮೇಕೋತ್ತರಂ ಚೈವ ಬ್ರಹ್ಮಣೋಽಸ್ಯ ಗಿರೇಸ್ತಥಾ ।
ಪ್ರಕ್ರಮಣಂ ವಿಧಾಯೈವಂ ಶುದ್ಧಿಸ್ತೇ ಚ ಭವಿಷ್ಯತಿ ॥ ೫೨ ॥

ಅಥವಾ ತ್ವಂ ಸಮಾನೀಯ ಗಂಗಾಂ ಸ್ನಾನಂ ಸಮಾಚರ ।
ಪಾರ್ಥಿವಾನಾಂ ತಥಾ ಕೋಟಿಂ ಕೃತ್ವಾ ದೇವಂ ನಿಷೇವಯ ॥ ೫೩ ॥

ಗಂಗಾಯಾಂ ಚ ತತಃ ಸ್ನಾತ್ವಾ ಪುನಶ್ಚೈವ ಭವಿಷ್ಯತಿ ।
ಪುರಾ ದಶ ತಥಾ ಚೈಕಂ ಗಿರೇಸ್ತ್ವಂ ಕ್ರಮಣಂ ಕುರು ॥ ೫೪ ॥

ಶತಕುಂಭೈಸ್ತಥಾ ಸ್ನಾತ್ವಾ ಪಾರ್ಥಿವಂ ನಿಷ್ಕೃತಿರ್ಭವೇತ್ ।
ಇತಿ ತೈ ಋಷಿಭಿಃ ಪ್ರೋಕ್ತಸ್ತಥೇತ್ಯೋಮಿತಿ ತದ್ವಚಃ ॥ ೫೫

ಪಾರ್ಥಿವಾನಾಂ ತಥಾ ಪೂಜಾಂ ಗಿರೇಃ ಪ್ರಕ್ರಮಣಂ ತಥಾ ।
ಕರಿಷ್ಯಾಮಿ ಮುನಿಶ್ರೇಷ್ಠಾ ಆಜ್ಞಯಾ ಶ್ರೀಮತಾಮಿಹ ॥ ೫೬ ॥

---

ಕೊಳ್ಳುತ್ತ ಮೂರಾವರ್ತಿ ಭೂಪ್ರದಕ್ಷಿಣೆಯನ್ನು ಮಾಡಿಕೊಂಡು ಬಂದು ಒಂದು ತಿಂಗಳು ಇಲ್ಲಿಯೇ ಚಾಂದ್ರಾಯಣವ್ರತವನ್ನು ಮಾಡಬೇಕು. ಅಥವಾ ನೂರೊಂದು ಆವೃತ್ತಿ ಈ ಬ್ರಹ್ಮಗಿರಿಯನ್ನು ಪ್ರದಕ್ಷಿಣೆ ಮಾಡಿದರೆ ನಿನಗೆ ಶುದ್ಧಿಯುಂಟಾಗುವುದು. ಅಥವಾ ನೀನು ಗಂಗೆಯನ್ನು ತಂದು ಸ್ನಾನಮಾಡಿ, ಕೋಟಿ ಪಾರ್ಥಿವಲಿಂಗವನ್ನು ಮಾಡಿ ಪೂಜೆಯನ್ನು ಮಾಡಿ ಮತ್ತೆ ಗಂಗೆಯಲ್ಲಿ ಸ್ನಾನ ಮಾಡಿದರೆ ಶುದ್ಧನಾಗುವೆ. ಮೊದಲು ಹನ್ನೊಂದು ಸಾರಿ ಈ ಬ್ರಹ್ಮಗಿರಿಯನ್ನು ಪ್ರದಕ್ಷಿಣೆಯನ್ನು ಮಾಡು· ನೂರು ಕಲಶೋದಕಗಳಿಂದ ಪಾರ್ಥಿವಲಿಂಗಕ್ಕೆ ಅಭಿಷೇಕವನ್ನು ಮಾಡಿದರೆ ನಿನಗೆ ಪಾಪಪರಿಹಾರವಾಗುವುದು ಎಂದರು.

೫೬-೫೮. ಅದನ್ನು ಕೇಳಿ ಗೌತಮನು—ಎಲೈ, ಋಷಿಶ್ರೇಷ್ಠರೇ! ನಿಮ್ಮ ಆಜ್ಞೆಯಂತೆ ಗಿರಿಪ್ರದಕ್ಷಿಣೆಯನ್ನೂ, ಪಾರ್ಥಿವಲಿಂಗದ ಪೂಜೆಯನ್ನೂ ಮಾಡುವೆ ನೆಂದು ಹೇಳಿ ಆ ಋಷಿಶ್ರೇಷ್ಠನಾದ ಗೌತಮನು ಗಿರಿಪ್ರದಕ್ಷಿಣೆಯನ್ನೂ, ಪಾರ್ಥಿವ

ಇತ್ಯುಕ್ತ್ವಾ ಸರ್ಷಿವರ್ಯಶ್ಚ ಕೃತ್ವಾ ಪ್ರಕ್ರಮಣಂ ಗಿರೇಃ ।
ಪೂಜಯಾಮಾಸ ನಿರ್ಮಾಯ ಪಾರ್ಥಿವಾನ್ಮುನಿಸತ್ತಮಃ ॥ ೫೭ ॥

ಅಹಲ್ಯಾ ಚ ತತಸ್ಸಾಧ್ವೀ ತಚ್ಚ ಸರ್ವಂ ಚಕಾರ ಸಾ ।
ಶಿಷ್ಯಾಶ್ಚ ಪ್ರತಿಶಿಷ್ಯಾಶ್ಚ ಚಕ್ರುಸ್ಸೇವಾಂ ತಯೋಸ್ತದಾ ॥ ೫೮ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಗೌತಮವ್ಯವಸ್ಥಾವರ್ಣನಂ ನಾಮ
ಪಂಚವಿಂಶೋಽಧ್ಯಾಯಃ

---

ಲಿಂಗದ ಪೂಜೆಯನ್ನೂ ಮಾಡಿದನು. ಅವನ ಪತ್ನಿಯಾದ ಅಹಲ್ಯೆಯು ಎಲ್ಲಾ ಕಾರ್ಯಗಳಿಗೂ ಸಹಾಯಕಳಾಗಿದ್ದಳು. ಅವನ ಶಿಷ್ಯ ಪ್ರಶಿಷ್ಯರು ಅವರ ಸೇವೆಯನ್ನು ಮಾಡುತ್ತಿದ್ದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಗೌತಮನ ನಿಶ್ಚಯವನ್ನು ವರ್ಣಿಸಿರುವ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಷಡ್ವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಏವಂ ಕೃತೇ ತು ಋಷಿಣಾ ಸಸ್ತ್ರೀಕೇನ ದ್ವಿಜಾಶ್ರಿವಃ ।
ಆವಿರ್ಬಭೂವ ಸಶಿವಃ ಪ್ರಸನ್ನಸ್ಸಗಣಸ್ತದಾ ॥ ೧ ॥

ಅಥ ಪ್ರಸನ್ನಸ್ಸ ಶಿವೋ ವರಂ ಬ್ರೂಹಿ ಮಹಾಮುನೇ ।
ಪ್ರಸನ್ನೋಽಹಂ ಸುಭಕ್ತ್ಯಾ ತ ಇತ್ಯುವಾಚ ಕೃಪಾನಿಧಿಃ ॥ ೨ ॥

ತದಾ ತತ್ಸುಂದರಂ ರೂಪಂ ದೃಷ್ಟ್ವಾ ಶಂಭೋರ್ಮಹಾತ್ಮನಃ ।
ಪ್ರಣಮ್ಯ ಶಂಕರಂ ಭಕ್ತ್ಯಾ ಸ್ತುತಿಂ ಚಕ್ರೇ ಮುದಾನ್ವಿತಃ ॥ ೩ ॥

---

## ಇಪ್ಪತ್ತಾರನೆಯ ಅಧ್ಯಾಯವು

೧-೪. ಸೂತನು ಹೇಳಿದನು.—ಎಲೈ, ಬ್ರಾಹ್ಮಣರೇ ಕೇಳಿರಿ. ಗೌತಮನು ಪತ್ನೀಸಹಿತನಾಗಿ ಪಾರ್ಥಿವಲಿಂಗಪೂಜೆಯನ್ನು ಮಾಡುತ್ತಿರಲು ಶಿವನು ಪ್ರಸನ್ನನಾಗಿ ತನ್ನ ಗಣಗಳೊಡನೆ ಪ್ರತ್ಯಕ್ಷನಾದನು. ದಯಾನಿಧಿಯಾದ ಶಿವನು—ಎಲೈ, ಮಹಾ ತಪಸ್ವಿಯಾದ ಗೌತಮನೇ! ನಿನ್ನ ಭಕ್ತಿಗೆ ನಾನು ಮೆಚ್ಚಿದೆನು. ವರವನ್ನು ಕೇಳು, ಕೊಡುವೆನು ಎಂದನು. ಆಗ ಮಹಾಮಹಿಮನಾದ ಶಿವನ ಸುಂದರವಾದ ರೂಪವನ್ನು

ಸ್ತುತ್ವಾ ಬಹು ಪ್ರಣಮ್ಯೇಶಂ ಬದ್ಧಾಂಜಲಿಪುಟಃ ಸ್ಥಿತಃ ।
ನಿಷ್ಪಾಪಂ ಕುರು ಮಾಂ ದೇವಾಬ್ರವೀದಿತಿ ಸ ಗೌತಮಃ ॥ ೪ ॥

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಗೌತಮಸ್ಯ ಮಹಾತ್ಮನಃ ।
ಸುಪ್ರಸನ್ನತರೋ ಭೂತ್ವಾ ಶಿವೋ ವಾಕ್ಯಮುಪಾದದೇ ॥ ೫ ॥

॥ ಶಿವ ಉವಾಚ ॥

ಧನ್ಯೋಽಸಿ ಕೃತಕೃತ್ಯೋಽಸಿ ನಿಷ್ಪಾಪೋಽಸಿ ಸದಾ ಮುನೇ ।
ಏತೈರ್ದುಷ್ಟೈಃ ಕಿಲ ತ್ವಂ ಚ ಛಲಿತೋಽಸಿ ಖಲಾತ್ಮಭಿಃ ॥ ೬ ॥

ತ್ವದೀಯದರ್ಶನಾಲ್ಲೋಕಾ ನಿಷ್ಪಾಪಾಶ್ಚ ಭವಂತಿ ಹಿ
ಕಿಂ ಪುನಸ್ತ್ವಂ ಸಪಾಪೋಽಸಿ ಮದ್ಭಕ್ತಿನಿರತಸ್ಸದಾ । ॥ ೭ ॥

ಉಪದ್ರವಸ್ತ್ವಯಿ ಮುನೇ ಯೈಃ ಕೃತಸ್ತು ದುರಾತ್ಮಭಿಃ ।
ತೇ ಪಾಪಾಶ್ಚ ದುರಾಚಾರಾ ಹತ್ಯಾವಂತಸ್ತ ಏವ ಹಿ ॥ ೮ ॥

---

ನೋಡಿ ಭಕ್ತಿಯಿಂದ ನಮಸ್ಕರಿಸಿ ಆ ಮುನಿಯು ಸಂತೋಷದಿಂದ ಸ್ತೋತ್ರಮಾಡಿದನು. ಅನೇಕ ಬಗೆಯಲ್ಲಿ ಸ್ತೋತ್ರವನ್ನೂ ನಮಸ್ಕಾರಗಳನ್ನೂ ಮಾಡಿ ಕೈ ಜೊಡಿಸಿಕೊಂಡು ಎಲೈ, ದೇವನೇ! ನನ್ನನ್ನು ಪಾಪರಹಿತನನ್ನಾಗಿ ಮಾಡು, ಎಂದು ಪ್ರಾರ್ಥಿಸಿದನು.

೫-೮. ಈರೀತಿಯಾದ ಗೌತಮಮಹಾಮುನಿಯ ಮಾತನ್ನು ಕೇಳಿ, ಶಿವನು ಅತ್ಯಂತ ಪ್ರಸನ್ನನಾಗಿ ಇಂತೆಂದನು—ಎಲೈ, ಗೌತಮನೇ ನೀನು ಯಾವಾಗಲೂ ಪುಣ್ಯವಂತನೂ, ಕೃತಾರ್ಥನೂ, ಪಾಪವಿಲ್ಲದವನೂ ಆಗಿರುವೆ. ಈ ದುಷ್ಟ ಬ್ರಾಹ್ಮಣರು ನಿನ್ನಮೇಲೆ ಹಠದಿಂದ ಪಾಪವನ್ನು ಹೊರಿಸಿರುವರು. ನಿನ್ನ ದರ್ಶನಮಾಡಿದ ಜನರು ತಮ್ಮ ಪಾಪಗಳನ್ನೆಲ್ಲಾ ಕಳೆದುಕೊಳ್ಳುವರು. ಹೀಗಿರುವಲ್ಲಿ ಯಾವಾಗಲೂ ನನ್ನ ಭಕ್ತನಾದ ನೀನು ಪಾಪವುಳ್ಳವನೆಂದು ಹೇಗೆ ಹೇಳುವರು? ಎಲೈ ಮುನಿಯೇ ಯಾವ ದುಷ್ಟಮನಸ್ಸಿನ ಮುನಿಗಳು ನಿನಗೆ ತೊಂದರೆಯನ್ನುಂಟುಮಾಡಿದರೋ ಅವರೇ ಪಾಪಿಗಳೂ, ದುರಾಚಾರವುಳ್ಳವರೂ, ಗೋಹತ್ಯೆಯನ್ನು ಮಾಡಿದವರೂ

ಏತೇಷಾಂ ದರ್ಶನಾದನ್ಯೇ ಪಾಪಿಷ್ಠಾಃ ಸಂಭವಂತು ಚ ।
ಕೃತಘ್ನಾಶ್ಚ ತಥಾ ಜಾತಾ ನೈತೇಷಾಂ ನಿಷ್ಕೃತಿಃ ಕ್ವಚಿತ್ ॥ ೯ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಶಂಕರಸ್ತಸ್ಮೈ ತೇಷಾಂ ದುಶ್ಚರಿತಂ ತದಾ ।
ಬಹೂವಾಚ ಪ್ರಭುರ್ವಿಪ್ರಾಃ ಸತ್ಕದೋಽಸತ್ಸು ದಂಡದಃ ॥ ೧೦ ॥

ಶರ್ವೋಕ್ತಮಿತಿ ಸ ಶ್ರುತ್ವಾ ಸುವಿಸ್ಮಿತಮನಾ ಋಷಿಃ ।
ಸುಪ್ರಣಮ್ಯ ಶಿವಂ ಭಕ್ತ್ಯಾ ಸಾಂಜಲಿಃ ಪುನರಬ್ರವೀತ್ ॥ ೧೧ ॥

॥ ಗೌತಮ ಉವಾಚ ॥

ಋಷಿಭಿಸ್ತೈರ್ಮಹೇಶಾನ ಹ್ಯುಪಕಾರಃ ಕೃತೋ ಮಹಾನ್ ।
ಯದ್ಯೇವಂ ನ ಕೃತಂ ತೈಸ್ತು ದರ್ಶನಂ ತೇ ಕುತೋ ಭವೇತ್ ॥ ೧೨ ॥

ಧನ್ಯಾಸ್ತೇ ಋಷಯೋ ಯೈಸ್ತು ಮಹ್ಯಂ ಶುಭತರಂ ಕೃತಂ ।
ತದ್ದುರಾಚರಣಾದೇವ ಮಮ ಸ್ವಾರ್ಥೋ ಮಹಾನಭೂತ್ ॥ ೧೩ ॥

---

ಆಗುವರು. ಆ ಜನರನ್ನು ನೋಡಿದ ಇತರರೂ ಪಾಪಿಗಳಾಗುವರು. ಕೃತಘ್ನರೂ ಆಗುವರು. ಇವರಿಗೆ ಪ್ರಾಯಶ್ಚಿತ್ತವೇ ಇರುವುದಿಲ್ಲ.

೧೦-೧೧. ಹೀಗೆಂದು ಸಜ್ಜನರಿಗೆ ಸುಖವನ್ನೂ, ದುರ್ಜನರಿಗೆ ತೊಂದರೆಯನ್ನೂ ಕೊಡುವ ಶಿವನು ಆ ಗೌತಮನಿಗೆ ಆ ಋಷಿಗಳ ಕೆಟ್ಟ ನಡತೆಗಳನ್ನೆಲ್ಲಾ ಹೇಳಿದನು. ಶಿವನು ಹೇಳಿದುದೆಲ್ಲವನ್ನೂ ಕೇಳಿ ಗೌತಮನು ಆಶ್ಚರ್ಯಪಡುತ್ತ ಶಿವನಿಗೆ ಭಕ್ತಿಯಿಂದ ನಮಸ್ಕರಿಸಿ ಕೈ ಜೋಡಿಸಿಕೊಂಡು ಮತ್ತೆ ಹೇಳಿದನು.

೧೨-೧೩. ಎಲೈ ಮಹೇಶ್ವರನೇ! ಆ ಮುನಿಗಳು ನನಗೆ ಮಹೋಪಕಾರವನ್ನೇ ಮಾಡಿರುವರು. ಅವರು ಹೀಗೆ ಮಾಡದಿದ್ದರೆ, ನಿನ್ನ ದರ್ಶನವು ಹೇಗಾಗುತ್ತಿತ್ತು? ನನಗೆ ಅತ್ಯಂತ ಮಂಗಳವನ್ನು ಮಾಡಿದ ಅವರೇ ಕೃತಾರ್ಥರು. ಅವರ ದುರಾಚಾರದಿಂದ ನನಗೆ ಮಹಾಪ್ರಯೋಜನವುಂಟಾಯಿತು ಎಂದನು.

॥ ಸೂತ ಉವಾಚ ॥

ಇತ್ಯೇವಂ ತದ್ವಚಶ್ಶ್ರುತ್ವಾ ಸುಪ್ರಸನ್ನೋ ಮಹೇಶ್ವರಃ ।
ಗೌತಮಂ ಪ್ರತ್ಯುವಾಚಾಶು ಕೃಪಾದೃಷ್ಟ್ಯಾ ವಿಲೋಕ್ಯ ಚ ॥ ೧೪ ॥

॥ ಶಿವ ಉವಾಚ ॥

ಋಷಿರ್ಧನ್ಯೋಽಸಿ ವಿಪ್ರೇಂದ್ರ ಋಷಿಶ್ರೇಷ್ಠತರೋಽಸಿ ವೈ ।
ಜ್ಞಾತ್ವಾ ಮಾಂ ಸುಪ್ರಸನ್ನಂ ಹಿ ವೃಣು ತ್ವಂ ವರಮುತ್ತಮಂ ॥ ೧೫ ॥

॥ ಸೂತ ಉವಾಚ ॥

ಗೌತಮೋಽಪಿ ವಿಚಾರ್ಯೈವಂ ಲೋಕೇ ವಿಶ್ರುತಮಿತ್ಯುತ ।
ಅನ್ಯಥಾ ನ ಭವೇದೇವ ತಸ್ಮಾದುಕ್ತಂ ಸಮಾಚರೇತ್ ॥ ೧೬ ॥

ನಿಶ್ಚಿತ್ಯೈವಂ ಮುನಿಶ್ರೇಷ್ಠೋ ಗೌತಮಶ್ಶಿವಭಕ್ತಿಮಾನ್ ।
ಸಾಂಜಲಿರ್ನತಶೀರ್ಷೋಽಹಿ ಶಂಕರಂ ವಾಕ್ಯಮಬ್ರವೀತ್ ॥ ೧೭ ॥

॥ ಗೌತಮ ಉವಾಚ ॥

ಸತ್ಯಂ ನಾಥ ಬ್ರವೀಷಿ ತ್ವಂ ತಥಾಪಿ ಪಂಚಭಿಃ ಕೃತಂ ।
ನಾನ್ಯಥಾ ಭವತೀತ್ಯತ್ರ ಯಜ್ಞಾತಂ ಜಾಯತಾಂ ತು ತತ್ ॥ ೧೮ ॥

---

೧೪-೧೫. ಆ ಗೌತಮನು ಹೇಳಿದ ಮಾತನ್ನು ಕೇಳಿ, ಪರಮೇಶ್ವರನು ಪ್ರಸನ್ನನಾಗಿ ಗೌತಮನನ್ನು ದಯಾದೃಷ್ಟಿಯಿಂದ ನೋಡಿ—ಎಲೈ, ಬ್ರಾಹ್ಮಣ ಶ್ರೇಷ್ಠನೇ! ನೀನು ಪ್ರಸನ್ನನಾದ ನನ್ನನ್ನು ತಿಳಿದುದರಿಂದ ಋಷಿಗಳಲ್ಲಿ ಶ್ರೇಷ್ಠನೂ, ಕೃತಾರ್ಥನೂ ಆಗಿರುವೆ. ಆದುದರಿಂದ ಉತ್ತಮವಾದ ವರವನ್ನು ಕೇಳು. ಕೊಡುವೆನು ಎಂದನು.

೧೬-೧೭. ಸೂತನು ಹೇಳಿದನು.-ಶಿವಭಕ್ತನಾದ ಗೌತಮನು ಈ ಮಾತನ್ನು ಕೇಳಿ ತನ್ನ ಮನಸ್ಸಿನಲ್ಲಿ ವಿಚಾರಮಾಡಿ ಲೋಕದಲ್ಲಿ ಪ್ರಸಿದ್ಧಿಯಾದ ಒಂದು ವಿಷಯವು ಬೇರೆ ವಿಧವಾಗಿ ಆಗಲಾರದು. ಆದುದರಿಂದ ದೊಡ್ಡವರು ಹೇಳಿದುದನ್ನು ನಾವು ಆಚರಿಸಬೇಕು ಎಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ ಕೈಮುಗಿದುಕೊಂಡು ತಲೆಯನ್ನು ಬಗ್ಗಿಸಿ,

೧೮-೧೯. ಎಲೈ, ಸ್ವಾಮಿಯೇ, ನೀನು ನಿಜವನ್ನೇ ಹೇಳುವೆ. ಹಾಗಾದರೂ ಲೋಕವ್ಯವಹಾರದಲ್ಲಿ ಪಂಚಾಯಿತರು ಮಾಡಿದ ತೀರ್ಮಾನವನ್ನು ಮೀರಲಾಗುವು

ಯದಿ ಪ್ರಸನ್ನೋ ದೇವೇಶ ಗಂಗಾ ಚ ದೀಯತಾಂ ಮಮ ।
ಕುರು ಲೋಕೋಪಕಾರಂ ಹಿ ನಮಸ್ತೇಽಸ್ತು ನಮೋಽಸ್ತು ತೇ ॥ ೧೯ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ವಚನಂ ತಸ್ಯ ಧೃತ್ವಾ ವೈ ಪಾದಪಂಕಜಂ ।
ನಮಶ್ಚಕಾರ ದೇವೇಶಂ ಗೌತಮೋ ಲೋಕಕಾಮ್ಯಯಾ ॥ ೨೦ ॥

ತತಸ್ತು ಶಂಕರೋ ದೇವಃ ಪೃಥಿವ್ಯಾಶ್ಚ ದಿವಶ್ಚ ಸಃ ।
ಸಾರಂ ಚೈವ ಸಮುದ್ಧೃತ್ಯ ರಕ್ಷಿತಂ ಪೂರ್ವಮೇವ ತತ್ ॥ ೨೧ ॥

ವಿವಾಹೇ ಬ್ರಹ್ಮಣಾ ದತ್ತಮವಶಿಷ್ಟಂ ಚ ಕಿಂಚನ ।
ತತ್ತಸ್ಮೈ ದತ್ತವಾಞ್ಛಂಭುರ್ಮುನಯೇ ಭಕ್ತವತ್ಸಲಃ ॥ ೨೨ ॥

ಗಂಗಾಜಲಂ ತದಾ ತತ್ರ ಸ್ತ್ರೀರೂಪಮಭವತ್ಪರಂ ।
ತಸ್ಯಾಶ್ಚೈವ ಋಷಿಶ್ರೇಷ್ಠಃ ಸ್ತುತಿಂ ಕೃತ್ವಾ ನತಿಂ ವ್ಯಧಾತ್ ॥ ೨೩ ॥

---

ದಿಲ್ಲ. ನಡೆದುದು ನಡೆದುಹೋಯಿತು. ಅದು ಹೇಗಾದರೂ ಆಗಲಿ. ಸ್ವಾಮಿಯಾದ ನೀನು ಪ್ರಸನ್ನನಾಗಿದ್ದರೆ ನನಗೆ ಗಂಗೆಯನ್ನು ಕೊಡು. ಇದರಿಂದ ಲೋಕೋಪಕಾರವಾಗುವುದು. ಇಗೋ ನಿನಗೆ ನಾನು ನಮಸ್ಕಾರವನ್ನು ಮಾಡುವೆನು.

೨೦. ಎಂದು ಹೇಳಿ ಗೌತಮನು ಶಿವನ ಪಾದಕಮಲವನ್ನು ಹಿಡಿದುಕೊಂಡು ಲೋಕೋಪಕಾರವನ್ನು ಮಾಡುವ ಉದ್ದೇಶದಿಂದ ದೇವದೇವನಿಗೆ ನಮಸ್ಕಾರ ಮಾಡಿದನು.

೨೧-೨೩. ಹಿಂದೆ ಬ್ರಹ್ಮನು ಭೂಮಿಯ ಮತ್ತು ಅಂತರಿಕ್ಷದ ಸಾರವನ್ನು ಸಂಗ್ರಹಿಸಿ ತನ್ನ ಕಮಂಡಲುವಿನಲ್ಲಿಟ್ಟು ಕಾಪಾಡುತ್ತಿದ್ದನು. ಆ ಗಂಗೆಯನ್ನು ಪಾರ್ವತಿಯ ವಿವಾಹಕಾಲದಲ್ಲಿ ಶಿವನಿಗೆ ಕೊಟ್ಟನು. ಶಿವನು ಅದನ್ನು ಉಪಯೋಗಿಸಿ ತನ್ನ ಕಮಂಡಲುವಿನಲ್ಲಿ ಅತ್ಯಲ್ಪವಾಗಿ ಉಳಿಸಿಕೊಂಡಿದ್ದನು. ಆ ಮಿಕ್ಕ ಗಂಗೆಯನು ಭಕ್ತವತ್ಸಲನಾದ ಶಿವನು ಆ ಗೌತಮಮುನಿಗೆ ಕೊಟ್ಟನು. ಆ ಕಾಲದಲ್ಲಿ ಆ ಗಂಗೆಯ ನೀರು ಸ್ತ್ರೀ ರೂಪವನ್ನು ಧರಿಸಿ ಸುಂದರವಾಗಿ ಕಾಣಿಸಿಕೊಂಡಿತು. ಋಷಿಶ್ರೇಷ್ಠನಾದ ಗೌತಮನು ಆ ಗಂಗೆಯನ್ನು ಸ್ತೋತ್ರಮಾಡಿ ನಮಸ್ಕಾರಮಾಡಿದನು.

॥ ಗೌತಮ ಉವಾಚ ॥

ಧನ್ಯಾಸಿ ಕೃತಕೃತ್ಯಾಸಿ ಪಾವಿತಂ ಭುವನಂ ತ್ವಯಾ ।
ಮಾಂ ಚ ಪಾವಯ ಗಂಗೇ ತ್ವಂ ಪತಂತಂ ನಿರಯೇ ಧ್ರುವಂ ॥ ೨೪ ॥

॥ ಸೂತ ಉವಾಚ ॥

ಶಂಭುಶ್ಚಾಪಿ ತದೋವಾಚ ಸರ್ವೇಷಾಂ ಹಿತಕೃಚ್ಛೃಣು ।
ಗಂಗೇ ಗೌತಮಮೇನಂ ತ್ವಂ ಪಾವಯಸ್ವ ಮದಾಜ್ಞಯಾ ॥ ೨೫ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಶಂಭೋಶ್ಚ ಗೌತಮಸ್ಯ ಚ ।
ಉವಾಚೈವ ಶಿವಂ ಗಂಗಾ ಶಿವಭಕ್ತಿರ್ಹಿ ಪಾವನೀ ॥ ೨೬ ॥

॥ ಗಂಗೋವಾಚ ॥

ಋಷಿಂ ತು ಪಾವಯಿತ್ವಾಹಂ ಪರಿವಾರಯುತಂ ಪ್ರಭೋ ।
ಗಮಿಷ್ಯಾಮಿ ನಿಜಸ್ಥಾನಂ ವಚಸ್ಸತ್ಯಂ ಬ್ರವೀಮಿ ಹ ॥ ೨೭ ॥

---

೨೪. ಗೌತಮನು ಹೇಳಿದನು.—ಎಲೈ, ಗಂಗೆಯೇ, ನೀನು ಪುಣ್ಯವಂತಳೂ, ಕೃತಾರ್ಥಳೂ ಆಗಿರುವೆ. ನೀನು ಲೋಕವನ್ನೆಲ್ಲಾ ಶುದ್ಧಮಾಡಿರುವೆ. ನರಕದಲ್ಲಿ ಬೀಳುತ್ತಿರುವ ನನ್ನನ್ನು ಪರಿಶುದ್ಧನನ್ನಾಗಿ ಮಾಡು ಎಂದನು.

೨೫. ಆಗ ಸಮಸ್ತರಿಗೂ ಹಿತವನ್ನುಂಟುಮಾಡುವ ಶಿವನು ಎಲೈ, ಗಂಗೆಯೇ ನೀನು ನನ್ನ ಆಜ್ಞೆಯಿಂದ ಈ ಗೌತಮಮುನಿಯನ್ನು ಪರಿಶುದ್ಧಮಾಡು ಎನ್ನಲು,

೨೬. ೨೭. ಶಿವನ ಮತ್ತು ಗೌತಮನ ಮಾತನ್ನು ಕೇಳಿ ಶಿವಭಕ್ತಿಸ್ವರೂಪಳಾದ ಗಂಗೆಯು ಎಲೈ, ಸ್ವಾಮಿಯೇ! ನಾನು ಪರಿವಾರದೊಡನೆ ಕೂಡಿದ ಈ ಗೌತಮಮುನಿಯನ್ನು ಶುದ್ಧಿಮಾಡಿ ನನ್ನ ಸ್ಥಾನಕ್ಕೆ ಹೋಗುವೆನು. ಇದು ಸತ್ಯವಾದುದು ಎಂದಳು.

॥ ಸೂತ ಉವಾಚ ॥

ಇತ್ಯುಕ್ತಂ ಗಂಗಯಾ ತತ್ರ ಮಹೇಶೋ ಭಕ್ತವತ್ಸಲಃ ।
ಲೋಕೋಪಕರಣಾರ್ಥಾಯ ಪುನರ್ಗಂಗಾಂ ವಚೋಽಬ್ರವೀತ್ ॥ ೨೮ ॥

॥ ಶಿವ ಉವಾಚ ॥

ತ್ವಯಾ ಸ್ಥಾತವ್ಯಮತ್ರೈವಾವ್ರಜೇದ್ಯಾವತ್ಕಲಿರ್ಯುಗಃ ।
ವೈವಸ್ವತೋ ಮನುರ್ದೇವಿ ಹ್ಯಷ್ಟಾವಿಂಶತ್ತಮೋ ಭವೇತ್ ॥ ೨೯ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಸ್ವಾಮಿನಶ್ಶಂಕರಸ್ಯ ತತ್ ।
ಪ್ರತ್ಯುವಾಚ ಪುನರ್ಗಂಗಾ ಪಾವನೀ ಸಾ ಸರಿದ್ವರಾ ॥ ೩೦ ॥

॥ ಗಂಗೋವಾಚ ॥

ಮಾಹಾತ್ಮ್ಯಮಧಿಕಂ ಚೇತ್ಸ್ಯಾನ್ಮಮ ಸ್ವಾಮಿನ್ಮಹೇಶ್ವರ ।
ಸರ್ವೇಭ್ಯಶ್ಚ ತದಾ ಸ್ಥಾಸ್ಯೇ ಧರಾಯಾಂ ತ್ರಿಪುರಾಂತಕ ॥ ೩೧ ॥

ಕಿಂಚಾನ್ಯಚ್ಚ ಶೃಣು ಸ್ವಾಮಿನ್ಸ್ವವಪುಷಾ ಸುಂದರೇಣ ಹ ।
ತಿಷ್ಠ ತ್ವಂ ಮತ್ಸಮೀಪೇ ವೈ ಸಗಣಸ್ಸಾಂಬಿಕಃ ಪ್ರಭೋ ॥ ೩೨ ॥

---

೨೮-೨೯. ಬಳಿಕ ಭಕ್ತವತ್ಸಲನಾದ ಮಹೇಶ್ವರನು ಗಂಗೆಯು ಹೇಳಿದ ಮಾತನ್ನು ಕೇಳಿ, ಲೋಕೋಪಕಾರಕ್ಕಾಗಿ ಗಂಗೆಯನ್ನು ಕುರಿತು—ಎಲೈ, ಗಂಗಾ ದೇವಿಯೇ! ವೈವಸ್ವತಮನ್ವಂತರದಲ್ಲಿ ಇಪ್ಪತ್ತೆಂಟನೆಯ ಕಲಿಯುಗವು ಬರುವವರೆಗೂ ನೀನು ಈ ಸ್ಥಳದಲ್ಲಿಯೇ ವಾಸಮಾಡುತ್ತಿರಬೇಕು ಎಂದನು.

೩೦. ಸ್ವಾಮಿಯಾದ ಶಿವನು ಹೇಳಿದ ಮಾತನ್ನು ಕೇಳಿ ಲೋಕವನ್ನು ಪರಿಶುದ್ಧಿಮಾಡುವ ನದಿಗಳಲ್ಲಿ ಶ್ರೇಷ್ಠಳಾದ ಗಂಗೆಯು ಮತ್ತಿಂತೆಂದಳು.

೩೧-೩೨. ಎಲೈ, ಸ್ವಾಮಿಯಾದ ಪರಮೇಶ್ವರನೇ! ಭೂಮಿಯಲ್ಲಿ ಎಲ್ಲರಿಗಿಂತಲೂ ನನ್ನ ಮಹಿಮೆಯು ಹೆಚ್ಚಾದುದಾದರೂ ನಾನು ಭೂಮಿಯಲ್ಲಿರುವೆನು. ನನ್ನ ಪ್ರಾರ್ಥನೆಯೊಂದಿರುವುದು. ನೀನು ಅಂಬಾಸಹಿತನಾಗಿ ಗಣಗಳೊಡನೆ ನನ್ನ ಸಮೀಪದಲ್ಲಿ ನೆಲಸಿರಬೇಕು ಎಂದಳು.

॥ ಸೂತ ಉವಾಚ ॥

ಏವಂ ತಸ್ಯ ವಚಃ ಶ್ರುತ್ವಾ ಶಂಕರೋ ಭಕ್ತವತ್ಸಲಃ ।
ಲೋಕೋಪಕರಣಾರ್ಥಾಯ ಪುನರ್ಗಂಗಾಂ ವಚೋಽಬ್ರವೀತ್ ॥ ೩೩ ॥

॥ ಶಿವ ಉವಾಚ ॥

ಧನ್ಯಾಸಿ ಶ್ರೂಯತಾಂ ಗಂಗೇ ಹ್ಯಹಂ ಭಿನ್ನಸ್ತ್ವಯಾ ನ ಹಿ ।
ತಥಾಪಿ ಸ್ಥೀಯತೇ ಹ್ಯತ್ರ ಸ್ಥೀಯತಾಂ ಚ ತ್ವಯಾಪಿ ಹಿ ॥ ೩೪ ॥

॥ ಸೂತ ಉವಾಚ ॥

ಇತ್ಯೇವಂ ವಚನಂ ಶ್ರುತ್ವಾ ಸ್ವಾಮಿನಃ ಪರಮೇಶಿತುಃ ।
ಪ್ರಸನ್ನಮಾನಸಾ ಭೂತ್ವಾ ಗಂಗಾ ಚ ಪ್ರತ್ಯಪೂಜಯತ್ ॥ ೩೫ ॥

ಏತಸ್ಮಿನ್ನಂತರೇ ದೇವಾ ಋಷಯಶ್ಚ ಪುರಾತನಾಃ ।
ಸುತೀರ್ಥಾನ್ಯಪ್ಯನೇಕಾನಿ ಕ್ಷೇತ್ರಾಣಿ ವಿವಿಧಾನಿ ಚ ॥ ೩೬ ॥

ಆಗತ್ಯ ಗೌತಮಂ ಸರ್ವೇ ಗಂಗಾಂ ಚ ಗಿರಿಶಂ ತಥಾ ।
ಜಯಜಯೇತಿ ಭಾಷಂತಃ ಪೂಜಯಾಮಾಸುರಾದರಾತ್ ॥ ೩೭ ॥

---

೩೩. ಈರೀತಿಯಲ್ಲಿ ಹೇಳಿದ ಗಂಗೆಯ ಮಾತನ್ನು ಕೇಳಿ ಭಕ್ತರಲ್ಲಿ ಪ್ರೀತಿಯುಳ್ಳ ಶಂಕರನು ಲೋಕೋಪಕಾರಕ್ಕಾಗಿ ಮತ್ತೆ ಗಂಗೆಗೆ ಹೇಳಿದನು.

೩೪. ಶಿವನು ಹೇಳಿದನು.—ಎಲೈ, ಗಂಗೆಯೇ ನೀನೇ ಧನ್ಯಳು. ನಾನು ನಿನಗಿಂತ ಬೇರೆಯಾದವನಲ್ಲ. ಹಾಗಾದರೂ ನಾನು ನಿನ್ನ ಬಳಿಯಲ್ಲಿ ನೆಲಸಿರುವೆನು. ನೀನೂ ಇಲ್ಲಿ ನೆಲಸಿರು ಎಂದನು.

೩೫. ಸ್ವಾಮಿಯಾದ ಪರಮೇಶ್ವರನು ಹೇಳಿದ ಮಾತನ್ನು ಕೇಳಿ ಗಂಗೆಯು ಹಾಗೆಯೇ ಆಗಲೆಂದು ಸಂತೋಷದಿಂದ ಆ ಮಾತನ್ನು ಒಪ್ಪಿಕೊಂಡಳು.

೩೬-೩೮. ಈ ಸಮಯದಲ್ಲಿ ದೇವತೆಗಳೂ, ಪುರಾತನರಾದ ಋಷಿಗಳೂ, ಅನೇಕ ತೀರ್ಥಗಳೂ, ಬಗೆಬಗೆಯ ಕ್ಷೇತ್ರಗಳೂ ಅಲ್ಲಿಗೆ ಬಂದು ಎಲ್ಲರೂ ಗೌತಮನನ್ನೂ, ಗಂಗೆಯನ್ನೂ, ಶಿವನನ್ನೂ ಜಯಶಬ್ದಪೂರ್ವಕವಾಗಿ ಪೂಜಿಸಿದರು. ಸಮಸ್ತ

ತತಸ್ತೇ ನಿರ್ಜರಾಸ್ಸರ್ವೇ ತೇಷಾಂ ಚಕ್ರುಃ ಸ್ತುತಿಂ ಮುದಾ ।
ಕರಾನ್ಬದ್ಧ್ವಾ ನತಸ್ಕಂಧಾ ಹರಿಬ್ರಹ್ಮಾದಯಸ್ತದಾ ॥ ೩೮ ॥

ಗಂಗಾ ಪ್ರಸನ್ನಾ ತೇಭ್ಯಶ್ಚ ಗಿರಿಶಶ್ಚೋಚತುಸ್ತದಾ ।
ವರಂ ಬ್ರೂತ ಸುರಶ್ರೇಷ್ಠಾ ದದ್ವೋ ವಃ ಪ್ರಿಯಕಾಮ್ಯಯಾ ॥ ೩೯ ॥

॥ ದೇವಾ ಊಚುಃ ॥

ಯದಿ ಪ್ರಸನ್ನೋ ದೇವೇಶ ಪ್ರಸನ್ನಾ ತ್ವಂ ಸರಿದ್ವರೇ ।
ಸ್ಥಾತವ್ಯಮತ್ರ ಕೃಪಯಾ ನಃ ಪ್ರಿಯಾರ್ಥಂ ತಥಾ ನೃಣಾಂ ॥ ೪೦ ॥

॥ ಗಂಗೋವಾಚ ॥

ಯೂಯಂ ಸರ್ವಪ್ರಿಯಾರ್ಥಂ ಚ ತಿಷ್ಠಥಾತ್ರ ನ ಕಿಂ ಪುನಃ ।
ಗೌತಮಂ ಕ್ಷಾಲಯಿತ್ವಾಹಂ ಗಮಿಷ್ಯಾಮಿ ಯಥಾಗತಂ ॥ ೪೧ ॥

ಭವತ್ಸು ಮೇ ವಿಶೇಷೋಽತ್ರ ಜ್ಞೇಯಶ್ಚೈವ ಕಥಂ ಸುರಾಃ ।
ತತ್ಪ್ರಮಾಣಂ ಕೃತಂ ಚೇತ್ಸ್ಯಾತ್ತದಾ ತಿಷ್ಠಾಮ್ಯಸಂಶಯಂ ॥ ೪೨ ॥

---

ದೇವತೆಗಳೂ ಸಂತೋಷದಿಂದ ಅವರ ಸ್ತೋತ್ರಗಳನ್ನು ಮಾಡಿದರು. ಹರಿ ಬ್ರಹ್ಮಾದಿಗಳು ಕೈಗಳನ್ನು ಮುಗಿದುಕೊಂಡು ನತಶಿರಸ್ಕರಾಗಿ ಸ್ತೋತ್ರಮಾಡಿದರು. ಗಂಗೆಯೂ, ಶಿವನೂ ಅವರಿಗೆ ಪ್ರಸನ್ನರಾಗಿ ಎಲೈ, ದೇವಶ್ರೇಷ್ಠರೇ, ವರವನ್ನು ಕೇಳಿರಿ. ಕೊಡುವೆವು ಎನ್ನಲು,

೪೦. ದೇವತೆಗಳು ಹೇಳಿದರು.—ಎಲೈ, ದೇವೋತ್ತಮನಾದ ಶಿವನೇ ! ನದೀಶ್ರೇಷ್ಠಳಾದ ಗಂಗೆಯೇ, ನೀವಿಬ್ಬರೂ ಪ್ರಸನ್ನರಾಗಿದ್ದರೆ ದಯವಿಟ್ಟು ನಮ್ಮ ಮತ್ತು ಮನುಜರ ಹಿತಕ್ಕಾಗಿ ನೀವು ಇಲ್ಲಿ ನೆಲಸಿರಬೇಕು ಎಂದು ಕೇಳಿಕೊಂಡರು.

೪೧-೪೨. ಗಂಗೆಯು ಹೇಳಿದಳು.—ಎಲೈ, ದೇವತೆಗಳೇ ಮನುಜರ ಹಿತಕ್ಕಾಗಿ ನೀವು ಇಲ್ಲಿ ನೆಲಸಿರಲು ಮತ್ತೇನೂ ಆಗಬೇಕಾದುದಿಲ್ಲ. ನಾನು ಗೌತಮನನ್ನು ಪರಿಶುದ್ಧಮಾಡಿ ಹೊರಡುವೆನು. ನೀವೆಲ್ಲರೂ ಇಲ್ಲಿರುವಾಗ ನನ್ನ ಹೆಚ್ಚೇನು ? ನಾನು ಇಲ್ಲಿ ನೆಲಸಿರುವುದೂ ಅವಶ್ಯಕವೆಂದು ನಿಮ್ಮ ಅಭಿಪ್ರಾಯವಿದ್ದರೆ ನಾನು ಇಲ್ಲಿ ನೆಲೆಯಾಗಿರುವೆನು. ಈ ವಿಷಯದಲ್ಲಿ ಸಂದೇಹವಿಲ್ಲ ಎಂದಳು.

॥ ಸರ್ವೇ ಊಚುಃ ॥

ಸಿಂಹರಾಶೌ ಯದಾ ಸ್ಯಾದ್ವೈ ಗುರುಸ್ಸರ್ವಸುಹೃತ್ತಮಃ ।
ತದಾ ವಯಂ ಚ ಸರ್ವೇ ತ್ವಾಗಮಿಷ್ಯಾಮೋ ನ ಸಂಶಯಃ ॥ ೪೩ ॥

ಏಕಾದಶ ಚ ವರ್ಷಾಣಿ ಲೋಕಾನಾಂ ಪಾತಕಂ ತ್ವಿಹ ।
ಕ್ಷಾಲಿತಂ ಯದ್ಭವೇದೇವಂ ಮಲಿನಾಸ್ಸ್ಮಃ ಸರಿದ್ವರೇ ॥ ೪೪ ॥

ತಸ್ಯೈವ ಕ್ಷಾಲನಾಯ ತ್ವಾಯಾಸ್ಯಾಮಸ್ಸರ್ವಥಾ ಪ್ರಿಯೇ ।
ತ್ವತ್ಸಕಾಶಂ ಮಹಾದೇವಿ ಪ್ರೋಚ್ಯತೇ ಸತ್ಯಮಾದರಾತ್ ॥ ೪೫ ॥

ಅನುಗ್ರಹಾಯ ಲೋಕಾನಾಮಸ್ಮಾಕಂ ಪ್ರಿಯಕಾಮ್ಯಯಾ ।
ಸ್ಥಾತವ್ಯಂ ಶಂಕರೇಣಾಪಿ ತ್ವಯಾ ಚೈವ ಸರಿದ್ವರೇ ॥ ೪೬ ॥

ಯಾವತ್ಸಿಂಹೇ ಗುರುಶ್ಚೈವ ಸ್ಥಾಸ್ಯಾಮಸ್ತಾವದೇವ ಹಿ ।
ತ್ವಯಿ ಸ್ನಾನಂ ತ್ರಿಕಾಲಂ ಚ ಶಂಕರಸ್ಯ ಚ ದರ್ಶನಂ ॥ ೪೭ ॥

ಕೃತ್ವಾ ಸ್ವಪಾಪಂ ನಿಖಿಲಂ ವಿಮೋಕ್ಷ್ಯಾಮೋ ನ ಸಂಶಯಃ ।
ಸ್ವದೇಶಾಂಶ್ಚ ಗಮಿಷ್ಯಾಮೋ ಭವಚ್ಛಾಸನತೋ ವಯಂ ॥ ೪೮ ॥

---

೪೩-೪೮. ದೇವತೆಗಳೇ ಮುಂತಾದವರೆಲ್ಲರೂ ಮತ್ತಿಂತೆಂದರು.—ನಿಮ್ಮೆಲ್ಲರಿಗೂ ಪ್ರೀತಿಪಾತ್ರನಾದ ಗುರುವು, ಸಿಂಹರಾಶಿಯಲ್ಲಿರುವಾಗ ನಾವೆಲ್ಲರೂ ನಿನ್ನ ಸಮೀಪಕ್ಕೆ ಬರುವೆವು. ಹನ್ನೊಂದು ವರ್ಷಗಳವರಿಗೆ ಮಾಡಿದ ಜನರ ಪಾಪಗಳು ಈ ಕ್ಷೇತ್ರದಲ್ಲಿ ಒಂದು ವರ್ಷವಿದ್ದ ಮಾತ್ರಕ್ಕೆ ನಾಶವಾಗುವುವು. ಆ ಕಾರಣದಿಂದ ಎಲೈ ಪ್ರೀತಿಪಾತ್ರಳಾದ ಗಂಗೆಯೇ, ಆ ಪಾಪಗಳನ್ನು ತೊಳೆದುಕೊಳ್ಳುವುದಕ್ಕಾಗಿ ನಮ್ಮ ಮೇಲಿನ ಪ್ರೀತಿಯಿಂದ ಶಿವನೂ, ನೀನೂ ಇಲ್ಲಿ ನೆಲಸಿರಬೇಕು. ಗುರುವು ಸಿಂಹರಾಶಿಯಲ್ಲಿರುವವರೆಗೂ ಪ್ರತಿದಿನವೂ ತ್ರಿಕಾಲದಲ್ಲಿ ನಿನ್ನಲ್ಲಿ ಸ್ನಾನಮಾಡಿ ಶಿವನ ದರ್ಶನವನ್ನು ಮಾಡಿ ನಮ್ಮ ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವೆವು. ಆಮೇಲೆ ನಿನ್ನ ಅಪ್ಪಣೆಯಿಂದ ನಮ್ಮ ದೇಶಗಳಿಗೆ ಹೋಗುವೆವು ಎಂದರು.

॥ ಸೂತ ಉವಾಚ ॥

ಇತ್യೇವಂ ಪ್ರಾರ್ಥಿತಸ್ತೈಸ್ತು ಗೌತಮೇನ ಮಹರ್ಷಿಣಾ ।
ಸ್ಥಿತೋಽಸೌ ಶಂಕರಃ ಪ್ರೀತ್ಯಾ ಸ್ಥಿತಾ ಸಾ ಚ ಸರಿದ್ವರಾ ॥ ೪೯ ॥

ಸಾ ಗಂಗಾ ಗೌತಮೀ ನಾಮ್ನಾ ಲಿಂಗಂ ತ್ರ್ಯಂಬಕಮೀರಿತಂ ।
ಖ್ಯಾತಾ ಖ್ಯಾತಂ ಬಭೂವಾಥ ಮಹಾಪಾತಕನಾಶನಂ ॥ ೫೦ ॥

ತದ್ದಿನಂ ಹಿ ಸಮಾರಭ್ಯ ಸಿಂಹಸ್ಥೇ ಚ ಬೃಹಸ್ಪತೌ ।
ಆಯಾಂತಿ ಸರ್ವತೀರ್ಥಾನಿ ಕ್ಷೇತ್ರಾಣಿ ದೈವತಾನಿ ಚ ॥ ೫೧ ॥

ಸರಾಂಸಿ ಪುಷ್ಕರಾದೀನಿ ಗಂಗಾದ್ಯಾಸ್ಸರಿತಸ್ತಥಾ ।
ವಾಸುದೇವಾದಯೋ ದೇವಾಃ ಸಂತಿ ವೈ ಗೌತಮೀತಟೇ ॥ ೫೨ ॥

ಯಾವತ್ತತ್ರ ಸ್ಥಿತಾನೀಹ ತಾವತ್ತೇಷಾಂ ಫಲಂ ನ ಹಿ ।
ಸ್ವಪ್ರದೇಶೇ ಸಮಾಯಾತಾಸ್ತರ್ಹ್ಯೇತೇಷಾಂ ಫಲಂ ಭವೇತ್ ॥ ೫೩ ॥

---

೪೯-೫೦. ಸೂತನು ಹೇಳಿದನು.---ಹೀಗೆ ಅವರೆಲ್ಲರೂ ಮತ್ತು ಗೌತಮನೂ ಪ್ರಾರ್ಥನೆಮಾಡಿಕೊಳ್ಳುತ್ತಿರಲು, ಶಿವನೂ, ಗಂಗೆಯೂ ಅಲ್ಲಿ ನೆಲಸಿದರು. ಆ ಗಂಗೆಗೆ ಗೌತಮಿಯೆಂದೂ, ಶಿವಲಿಂಗಕ್ಕೆ ತ್ರ್ಯಂಬಕನೆಂದೂ ಹೆಸರಾಗಿ ಮಹಾ ಪಾಪಗಳನ್ನು ನಾಶಮಾಡುವುದಾಗಿರುವುದು.

೫೧-೫೩. ಆ ದಿನಮೊದಲುಗೊಂಡು ಬೃಹಸ್ಪತಿಯು ಸಿಂಹರಾಶಿಗೆ ಬಂದಾಗ ಸಮಸ್ತ ತೀರ್ಥಗಳೂ, ಕ್ಷೇತ್ರಗಳೂ, ದೇವತೆಗಳೂ, ಪುಷ್ಕರವೇ ಮುಂತಾದ ಸರೋವರಗಳೂ, ಗಂಗಾ ಮುಂತಾದ ನದಿಗಳೂ ಗೌತಮೀನದಿಯ ದಡದಲ್ಲಿರುವುವು. ಈ ಗೌತಮೀತೀರದಲ್ಲಿ ಎಷ್ಟು ಕಾಲದವರೆಗೆ ಎಲ್ಲಾ ತೀರ್ಥಕ್ಷೇತ್ರಗಳು ಇರುವವೋ ಅಷ್ಟು ಕಾಲದವರಿಗೆ ಅವುಗಳ ಮೂಲಸ್ಥಾನದಲ್ಲಿ ಫಲಪ್ರಾಪ್ತಿಯಾಗುವುದಿಲ್ಲ.

ಜ್ಯೋತಿರ್ಲಿಂಗಮಿದಂ ಪ್ರೋಕ್ತಂ ತ್ರ್ಯಂಬಕಂ ನಾಮವಿಶ್ರುತಂ ।
ಸ್ಥಿತಂ ತಟೇ ಹಿ ಗೌತಮ್ಯಾ ಮಹಾಪಾತಕನಾಶನಂ ॥ ೫೪ ॥

ಯಃ ಪಶ್ಯೇದ್ಭಕ್ತಿತೋ ಜ್ಯೋತಿರ್ಲಿಂಗಂ ತ್ರ್ಯಂಬಕನಾಮಕಂ ।
ಪೂಜಯೇತ್ಪ್ರಣಮೇತ್ಸ್ತುತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೫೫ ॥

ಜ್ಯೋತಿರ್ಲಿಂಗಂ ತ್ರ್ಯಂಬಕಂ ಹಿ ಪೂಜಿತಂ ಗೌತಮೇನ ಹಿ ।
ಸರ್ವಕಾಮಪ್ರದಂ ಚಾತ್ರ ಪರತ್ರ ಪರಮುಕ್ತಿದಂ ॥ ೫೬ ॥

ಇತಿ ವಶ್ಚ ಸಮಾಖ್ಯಾತಂ ಯತ್ಪೃಷ್ಟೋಽಹಂ ಮುನೀಶ್ವರಾಃ ।
ಕಿಮನ್ಯದಿಚ್ಛಥ ಶ್ರೋತುಂ ತದ್ಬ್ರೂಯಾಂ ವೋ ನ ಸಂಶಯಃ ॥ ೫೭ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ತ್ರ್ಯಂಬಕೇಶ್ವರಮಾಹಾತ್ಮ್ಯವರ್ಣನಂ ನಾಮ
ಷಡ್ವಿಂಶೋಽಧ್ಯಾಯಃ

---

೫೪-೫೫. ಇದು ತ್ರ್ಯಂಬಕೇಶ್ವರನೆಂಬ ಪ್ರಸಿದ್ಧವಾದ ಜ್ಯೋತಿರ್ಲಿಂಗವು. ಗೌತಮೀನದಿಯ ದಡದಲ್ಲಿರುವುದು. ಮಹಾಪಾಪಗಳನ್ನು ನಾಶಮಾಡುವುದು. ಯಾವ ಮನುಷ್ಯನು ತ್ರ್ಯಂಬಕವೆಂಬ ಜ್ಯೋತಿರ್ಲಿಂಗವನ್ನು ಭಕ್ತಿಯಿಂದ ದರ್ಶನ ಮಾಡಿ, ಪೂಜಿಸಿ, ನಮಸ್ಕರಿಸಿ ಸ್ತೋತ್ರಮಾಡುವನೋ ಅವನು ಸಕಲ ಪಾಪಗಳ ಬಿಡುಗಡೆಯನ್ನು ಹೊಂದುವನು.

೫೬-೫೭. ಗೌತಮನು ಪೂಜಿಸಿದ ತ್ರ್ಯಂಬಕವೆಂಬ ಜ್ಯೋತಿರ್ಲಿಂಗವು ಇಹ ಲೋಕದಲ್ಲಿ ಸಮಸ್ತ ಇಷ್ಟಾರ್ಥಗಳನ್ನು ಕೊಡುವುದು. ಎಲೈ, ಋಷಿಶ್ರೇಷ್ಠರೇ ನೀವು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಿರುವೆನು. ಮತ್ತೇನು ಕೇಳಬೇಕೆಂದು ಅಭಿಲಾಷೆಯಿರುವುದು? ಕೇಳಿ. ಉತ್ತರವನ್ನು ಹೇಳುವೆನು. ಸಂದೇಹಪಡಬೇಕಾದುದಿಲ್ಲ ಎಂದನು.

ಇಲ್ಲಿಗೆ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ತ್ರ್ಯಂಬಕೇಶ್ವರಮಹಾತ್ಮ್ಯವರ್ಣನೆಯೆಂಬ ಇಪ್ಪತ್ತಾರನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ಸಪ್ತವಿಂಶೋಽಧ್ಯಾಯಃ



॥ ಋಷಯ ಊಚುಃ ॥

ಗಂಗಾ ಚ ಜಲರೂಪೇಣ ಕುತೋ ಜಾತಾ ವದ ಪ್ರಭೋ ।
ತನ್ಮಾಹಾತ್ಮ್ಯಂ ವಿಶೇಷೇಣ ಕುತೋ ಜಾತಂ ವದ ಪ್ರಭೋ ॥ ೧ ॥

ಯೈರ್ವಿಪ್ರೈರ್ಗೌತಮಾಯೈವ ದುಃಖಂ ದತ್ತಂ ದುರಾತ್ಮಭಿಃ ।
ತೇಷಾಂ ಕಿಂ ಚ ತತೋ ಜಾತಮುಚ್ಯತಾಂ ವ್ಯಾಸಸದ್ಗುರೋ ॥ ೨ ॥

---

## ಇಪ್ಪತ್ತೇಳನೆಯ ಅಧ್ಯಾಯವು

೧-೨. ಋಷಿಗಳು ಕೇಳಿದರು.—ಗಂಗೆಯು ಯಾವ ಕಾರಣದಿಂದ ನೀರಿನ ರೂಪವಾಂದಳು? ಆವಳಿಗೆ ಯಾವ ಕಾರಣದಿಂದ ಇಷ್ಟು ಮಹಿಮೆಯುಂಟಾಯಿತು? ಗೌತಮನಿಗೆ ದುಃಖವನ್ನುಂಟುಮಾಡಿದ ಆ ಬ್ರಾಹ್ಮಣರ ಗತಿಯೇನಾಯಿತು? ಸದ್ಗುರುವಾದ, ವ್ಯಾಸಶಿಷ್ಯನಾದ ಸೂತನೇ! ಇದೆಲ್ಲವನ್ನೂ ನೀನು ನಮಗೆ ಹೇಳಬೇಕು ಎನ್ನಲು,

॥ ಸೂತ ಉವಾಚ ॥

ಏವಂ ಸಂಪ್ರಾರ್ಥಿತಾ ಗಂಗಾ ಗೌತಮೇನ ತದಾ ಸ್ವಯಂ ।
ಬ್ರಹ್ಮಣಶ್ಚ ಗಿರೇರ್ವಿಪ್ರಾ ದ್ರುತಂ ತಸ್ಮಾದವಾತರತ್ ॥ ೩ ॥

ಔದುಂಬರಸ್ಯ ಶಾಖಾಯಾಸ್ತತ್ಪ್ರವಾಹೋ ವಿನಿಸ್ಸೃತಃ ।
ತತ್ರ ಸ್ನಾನಂ ಮುದಾ ಚಕ್ರೇ ಗೌತಮೋ ವಿಶ್ರುತೋ ಮುನಿಃ ॥ ೪ ॥

ಗೌತಮಸ್ಯ ಚ ಯೇ ಶಿಷ್ಯಾ ಅನ್ಯೇ ಚೈವ ಮಹರ್ಷಯಃ ।
ಸಮಾಗತಾಶ್ಚ ತೇ ತತ್ರ ಸ್ನಾನಂ ಚಕ್ರುರ್ಮುದಾನ್ವಿತಾಃ ॥ ೫ ॥

ಗಂಗಾದ್ವಾರಂ ಚ ತನ್ನಾಮ ಪ್ರಸಿದ್ಧಮಭವತ್ತದಾ ।
ಸರ್ವಪಾಪಹರಂ ರಮ್ಯಂ ದರ್ಶನಾನ್ಮುನಿಸತ್ತಮಾಃ ॥ ೬ ॥

ಗೌತಮಸ್ಪರ್ಧಿನಸ್ತೇ ಚ ಋಷಯಸ್ತತ್ರ ಚಾಗತಾಃ ।
ಸ್ನಾನಾರ್ಥಂ ತಾಂಶ್ಚ ಸಾ ದೃಷ್ಟ್ವಾ ಹ್ಯಂತರ್ಧಾನಂ ಗತಾ ದ್ರುತಂ ॥ ೭ ॥

ಮಾ ಮೇತಿ ಗೌತಮಸ್ತತ್ರ ವ್ಯಾಜಹಾರ ವಚೋ ದ್ರುತಂ ।
ಮುಹುರ್ಮುಹುಃ ಸ್ತುವನ್ಗಂಗಾಂ ಸಾಂಜಲಿರ್ನತಮಸ್ತಕಃ ॥ ೮ ॥

---

೩-೬. ಸೂತನು ಹೇಳಿದನು.—ಎಲೈ, ಋಷಿಗಳೇ! ಕೇಳಿರಿ. ಗೌತಮನು ಸ್ತೋತ್ರಮಾಡಲು ಗಂಗೆಯು ಆ ಬ್ರಹ್ಮಗಿರಿಯಿಂದ ವೇಗವಾಗಿ ಹರಿದು ಬಂದಳು. ಆ ಪ್ರವಾಹವು ಅತ್ತಿಯ ಗಿಡದಿಂದ ಪ್ರವಹಿಸಿತು. ಅಲ್ಲಿ ಪ್ರಸಿದ್ಧನಾದ ಗೌತಮ ಮುನಿಯೂ ಅವನ ಶಿಷ್ಯರೂ, ಇತರ ಮಹರ್ಷಿಗಳೂ ಅಲ್ಲಿಗೆ ಬಂದು ಸಂತೋಷದಿಂದ ಆ ನದಿಯಲ್ಲಿ ಸ್ನಾನವನ್ನು ಮಾಡಿದರು. ಅದಕ್ಕೆ ಗಂಗಾದ್ವಾರವೆಂಬ ಪ್ರಸಿದ್ಧವಾದ ಹೆಸರಾಯಿತು. ದರ್ಶನ ಮಾತ್ರದಿಂದಲೇ ಅದು ಸಮಸ್ತ ಪಾಪಪರಿಹಾರಕ ವಾಗಿರುವುದು.

೭-೮. ಗೌತಮುನಿಗೆ ವಿರೋಧಿಗಳಾದ ಋಷಿಗಳು ಸ್ನಾನಕ್ಕೋಸ್ಕರವಾಗಿ ಅಲ್ಲಿಗೆ ಬರಲು ಗಂಗೆಯು ಅವರನ್ನು ನೋಡಿ ಬೇಗನೆ ಅಂತರ್ಧಾನವಾದಳು. ಆ ಸಮಯದಲ್ಲಿ ಗೌತಮನು ಅಂತರ್ಧಾನವಾಗಬೇಡವೆಂದು ಹೇಳುತ್ತಾ ಕೈಮುಗಿದು ಕೊಂಡು ತಲೆಯನ್ನು ಬಗ್ಗಿಸಿ ಗಂಗೆಯನ್ನು ಪುನಃ ಪುನಃ ಸ್ತೋತ್ರಮಾಡುತ್ತಿದ್ದನು.

॥ ಗೌತಮ ಉವಾಚ ॥
ಇಮೇ ಚ ಶ್ರೀಮದಾಂಧಾಶ್ಚ ಸಾಧವೋ ವಾಪ್ಯಸಾಧವಃ ।
ಏತತ್ಪುಣ್ಯಪ್ರಭಾವೇಣ ದರ್ಶನಂ ದೀಯತಾಂ ತ್ವಯಾ ॥ ೯ ॥

॥ ಸೂತ ಉವಾಚ ॥
ತತೋ ವಾಣೀ ಸಮುತ್ಪನ್ನಾ ಗಂಗಾಯಾ ವ್ಯೋಮಮಂಡಲಾತ್
ತಚ್ಛೃಣುಧ್ವಮೃಷಿಶ್ರೇಷ್ಠಾ ಗಂಗಾವಚನಮುತ್ತಮಂ ॥ ೧೦ ॥

ಏತೇ ದುಷ್ಟತಮಾಶ್ಚೈವ ಕೃತಘ್ನಾಃ ಸ್ವಾಮಿದ್ರೋಹಿಣಃ ।
ಜಾಲ್ಮಾಃ ಪಾಖಂಡಿನಶ್ಚೈವ ದ್ರಷ್ಟುಂ ವರ್ಜ್ಯಾಶ್ಚ ಸರ್ವದಾ ॥ ೧೧ ॥

॥ ಗೌತಮ ಉವಾಚ ॥
ಮಾತಶ್ಚ ಶ್ರೂಯತಾಮೇತನ್ಮಹತಾಂ ಗಿರ ಏವ ಚ ।
ತಸ್ಮಾತ್ತ್ವಯಾ ಚ ಕರ್ತವ್ಯಂ ಸತ್ಯಂ ಚ ಭಗವದ್ವಚಃ ॥ ೧೨ ॥

ಅಪಕಾರಿಷು ಯೋ ಲೋಕ ಉಪಕಾರಂ ಕರೋತಿ ವೈ ।
ತೇನ ಪೂತೋ ಭವಾಮ್ಯತ್ರ ಭಗವದ್ವಚನಂ ತ್ವಿದಂ ॥ ೧೩ ॥

---

೯-೧೧. ಗೌತಮನು ಹೇಳಿದನು.—ಎಲೈ, ಗಂಗಾದೇವಿಯೇ! ಈ ಋಷಿಗಳು ಸಜ್ಜನರಾಗಲಿ, ದುರ್ಜನರಾಗಲಿ ಸಂಪತ್ತಿನ ಮದದಿಂದ ಮೆರೆಯುತ್ತಿರುವರು. ಇದರ ಪುಣ್ಯಪ್ರಭಾವದಿಂದ ನೀನು ಇವರಿಗೆ ದರ್ಶನವನ್ನು ಕೊಡು ಎಂದು ಹೇಳಿದನು. ಆಗ ಆಕಾಶದಲ್ಲಿ ಗಂಗೆಯು ಆಡಿದ ಒಂದು ಮಾತು ಕೇಳಿಸಿತು. ಆ ಉತ್ತಮವಾದ ಗಂಗೆಯ ಮಾತನ್ನು ಹೇಳುವೆನು. ಕೇಳಿರಿ. ಈ ಋಷಿಗಳು ಅತ್ಯಂತ ದುಷ್ಟರು, ಕೃತಘ್ನರು, ಸ್ವಾಮಿದ್ರೋಹಿಗಳು, ನೀಚರು, ಪಾಷಂಡಿಗಳು ಇವರ ದರ್ಶನವನ್ನು ಮಾಡಬಾರದು ಎಂದಿತು.

೧೨. ಗೌತಮನು ಹೇಳಿದನು.—ಎಲೌ, ತಾಯಿಯಾದ ಗಂಗೆಯೇ! ಮಹಾತ್ಮರು ಹೇಳುವ ಮಾತನ್ನು ಕೇಳು. ಆ ಕಾರಣದಿಂದ ನೀನು ಭಗವಂತನಮಾತನ್ನು ಸತ್ಯವಾಗಿ ಮಾಡಬೇಕು.

೧೩. ಯಾವನು, ಲೋಕದಲ್ಲಿ ಅಪಕಾರ ಮಾಡಿದವನಿಗೆ ಉಪಕಾರಮಾಡುವನೋ, ಅದರಿಂದ ಅವನು ಪರಿಶುದ್ಧನಾಗುವನು. ಎಂಬುದೇ ಭಗವಂತನ ಮಾತಾಗಿರುವುದು.

॥ ಸೂತ ಉವಾಚ ॥

ಇತಿ ಶ್ರುತ್ವಾ ಮುನೇರ್ವಾಕ್ಯಂ ಗೌತಮಸ್ಯ ಮಹಾತ್ಮನಃ ।
ಪುನರ್ವಾಣೀ ಸಮುತ್ಪನ್ನಾ ಗಂಗಾಯಾ ವ್ಯೋಮಮಂಡಲಾತ್ ॥ ೧೪ ॥

ಕಥ್ಯತೇ ಹಿ ತ್ವಯಾ ಸತ್ಯಂ ಗೌತಮರ್ಷೇ ಶಿವಂ ವಚಃ ।
ತಥಾಪಿ ಸಂಗ್ರಹಾರ್ಥಂ ಚ ಪ್ರಾಯಶ್ಚಿತ್ತಂ ಚರಂತು ವೈ ॥ ೧೫ ॥

ಶತಮೇಕೋತ್ತರಂ ಚಾತ್ರ ಕಾರ್ಯಂ ಪ್ರಕ್ರಮಣಂ ಗಿರೇಃ ।
ಭವಚ್ಛಾಸನತಸ್ತ್ವೇತೈಸ್ತ್ವದಧೀನೈರ್ವಿಶೇಷತಃ ॥ ೧೬ ॥

ತತಶ್ಚೈವಾಧಿಕಾರಶ್ಚ ಜಾಯತೇ ದುಷ್ಟಕಾರಿಣಾಂ ।
ಮದ್ದರ್ಶನೇ ವಿಶೇಷೇಣ ಸತ್ಯಮುಕ್ತಂ ಮಯಾ ಮುನೇ ॥ ೧೭ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯಾಶ್ಚಕ್ರುರ್ವೈ ತೇ ತಥಾಽಖಿಲಾಃ ।
ಸಂಪ್ರಾರ್ಥ್ಯ ಗೌತಮಂ ದೀನಾಃ ಕ್ಷಂತವ್ಯೋ ನೋಽಪರಾಧಕಃ ॥ ೧೮ ॥

---

೧೪-೧೭. ಮಹಾತ್ಮನಾದ ಗೌತಮನು ಹೀಗೆ ಹೇಳಲು, ಆ ಮಾತನ್ನು ಕೇಳಿ ಗಂಗೆಯು ಆಕಾಶವಾಣಿಯಿಂದ ಎಲೈ, ಗೌತಮ ಮಹರ್ಷಿಯೇ! ನೀನು ಸತ್ಯವಾದ ಮಾತನ್ನಾಡುವೆ. ಹಾಗಾದರೂ ಆ ಮುನಿಗಳು ಸಂಕ್ಷೇಪವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಅವರು ನೂರೊಂದು ಬಾರಿ ಈ ಬ್ರಹ್ಮಗಿರಿಯನ್ನು ಪ್ರದಕ್ಷಿಣೆ ಮಾಡಿ ಬರಲಿ. ಆಮೇಲೆ ಅವರಿಗೆ ನನ್ನ ದರ್ಶನವನ್ನು ಮಾಡುವ ಅಧಿಕಾರವು ಬರುವುದು. ಇದು ಸತ್ಯವು ಎಂದು ನುಡಿದಳು.

೧೮-೨೧. ಆ ಗಂಗೆಯು ಹೇಳಿದ ಅಶರೀರವಾಣಿಯನ್ನು ಕೇಳಿ ಆ ಮುನಿಗಳೆಲ್ಲರೂ ದೈನ್ಯದಿಂದ ಗೌತಮನನ್ನು ಕುರಿತು, ನಮ್ಮ ತಪ್ಪನ್ನು ಕ್ಷಮಿಸಬೇಕೆಂದು ಕೇಳಿಕೊಂಡರು. ಹೀಗೆ ಕೇಳಿಕೊಳ್ಳುತ್ತಲು ಗೌತಮನು ಆ ಗಂಗಾದ್ವಾರದಿಂದ ಕೆಳಭಾಗಕ್ಕೆ ಇರುವ ಒಂದು ಸ್ಥಳಕ್ಕೆ ಕುಶಾವರ್ತವೆಂಬ ಹೆಸರನ್ನಿಟ್ಟನು. ಆಮೇಲೆ

ಏವಂ ಕೃತೇ ತದಾ ತೇನ ಗೌತಮೇನ ತದಾಜ್ಞಯಾ ।
ಕುಶಾವರ್ತಂ ನಾಮ ಚಕ್ರೇ ಗಂಗಾದ್ವಾರಾದಧೋಗತಂ ॥ ೧೯ ॥

ತತಃ ಪ್ರಾದುರಭೂತ್ತತ್ರ ಸಾ ತಸ್ಯ ಪ್ರೀತಯೇ ಪುನಃ ।
ಕುಶಾವರ್ತಂ ಚ ವಿಖ್ಯಾತಂ ತೀರ್ಥಮಾಸೀದನುತ್ತಮಂ ॥ ೨೦ ॥

ತತ್ರ ಸ್ನಾತೋ ನರೋ ಯಸ್ತು ಮೋಕ್ಷಾಯ ಪರಿಕಲ್ಪತೇ ।
ತ್ಯಕ್ತ್ವಾ ಸರ್ವಾನಘಾನ್ಸದ್ಯೋ ವಿಜ್ಞಾನಂ ಪ್ರಾಪ್ಯ ದುರ್ಲಭಂ ॥ ೨೧ ॥

ಗೌತಮೋ ಋಷಯಶ್ಚಾನ್ಯೇ ಮಿಲಿತಾಶ್ಚ ಪರಸ್ಪರಂ ।
ಲಜ್ಜಿತಾಸ್ತೇ ತದಾ ಯೇ ಚ ಕೃತಘ್ನಾ ಹ್ಯಭವನ್ಪುರಾ ॥ ೨೨ ॥

॥ ಋಷಯ ಊಚುಃ ॥

ಅಸ್ಮಾಭಿರನ್ಯಥಾ ಸೂತ ಶ್ರುತಂ ತದ್ವರ್ಣಯಾಮಹೇ ।
ಗೌತಮಸ್ತಾನ್ದ್ವಿಜಾನ್ಕ್ರುದ್ಧಃ ಶಶಾಪೇತಿ ಪ್ರಬುಧ್ಯತಾಂ ॥ ೨೩ ॥

---

ಗಂಗೆಯು ಆ ಮುನಿಗಳ ಸಂತೋಷಕ್ಕಾಗಿ ಆ ಪ್ರದೇಶದಲ್ಲಿ ಕಾಣಿಸಿಕೊಂಡಳು. ತರುವಾಯ ಅದು ಕುಶಾವರ್ತವೆಂಬ ಶ್ರೇಷ್ಠವಾದ ತೀರ್ಥವಾಯಿತು. ಅಲ್ಲಿ ಸ್ನಾನ ಮಾಡಿದ ಮನುಜನಿಗೆ ಆ ಕ್ಷಣದಲ್ಲಿಯೇ ಸಮಸ್ತ ಪಾಪಗಳೂ ನಾಶವಾಗಿ ದುರ್ಲಭ ವಾದ ಜ್ಞಾನಪ್ರಾಪ್ತಿಯುಂಟಾಗಿ ಕೊನೆಗೆ ಮೋಕ್ಷವೇ ಲಭಿಸುವುದು.

೨೨. ಗೌತಮನೂ, ಋಷಿಗಳೂ ಒಟ್ಟಿಗೆ ಸೇರಿದರು. ಹಿಂದೆ ಕೃತಘ್ನರಾಗಿ ಗೌತಮನಿಗೆ ಅಪಕಾರಮಾಡಿದ ಋಷಿಗಳೆಲ್ಲರೂ ನಾಚಿಕೆಯಿಂದ ತಲೆತಗ್ಗಿಸಿದರು.

೨೩. ಋಷಿಗಳು ಕೇಳಿದರು.—ಎಲೈ, ಸೂತನೇ! ಈ ಗೌತಮನ ಕಥೆ ಯನ್ನು ನಾವು ಬೇರೆವಿಧವಾಗಿ ಕೇಳಿರುವೆವು. ಗೌತಮನು ಕೋಪದಿಂದ ಬ್ರಾಹ್ಮಣ ರಿಗೆ ಶಾಪವನ್ನು ಕೊಟ್ಟನೆಂದು ತಿಳಿದಿರುವೆವು. ಅದರ ವಿಷಯವೇನು ಎನ್ನಲು,

॥ ಸೂತ ಉವಾಚ ॥

ದ್ವಿಜಾಸ್ತದಪಿ ಸತ್ಯಂ ವೈ ಕಲ್ಪಭೇದಸಮಾಶ್ರಯಾತ್ ।
ವರ್ಣಯಾಮಿ ವಿಶೇಷೇಣ ತಾಂ ಕಥಾಮಪಿ ಸುವ್ರತಾಃ ॥ ೨೪ ॥

ಗೌತಮೋಽಪಿ ಋಷೀನ್ದೃಷ್ಟ್ವಾ ತದಾ ದುರ್ಭಿಕ್ಷಪೀಡಿತಾನ್ ।
ತಪಶ್ಚಕಾರ ಸುಮಹದ್ವರುಣಸ್ಯ ಮಹಾತ್ಮನಃ ॥ ೨೫ ॥

ಅಕ್ಷಯ್ಯಂ ಕಲ್ಪಯಾಮಾಸ ಜಲಂ ವರುಣದಾಯಯಾ ।
ತತೋ ವ್ರೀಹೀನ್ಯವಾಂಶ್ಚೈವ ವಾಪಯಾಮಾಸ ಭೂರಿಶಃ ॥ ೨೬ ॥

ಏವಂ ಪರೋಪಕಾರೀ ಸ ಗೌತಮೋ ಮುನಿಸತ್ತಮಃ ।
ಆಹಾರಂ ಕಲ್ಪಯಾಮಾಸ ತೇಭ್ಯಃ ಸ್ವತಪಸೋ ಬಲಾತ್ ॥ ೨೭ ॥

ಕದಾಚಿತ್ತತ್ಸ್ತ್ರಿಯೋ ದುಷ್ಟಾ ಜಲಾರ್ಥಮಪಮಾನಿತಾಃ ।
ಊಚುಃ ಪತಿಭ್ಯಸ್ತಾಃ ಕ್ರುದ್ಧಾ ಗೌತಮೇಷ್ಟಾಕರಂ ವಚಃ ॥ ೨೮ ॥

ತತಸ್ತೇ ಭಿನ್ನಮತಯೋ ಗಾಂ ಕೃತ್ವಾ ಕೃತ್ರಿಮಾಂ ದ್ವಿಜಾಃ ।
ತದ್ಧಾನ್ಯಭಕ್ಷಣಾಸಕ್ತಾಂ ಚಕ್ರುಸ್ತಾಂ ಕುಟಿಲಾಶಯಾಃ ॥ ೨೯ ॥

---

೨೪-೨೭. ಸೂತನು ಹೇಳಿದನು.—ಎಲೈ, ಬ್ರಾಹ್ಮಣರೇ, ಅದೂ ನಿಜವಾದದ್ದೇ ಆಗಿರುವುದು. ಆದರೆ ಅದು ಬೇರೆ ಕಲ್ಪದಲ್ಲಿ ನಡೆದ ವಿಷಯವಾಗಿರುವುದು. ಆ ಕಥೆಯನ್ನೂ ಹೇಳುವೆನು, ಕೇಳಿರಿ. ಗೌತಮನು ದುರ್ಭಿಕ್ಷದ ಬಾಧೆಯನ್ನು ಹೊಂದಿದ ಋಷಿಗಳನ್ನು ನೋಡಿ ವರುಣನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು. ವರುಣನ ದೆಸೆಯಿಂದ ವಿಶೇಷವಾಗಿ ನೀರನ್ನು ಪಡೆದನು. ಆಮೇಲೆ ಗೋಧಿ, ಬತ್ತ ಮುಂತಾದುವುಗಳನ್ನು ಭೂಮಿಯಲ್ಲಿ ವಿಶೇಷವಾಗಿ ಬಿತ್ತಿದನು. ಈ ರೀತಿಯಲ್ಲಿ ಪರೋಪಕಾರವನ್ನು ಮಾಡುವ ಗೌತಮಮುನಿಶ್ರೇಷ್ಠನು ತನ್ನ ತಪಸ್ಸಿನ ಬಲದಿಂದ ಸಮಸ್ತ ಋಷಿಗಳಿಗೂ ಆಹಾರವನ್ನು ಕಲ್ಪಿಸಿದನು.

೨೮-೩೧. ಒಂದಾನೊಂದು ಕಾಲದಲ್ಲಿ ಆ ಋಷಿಪತ್ನಿಯರು ಕೆಟ್ಟವರಾದುದರಿಂದ ನೀರಿಗೆ ಹೋಗಿದ್ದಾಗ ಅಪಮಾನವನ್ನು ಹೊಂದಿ, ತಮ್ಮ ಪತಿಗಳೊಡನೆ ಗೌತಮನ ವಿಷಯದಲ್ಲಿ ಹೊಟ್ಟೆಕಿಚ್ಚುಪಡುವಂತಹ ಮಾತುಗಳನ್ನು ಹೇಳಿದರು. ಆಮೇಲೆ ಭೇದಬುದ್ಧಿಯುಳ್ಳ ಆ ಋಷಿಗಳು ಕೃತ್ರಿಮವಾದ ಒಂದು ಹಸುವನ್ನು

ಸ್ವಧಾನ್ಯಭಕ್ಷಣಾಸಕ್ತಾಂ ಗಾಂ ದೃಷ್ಟ್ವಾ ಗೌತಮಸ್ತದಾ ।
ತೃಣೇನ ತಾಡಯಾಮಾಸ ಶನೈಸ್ತಾಂ ಸನ್ನಿವಾರಯನ್ ॥ ೩೦ ॥

ತೃಣಸಂಸ್ಪರ್ಶಮಾತ್ರೇಣ ಸಾ ಭೂಮೌ ಪತಿತಾ ಚ ಗೌಃ ।
ಮೃತಾ ಹ್ಯಭೂತ್ಕ್ಷಣಂ ವಿಪ್ರಾ ಭಾವಿಕರ್ಮವಶಾತ್ತದಾ ॥ ೩೧ ॥

ಗೌರ್ಹತಾ ಗೌತಮೇನೇತಿ ತದಾ ತೇ ಕುಟಿಲಾಶಯಾಃ ।
ಏಕತ್ರೀಭೂಯ ತತ್ರತ್ಯಾಃ ಸಕಲಾ ಋಷಯೋಽವದನ್ ॥ ೩೨ ॥

ತತಸ್ಸ ಗೌತಮೋ ಭೀತೋ ಗೌರ್ಹತೇತಿ ಬಭೂವ ಹ ।
ಚಕಾರ ವಿಸ್ಮಯಂ ನಾರ್ಯಹಲ್ಯಾ ಶಿಷ್ಯೈಶ್ಚಿವಾನುಗಾಃ ॥ ೩೩ ॥

ತತಸ್ಸ ಗೌತಮೋ ಜ್ಞಾತ್ವಾ ತಾಂ ಗಾಂ ಕ್ರೋಧಸಮಾಕುಲಃ ।
ಶಶಾಪ ತಾನೃಷೀನ್ಸರ್ವಾನ್ಗೌತಮೋ ಮುನಿಸತ್ತಮಃ ॥ ೩೪ ॥

॥ ಗೌತಮ ಉವಾಚ ॥

ಯೂಯಂ ಸರ್ವೇ ದುರಾತ್ಮಾನೋ ದುಃಖದಾ ಮೇ ವಿಶೇಷತಃ ।
ಶಿವಭಕ್ತಸ್ಯ ಸತತಂ ಸ್ಯುರ್ವೇದವಿಮುಖಾಸ್ಸದಾ ॥ ೩೫ ॥

---

ಮಾಡಿ ಗೌತಮನ ಹೊಲದಲ್ಲಿರುವ ಪೈರುಗಳನ್ನು ಮೇಯುವಂತೆ ಮಾಡಿದರು. ಗೌತಮನು ಆ ಹಸುವನ್ನು ಕಂಡು ಒಂದು ಹುಲ್ಲುಕಡ್ಡಿಯಿಂದ ಹೊಡೆದನು. ಆ ಹುಲ್ಲುಕಡ್ಡಿಯು ತಗುಲಿದ ಮಾತ್ರಕ್ಕೆ, ಮುಂದೆ ಆಗಬೇಕಾದ ಕಾರ್ಯವಶದಿಂದ ಆ ಹಸುವು ಭೂಮಿಯಮೇಲೆ ಬಿದ್ದು ಪ್ರಾಣವನ್ನು ಬಿಟ್ಟಿತು.

೩೨-೩೪. ಮೋಸಬುದ್ಧಿಯುಳ್ಳ ಆ ಋಷಿಗಳೆಲ್ಲರೂ ಒಟ್ಟಿಗೆ ಸೇರಿ ಗೌತಮನು ಹಸುವನ್ನು ಕೊಂದನು ಎಂದರು. ಆಮೇಲೆ ಗೌತಮನು ಹಸುವು ಸತ್ತಿತೆಂದು ಭಯಪಟ್ಟನು. ಗೌತಮ ಪತ್ನಿಯಾದ ಅಹಲ್ಯೆಯೂ, ಶಿಷ್ಯರೂ ಈ ವಿಷಯದಲ್ಲಿ ಆಶ್ಚರ್ಯಪಟ್ಟರು. ಆಮೇಲೆ ಗೌತಮನು ಆ ಹಸುವು ಕೃತ್ರಿಮವಾದುದೆಂದು ತಿಳಿದು ಕೋಪದಿಂದ ಆ ಮುನಿಗಳೆಲ್ಲರಿಗೂ ಶಾಪವನ್ನು ಕೊಟ್ಟನು.

೩೫-೪೩. ಗೌತಮನು ಹೇಳಿದನು.—ನೀವೆಲ್ಲರೂ ಕೆಟ್ಟ ಮನಸ್ಸಿನವರು. ಶಿವಭಕ್ತನಾದ ನನಗೆ ವಿಶೇಷವಾಗಿ ದುಃಖವನ್ನುಂಟುಮಾಡಿದವರು, ಆದುದರಿಂದ ನೀವೆಲ್ಲರೂ ವೇದಾಭ್ಯಾಸವಿಲ್ಲದವರಾಗಿರಿ. ಈ ದಿನದಿಂದ ವೇದೋಕ್ತವಾದ ಸತ್ಕರ್ಮ

ಅದ್ಯಪ್ರಭೃತಿ ವೇದೋಕ್ತೇ ಸತ್ಕರ್ಮಣಿ ವಿಶೇಷತಃ ।
ಮಾ ಭೂಯಾದ್ಭವತಾಂ ಶ್ರದ್ಧಾ ಶೈವಮಾರ್ಗೇ ವಿಮುಕ್ತಿದೇ ॥ ೩೬ ॥

ಅದ್ಯಪ್ರಭೃತಿ ದುರ್ಮಾರ್ಗೇ ತತ್ರ ಶ್ರದ್ಧಾ ಭವೇತ್ತುವಃ ।
ಮೋಕ್ಷಮಾರ್ಗವಿಹೀನೇ ಹಿ ಸದಾ ಶ್ರುತಿಬಹಿರ್ಮುಖೇ ॥ ೩೭ ॥

ಅದ್ಯಪ್ರಭೃತಿ ಭಾಲಾನಿ ಮೃಲ್ಲಿಪ್ತಾನಿ ಭವಂತು ವಃ ।
ಸ್ರಂಸಧ್ವಂ ನರಕೇ ಯೂಯಂ ಭಾಲಮೃಲ್ಲೇಪನಾದ್ದ್ವಿಜಾಃ ॥ ೩೮ ॥

ಭವಂತೋ ಮಾ ಭವಿಷ್ಯಂತು ಶಿವೈಕಪರದೈವತಾಃ ।
ಅನ್ಯದೇವಸಮತ್ವೇನ ಜಾನಂತು ಶಿವಮದ್ವಯಂ ॥ ೩೯ ॥

ಮಾ ಭೂಯಾದ್ಭವತಾಂ ಪ್ರೀತಿಶ್ಶಿವಪೂಜಾದಿಕರ್ಮಣಿ ।
ಶಿವನಿಷ್ಠೇಷು ಭಕ್ತೇಷು ಶಿವಪರ್ವಸು ಸರ್ವದಾ ॥ ೪೦ ॥

ಅದ್ಯ ದತ್ತಾ ಮಯಾ ಶಾಪಾ ಯಾವಂತೋ ದುಃಖದಾಯಕಾಃ ।
ತಾವಂತಸ್ಸಂತು ಭವತಾಂ ಸಂತತಾವಪಿ ಸರ್ವದಾ ॥ ೪೧ ॥

---

ಗಳಲ್ಲಿ ನಿಮಗೆ ಆಸಕ್ತಿಯಿಲ್ಲದೆ ಹೋಗಲಿ. ದುರ್ಮಾರ್ಗಾಸಕ್ತರಾಗಿರಿ. ಯಾವಾಗಲೂ ವೇದಬಾಹ್ಯರಾಗಿ ಮೋಕ್ಷಮಾರ್ಗವಿಲ್ಲದವರಾಗಿರಿ. ಈದಿನ ಮೊದಲುಗೊಂಡು ನಿಮ್ಮ ಹಣೆಗೆ ಮಣ್ಣನ್ನು ಬಳಿದುಕೊಳ್ಳಿರಿ. ಇಂತಹ ನೀವು ನರಕಕ್ಕೆ ಬೀಳುವಿರಿ. ಶಿವನೇ ಪರದೇವತೆಯೆಂದು ತಿಳಿಯದೆ ಶಿವನು ಇತರ ದೇವತೆಗಳಿಗೆ ಸಮಾನನೆಂದು ತಿಳಿಯುವ ದುರ್ಬುದ್ಧಿಯು ನಿಮಗುಂಟಾಗಲಿ. ಶಿವಪೂಜಾದಿ ಕರ್ಮಗಳಲ್ಲಿಯೂ, ಶಿವಭಕ್ತರಲ್ಲಿಯೂ, ಶಿವಸಂಬಂಧವಾದ ಹಬ್ಬಗಳಲ್ಲಿಯೂ ನಿಮಗೆ ಪ್ರೀತಿಯು ಇಲ್ಲದೆ ಹೋಗಲಿ. ನನಗೆ ಎಷ್ಟು ಜನರು ದುಃಖವನ್ನುಂಟುಮಾಡಿದರೋ ಅವರೆಲ್ಲರಿಗೂ ಈ ನನ್ನ ಶಾಪವು ಆಗಲಿ. ನಿಮ್ಮ ಪುತ್ರ ಪೌತ್ರರೂ, ಶಿವಭಕ್ತಿಯಿಲ್ಲದವರಾಗಿ ಆಗಲಿ.

ಅಶೈವಾಸ್ಸಂತು ಭವತಾಂ ಪುತ್ರಪೌತ್ರಾದಯೋ ದ್ವಿಜಾಃ ।
ಪುತ್ರೈಸ್ಸಹೈವ ನ್ಯತಿಷ್ಠಂತು ಭವಂತೋ ನರಕೇ ಧ್ರುವಂ ॥ ೪೨ ॥

ತತೋ ಭವಂತು ಚಾಂಡಾಲಾ ದುಃಖದಾರಿದ್ರ್ಯಪೀಡಿತಾಃ ।
ಶಠಾ ನಿಂದಾಕರಾಸ್ಸರ್ವೇ ತಪ್ತಮುದ್ರಾಂಕಿತಾಸ್ಸದಾ ॥ ೪೩ ॥

॥ ಸೂತ ಉವಾಚ ॥

ಇತಿ ಶಪ್ತ್ವಾ ಮುನೀನ್ಸರ್ವಾನ್ಗೌತಮಸ್ಸ್ವಾಶ್ರಮಂ ಯಯೌ ।
ಶಿವಭಕ್ತಿಂ ಚಕಾರಾತಿ ಸ ಬಭೂವ ಸುಪಾವನಃ ॥ ೪೪ ॥

ತತಸ್ತೈಃ ಖಿನ್ನಹೃದಯಾ ಋಷಯಸ್ತೇಽಖಿಲಾ ದ್ವಿಜಾಃ ।
ಕಾಂಚ್ಯಾಂ ಚಕ್ರುರ್ನಿವಾಸಂ ಹಿ ಶೈವಧರ್ಮಬಹಿಷ್ಕೃತಾಃ ॥ ೪೫ ॥

ತತ್ಪುತ್ರಾಶ್ಚಾಭವನ್ಸರ್ವೇ ಶೈವಧರ್ಮಬಹಿಷ್ಕೃತಾಃ ।
ಅಗ್ರೇ ತದ್ವದ್ಭವಿಷ್ಯಂತಿ ಕಲೌ ಬಹುಜನಾಃ ಖಲಾಃ ॥ ೪೬ ॥

---

ನೀವು ಪುತ್ರರೊಡನೆ ಶಾಶ್ವತವಾದ ನರಕವನ್ನು ಅನುಭವಿಸಿ ಆಮೇಲೆ, ದುಃಖದಿಂದಲೂ ದಾರಿದ್ರ್ಯದಿಂದಲೂ ಪೀಡಿತರಾದ ಚಾಂಡಾಲರಾಗಿ ಹುಟ್ಟಿ ಮೂರ್ಖರೂ, ನಿಂದೆಮಾಡತಕ್ಕವರೂ, ತಪ್ತಮುದ್ರೆಯ ಗುರುತುಳ್ಳವರೂ ಆಗಿರಿ ಎಂದು ಶಪಿಸಿದನು.

೪೪–೪೬. ಸೂತನು ಹೇಳಿದನು.—ಗೌತಮನು ಆ ಮುನಿಗಳಿಗೆಲ್ಲ ಹೀಗೆ ಶಾಪವನ್ನು ಕೊಟ್ಟು ತನ್ನ ಆಶ್ರಮಕ್ಕೆ ಹೋಗಿ ವಿಶೇಷವಾದ ಶಿವಭಕ್ತಿಯಿಂದ ಪರಿಶುದ್ಧನಾದನು. ಆ ಸಮಸ್ತ ಋಷಿಗಳೂ ದುಃಖದಿಂದ ಕೂಡಿದ ಮುಖವುಳ್ಳವರಾಗಿ ಶಿವಧರ್ಮವನ್ನು ಬಿಟ್ಟು ಕಂಚಿಯಲ್ಲಿ ವಾಸಮಾಡುತ್ತಿದ್ದರು. ಅವರ ಮಕ್ಕಳೂ ಶಿವಧರ್ಮವನ್ನು ಬಿಟ್ಟರು. ಮುಂದೆ ಕಲಿಯುಗದಲ್ಲಿ ಇಂತಹ ದುಷ್ಟರು ಅನೇಕರುಂಟಾಗುವರು.

ಇತಿ ಪ್ರೋಕ್ತಮಶೇಷೇಣ ತದ್ವೃತ್ತಂ ಮುನಿಸತ್ತಮಾಃ ।
ಪೂರ್ವವೃತ್ತಮಪಿ ಪ್ರಾಜ್ಞಾಃ ಶ್ರುತಂ ಸರ್ವೈಸ್ತು ಚಾದರಾತ್ ॥ ೪೭ ॥

ಇತಿ ವಶ್ಚ ಸಮಾಖ್ಯಾತೋ ಗೌತಮ್ಯಾಶ್ಚ ಸಮುದ್ಭವಃ ।
ಮಾಹಾತ್ಮ್ಯಮುತ್ತಮಂ ಚೈವ ಸರ್ವಪಾಪಹರಂ ಪರಂ ॥ ೪೮ ॥

ತ್ರ್ಯಂಬಕಸ್ಯ ಚ ಮಾಹಾತ್ಮ್ಯಂ ಜ್ಯೋತಿರ್ಲಿಂಗಸ್ಯ ಕೀರ್ತಿತಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೪೯ ॥

ಅತಃ ಪರಂ ಪ್ರವಕ್ಷ್ಯಾಮಿ ವೈದ್ಯನಾಥೇಶ್ವರಸ್ಯ ಹಿ ।
ಜ್ಯೋತಿರ್ಲಿಂಗಸ್ಯ ಮಾಹಾತ್ಮ್ಯಂ ಶ್ರೂಯತಾಂ ಪಾಪಹಾರಕಂ ॥ ೫೦ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ತ್ರ್ಯಂಬಕೇಶ್ವರಜ್ಯೋತಿರ್ಲಿಂಗಮಾಹಾತ್ಮ್ಯವರ್ಣನಂ ನಾಮ
ಸಪ್ತವಿಂಶೋಽಧ್ಯಾಯಃ

---

೪೭-೪೯. ಎಲೈ, ಋಷಿಶ್ರೇಷ್ಠರೇ! ನಿಮಗೆ ಗೌತಮಮುನಿಯ ವೃತ್ತಾಂತವೆಲ್ಲವನ್ನೂ ವಿಸ್ತಾರವಾಗಿ ಹೇಳಿರುವೆನು. ಆದರದಿಂದ ನೀವೆಲ್ಲರೂ ಕೇಳಿದಿರಿ. ನಿಮಗೆ ಗೌತಮೀ ನದಿಯ ಉತ್ಪತ್ತಿಯ ಬಗೆಯನ್ನೂ ಅದರ ಪಾಪಪರಿಹಾರಕವಾದ ಸಮಸ್ತ ಮಹಾತ್ಮೆಯನ್ನೂ ತ್ರ್ಯಂಬಕೇಶ್ವರನೆಂಬ ಜ್ಯೋತಿರ್ಲಿಂಗದ ಮಹಾತ್ಮೆಯನ್ನೂ ಹೇಳಿರುವೆನು. ಇದನ್ನು ಕೇಳಿದವರು ತಮ್ಮ ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವರು. ಈ ವಿಷಯದಲ್ಲಿ ಸಂದೇಹವಿರುವುದಿಲ್ಲ.

೫೦. ಇಲ್ಲಿಂದ ಮುಂದೆ ವೈದ್ಯನಾಥೇಶ್ವರನೆಂಬ ಜ್ಯೋತಿರ್ಲಿಂಗದ ಪಾಪಪರಿಹಾರಕವಾದ ಮಹಾಮಹಿಮೆಯನ್ನು ಹೇಳುವೆನು ಕೇಳಿರಿ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ತ್ರ್ಯಂಬಕೇಶ್ವರ ಜ್ಯೋತಿರ್ಲಿಂಗಮಹಾತ್ಮೆಯೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಅಷ್ಟಾವಿಂಶೋಽಧ್ಯಾಯಃ

॥ ಸೂತ ಉವಾಚ ॥

ರಾವಣೋ ರಾಕ್ಷಸಶ್ರೇಷ್ಠೋ ಮಾನೀ ಮಾನಪರಾಯಣಃ ।
ಆರರಾಧ ಹರಂ ಭಕ್ತ್ಯಾ ಕೈಲಾಸೇ ಪರ್ವತೋತ್ತಮೇ ॥ ೧ ॥

ಆರಾಧಿತಃ ಕಿಯತ್ಕಾಲಂ ನ ಪ್ರಸನ್ನೋ ಹರೋ ಯದಾ ।
ತದಾ ಚಾನ್ಯತ್ತಪಶ್ಚಕ್ರೇ ಪ್ರಸಾದಾರ್ಥಂ ಶಿವಸ್ಯ ಸಃ ॥ ೨ ॥

---

## ಇಪ್ಪತ್ತೆಂಟನೆಯ ಅಧ್ಯಾಯವು

೧-೨. ಸೂತನು ಹೇಳಿದನು.—ಅತ್ಯಂತ ಸ್ವಾಭಿಮಾನಿಯಾದ ರಾವಣನೆಂಬ ಓರ್ವ ರಾಕ್ಷಸಶ್ರೇಷ್ಠನು ಕೈಲಾಸಪರ್ವತದಲ್ಲಿ ಶಿವನನ್ನು ಭಕ್ತಿಯಿಂದ ಪೂಜಿಸುತ್ತಿದ್ದನು. ಬಹಳ ಕಾಲದವರೆಗೂ ಪೂಜಿಸಿದರೂ ಶಿವನು ಪ್ರಸನ್ನನಾಗದಿರಲು ಆ ಶಿವನ ಪ್ರಸನ್ನತೆಗೋಸ್ಕರವಾಗಿ ಮತ್ತೊಂದು ವಿಧವಾಗಿ ತಪಸ್ಸನ್ನು ಮಾಡಿದನು.

ತತಶ್ಚಾಯಂ ಹಿಮವತಸ್ಸಿದ್ಧಿಸ್ಥಾನಸ್ಯ ವೈ ಗಿರೇಃ ।
ಪೌಲಸ್ತ್ಯೋ ರಾವಣಶ್ಶ್ರೀಮಾನ್ದಕ್ಷಿಣೇ ವೃಕ್ಷಖಂಡಕೇ ॥ ೩ ॥

ಭೂಮೌ ಗರ್ತಂ ವರಂ ಕೃತ್ವಾ ತತ್ರಾಗ್ನಿಂ ಸ್ಥಾಪ್ಯ ಸ ದ್ವಿಜಾಃ ।
ತತ್ಸನ್ನಿಧೌ ಶಿವಂ ಸ್ಥಾಪ್ಯ ಹವನಂ ಸ ಚಕಾರ ಹ ॥ ೪ ॥

ಗ್ರೀಷ್ಮೇ ಪಂಚಾಗ್ನಿಮಧ್ಯಸ್ಥೋ ವರ್ಷಾಸು ಸ್ಥಂಡಿಲೇಶಯಃ ।
ಶೀತೇ ಜಲಾಂತರಸ್ಥೋ ಹಿ ತ್ರಿಧಾ ಚಕ್ರೇ ತಪಶ್ಚ ಸಃ ॥ ೫ ॥

ಚಕಾರೈವಂ ಬಹುತಪೋ ನ ಪ್ರಸನ್ನಸ್ತದಾಪಿ ಹಿ ।
ಪರಮಾತ್ಮಾ ಮಹೇಶಾನೋ ದುರಾರಾಧ್ಯೋ ದುರಾತ್ಮಭಿಃ ॥ ೬ ॥

ತತಶ್ಶಿರಾಂಸಿ ಛಿತ್ವಾ ಚ ಪೂಜನಂ ಶಂಕರಸ್ಯ ವೈ ।
ಪ್ರಾರಬ್ಧಂ ದೈತ್ಯಪತಿನಾ ರಾವಣೇನ ಮಹಾತ್ಮನಾ ॥ ೭ ॥

ಏಕೈಕಂ ಚ ಶಿರಶ್ಛಿನ್ನಂ ವಿಧಿನಾ ಶಿವಪೂಜನೇ ।
ಏವಂ ಸತ್ಕ್ರಮತಸ್ತೇನ ಛಿನ್ನಾನಿ ನವ ವೈ ಯದಾ ॥ ೮ ॥

---

೩-೪. ಪುಲಸ್ತ್ಯವಂಶದಲ್ಲಿ ಹುಟ್ಟಿ ಸಂಪದ್ಯುಕ್ತನಾದ ಆ ರಾವಣನು ಹಿಮವತ್ಪರ್ವತದ ಸಿದ್ಧಸ್ಥಾನವೆಂಬ ಬೆಟ್ಟದ ದಕ್ಷಿಣದಿಕ್ಕಿನ ವೃಕ್ಷಖಂಡವೆಂಬ ಸ್ಥಳದಲ್ಲಿ ಭೂಮಿಯಲ್ಲಿ ಒಂದು ಅಗ್ನಿ ಕುಂಡವನ್ನುಮಾಡಿ, ಅದರಲ್ಲಿ ಅಗ್ನಿ ಪ್ರತಿಷ್ಠೆಯನ್ನು ಮಾಡಿ ಅದರ ಸಮೀಪದಲ್ಲಿ ಶಿವಲಿಂಗವನ್ನು ಸ್ಥಾಪಿಸಿ ಹೋಮವನ್ನು ಮಾಡಿದನು.

೫-೯. ಗ್ರೀಷ್ಮ ಋತುವಿನಲ್ಲಿ ಪಂಚಾಗ್ನಿಯ ಮಧ್ಯದಲ್ಲಿಯೂ, ಮಳೆಗಾಲದಲ್ಲಿ ನೆಲದಮೇಲೆ ಮಲಗಿಯೂ, ಶೀತಕಾಲದಲ್ಲಿ ನೀರಿನಲ್ಲಿ ನಿಂತೂ ಈ ಮೂರು ಬಗೆಯಲ್ಲಿ ಉಗ್ರವಾದ ತಪಸ್ಸನ್ನು ಮಾಡಿದನು. ದುರಾತ್ಮರ ಪೂಜೆಗೆ ಶಿವನು ಸಂತುಷ್ಟನಾಗುವವನಲ್ಲ. ಆದುದರಿಂದ ಇಷ್ಟು ಕಠಿನವಾದ ತಪಸ್ಸು ಮಾಡಿದರೂ ಶಿವನು ರಾವಣನಿಗೆ ಪ್ರಸನ್ನನಾಗಲಿಲ್ಲ. ಆಮೇಲೆ ದೈತ್ಯರಾಜನಾದ ಆ ರಾವಣನು ತನ್ನ ತಲೆಗಳನ್ನು ಕತ್ತರಿಸಿ ಶಿವನ ಪೂಜೆಯನ್ನು ಮಾಡಲು ಪ್ರಾರಂಭಿಸಿದನು. ಶಿವಪೂಜಾವಿಧಿಗನುಸಾರವಾಗಿ ಒಂದೊಂದು ತಲೆಯನ್ನೂ ಕತ್ತರಿಸಿ ಪೂಜಿಸುತ್ತಾ ಕ್ರಮವಾಗಿ ಒಂಭತ್ತು ತಲೆಗಳನ್ನು

ಏಕಸ್ಮಿನ್ನವಶಿಷ್ಟೇ ತು ಪ್ರಸನ್ನಶ್ಶಂಕರಸ್ತದಾ ।
ಆವಿರ್ಬಭೂವ ತತ್ರೈವ ಸಂತುಷ್ಟೋ ಭಕ್ತವತ್ಸಲಃ ॥ ೯ ॥

ಶಿರಾಂಸಿ ಪೂರ್ವವತ್ಕೃತ್ವಾ ನೀರುಜಾನಿ ತಥಾ ಪ್ರಭುಃ ।
ಮನೋರಥಂ ದದೌ ತಸ್ಮಾದತುಲಂ ಬಲಮುತ್ತಮಂ ॥ ೧೦ ॥

ಪ್ರಸಾದಂ ತಸ್ಯ ಸಂಪ್ರಾಪ್ಯ ರಾವಣಸ್ಸ ಚ ರಾಕ್ಷಸಃ ।
ಪ್ರತ್ಯುವಾಚ ಶಿವಂ ಶಂಭುಂ ನತಸ್ಕಂಧಃ ಕೃತಾಂಜಲಿಃ ॥ ೧೧ ॥

॥ ರಾವಣ ಉವಾಚ ॥

ಪ್ರಸನ್ನೋ ಭವ ದೇವೇಶ ಲಂಕಾಂ ಚ ತ್ವಾಂ ನಯಾಮ್ಯಹಂ ।
ಸಫಲಂ ಕುರು ಮೇ ಕಾಮಂ ತ್ವಾಮಹಂ ಶರಣಂ ಗತಃ ॥ ೧೨ ॥

॥ ಸೂತ ಉವಾಚ ॥

ಇತ್ಯುಕ್ತಶ್ಚ ತದಾ ತೇನ ಶಂಭುರ್ವೈ ರಾವಣೇನ ಸಃ ।
ಪ್ರತ್ಯುವಾಚ ವಿಚೇತಸ್ಕಃ ಸಂಕಟಂ ಪರಮಂ ಗತಃ ॥ ೧೩ ॥

---

ಕತ್ತರಿಸಿದನು. ಒಂದು ತಲೆಯು ಮಾತ್ರ ಉಳಿದು ಅದನ್ನೂ ಕತ್ತರಿಸಲುದ್ಯುಕ್ತನಾಗಲು ಆಗ ಭಕ್ತರಲ್ಲಿ ಪ್ರೀತಿಯುಳ್ಳ ಶಿವನು ಪ್ರಸನ್ನನಾಗಿ ಆ ಪ್ರದೇಶದಲ್ಲಿ ಆವಿರ್ಭವಿಸಿ ರಾವಣನಿಗೆ ದರ್ಶನವನ್ನು ಕೊಟ್ಟನು.

೧೦-೧೧. ಶಿವನು ರಾವಣನ ತಲೆಗಳನ್ನು ಮೊದಲಿದ್ದಂತೆ ಮಾಡಿ ಅವನಿಗೆ ಇಷ್ಟಾರ್ಥಗಳನ್ನೂ ಅಸಮಾನವಾದ ಬಲವನ್ನೂ ಕರುಣಿಸಿದನು. ಆ ರಾವಣನು ಶಿವನ ಅನುಗ್ರಹವನ್ನು ಪಡೆದು ತಲೆಯನ್ನು ಬಗ್ಗಿಸಿ ಕೈಮುಗಿದುಕೊಂಡು ಶಿವನನ್ನು ಕುರಿತು,

೧೨. ರಾವಣನು ಹೇಳಿದನು.---ದೇವದೇವನಾದ ಓ ಶಿವನೇ, ಪ್ರಸನ್ನನಾಗು. ನಾನು ಈ ನಿನ್ನ ಲಿಂಗವನ್ನು ಲಂಕೆಗೆ ತೆಗೆದುಕೊಂಡು ಹೋಗುವೆನು. ನಿನ್ನನ್ನೇ ನಾನು ಶರಣುಹೊಂದಿರುವೆನು. ನನ್ನ ಇಷ್ಟಾರ್ಥವನ್ನು ಸಫಲವನ್ನಾಗಿ ಮಾಡು ಎಂದು ಪ್ರಾರ್ಥಿಸಿದನು.

೧೩-೧೫. ರಾವಣನು ಹೀಗೆ ಹೇಳುತ್ತಲು ಶಿವನು ಮನದಲ್ಲಿ ಸಂಕಟಪಡುತ್ತ ಎಲೈ ರಾಕ್ಷಸಶ್ರೇಷ್ಠನೇ! ಸಾರವಾದ ನನ್ನ ಮಾತನ್ನು ಕೇಳು. ಅತ್ಯಂತ ಭಕ್ತಿ

॥ ಶಿವ ಉವಾಚ ॥

ಶ್ರೂಯತಾಂ ರಾಕ್ಷಸಶ್ರೇಷ್ಠ ವಚೋ ಮೇ ಸಾರವತ್ತಯಾ ।
ನೀಯತಾಂ ಸ್ವಗೃಹೇ ಮೇ ಹಿ ಸದ್ಭಕ್ತ್ಯಾ ಲಿಂಗಮುತ್ತಮಂ ॥ ೧೪ ॥

ಭೂಮೌ ಲಿಂಗಂ ಯದಾ ತ್ವಂ ಚ ಸ್ಥಾಪಯಿಷ್ಯಸಿ ತತ್ರ ವೈ ।
ಸ್ಥಾಸ್ಯತ್ಯತ್ರ ನ ಸಂದೇಹೋ ಯಥೇಚ್ಛಸಿ ತಥಾ ಕುರು ॥ ೧೫ ॥

॥ ಸೂತ ಉವಾಚ ॥

ಇತ್ಯುಕ್ತಶ್ಶಂಭುನಾ ತೇನ ರಾವಣೋ ರಾಕ್ಷಸೇಶ್ವರಃ ।
ತಥೇತಿ ತತ್ಸಮಾದಾಯ ಜಗಾಮ ಭವನಂ ನಿಜಂ ॥ ೧೬ ॥

ಆಸೀನ್ಮೂತ್ರೋತ್ಸರ್ಗಕಾಮೋ ಮಾರ್ಗೇ ಹಿ ಶಿವಮಾಯಯಾ ।
ತತ್ಸ್ತಂಭಿತುಂ ನ ಶಕ್ತೋಽಭೂತ್ಪೌಲಸ್ತ್ಯೋ ರಾವಣಃ ಪ್ರಭುಃ ॥ ೧೭ ॥

ದೃಷ್ಟ್ವೈಕಂ ತತ್ರ ವೈ ಗೋಪಂ ಪ್ರಾರ್ಥ್ಯ ಲಿಂಗಂ ದದೌ ಚ ತತ್ ।
ಮುಹೂರ್ತಕೇ ಹ್ಯತಿಕ್ರಾಂತೇ ಗೋಪೋಽಭೂದ್ವಿಕಲಸ್ತದಾ ॥ ೧೮ ॥

---

ಯಿಂದ ನನ್ನ ಈ ಲಿಂಗವನ್ನು ನಿನ್ನ ಮನೆಗೆ ತೆಗೆದುಕೊಂಡು ಹೋಗು. ದಾರಿಯಲ್ಲಿ ನೀನು ಈ ಲಿಂಗವನ್ನು ಭೂಮಿಯಮೇಲೆ ಇಡಬೇಡ. ಹಾಗಲ್ಲದೆ ಅಜಾಗರೂಕತೆ ಯಿಂದ ನೆಲದ ಮೇಲೆ ಇಟ್ಟಿದ್ದೇ ಆದರೆ ಇದು ಅಲ್ಲಿಯೇ ಸ್ಥಿರವಾಗಿ ನಿಲ್ಲುವುದು. ನಿನ್ನ ಇಷ್ಟಬಂದಂತೆ ಮಾಡು ಎಂದು ಹೇಳಿದನು.

೧೬-೨೦. ಶಿವನು ಹೀಗೆ ಹೇಳುತ್ತಲು, ರಾಕ್ಷಸಾಧಿಪತಿಯಾದ ರಾವಣನು ಹಾಗೆಯೇ ಆಗಲೆಂದು ಆ ಲಿಂಗವನ್ನು ತೆಗೆದುಕೊಂಡು ತನ್ನ ಮನೆಗೆ ಹೊರಟನು. ಶಿವನ ಮಾಯೆಯಿಂದ ದಾರಿಯಲ್ಲಿ ಅವನಿಗೆ ಮೂತ್ರ ವಿಸರ್ಜನೆಯನ್ನು ಮಾಡಬೇಕಾಗಿ ಬಂದು ಅದನ್ನು ತಡೆಯಲು ಸಾಧ್ಯವಾಗಲಿಲ್ಲ. ಅಲ್ಲಿ ಒಬ್ಬ ಗೊಲ್ಲನು ನಿಂತಿದ್ದನ್ನು ನೋಡಿ ಅವನನ್ನು ಬೇಡಿಕೊಂಡು ಆ ಲಿಂಗವನ್ನು ಅವನ ಕೈಯ್ಯಲ್ಲಿ ಕೊಟ್ಟು ತನ್ನ ಕಾರ್ಯಕ್ಕೆ ಹೋದನು. ಒಂದು ಮುಹೂರ್ತವು ಕಳೆಯಿತು. ಗೊಲ್ಲನಿಗೆ ಬುದ್ಧಿಭ್ರಾಂತಿಯುಂಟಾಗಿ ಆ ಲಿಂಗದ ಭಾರವನ್ನು ತಡೆಯಲಾರದೆ ಅವನು ಅದನ್ನು ಭೂಮಿಯ ಮೇಲೆ ಇರಿಸಿದನು. ಆ ಲಿಂಗವು ಅಲ್ಲಿಯೇ ವಜ್ರದಂತೆ ಗಟ್ಟಿಯಾಗಿ

ಭೂಮೌ ಸಂಸ್ಥಾಪಯಾಮಾಸ ತದ್ಭಾರೇಣಾತಿಪೀಡಿತಃ ।
ತತ್ರೈವ ತತ್ಸ್ಥಿತಂ ಲಿಂಗಂ ವಜ್ರಸಾರಸಮುದ್ಭವಂ ।
ಸರ್ವಕಾಮಪ್ರದಂ ಚೈವ ದರ್ಶನಾತ್ಪಾಪಹಾರಕಂ ॥ ೧೯ ॥

ವೈದ್ಯನಾಥೇಶ್ವರಂ ನಾಮ್ನಾ ತಲ್ಲಿಂಗಮುಭವನ್ಮುನೇ ।
ಪ್ರಸಿದ್ಧಂ ತ್ರಿಷು ಲೋಕೇಷು ಭುಕ್ತಿಮುಕ್ತಿಪ್ರದಂ ಸತಾಂ ॥ ೨೦ ॥

ಜ್ಯೋತಿರ್ಲಿಂಗಮಿದಂ ಶ್ರೇಷ್ಠಂ ದರ್ಶನಾತ್ಪೂಜನಾದಪಿ ।
ಸರ್ವಪಾಪಹರಂ ದಿವ್ಯಂ ಮುಕ್ತಿವರ್ಧನಮುತ್ತಮಂ ॥ ೨೧ ॥

ತಸ್ಮಿಂಲ್ಲಿಂಗೇ ಸ್ಥಿತೇ ತತ್ರ ಸರ್ವಲೋಕಹಿತಾಯ ವೈ ।
ರಾವಣಃ ಸ್ವಗೃಹಂ ಗತ್ವಾ ವರಂ ಪ್ರಾಪ್ಯ ಮಹೋತ್ತಮಂ ।
ಪ್ರಿಯಾಯೈ ಸರ್ವಮಾಚಖ್ಯೌ ಸುಖೇನಾತಿ ಮಹಾಸುರಃ ॥ ೨೨ ॥

ತಚ್ಛ್ರುತ್ವಾ ಸಕಲಾ ದೇವಾಶ್ಶಕ್ರಾದ್ಯಾ ಮುನಯಸ್ತಥಾ ।
ಪರಸ್ಪರಂ ಸಮಾಮಂತ್ರ್ಯ ಶಿವಾಸಕ್ತಧಿಯೋಽಮಲಾಃ ॥ ೨೩ ॥

---

ನೆಲಸಿತು. ಅದನ್ನು ದರ್ಶನ ಮಾಡಿದವರಿಗೆ ಪಾಪ ಪರಿಹಾರಕವಾದುದಾಗಿ ಸಕಲ ಇಷ್ಟಾರ್ಥಗಳನ್ನೂ ಕೊಡುತಕ್ಕುದಾಗಿರುವುದು. ಆ ಲಿಂಗಕ್ಕೆ ವೈದ್ಯನಾಥೇಶ್ವರನೆಂದು ಹೆಸರಾಯಿತು. ಆ ಲಿಂಗವು ಮೂರುಲೋಕದಲ್ಲಿಯೂ ಪ್ರಸಿದ್ಧವಾದುದಾಗಿ ಸಜ್ಜನರಿಗೆ ಭುಕ್ತಿ ಮುಕ್ತಿರೂಪವಾದ ಫಲಗಳನ್ನು ಕೊಡುತ್ತಲಿರುವುದು.

೨೧-೨೩. ಈ ಜ್ಯೋತಿರ್ಲಿಂಗವು ದರ್ಶನಮಾಡುವುದಕ್ಕೂ, ಪೂಜಿಸುವುದಕ್ಕೂ ಅತ್ಯಂತ ಶ್ರೇಷ್ಠವಾದುದಾಗಿ ಸಮಸ್ತ ಪಾಪಗಳನ್ನೂ ನಾಶಮಾಡಿ ಮುಕ್ತಿಯನ್ನು ಕೊಡುವುದು ಸಮಸ್ತ ಲೋಕಹಿತಕ್ಕಾಗಿ ಆ ಲಿಂಗವು ಅಲ್ಲಿಯೇ ನೆಲಸಿರಲು ರಾವಣನು ಶಿವನಿಂದ ಉತ್ತಮವಾದ ವರವನ್ನು ಪಡೆದು ತನ್ನ ಮನೆಗೆ ಹೋಗಿ ತನ್ನ ಪತ್ನಿಗೆ ನಡೆದ ಸಕಲ ವೃತ್ತಾಂತವನ್ನು ಹೇಳಿ ಸುಖವಾಗಿದ್ದನು. ಲಿಂಗವು ಅಲ್ಲಿಯೇ ನೆಲಸಿದ್ದನ್ನು ಕೇಳಿ ದೇವೇಂದ್ರನೇ ಮುಂತಾದ ದೇವತೆಗಳೂ, ಮುನಿಗಳೂ ಸೇರಿ ಮಂತ್ರಾಲೋಚನೆಯನ್ನು ಮಾಡಿ ಶಿವನಲ್ಲಿ ಆಸಕ್ತವಾದ ಬುದ್ಧಿಯುಳ್ಳವರಾಗಿ ಹರಿ

ತಸ್ಮಿನ್ಕಾಲೇ ಸುರಾಸ್ಸರ್ವೇ ಹರಿಬ್ರಹ್ಮಾದಯೋ ಮುನೇ ।
ಆಜಗ್ಮುಸ್ತತ್ರ ಸುಪ್ರೀತ್ಯಾ ಪೂಜಾಂ ಚಕ್ರುರ್ವಿಶೇಷತಃ ॥ ೨೪ ॥

ಪ್ರತ್ಯಕ್ಷಂ ತಂ ತದಾ ದೃಷ್ಟ್ವಾ ಪ್ರತಿಷ್ಠಾಪ್ಯ ಚ ತೇ ಸುರಾಃ ।
ವೈದ್ಯನಾಥೇತಿ ಸಂಪ್ರೋಚ್ಯ ನತ್ವಾ ನುತ್ವಾ ದಿವಂ ಯಯುಃ ॥ ೨೫ ॥

॥ ಋಷಯ ಊಚುಃ ॥

ತಸ್ಮಿಂಲ್ಲಿಂಗೇ ಸ್ಥಿತೇ ತತ್ರ ರಾವಣೇ ಚ ಗೃಹಂ ಗತೇ ।
ಕಿಂ ಚರಿತ್ರಮಭೂತ್ತಾತ ತತಸ್ತದ್ವದ ವಿಸ್ತರಾತ್ ॥ ೨೬ ॥

॥ ಸೂತ ಉವಾಚ ॥

ರಾವಣೋಽಪಿ ಗೃಹಂ ಗತ್ವಾ ವರಂ ಪ್ರಾಪ್ಯ ಮಹೋತ್ತಮಂ ।
ಪ್ರಿಯಾಯೈ ಸರ್ವಮಾಚಖ್ಯೌ ಮುಮೋದಾತಿ ಮಹಾಸುರಃ ॥ ೨೭ ॥

ತಚ್ಛ್ರುತ್ವಾ ಸಕಲಂ ದೇವಾಶ್ಶಕ್ರಾದ್ಯಾ ಮುನಯಸ್ತಥಾ ।
ಪರಸ್ಪರಂ ಸಮೂಚುಸ್ತೇ ಸಮುದ್ವಿಗ್ನಾ ಮುನೀಶ್ವರಾಃ ॥ ೨೮ ॥

---

ಬ್ರಹ್ಮಾದಿಗಳೊಡನೆ ಸಂತೋಷದಿಂದ ಆ ಸ್ಥಳಕ್ಕೆ ಬಂದು ಆ ಲಿಂಗಕ್ಕೆ ವಿಶೇಷ ಪೂಜೆಯನ್ನು ಮಾಡಿ ಲಿಂಗವನ್ನು ಪ್ರತಿಷ್ಠೆಮಾಡಿ ವೈದ್ಯನಾಥನೆಂದು ಹೆಸರಿಟ್ಟು ನಮುಸ್ಕಾರವನ್ನೂ, ಸ್ತೋತ್ರವನ್ನೂ ಮಾಡಿ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದರು.

೨೬. ಋಷಿಗಳು ಕೇಳಿದರು.—ಎಲೈ ಸೂತನೇ! ಆ ಲಿಂಗವು ಅಲ್ಲಿಯೇ ನೆಲಸುತ್ತಲು ರಾವಣನು ಮನೆಗೆ ಹೋದಮೇಲೆ ಏನು ನಡೆಯಿತೆಂಬುದನ್ನು ವಿಸ್ತಾರವಾಗಿ ನಮಗೆ ಹೇಳಬೇಕು ಎಂದರು.

೨೭-೨೮. ಸೂತನು ಹೇಳಿದನು.—ರಾವಣನು ಅತ್ಯುತ್ತಮವಾದ ವರವನ್ನು ಪಡೆದು ಮನೆಗೆ ಹೋಗಿ ತನ್ನ ಪತ್ನಿಗೆ ನಡೆದುದೆಲ್ಲವನ್ನೂ ಹೇಳಿ ಸಂತೋಷದಿಂದಿದ್ದನು. ಇದನ್ನು ಕೇಳಿ ದೇವೇಂದ್ರನೇ ಮೊದಲಾದ ದೇವತೆಗಳೂ, ಮುನಿಗಳೂ ವಿಶೇಷವಾದ ಭಯವುಳ್ಳವರಾಗಿ ತಂತಮ್ಮಲ್ಲಿಯೇ ಮಾತನಾಡಿಕೊಂಡರು.

॥ ದೇವಾದಯ ಊಚುಃ ॥

ರಾವಣೋಽಯಂ ದುರಾತ್ಮಾ ಹಿ ದೇವದ್ರೋಹೀ ಖಲಃ ಕುಧೀಃ ।
ಶಿವದ್ವಾರಂ ಚ ಸಂಪ್ರಾಪ್ಯ ದುಃಖಂ ದಾಸ್ಯತಿ ನೋಽತಿ ಸಃ ॥ ೨೯ ॥

ಕಿಂ ಕುರ್ಮಃ ಕ್ವ ಚ ಗಚ್ಛಾಮಃ ಕಿಂ ಭವಿಷ್ಯತಿ ವಾ ಪುನಃ ।
ದುಷ್ಟಶ್ಚ ದಕ್ಷತಾಂ ಪ್ರಾಪ್ತಃ ಕಿಂ ಕಿಂ ನೋ ಸಾಧಯಿಷ್ಯತಿ ॥ ೩೦ ॥

ಇತಿ ದುಃಖಂ ಸಮಾಪನ್ನಾ ಶ್ಶಕ್ರಾದ್ಯಾ ಮುನಯಸ್ಸುರಾಃ ।
ನಾರದಂ ಚ ಸಮಾಹೂಯ ಪಪ್ರಚ್ಛುರ್ವಿಕಲಾಸ್ತದಾ ॥ ೩೧ ॥

॥ ದೇವಾ ಊಚುಃ ॥

ಸರ್ವಂ ಕಾರ್ಯಂ ಸಮರ್ಥೋಽಸಿ ಕರ್ತುಂ ತ್ವಂ ಮುನಿಸತ್ತಮ ।
ಉಪಾಯಂ ಕುರು ದೇವರ್ಷೇ ದೇವಾನಾಂ ದುಃಖನಾಶನೇ ॥ ೩೨ ॥

ರಾವಣೋಽಯಂ ಮಹಾದುಷ್ಟಃ ಕಿಂ ಕಿಂ ನೈವ ಕರಿಷ್ಯತಿ ।
ಕ್ವ ಯಾಸ್ಯಾಮೋ ವಯಂ ಚಾತ್ರ ದುಷ್ಟೇನಾಪೀಡಿತಾ ವಯಂ ॥ ೩೩ ॥

---

೨೯-೩೧. ಈ ರಾವಣನು ದುಷ್ಟಬುದ್ಧಿಯುಳ್ಳವನು. ದೇವತೆಗಳಿಗೆ ಶತ್ರುವು. ಶಿವನಿಂದ ವರವನ್ನು ಪಡೆದು ನಮಗೆ ವಿಶೇಷವಾಗಿ ದುಃಖವನ್ನುಂಟುಮಾಡುವನು. ಏನು ಮಾಡೋಣ? ಎಲ್ಲಿಗೆ ಹೋಗೋಣ? ಮುಂದೆ ಏನಾಗುವುದೋ, ದುಷ್ಟನಾದ ಅವನಿಗೆ ಶಕ್ತಿಯೂ ಬಂದಿರುವಲ್ಲಿ ನಮ್ಮನ್ನು ಏನೇನು ಮಾಡಿಬಿಡುವನೋ? ಎಂಬುದಾಗಿ ದೇವೇಂದ್ರನೇ ಮೊದಲಾದ ದೇವತೆಗಳೂ, ಮುನಿಗಳೂ ದುಃಖಪಡುತ್ತಾ ನಾರದನನ್ನು ಕರೆದು ಭಯದಿಂದ ಭ್ರಾಂತರಾಗಿ ಆ ಮುನಿಯನ್ನು ಪ್ರಶ್ನೆ ಮಾಡಿದರು.

೩೨-೩೩. ಎಲೈ, ಮುನಿಶ್ರೇಷ್ಠನೇ! ನೀನು ಎಲ್ಲ ಕೆಲಸಗಳನ್ನು ಮಾಡಲು ಶಕ್ತನಾಗಿರುವೆ. ದೇವರ್ಷಿಯಾದ ನೀನು ದೇವತೆಗಳ ದುಃಖನಾಶಕ್ಕಾಗಿ ಈಗ ಒಂದು ಉಪಾಯವನ್ನು ಮಾಡಬೇಕು. ಮಹಾದುಷ್ಟನಾದ ರಾವಣನು ಯಾವ ಕಾರ್ಯವನ್ನು ತಾನೇ ಮಾಡುವುದಿಲ್ಲ? ಆ ದುಷ್ಟನ ಬಾಧೆಯಿಂದ ಪೀಡಿತರಾದ ನಾವು ಎಲ್ಲಿಗೆ ಹೋಗೋಣ? ಎಂದರು.

॥ ನಾರದ ಉವಾಚ ॥

ದುಃಖಂ ತ್ಯಜತ ಭೋ ದೇವಾ ಯುಕ್ತಿಂ ಕೃತ್ವಾ ಚ ಯಾಮ್ಯಹಂ ।
ದೇವಕಾರ್ಯಂ ಕರಿಷ್ಯಾಮಿ ಕೃಪಯಾ ಶಂಕರಸ್ಯ ವೈ ॥ ೩೪ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಸ ತು ದೇವರ್ಷಿರಗಮದ್ರಾವಣಾಲಯಂ ।
ಸತ್ಕಾರಂ ಸಮನುಪ್ರಾಪ್ಯ ಪ್ರೀತ್ಯೋವಾಚಾಖಿಲಂ ಚ ತತ್ ॥ ೩೫ ॥

॥ ನಾರದ ಉವಾಚ ॥

ರಾಕ್ಷಸೋತ್ತಮ ಧನ್ಯಸ್ತ್ವಂ ಶೈವವರ್ಯಸ್ತಪೋಮನಾಃ ।
ತ್ವಾಂ ದೃಷ್ಟ್ವಾ ಚ ಮನೋ ಮೇಽದ್ಯ ಪ್ರಸನ್ನಮತಿ ರಾವಣ ॥ ೩೬ ॥

ಸ್ವವೃತ್ತಂ ಬ್ರೂಹ್ಯಶೇಷೇಣ ಶಿವಾರಾಧನಸಂಭವಂ ।
ಇತಿ ಪೃಷ್ಟಸ್ತದಾ ತೇನ ರಾವಣೋ ವಾಕ್ಯಮಬ್ರವೀತ್ ॥ ೩೭ ॥

---

೩೪. ನಾರದನು ಹೇಳಿದನು.—ಎಲೈ, ದೇವತೆಗಳೇ ದುಃಖವನ್ನು ಬಿಡಿ ನಾನು ಒಂದು ಉಪಾಯವನ್ನು ಮಾಡಿ ಹೊರಟುಹೋಗುವೆನು. ಶಿವನ ದಯೆಯಿಂದಲೇ ದೇವತೆಗಳ ಕಾರ್ಯವನ್ನು ಸಾಧಿಸುವೆನು.

೩೫. ಹೀಗೆಂದು ಹೇಳಿ, ಆ ದೇವರ್ಷಿಯಾದ ನಾರದನು, ರಾವಣನ ಮನೆಗೆ ಹೋದನು. ಅವನು ಮಾಡಿದ ಸತ್ಕಾರವನ್ನು ಸ್ವೀಕರಿಸಿ ಪ್ರೀತಿಯಿಂದ ಎಲ್ಲವನ್ನೂ ಕೇಳಿದನು.

೩೬-೩೭. ಎಲೈ, ರಾಕ್ಷಸಶ್ರೇಷ್ಠನಾದ ರಾವಣನೇ! ನೀನೇ ಕೃತಾರ್ಥನೂ, ಶಿವಭಕ್ತರಲ್ಲಿ ಶ್ರೇಷ್ಠನೂ, ತಪಸ್ಸಿನಲ್ಲಿ ಮನಸ್ಸುಳ್ಳವನೂ ಆಗಿರುವೆ. ನಿನ್ನನ್ನು ನೋಡಿ ನನ್ನ ಮನಸ್ಸು ಸಂತೋಷವನ್ನು ಹೊಂದಿರುವುದು. ಶಿವನ ಪೂಜೆಯನ್ನು ಮಾಡಿದ ನಿನ್ನ ವೃತ್ತಾಂತವನ್ನು ಸಂಪೂರ್ಣವಾಗಿ ನನಗೆ ಹೇಳು, ಎಂದು ಪ್ರಶ್ನೆಮಾಡಲು, ರಾವಣನು ಹೇಳಿದನು.

॥ ರಾವಣ ಉವಾಚ ॥

ಗತ್ವಾ ಮಯಾ ತು ಕೈಲಾಸೇ ತಪೋಽರ್ಥಂ ಚ ಮಹಾಮುನೇ ।
ತತ್ರೈವ ಬಹುಕಾಲಂ ವೈ ತಪಸ್ತಪ್ತಂ ಸುದಾರುಣಂ ॥ ೩೮ ॥

ಯದಾ ನ ಶಂಕರಸ್ತುಷ್ಟಸ್ತತಶ್ಚ ಪರಿವರ್ತಿತಂ ।
ಆಗತ್ಯ ವೃಕ್ಷಖಂಡೇ ವೈ ಪುನಸ್ತಪ್ತಂ ಮಯಾ ಮುನೇ ॥ ೩೯ ॥

ಗ್ರೀಷ್ಮೇ ಪಂಚಾಗ್ನಿಮಧ್ಯೇ ತು ವರ್ಷಾಸು ಸ್ಥಂಡಿಲೇಶಯಃ ।
ಶೀತೇ ಜಲಾಂತರಸ್ಥೋ ಹಿ ಕೃತಂ ಚೈವ ತ್ರಿಧಾ ತಪಃ ॥ ೪೦ ॥

ಏವಂ ಮಯಾ ಕೃತಂ ತತ್ರ ತಪೋಽತ್ಯುಗ್ರಂ ಮುನೀಶ್ವರ ।
ತಥಾಪಿ ಶಂಕರೋ ಮಹ್ಯಂ ನ ಪ್ರಸನ್ನೋಽಭವನ್ಮನಾಕ್ ॥ ೪೧ ॥

ತದಾ ಮಯಾ ತು ಕ್ರುದ್ಧೇನ ಭೂಮೌ ಗರ್ತಂ ವಿಧಾಯ ಚ ।
ತತ್ರಾಗ್ನಿಂ ಚ ಸಮಾಧಾಯ ಪಾರ್ಥಿವಂ ಚ ಪ್ರಕಲ್ಪ್ಯ ಚ ॥ ೪೨ ॥

ಗಂಧೈಶ್ಚ ಚಂದನೈಶ್ಚೈವ ಧೂಪೈಶ್ಚ ವಿವಿಧೈಸ್ತದಾ ।
ನೈವೇದ್ಯೈಃ ಪೂಜಿತಶ್ಶಂಭುರಾರಾರ್ತಿಕವಿಧಾನತಃ ॥ ೪೩ ॥

---

೩೮-೪೧. ಎಲೈ, ಮಹಾಮುನಿಯಾದ ನಾರದನೇ! ನಾನು ತಪಸ್ಸಿಗಾಗಿ ಕೈಲಾಸಪರ್ವತಕ್ಕೆ ಹೋಗಿ ಅಲ್ಲಿಯೇ ಬಹಳಕಾಲ ಕ್ರೂರವಾದ ತಪಸ್ಸನ್ನು ಮಾಡಿದೆನು. ಶಂಕರನು ಪ್ರಸನ್ನನಾಗದಿರಲು ಹಿಂದಿರುಗಿ ವೃಕ್ಷಖಂಡನೆಂಬ ಪ್ರದೇಶಕ್ಕೆ ಬಂದು ಮತ್ತೆ ತಪಸ್ಸನ್ನು ಮಾಡಿದೆನು. ಗ್ರೀಷ್ಮಋತುವಿನಲ್ಲಿ ಪಂಚಾಗ್ನಿಯ ಮಧ್ಯದಲ್ಲಿಯೂ, ಮಳೆಗಾಲದಲ್ಲಿ ನೆಲದಮೇಲೆ ಮಲಗಿಯೂ, ಹಿಮಕಾಲದಲ್ಲಿ ನೀರಿನಲ್ಲಿ ನಿಂತುಕೊಂಡೂ ಮೂರು ಬಗೆಯಾಗಿ ತಪಸ್ಸು ಮಾಡಿದೆನು. ಹೀಗೆ ಅತ್ಯುಗ್ರವಾಗಿ ತಪಸ್ಸು ಮಾಡಿದರೂ ಶಿವನು ನನಗೆ ಸ್ವಲ್ಪವಾದರೂ ಪ್ರಸನ್ನನಾಗಲಿಲ್ಲ.

೪೨-೪೫. ಆಗ ನಾನು ಕೋಪದಿಂದ ಭೂಮಿಯಲ್ಲಿ ಒಂದು ಹಳ್ಳವನ್ನು ಮಾಡಿ ಅಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಿ ಅದರ ಸಮೀಪದಲ್ಲಿಯೇ ಪಾರ್ಥಿವಲಿಂಗವನ್ನು ಪ್ರತಿಷ್ಠೆಮಾಡಿ, ಶ್ರೀಗಂಧ, ಬಗೆ ಬಗೆಯ ಧೂಪ, ನೈವೇಧ್ಯ, ಆರತಿ ಮುಂತಾದವುಗಳಿಂದ ಶಿವನನ್ನು ಪೂಜಿಸಿದೆನು. ನಮಸ್ಕಾರ, ಪುಣ್ಯಕರವಾದ ಸ್ತೋತ್ರಗಳು

ಪ್ರಣಿಪಾತೈಃ ಸ್ತವೈಃ ಪುಣ್ಯೈಸ್ತೋಷಿತಶ್ಶಂಕರೋ ಮಯಾ ।
ಗೀತೈರ್ನೃತ್ಯೈಶ್ಚ ವಾದ್ಯೈಶ್ಚ ಮುಖಾಂಗುಲಿಸಮರ್ಪಣೈಃ ॥ ೪೪ ॥

ಏತೈಶ್ಚ ವಿವಿಧೈಶ್ಚಾನ್ಯೈರುಪಾಯೈರ್ಬಹುಭಿರ್ಮುನೇ ।
ಶಾಸ್ತ್ರೋಕ್ತೇನ ವಿಧಾನೇನ ಪೂಜಿತೋ ಭಗವಾನ್ಹರಃ ॥ ೪೫ ॥

ನ ತುಷ್ಟಃ ಸಂಮುಖೋ ಜಾತೋ ಯದಾ ಚ ಭಗವಾನ್ಹರಃ ।
ತದಾಹಂ ದುಃಖಿತೋಽಭೂವಂ ತಪಸೋಽಪ್ರಾಪ್ಯ ಸತ್ಫಲಂ ॥ ೪೬ ॥

ಧಿಕ್ಶರೀರಂ ಬಲಂ ಚೈವ ಧಿಕ್ತಪಃ ಕರಣಂ ಮಮ ।
ಇತ್ಯುಕ್ತ್ವಾ ತು ಮಯಾ ತತ್ರ ಸ್ಥಾಪಿತೇಽಗ್ನೌ ಹುತಂ ಬಹು ॥ ೪೭ ॥

ಪುನಶ್ಚೇತಿ ವಿಚಾರ್ಯೈವ ತ್ಯಕ್ತ್ವಾಮ್ಯಗ್ನೌ ನಿಜಾಂ ತನುಂ ।
ಸಂಛಿನ್ನಾನಿ ಶಿರಾಂಸ್ಯೇವ ತಸ್ಮಿನ್ಪ್ರಜ್ವಲಿತೇ ಶುಚೌ ॥ ೪೮ ॥

ಸುಚ್ಛಿತ್ತ್ವೈಕೈಕಶಸ್ತಾನಿ ಕೃತ್ವಾ ಶುದ್ಧಾನಿ ಸರ್ವಶಃ ।
ಶಂಕರಾಯಾರ್ಪಿತಾನ್ಯೇವ ನವಸಂಖ್ಯಾನಿ ವೈ ಮಯಾ ॥ ೪೯ ॥

---

ಇವುಗಳಿಂದ ಶಿವನನ್ನು ಸಂತೋಷಪಡಿಸಿದೆನು. ಸಂಗೀತವನ್ನೂ, ನೃತ್ಯವನ್ನೂ, ಬಾಯಿಗೆ ಬೆರಳುಗಳನ್ನೂ ಹಾಕಿ ವಾದ್ಯಗಳನ್ನೂ ಮಾಡಿ ಇನ್ನೂ ಬಗೆ ಬಗೆಯ ಅನೇಕ ಯುಕ್ತಿಗಳಿಂದಲೂ, ಶಾಸ್ತ್ರೋಕ್ತವಾದ ವಿಧಿಯಿಂದಲೂ ಮಹಾಮಹಿಮನಾದ ಶಿವನನ್ನು ಪೂಜಿಸಿದೆನು.

೪೬-೫೦. ಹೀಗಾದರೂ ಭಗವಂತನಾದ ಶಿವನು ತೃಪ್ತಿಪಡದೆ ಪ್ರತ್ಯಕ್ಷನಾಗದೆ ಹೋಗಲು ನಾನು ಮಹಾ ದುಃಖವನ್ನು ಹೊಂದಿ ತಪಸ್ಸಿಗೆ ಒಳ್ಳೆ ತಕ್ಕಫಲವನ್ನು ಹೊಂದದೆ ನನ್ನ ಶರೀರವನ್ನೂ, ಬಲವನ್ನೂ, ತಪಸ್ಸನ್ನೂ ನಿಂದಿಸಿ, ನಾನು ಪ್ರತಿಷ್ಠಿಸಿದ ಅಗ್ನಿಯಲ್ಲಿ ಅನೇಕ ಹೋಮಗಳನ್ನು ಮಾಡಿದೆನು. ಪುನಃ ಮನಸ್ಸಿನಲ್ಲಿ ವಿಚಾರಮಾಡಿ ಈ ಅಗ್ನಿಯಲ್ಲಿಯೇ ನನ್ನ ಶರೀರವನ್ನು ಹೋಮಮಾಡುವೆನೆಂದು ನಿಶ್ಚಯಿಸಿ ತಲೆಗಳನ್ನು ಕತ್ತರಿಸಿ ಉರಿಯುತ್ತಿರುವ ಅಗ್ನಿಕುಂಡದಲ್ಲಿ ಒಂದೊಂದಾಗಿ

ಯಾವಚ್ಚ ದಶಮಂ ಛೇತ್ತುಂ ಪ್ರಾರಬ್ಧಮೃಷಿಸತ್ತಮ ।
ತಾವದಾವಿರಭೂತ್ತತ್ರ ಜ್ಯೋತೀರೂಪೋ ಹರಸ್ಸ್ವಯಂ ॥ ೫೦ ॥

ಮಾ ಮೇತಿ ವ್ಯಾಹರತ್ರ್ರೀತ್ಯಾ ದ್ರುತಂ ವೈ ಭಕ್ತವತ್ಸಲಃ ।
ಪ್ರಸನ್ನಶ್ಚ ವರಂ ಬ್ರೂಹಿ ದದಾಮಿ ಮನಸೇಪ್ಸಿತಂ ॥ ೫೧ ॥

ಇತ್ಯುಕ್ತೇ ಚ ತದಾ ತೇನ ಮಯಾ ದೃಷ್ಟೋ ಮಹೇಶ್ವರಃ ।
ಪ್ರಣತಸ್ಸಂಸ್ತುತಶ್ಚೈವ ಕರೌ ಬಧ್ವಾ ಸುಭಕ್ತಿತಃ ॥ ೫೨ ॥

ತದಾ ವೃತಂ ಮಯೈತಚ್ಚ ದೇಹಿ ಮೇ ಹ್ಯತುಲಂ ಬಲಂ ।
ಯದಿ ಪ್ರಸನ್ನೋ ದೇವೇಶ ದುರ್ಲಭಂ ಕಿಂ ಭವೇನ್ಮಮ ॥ ೫೩ ॥

ಶಿವೇನ ಪರಿತುಷ್ಟೇನ ಸರ್ವಂ ದತ್ತಂ ಕೃಪಾಲುನಾ ।
ಮಹ್ಯಂ ಮನೋಭಿಲಷಿತಂ ಗಿರಾ ಪ್ರೋಚ್ಯ ತಥಾಸ್ತ್ವಿತಿ ॥ ೫೪ ॥

ಅವೋಘಯಾ ಸುದೃಷ್ಟ್ಯಾ ವೈ ವೈದ್ಯವದ್ಯೋಜಿತಾನಿ ಮೇ ।
ಶಿರಾಂಸಿ ಸಂಧಯಿತ್ವಾ ತು ದೃಷ್ಟಾನಿ ಪರಮಾತ್ಮನಾ ॥ ೫೫ ॥

---

ಹೋಮಮಾಡಿದೆನು. ಹೀಗೆ ಒಂಭತ್ತುತಲೆಗಳನ್ನೂ ಶಿವನಿಗೆ ಸಮರ್ಪಿಸಿದೆನು. ಹತ್ತನೆಯದನ್ನು ಕತ್ತರಿಸುವುದಕ್ಕೆ ಆರಂಭಿಸಿದಾಗ ಶಿವನು ಪ್ರಕಾಶಸ್ವರೂಪನಾಗಿ ಆವಿರ್ಭವಿಸಿ ಪ್ರತ್ಯಕ್ಷನಾದನು.

೫೧–೫೬. ಅಷ್ಟರಲ್ಲಿ ಭಕ್ತವತ್ಸಲನಾದ ಶಿವನು ಬೇಗನೆ ಬಂದು ಬೇಡ ಬೇಡವೆಂದು ಹೇಳುತ್ತ ಪ್ರಸನ್ನನಾಗಿ ವರವನ್ನು ಕೊಡುವೆನು ಎಂದನು. ಹೀಗೆ ಹೇಳಿದ ಶಿವನನ್ನು ನೋಡಿ ನಾನು ನಮಸ್ಕಾರವನ್ನು ಮಾಡಿ ಸ್ತೋತ್ರಮಾಡಿ ಕೈಗಳನ್ನು ಮುಗಿದುಕೊಂಡು ಭಕ್ತಿಯಿಂದ ನನಗೆ ಅಸಮಾನವಾದ ಬಲವನ್ನು ಕೊಡು. ನೀನು ಪ್ರಸನ್ನನಾದರೆ ನನಗೆ ಯಾವುದು ತಾನೇ ದುರ್ಲಭವು ಎಂದೆನು. ದಯಾಶಾಲಿಯಾದ ಶಿವನು ಸಂತೋಷದಿಂದ ನಾನು ಕೇಳಿದ ಎಲ್ಲ ವರವನ್ನು ಕೊಟ್ಟನು. ನನ್ನ ಮನಸ್ಸಿನ ಅಭಿಲಾಷೆಯನ್ನು ತಿಳಿದು ನಿನ್ನ ಇಷ್ಟಾರ್ಥಗಳು ಸಿದ್ಧಿಸಲಿ ಎಂದನು.

ಏವಂಕೃತೇ ತದಾ ತತ್ರ ಶರೀರಂ ಪೂರ್ವವನ್ಮಮ ।
ಜಾತಂ ತಸ್ಯ ಪ್ರಸಾದಾಚ್ಚ ಸರ್ವಂ ಪ್ರಾಪ್ತಂ ಫಲಂ ಮಯಾ ॥ ೫೬ ॥

ತದಾ ಚ ಪ್ರಾರ್ಥಿತೋ ಮೇ ಸಂಸ್ಥಿತೋಽಸೌ ವೃಷಭಧ್ವಜಃ ।
ವೈದ್ಯನಾಥೇಶ್ವರೋ ನಾಮ್ನಾ ಪ್ರಸಿದ್ಧೋಽಭೂಜ್ಜಗತ್ತ್ರಯೇ ॥ ೫೭ ॥

ದರ್ಶನಾತ್ಪೂಜನಾಜ್ಜ್ಯೋತಿರ್ಲಿಂಗರೂಪೋ ಮಹೇಶ್ವರಃ ।
ಭುಕ್ತಿಮುಕ್ತಿಪ್ರದೋ ಲೋಕೇ ಸರ್ವೇಷಾಂ ಹಿತಕಾರಕಃ ॥ ೫೮ ॥

ಜ್ಯೋತಿರ್ಲಿಂಗಮಹಂ ತದ್ವೈ ಪೂಜಯಿತ್ವಾ ವಿಶೇಷತಃ ।
ಪ್ರಣಿಪತ್ಯಾಗತಶ್ಚಾತ್ರ ವಿಜೇತುಂ ಭುವನತ್ರಯಂ ॥ ೫೯ ॥

॥ ಸೂತ ಉವಾಚ ॥

ತದೀಯಂ ತದ್ವಚಃ ಶ್ರುತ್ವಾ ದೇವರ್ಷಿರ್ಜಾತಸಂಭ್ರಮಃ ।
ವಿಹಸ್ಯ ಚ ಮನಸ್ಯೇವ ರಾವಣಂ ನಾರದೋಽಬ್ರವೀತ್ ॥ ೬೦ ॥

---

ಶಿವನು ತನ್ನ ಕರುಣಾಪೂರಿತವಾದ ದೃಷ್ಟಿಯಿಂದಲೇ ವೈದ್ಯನಂತೆ ನನ್ನ ತಲೆಗಳನ್ನು ಮತ್ತೆ ಕೂಡಿಸಿದನು. ಹೀಗೆ ಮಾಡಲು ಆ ಶಿವನ ಅನುಗ್ರಹದಿಂದ ನನ್ನ ಶರೀರವು ಮೊದಲಿನಂತೆ ಆಯಿತು. ಸಮಸ್ತ ಫಲಗಳೂ ನನಗೆ ಪ್ರಾಪ್ತವಾದುವು.

೫೭–೫೯. ಆಗ ನಾನು ಪ್ರಾರ್ಥನೆಯನ್ನು ಮಾಡಿದ ಮೇಲೆ ವೃಷಭಧ್ವಜನಾದ ಶಿವನು ವೈದ್ಯನಾಥೇಶ್ವರನೆಂಬ ಹೆಸರಿನಿಂದ ನಾನು ಪೂಜಿಸುತ್ತಿದ್ದ ಲಿಂಗದಲ್ಲಿ ನೆಲಸಿ ಜ್ಯೋತಿರ್ಲಿಂಗದರೂಪನಾಗಿ ಮೂರುಲೋಕದ ಪ್ರಾಣಿಗಳಿಗೂ ದರ್ಶನಮಾಡುವುದರಿಂದಲೂ, ಪೂಜಿಸುವುದರಿಂದಲೂ ಭುಕ್ತಿ ಮುಕ್ತಿಗಳನ್ನು ಕೊಡುತ್ತಾ ಸಮಸ್ತರಿಗೂ ಹಿತವನ್ನು ಮಾಡುತ್ತಿರುವನು. ಆ ಜ್ಯೋತಿರ್ಲಿಂಗವನ್ನು ನಾನು ವಿಶೇಷ ರೀತಿಯಿಂದ ಪೂಜಿಸಿ ನಮಸ್ಕರಿಸಿ ಮೂರುಲೋಕವನ್ನೂ ಜಯಿಸಲು ಇಲ್ಲಿಗೆ ಬಂದಿರುವೆನು ಎಂದನು.

೬೦. ದೇವರ್ಷಿಯಾದ ನಾರದನು ಆ ರಾವಣನ ಮಾತನ್ನು ಕೇಳಿ ಸಂಭ್ರಮದಿಂದ ತನ್ನ ಮನಸ್ಸಿನಲ್ಲಿ ನಗುತ್ತ ರಾವಣನನ್ನು ಕುರಿತು ಹೇಳಿದನು.

॥ ನಾರದ ಉವಾಚ ॥

ಶ್ರೂಯತಾಂ ರಾಕ್ಷಸಶ್ರೇಷ್ಠ ಕಥಯಾಮಿ ಹಿತಂ ತವ ।
ತ್ವಯಾ ತದೇವ ಕರ್ತವ್ಯಂ ಮದುಕ್ತಂ ನಾನ್ಯಥಾ ಕ್ವಚಿತ್ ॥ ೬೧ ॥

ತ್ವಯೋಕ್ತಂ ಯಚ್ಛಿವೇನೈವ ಹಿತಂ ದತ್ತಂ ಮಮಾಧುನಾ ।
ತತ್ಸರ್ವಂ ಚ ತ್ವಯಾ ಸತ್ಯಂ ನ ಮಂತವ್ಯಂ ಕದಾಚನ ॥ ೬೨ ॥

ಅಯಂ ವೈ ವಿಕೃತಿಂ ಪ್ರಾಪ್ತಃ ಕಿಂ ಕಿಂ ನೈವ ಬ್ರವೀತಿ ಚ ।
ಸತ್ಯಂ ನೈವ ಭವೇತ್ತದ್ವೈ ಕಥಂ ಜ್ಞೇಯಂ ಪ್ರಿಯೋಽಸಿ ಮೇ ॥ ೬೩ ॥

ಇತಿ ಗತ್ವಾ ಪುನಃ ಕಾರ್ಯಂ ಕುರು ತ್ವಂ ಹ್ಯಹಿತಾಯ ವೈ ।
ಕೈಲಾಸೋದ್ಧರಣೇ ಯತ್ನಃ ಕರ್ತವ್ಯಶ್ಚ ತ್ವಯಾ ಪುನಃ ॥ ೬೪ ॥

ಯದಿ ಚೈವೋದ್ಧೃತಶ್ಚಾಯಂ ಕೈಲಾಸೋ ಹಿ ಭವಿಷ್ಯತಿ ।
ತದೈವ ಸಫಲಂ ಸರ್ವಂ ಭವಿಷ್ಯತಿ ನ ಸಂಶಯಃ ॥ ೬೫ ॥

ಪೂರ್ವವತ್ಸ್ಥಾಪಯಿತ್ವಾ ತ್ವಂ ಪುನರಾಗಚ್ಛ ವೈ ಸುಖಂ ।
ನಿಶ್ಚಯಂ ಪರಮಂ ಗತ್ವಾ ಯಥೇಚ್ಛಸಿ ತಥಾ ಕುರು ॥ ೬೬ ॥

---

೬೧-೬೬. ಎಲೈ ರಾಕ್ಷಸಶ್ರೇಷ್ಠನೇ! ನಿನಗೆ ಹಿತವಾದುದನ್ನು ಹೇಳುವೆನು, ಕೇಳು. ನಾನು ಹೇಳಿದುದನ್ನೇ ನೀನು ಮಾಡಬೇಕು. ಶಿವನೇ ನನಗೆ ವರವನ್ನು ಕೊಟ್ಟನೆಂದು ನೀನು ಹೇಳಿದೆಯಷ್ಟೆ? ಅದನ್ನೆಲ್ಲ ನೀನು ನಿಜವೆಂದು ಎಂದಿಗೂ ನಂಬಬೇಡ. ವಿಕಾರರೂಪವುಳ್ಳ ಶಿವನು ಏನು ಬೇಕಾದರೂ ಹೇಳುವನು. ಅದು ನಿಜವೇ, ಅಲ್ಲವೇ ಎಂಬುದನ್ನು ಹೇಗೆ ತಿಳಿಯುವುದು? ನನಗೆ ಪ್ರೀತಿಪಾತ್ರನಾದುದರಿಂದ ನಿನಗೆ ಹೇಳುವೆನು. ಪುನಃ ನೀನು ಹೋಗಿ ಶಿವನ ಕೈಲಾಸಪರ್ವತವನ್ನು ಎತ್ತುವುದಕ್ಕೆ ಪ್ರಯತ್ನ ಮಾಡು. ನೀನು ಕೈಲಾಸಪರ್ವತವನ್ನು ಎತ್ತಿದರೆ ಆಗ ಶಿವನು ನಿನಗೆ ಕೊಟ್ಟ ವರವೆಲ್ಲವೂ ಸಫಲವಾಯಿತೆಂದು ತಿಳಿ. ಸಂದೇಹಪಡಬೇಡ. ಆಮೇಲೆ ಆ ಪರ್ವತವನ್ನು ಹಿಂದಿನಂತೆಯೇ ಇಟ್ಟು ಸುಖವಾಗಿ ಹಿಂದುರುಗಿ ಬಾ. ನಾನು ಹೇಳಿದುದನ್ನು ವಿಚಾರಮಾಡಿ ಮನಸ್ಸಿನಲ್ಲಿ ನಿಶ್ಚಯಿಸಿ ನಿನ್ನ ಇಷ್ಟಬಂದಂತೆ ಮಾಡು ಎಂದನು.

॥ ಸೂತ ಉವಾಚ ॥

ಇತ್ಯುಕ್ತಸ್ಸ ಹಿತಂ ಮೇನೇ ರಾವಣೋ ವಿಧಿಮೋಹಿತಃ ।
ಸತ್ಯಂ ಮತ್ವಾ ಮುನೇರ್ವಾಕ್ಯಂ ಕೈಲಾಸಮುಗಮತ್ತದಾ ॥ ೬೭ ॥

ಗತ್ವಾ ತತ್ರ ಸಮುದ್ಧಾರಂ ಚಕ್ರೇ ತಸ್ಯ ಗಿರೇಸ್ಸ ಚ ।
ತತಸ್ಥಂ ಚೈವ ತತ್ಸರ್ವಂ ವಿಪರ್ಯಸ್ತಂ ಪರಸ್ಪರಂ ॥ ೬೮ ॥

ಗಿರೀಶೋಽಪಿ ತದಾ ದೃಷ್ಟ್ವಾ ಕಿಂ ಜಾತಮಿತಿ ಸೋಽಬ್ರವೀತ್ ।
ಗಿರಿಜಾ ಚ ತದಾ ಶಂಭುಂ ಪ್ರತ್ಯುವಾಚ ವಿಹಸ್ಯ ತಂ ॥ ೬೯ ॥

॥ ಗಿರಿಜೋವಾಚ ॥

ಸಚ್ಛಿಷ್ಯಸ್ಯ ಫಲಂ ಜಾತಂ ಸಮ್ಯಗ್ಜಾತಂ ತು ಶಿಷ್ಯತಃ ।
ಶಾಂತಾತ್ಮನೇ ಸುವೀರಾಯ ದತ್ತಂ ಯದತುಲಂ ಬಲಂ ॥ ೭೦ ॥

॥ ಸೂತ ಉವಾಚ ॥

ಗಿರಿಜಾಯಾಶ್ಚ ಸಾಕೂತಂ ವಚಃ ಶ್ರುತ್ವಾ ಮಹೇಶ್ವರಃ ।
ಕೃತಘ್ನಂ ರಾವಣಂ ಮತ್ವಾ ಶಶಾಪ ಬಲದರ್ಪಿತಂ ॥ ೭೧ ॥

---

೬೭-೬೯. ನಾರದನು ಹೀಗೆ ಹೇಳುತ್ತಲು ರಾವಣನು ಮುಂದೆ ಆಗಬೇಕಾದ ವಿಧಿಯಿಂದ ಮೋಹಿತನಾಗಿ ನಾರದನ ಮಾತನ್ನು ಹಿತವೆಂದು ತಿಳಿದು ಕೈಲಾಸಪರ್ವತಕ್ಕೆ ಹೋಗಿ ಕೈಲಾಸಪರ್ವತವನ್ನು ಎತ್ತಿದನು. ಎತ್ತುವಾಗ ಪರ್ವತವು ಅಲುಗಾಡಿ ಆ ಪರ್ವತದಲ್ಲಿದ್ದುದುದೆಲ್ಲಾ ಅಸ್ತವ್ಯಸ್ತವಾಯಿತು. ಶಿವನು ಇದೇನೆಂದು ಕೇಳಿದನು. ಪಾರ್ವತಿಯು ಶಿವನನ್ನು ಕುರಿತು ನಗುತ್ತ ಇಂತೆಂದಳು.

೭೦. ಉತ್ತಮನಾದ ಶಿಷ್ಯನಿಗೆ ವರವನ್ನು ಕೊಟ್ಟಫಲವೇ ಇದು. ಶಾಂತನೂ, ಪರಾಕ್ರಮಶಾಲಿಯೂ ಆದ ಶಿಷ್ಯನಿಗೆ ಅಸಮಾನವಾದ ಬಲವನ್ನು ಕೊಟ್ಟುದುದರ ಫಲವೇ ಇದು ಎಂದಳು.

೭೧. ಪಾರ್ವತಿಯು ಹೇಳಿದ ಅಭಿಪ್ರಾಯಗರ್ಭಿತವಾದ ಮಾತನ್ನು ಮಹೇಶ್ವರನು ಕೇಳಿ, ರಾವಣನನ್ನು ಕೃತಘ್ನನೆಂದು ತಿಳಿದು ಬಲದಿಂದ ಕೊಬ್ಬಿದ ಅವನಿಗೆ ಶಾಪವನ್ನು ಕೊಟ್ಟನು.

॥ ಮಹೇಶ್ವರ ಉವಾಚ ॥

ರೇ ರೇ ರಾವಣ ದುರ್ಭಕ್ತ ಮಾ ಗರ್ವಂ ವಹ ದುರ್ಮತೇ ।
ಶೀಘ್ರಂ ಚ ತವ ಹಸ್ತಾನಾಂ ದರ್ಪಘ್ನಃ ಶ್ಚ ಭವೇದಿಹ ॥ ೭೨ ॥

॥ ಸೂತ ಉವಾಚ ॥

ಇತಿ ತತ್ರ ಚ ಯಜ್ಜಾತಂ ನಾರದಃ ಶ್ರುವವಾಂಸ್ತದಾ ।
ರಾವಣೋಽಪಿ ಪ್ರಸನ್ನಾತ್ಮಾಽಗಾತ್ಸ್ವಧಾಮ ಯಥಾಗತಂ ॥ ೭೩ ॥

ನಿಶ್ಚಯಂ ಪರಮಂ ಕೃತ್ವಾ ಬಲೌ ಬಲವಿಮೋಹಿತಃ ।
ಜಗದ್ವಶಂ ಹಿ ಕೃತವಾನ್ರಾವಣಃ ಪರದರ್ಪಹಾ ॥ ೭೪ ॥

ಶಿವಾಜ್ಞಯಾ ಚ ಪ್ರಾಪ್ತೇನ ದಿವ್ಯಾಸ್ತ್ರೇಣ ಮಹೌಜಸಾ ।
ರಾವಣಸ್ಯ ಪ್ರತಿಭಟೋ ನಾಲಂ ಕಶ್ಚಿದಭೂತ್ತದಾ ॥ ೭೫ ॥

---

೭೨. ಮಹಾದೇವನಿಂತೆಂದನು—ಎಲೋ ದುಷ್ಟನೇ, ಈ ದುರ್ಬುದ್ಧಿಯನ್ನು ಬಿಡು. ಅಹಂಕಾರಪಡಬೇಡ. ಬೇಗನೆ ನಿನ್ನ ತೋಳುಗಳ ಬಲವನ್ನು ನಾಶಮಾಡುವವನು ಹುಟ್ಟುವನು ಎಂದನು.

೭೩-೭೫ ಸೂತನು ಹೇಳಿದನು.—ಕೈಲಾಸಪರ್ವತದಲ್ಲಿ ಹೀಗಾದುದನ್ನು ನಾರದನು ಕೇಳಿದನು. ರಾವಣನು ತನ್ನ ಬಲವನ್ನು ನಂಬಿ ಸಂತೋಷದಿಂದ ತನ್ನ ಮನೆಗೆ ಹೋದನು. ಬಲಶಾಲಿಯಾದ ರಾವಣನು ತನ್ನ ಬಲವನ್ನು ನಿಶ್ಚಯಿಸಿಕೊಂಡು ಶತ್ರುಗಳ ಗರ್ವವನ್ನು ನಾಶಮಾಡಿ ಜಗತ್ತನ್ನು ತನ್ನಧೀನದಲ್ಲಿಟ್ಟುಕೊಂಡನು. ಶಿವನ ಆಜ್ಞೆಯಿಂದ ಪ್ರಾಪ್ತವಾದ ದಿವ್ಯಾಸ್ತ್ರವೂ ಮಹಾಪರಾಕ್ರಮವೂ ಉಳ್ಳ ರಾವಣನಿಗೆ ಸಮಾನರಾದ ಶೂರರಾರೂ ಇರಲಿಲ್ಲ.

ಇತ್ಯೇತಚ್ಚ ಸಮಾಖ್ಯಾತಂ ವೈದ್ಯನಾಥೇಶ್ವರಸ್ಯ ಚ ।
ಮಾಹಾತ್ಮ್ಯಂ ಶೃಣ್ವತಾಂ ಪಾಪಂ ನೃಣಾಂ ಭವತಿ ಭಸ್ಮಸಾತ್ ॥ ೭೬ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ವೈದ್ಯನಾಥೇಶ್ವರಮಾಹಾತ್ಮ್ಯೇ ಜ್ಯೋತಿರ್ಲಿಂಗಮಾಹಾತ್ಮ್ಯ
ವರ್ಣನಂ ನಾಮಾಷ್ಟಾವಿಂಶೋಽಧ್ಯಾಯಃ

---

೭೬ ಈ ರೀತಿಯಲ್ಲಿ ವೈದ್ಯನಾಥೇಶ್ವರನ ಮಹಾತ್ಮೆಯನ್ನು ಹೇಳಿದೆನು. ಈ ಮಹಿಮೆಯನ್ನು ಕೇಳಿದವರ ಸಮಸ್ತ ಪಾಪಗಳೂ ಭಸ್ಮವಾಗುವವು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ವೈದ್ಯನಾಥೇಶ್ವರ ಜ್ಯೋತಿರ್ಲಿಂಗ ಮಾಹಾತ್ಮೆಯೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಏಕೋನತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ನಾಗೇಶಾಖ್ಯಂ ಪರಾತ್ಮನಃ ।
ಜ್ಯೋತೀರೂಪಂ ಯಥಾ ಜಾತಂ ಪರಮಂ ಲಿಂಗಮುತ್ತಮಂ ॥ ೧ ॥

ದಾರುಕಾ ರಾಕ್ಷಸೀ ಕಾಚಿತ್ಪಾರ್ವತೀವರದರ್ಪಿತಾ ।
ದಾರುಕಶ್ಚ ಪತಿಸ್ತಸ್ಯಾ ಬಭೂವ ಬಲವತ್ತರಃ ॥

ಬಹುಭೀ ರಾಕ್ಷಸೈಸ್ತತ್ರ ಚಕಾರ ಕದನಂ ಸತಾಂ ।
ಯಜ್ಞಧ್ವಂಸಂ ಚ ಲೋಕಾನಾಂ ಧರ್ಮಧ್ವಂಸಂ ತದಾಕರೋತ್ ॥ ೩ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ಸೂತನು ಹೇಳಿದನು.—ಇಲ್ಲಿಂದ ಮುಂದೆ ನಾಗೇಶ್ವರನೆಂಬ ಜ್ಯೋತಿರ್ಲಿಂಗವು ಹೇಗೆ ಉತ್ಪತ್ತಿಯಾಯಿತೆಂಬುದನ್ನು ಹೇಳುವೆನು.

೨-೪. ಪಾರ್ವತೀದೇವಿಯ ವರದಿಂದ ಗರ್ವವನ್ನು ಹೊಂದಿದ ದಾರುಕಾ ಎಂಬ ಓರ್ವ ರಾಕ್ಷಸಿಯಿದ್ದಳು. ಅವಳ ಗಂಡನಿಗೆ ದಾರುಕನೆಂದು ಹೆಸರು. ಅವನೂ ಅತ್ಯಂತ ಬಲಶಾಲಿಯಾಗಿದ್ದನು. ಅವನು ಅನೇಕ ರಾಕ್ಷಸರೊಡನೆ ಕೂಡಿ ಸಜ್ಜನರೊಡನೆ ಜಗಳವಾಡುತ್ತ ಲೋಕಗಳಲ್ಲಿ ಯಜ್ಞಗಳನ್ನೂ, ಧರ್ಮವನ್ನೂ ನಾಶಮಾಡಿ

ಪಶ್ಚಿಮೇ ಸಾಗರೇ ತಸ್ಯ ವನಂ ಸರ್ವಸಮೃದ್ಧಿಮತ್ ।
ಯೋಜನಾನಾಂ ಷೋಡಶಭಿರ್ವಿಸ್ತೃತಂ ಸರ್ವತೋದಿಶಂ ॥ ೪ ॥

ದಾರುಕಾ ಸ್ವವಿಲಾಸಾರ್ಥಂ ಯತ್ರ ಗಚ್ಛತಿ ತದ್ವನಂ ।
ಭೂಮ್ಯಾ ಚ ತರುಭಿಸ್ತತ್ರ ಸರ್ವೋಪಕರಣೈರ್ಯುತಂ ॥ ೫ ॥

ದಾರುಕಾಯೈ ದದೌ ದೇವೀ ತದ್ವನಸ್ಯಾವಲೋಕನಂ ।
ಪ್ರಯಾತಿ ತದ್ವನಂ ಸಾ ಹಿ ಪತ್ಯಾ ಸಹ ಯದೃಚ್ಛಯಾ ॥ ೬ ॥

ತತ್ರ ಸ್ಥಿತ್ವಾ ತದಾ ಸೋಽಪಿ ಸರ್ವೇಷಾಂ ಚ ಭಯಂ ದದೌ ।
ದಾರುಕೋ ರಾಕ್ಷಸಃ ಪತ್ನ್ಯಾ ತಯಾ ದಾರುಕಯಾ ಸಹ ॥ ೭ ॥

ತೇ ಸರ್ವೇ ಪೀಡಿತಾ ಲೋಕಾ ಔರ್ವಸ್ಯ ಶರಣಂ ಯಯುಃ ।
ನತ್ವಾ ಪ್ರೀತ್ಯಾ ವಿಶೇಷೇಣ ತಮೂಚುರ್ನತಮಸ್ತಕಾಃ ॥ ೮ ॥

---

ದನು. ಪಶ್ಚಿಮ ದಿಕ್ಕಿನ ಸಾಗರದಸಮೀಪದಲ್ಲಿ ಹದಿನಾರು ಯೋಜನ ವಿಸ್ತಾರವಾಗಿ ಸಕಲವಸ್ತು ಸಮೃದ್ಧಿಯಿಂದ ಕೂಡಿದ ಒಂದು ವನವಿರುವುದು.

೫–೭. ದಾರುಕಾ ಎಂಬ ರಾಕ್ಷಸಿಯು ವಿಲಾಸಕ್ಕಾಗಿ ಹೋಗುತ್ತಿದ್ದ ಆ ವನವು ವಿಲಾಸಭೂಮಿಯಿಂದಲೂ, ಮರಗಳಿಂದಲೂ, ಸಮಸ್ತ ಉಪಕರಣಗಳಿಂದಲೂ ಕೂಡಿ ಕಾಣುವಂತೆ ಪಾರ್ವತೀದೇವಿಯು ವರರೂಪವಾಗಿ ದಾರುಕೆಗೆ ಕೊಟ್ಟಿದ್ದಳು. ಅವಳು ತನ್ನ ಪತಿಯೊಡನೆ ಆ ವನದಲ್ಲಿ ತನ್ನ ಮನ ಬಂದೆಡೆಗೆ ಹೋಗಿ ವಿಹರಿಸುವಳು. ದಾರುಕನೆಂಬ ರಾಕ್ಷಸನೂ ತನ್ನ ಪತ್ನಿಯೊಡನೆ ಅಲ್ಲಿದ್ದುಕೊಂಡು ಸಮಸ್ತರಿಗೂ ಭಯವನ್ನುಂಟುಮಾಡುತ್ತಿದ್ದನು.

೮. ಅವನ ಬಾಧೆಯನ್ನು ತಡೆಯಲಾರದೆ ಜನರೆಲ್ಲರೂ ಔರ್ವನೆಂಬ ಋಷಿಯ ಮರೆಹೊಕ್ಕು ಭಕ್ತಿಯಿಂದ ಅವನಿಗೆ ನಮಸ್ಕರಿಸಿ ಅವನತಶಿರಸ್ಕರಾಗಿ ಇಂತೆಂದರು.

॥ ಲೋಕಾ ಊಚುಃ ॥

ಮಹರ್ಷೇ ಶರಣಂ ದೇಹಿ ನೋ ಚೇದ್ದುಷ್ಟೈಶ್ಚ ಮಾರಿತಾಃ ।
ಸರ್ವಂ ಕರ್ತುಂ ಸಮರ್ಥೋಽಸಿ ತೇಜಸಾ ದೀಪ್ತಿಮಾನಸಿ ॥ ೯ ॥

ಪೃಥ್ವ್ಯಾಂ ನ ವರ್ತತೇ ಕಶ್ಚಿತ್ತ್ವಾಂ ವಿನಾ ಶರಣಂ ಚ ನಃ ।
ಯಾನೋ ಯಸ್ಯ ಸಮೀಪೇ ತು ಸ್ಥಿತ್ವಾ ಸುಖಮವಾಪ್ನುಮಃ ॥ ೧೦ ॥

ತ್ವಾಂ ದೃಷ್ಟ್ವಾ ರಾಕ್ಷಸಾಸ್ಸರ್ವೇ ಪಲಾಯಂತೇ ವಿದೂರತಃ ।
ತ್ವಯಿ ಶೈವಂ ಸದಾ ತೇಜೋ ವಿಭಾತಿ ಜ್ವಲನೋ ಯಥಾ ॥ ೧೧ ॥

॥ ಸೂತ ಉವಾಚ ॥

ಇತ್ಯೇವಂ ಪ್ರಾರ್ಥಿತೋ ಲೋಕೈರೌರ್ವೋ ಹಿ ಮುನಿಸತ್ತಮಃ ।
ಶೋಚಮಾನಃ ಶರಣ್ಯಶ್ಚ ರಕ್ಷಾಯೈ ಹಿ ವಚೋಽಬ್ರವೀತ್ ॥ ೧೨ ॥

॥ ಔರ್ವ ಉವಾಚ ॥

ಪೃಥಿವ್ಯಾಂ ಯದಿ ರಕ್ಷಾಂಸಿ ಹಿಂಸ್ಯುರ್ವೈ ಪ್ರಾಣಿನಸ್ತದಾ ।
ಸ್ವಯಂ ಪ್ರಾಣೈರ್ವಿಯುಜ್ಯೇಯುಃ ರಾಕ್ಷಸಾ ಬಲವತ್ತರಾಃ ॥ ೧೩ ॥

---

೯-೧೧. ಎಲೈ, ಮಹರ್ಷಿಯೇ, ದುಷ್ಟರಾದ ರಾಕ್ಷಸರಿಂದ ನಾವೆಲ್ಲರೂ ಮರಣವನ್ನು ಹೊಂದುವೆವು. ನೀನು ನಿನ್ನ ತೇಜಸ್ಸಿನಿಂದ ಯಾವ ಕಾರ್ಯವನ್ನಾದರೂ ಮಾಡಲು ಸಮರ್ಥನಾಗಿರುವೆ. ಆದುದರಿಂದ ನಮ್ಮನ್ನು ಈಗ ಕಾಪಾಡು. ನಿನ್ನನ್ನು ಬಿಟ್ಟರೆ ನಮ್ಮನ್ನು ಕಾಪಾಡುವವರು ಈ ಭೂಮಿಯಲ್ಲಿ ಮತ್ತಾರೂ ಇರುವುದಿಲ್ಲ. ನಿನ್ನ ಸಮೀಪದಲ್ಲಿದ್ದರೆ ನಮಗೆ ಸುಖವುಂಟಾಗುವುದು. ನಿನ್ನನ್ನು ನೋಡಿ ರಾಕ್ಷಸರೆಲ್ಲರೂ ದೂರವಾಗಿ ಓಡಿಹೋಗುವರು. ನಿನ್ನಲ್ಲಿ ಶಿವನ ತೇಜಸ್ಸು ಅಗ್ನಿಯಂತೆ ಪ್ರಕಾಶಿಸುತ್ತಿರುವುದು ಎಂದರು.

೧೨. ಹೀಗೆಂದು ಜನರು ಪ್ರಾರ್ಥಿಸಿಕೊಳ್ಳುತ್ತಲು ಮುನಿಶ್ರೇಷ್ಠನಾದ ಔರ್ವನು ವ್ಯಸನಪಡುತ್ತ ತನ್ನ ಮರೆಹೊಕ್ಕವರನ್ನು ಕಾಪಾಡಬೇಕೆಂದು ಯೋಚಿಸಿ ಇಂತೆಂದನು.

೧೩-೧೪. ಭೂಮಿಯಲ್ಲಿ ರಾಕ್ಷಸರು ಪ್ರಾಣಿಗಳನ್ನು ಹಿಂಸಿಸಿದರೆ ಬಲಿಷ್ಠರಾದ ಆ ರಾಕ್ಷಸರೇ ಪ್ರಾಣವನ್ನು ಬಿಡುವರು. ಯಜ್ಞವನ್ನು ನಾಶಮಾಡಿದರೆ

ಯದಾ ಮಜ್ಞಾ ನ ಹನ್ಯೇರಂಸ್ತದಾ ಪ್ರಾಣೈರ್ವಿಯೋಜಿತಾಃ ।
ಭವಂತು ರಾಕ್ಷಸಾಸ್ಸರ್ವೇ ಸತ್ಯಮೇತನ್ಮಯೋಚ್ಯತೇ ॥ ೧೪ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ವಚನಂ ತೇಭ್ಯಸ್ಸಮಾಶ್ವಾಸ್ಯ ಪ್ರಜಾಃ ಪುನಃ ।
ತಪಶ್ಚಕಾರ ವಿವಿಧಮೌರ್ವೋ ಲೋಕಸುಖಾವಹಃ ॥ ೧೫ ॥

ದೇವಾಸ್ತದಾ ತೇ ವಿಜ್ಞಾಯ ಶಾಪಸ್ಯ ಕಾರಣಂ ಹಿ ತತ್ ।
ಯುದ್ಧಾಯ ಚ ಸಮುದ್ಯೋಗಂ ಚಕ್ರುರ್ದೇವಾರಿಭಿಸ್ಸಹ ॥ ೧೬ ॥

ಸರ್ವೈಶ್ಚೈವ ಪ್ರಯತ್ನೈಶ್ಚ ನಾನಾಯುಧಧರಾಸ್ಸುರಾಃ ।
ಸರ್ವೇ ಶಕ್ರಾದಯಸ್ತತ್ರ ಯುದ್ಧಾರ್ಥಂ ಸಮುಪಾಗತಾಃ ॥ ೧೭ ॥

ತಾನ್ದೃಷ್ಟ್ವಾ ರಾಕ್ಷಸಾಸ್ತತ್ರ ವಿಚಾರೇ ತತ್ಪರಾಃ ಪುನಃ ।
ಬಭೂವುಸ್ತೇಽಖಿಲಾ ದುಷ್ಟಾ ಮಿಥೋ ಯೇ ಯತ್ರ ಸಂಸ್ಥಿತಾಃ ॥ ೧೮ ॥

॥ ರಾಕ್ಷಸಾ ಊಚುಃ ॥

ಕಿಂ ಕರ್ತವ್ಯಂ ಕ್ವ ಗಂತವ್ಯಂ ಸಂಕಟಂ ಸಮುಪಾಗತಾಃ ।
ಯುಧ್ಯತೇ ಮ್ರಿಯತೇ ಚೈವ ಯುಧ್ಯತೇ ನ ವಿಹನ್ಯತೇ ॥ ೧೯ ॥

---

ರಾಕ್ಷಸರೆಲ್ಲರೂ ಬ್ರಾಹ್ಮಣರ ಶಾಪದಿಂದ ಪ್ರಾಣವನ್ನು ಬಿಡಬೇಕಾಗುವುದು. ಈ ನನ್ನ ಮಾತು ಸತ್ಯವಾದುದು.

೧೫-೧೮. ಔರ್ವನು ಜನರಿಗೆ ಹೀಗೆ ಹೇಳಿ ಅವರನ್ನು ಸಮಾಧಾನಪಡಿಸಿ ಲೋಕಸುಖಕ್ಕಾಗಿ ಬಗೆಬಗೆಯ ತಪಸ್ಸನ್ನು ಮಾಡಿದನು. ದೇವತೆಗಳು ಈ ಸಮಯದಲ್ಲಿ ರಾಕ್ಷಸರಿಗೆ ಶಾಪವು ಬಂದುದನ್ನು ತಿಳಿದು ಅವರೊಡನೆ ಯುದ್ಧಮಾಡಲು ಸಿದ್ಧರಾದರು. ಅನೇಕ ಯುದ್ಧಪ್ರಯತ್ನಗಳಿಂದ ಕೂಡಿ ಬಗೆಬಗೆಯ ಆಯುಧಗಳನ್ನು ಧರಿಸಿ ದೇವೇಂದ್ರನೇ ಮೊದಲಾದ ದೇವತೆಗಳು ಅಲ್ಲಿಗೆ ಯುದ್ಧಕ್ಕೆ ಬಂದರು. ಇದನ್ನು ಕಂಡು ದುಷ್ಟರಾದ ರಾಕ್ಷಸರೆಲ್ಲರೂ ಒಂದೆಡೆಯಲ್ಲಿ ಸೇರಿ ವಿಚಾರಮಾಡಿದರು.

೧೯-೨೦. ರಾಕ್ಷಸರು ಹೇಳಿದರು.—ಈಗ ನಾವೇನು ಮಾಡಬೇಕು? ಎಲ್ಲಿಗೆ ಹೋಗಬೇಕು? ಯುದ್ಧವನ್ನು ಮಾಡಿದರೂ, ಮಾಡದೆಹೋದರೂ ನಮಗೆ ನಾಶವು

ತಥೈವ ಸ್ಥೀಯತೇ ಚೇದ್ವೈ ಭಕ್ಷ್ಯತೇ ಕಿಂ ಪರಸ್ಪರಂ ।
ದುಃಖಂ ಹಿ ಸರ್ವಥಾ ಜಾತಂ ಕ ಏನಂ ವಿನಿವಾರಯೇತ್ ॥ ೨೦ ॥

॥ ಸೂತ ಉವಾಚ ॥

ವಿಚಾರ್ಯೇತಿ ಚ ತೇ ತತ್ರ ದಾರುಕಾದ್ಯಾಶ್ಚ ರಾಕ್ಷಸಾಃ ।
ಉಪಾಯಂ ನ ವಿಜಾನಂತೋ ದುಃಖಂ ಪ್ರಾಪ್ತಾಸ್ಸದಾ ಹಿ ವೈ ॥ ೨೧ ॥

ದಾರುಕಾ ರಾಕ್ಷಸೀ ಚಾಪಿ ಜ್ಞಾತ್ವಾ ದುಃಖಂ ಸಮಾಗತಂ ।
ಭವಾನ್ಯಾಶ್ಚ ವರಂ ತಂ ಚ ಕಥಯಾಮಾಸ ಸಾ ತದಾ ॥ ೨೨ ॥

॥ ದಾರುಕೋವಾಚ ॥

ಮಯಾ ಹ್ಯಾರಾಧಿತಾ ಪೂರ್ವಂ ಭವಪತ್ನೀ ವರಂ ದದೌ ।
ವನಂ ಗಚ್ಛ ನಿಜೈಃ ಸಾರ್ಧಂ ಯತ್ರ ಗಂತುಂ ತ್ವಮಿಚ್ಛಸಿ ॥ ೨೩ ॥

ತದ್ವರಶ್ಚ ಮಯಾ ಪ್ರಾಪ್ತಃ ಕಥಂ ದುಃಖಂ ವಿಷಹ್ಯತೇ ।
ಜಲಂ ವನಂ ಚ ನೀತ್ವಾ ವೈ ಸುಖಂ ಸ್ಥೇಯಂ ತು ರಾಕ್ಷಸೈಃ ॥ ೨೪ ॥

---

ತಪ್ಪದು. ಸುಮ್ಮನಿದ್ದರೆ ರಾಕ್ಷಸರೇ ಒಬ್ಬರನ್ನೊಬ್ಬರು ತಿನ್ನಬೇಕಾಗುವುದು. ಸರ್ವಥಾ ನಮಗೆ ದುಃಖವೇನೋ ಪ್ರಾಪ್ತವಾಯಿತು. ಇದನ್ನು ಯಾರು ನಿವಾರಿಸುವರು? ಎಂದು ತಮ್ಮ ತಮ್ಮಲ್ಲಿಯೇ ಯೋಚಿಸಿದರು.

೨೧-೨೨. ದಾರುಕನೇ ಮುಂತಾದ ರಾಕ್ಷಸರು ಈ ರೀತಿಯಲ್ಲಿ ವಿಚಾರಮಾಡಿ ಯಾವ ಉಪಾಯವೂ ತಿಳಿಯದೆ ದುಃಖಪಡುತ್ತಿರಲು, ದಾರುಕಾರಾಕ್ಷಸಿಯು ಅವರ ದುಃಖವನ್ನು ತಿಳಿದು ತನಗೆ ಭವಾನೀದೇವಿಯು ಕೊಟ್ಟ ವರವನ್ನು ಹೇಳಿದಳು.

೨೩-೨೪. ನಾನು ಹಿಂದೆ ಭವಾನೀದೇವಿಯನ್ನು ಪೂಜೆಮಾಡಿದೆನು. ಆ ದೇವಿಯು ನನಗೆ ವರವನ್ನು ಕೊಟ್ಟಳು. ನಮ್ಮ ಜನಗಳೊಡನೆ ಕೂಡಿದ ಈ ವನವನ್ನೇ ಸಮುದ್ರಮಧ್ಯಕ್ಕೆ ತೆಗೆದುಕೊಂಡು ಹೋಗಿ ಸಕಲ ವಸ್ತು ಸಮೃದ್ಧಿಯಾದ ಆ ವನದಲ್ಲಿ ನಾವೆಲ್ಲರೂ ಸುಖವಾಗಿರಬಹುದು ಎಂದಳು.

॥ ಸೂತ ಉವಾಚ ॥

ತಸ್ಯಾಸ್ತದ್ವಚನಂ ಶ್ರುತ್ವಾ ರಾಕ್ಷಸ್ಯಾ ಹರ್ಷಮಾಗತಾಃ ।
ಊಚುಸ್ಸರ್ವೇ ಮಿಥಸ್ತೇ ಹಿ ರಾಕ್ಷಸಾ ನಿರ್ಭಯಾಸ್ತದಾ ॥ ೨೫ ॥

ಧನ್ಯೇಯಂ ಕೃತಕೃತ್ಯೇಯಂ ರಾಜ್ಞ್ಯೈ ವೈ ಜೀವಿತಾಸ್ತ್ವಯಂ ।
ನತ್ವಾ ತಸ್ಯೈ ಚ ತತ್ಸರ್ವಂ ಕಥಯಾಮಾಸುರಾದರಾತ್ ॥ ೨೬ ॥

ಯದಿ ಗಂತುಂ ಭವೇಚ್ಛಕ್ತಿರ್ಗಮ್ಯತಾಂ ಕಿಂ ವಿಚಾರ್ಯತೇ ।
ತತ್ರ ಗತ್ವಾ ಜಲೇ ದೇವಿ ಸುಖಂ ಸ್ಥಾಸ್ಯಾಮ ನಿತ್ಯಶಃ ॥ ೨೭ ॥

ಏತಸ್ಮಿನ್ನಂತರೇ ಲೋಕಾ ದೇವೈಸ್ಸಾರ್ಧಂ ಸಮಾಗತಾಃ ।
ಯುದ್ಧಾಯ ವಿವಿಧೈರ್ದುಃಖೈಃ ಪೀಡಿತಾ ರಾಕ್ಷಸೈಃ ಪುರಾ ॥ ೨೮ ॥

ಪೀಡಿತಾಶ್ಚ ತದಾ ತಸ್ಯಾ ಭವಾನ್ಯಾ ಬಲಮಾಶ್ರಿತಾಃ ।
ಸಮಗ್ರಂ ನಗರಂ ನೀತ್ವಾ ಜಲಸ್ಥಲಸಮನ್ವಿತಂ ॥ ೨೯ ॥

---

೨೫–೨೭. ದಾರುಕೆಯ ಮಾತನ್ನು ಕೇಳಿ ರಾಕ್ಷಸರು ಭಯವನ್ನು ಬಿಟ್ಟು ಸಂತೋಷಚಿತ್ತರಾಗಿ ಒಬ್ಬರಿಗೊಬ್ಬರು ಮಾತನಾಡಿಕೊಂಡರು. ನಮ್ಮ ರಾಣಿಯು ಮಹಾಪುಣ್ಯವಂತೆಯು. ಅವಳಿಂದ ನಾವು ಬದುಕಿದೆವು ಎಂದು ಆಕೆಗೆ ನಮಸ್ಕರಿಸಿ ಎಲೌ, ದೇವಿಯೇ, ಇಲ್ಲಿಂದ ಹೊರಟುಹೋಗಲು ಶಕ್ತಿಯಿದ್ದರೆ ಸಾವಕಾಶ ಮಾಡುವುದೇಕೆ? ಬೇಗನೆ ಹೊರಟು ಆ ಸಮುದ್ರದಲ್ಲಿಯೇ ಸುಖವಾಗಿ ವಾಸಮಾಡೋಣ ಎಂದರು.

೨೮-೩೧. ಈ ಸಮಯಕ್ಕೆ ಸರಿಯಾಗಿ ಹಿಂದೆ ಬಗೆಬಗೆಯಲ್ಲಿ ರಾಕ್ಷಸರಿಂದ ಪೀಡಿತರಾದ ಜನರು ದೇವತೆಗಳೊಡಕೂಡಿ ರಾಕ್ಷಸರಮೇಲೆ ಯುದ್ಧಕ್ಕೆ ಬಂದರು. ಆ ಜನರ ಬಾಧೆಯನ್ನು ತಪ್ಪಿಸಿಕೊಳ್ಳಲು ರಾಕ್ಷಸರು ಭವಾನೀದೇವಿಯ ಬಲದಿಂದ ನೀರು, ಭೂಮಿ ಇವುಗಳಿಂದ ಕೂಡಿ ಸಂಪೂರ್ಣವಾದ ಪಟ್ಟಣವನ್ನು ತೆಗೆದುಕೊಂಡು

ಜಯಜಯೇತಿ ದೇವ್ಯಾಸ್ತು ಸ್ತುತಿಮುಚ್ಚಾರ್ಯ ರಾಕ್ಷಸೀ ।
ತತ ಉಡ್ಡೀಯನಂ ಕೃತ್ವಾ ಸಪಕ್ಷೋ ಗಿರಿರಾಡ್ಯಥಾ ॥ ೩೦ ॥

ಸಮುದ್ರಸ್ಯ ಚ ಮಧ್ಯೇ ಸಾ ಸಂಸ್ಥಿತಾ ನಿರ್ಭಯಾ ತದಾ ।
ಸಕಲೈಃ ಪರಿವಾರೈಶ್ಚ ಮುಮುದೇತಿ ಶಿವಾನುಗಾ ॥ ೩೧ ॥

ತತ್ರ ಸಿಂಧೌ ಚ ತೇ ಸ್ಥಿತ್ವಾ ನಗರೇ ಚ ವಿಲಾಸಿನಃ ।
ರಾಕ್ಷಸಾಶ್ಚ ಸುಖಂ ಪ್ರಾಪುರ್ನಿರ್ಭಯಾಶ್ಚ ವಿಜಹ್ರಿರೇ ॥ ೩೨ ॥

ರಾಕ್ಷಸಾಶ್ಚ ಪೃಥಿವ್ಯಾಂ ವೈ ನಾಜಗ್ಮುಶ್ಚ ಕದಾಚನ ।
ಮುನೇಶ್ಶಾಪಭಯಾದೇವ ಬಭ್ರಮುಸ್ತೇ ಜಲೇ ತದಾ ॥ ೩೩ ॥

ನೌಷು ಸ್ಥಿತಾಞ್ಜನಾನ್ನೀತ್ವಾ ನಗರೇ ತತ್ರ ತಾಂಸ್ತದಾ ।
ಚಿಕ್ಷಿಪುರ್ಬಂಧನಾಗಾರೇ ಕಾಂಶ್ಚಿಜ್ಜಘ್ನುಸ್ತದಾ ಹಿ ತೇ ॥ ೩೪ ॥

---

ದಾರುಕಾರಾಕ್ಷಸಿಯು ಜಯ ಜಯವೆಂದು ದೇವಿಯ ಸ್ತೋತ್ರವನ್ನು ಮಾಡುತ್ತಿರಲು, ರೆಕ್ಕೆಯುಳ್ಳ ಪರ್ವತದಂತೆ ಆ ಪ್ರದೇಶದಿಂದ ಹಾರಿ ಸಮುದ್ರಮಧ್ಯದಲ್ಲಿ ನಿರ್ಭಯವಾಗಿ ನೆಲಸಿ ಸಮಸ್ತ ಪರಿವಾರಗಳೊಡನೆ ಸುಖ ಸಂತೋಷಗಳನ್ನು ಅನುಭವಿಸುತ್ತಿದ್ದರು.

೩೨-೩೪. ಆ ಸಮುದ್ರದೊಳಗಿರುವ ಪಟ್ಟಣದಲ್ಲಿ ರಾಕ್ಷಸರು ಯಾವ ಭಯವೂ ಇಲ್ಲದೆ ಸುಖವನ್ನನುಭವಿಸುತ್ತ ವಿಹರಿಸುತ್ತಿದ್ದರು. ಮುನಿಯ ಶಾಪದ ಭಯದಿಂದ ರಾಕ್ಷಸರು ಭೂಮಿಯಕಡೆಗೆ ಬರದೆ ನೀರಿನಲ್ಲಿಯೇ ಸಂಚರಿಸುತ್ತ ಹಡಗಿನಲ್ಲಿರುವ ಜನರನ್ನು ಹಿಡಿದು ತಮ್ಮ ಪಟ್ಟಣಕ್ಕೆ ತೆಗೆದುಕೊಂಡುಹೋಗಿ ಕೆಲವರನ್ನು ಕೊಂದು, ಕೆಲವರನ್ನು ಸೆರೆಯಲ್ಲಿಟ್ಟರು.

ಯಥಾಯಥಾ ಪುನಃ ಪೀಡಾಂ ಚಕ್ರುಸ್ತೇ ರಾಕ್ಷಸಾಸ್ತಥಾ ।
ತತ್ರ ಸ್ಥಿತಾ ಭವಾನ್ಯಾಶ್ಚ ವರದಾನಾಚ್ಚ ನಿರ್ಭಯಾಃ ॥ ೩೫ ॥

ಯಥಾ ಪೂರ್ವಂ ಸ್ಥಲೇ ಲೋಕೇ ಭಯಂ ಚಾಸೀನ್ನಿರಂತರಂ ।
ತಥಾ ಭಯಂ ಜಲೇ ತೇಷಾಮಾಸೀನ್ನಿತ್ಯಂ ಮುನೀಶ್ವರಾಃ ॥ ೩೬ ॥

ಕದಾಚಿದ್ರಾಕ್ಷಸೀ ಸಾ ಚ ನಿಸ್ಸೃತಾ ನಗರಾಜ್ಜಲೇ ।
ರುದ್ಧ್ವಾ ಮಾರ್ಗಂ ಸ್ಥಿತಾ ಲೋಕಪೀಡಾರ್ಥಂ ಧರಣೌ ಚ ಹಿ ॥ ೩೭ ॥

ಏತಸ್ಮಿನ್ನಂತರೇ ತತ್ರ ನಾವೋ ಬಹುತರಾಃ ಶುಭಾಃ ।
ಆಗತಾ ಬಹುಧಾ ತತ್ರ ಸರ್ವತೋ ಲೋಕಸಂವೃತಾಃ ॥ ೩೮ ॥

ತಾ ನಾವಶ್ಚ ತದಾ ದೃಷ್ಟ್ವಾ ಹರ್ಷಂ ಸಂಪ್ರಾಪ್ಯ ರಾಕ್ಷಸಾಃ ।
ದ್ರುತಂ ಗತ್ವಾ ಹಿ ತತ್ರಸ್ಥಾನ್ವೇಗಾತ್ಸಂದಧಿರೇ ಖಲಾಃ ॥ ೩೯ ॥

ಆಜಗ್ಮುರ್ನಗರಂ ತೇ ಚ ತಾನಾದಾಯ ಮಹಾಬಲಾಃ ।
ಚಿಕ್ಷಿಪುರ್ಬಂಧನಾಗಾರೇ ಬದ್ಧ್ವಾ ಹಿ ನಿಗಡೈರ್ದೃಢೈಃ ॥ ೪೦ ॥

---

೩೫-೩೬. ಎಲೈ ಋಷಿಗಳೇ ಕೇಳಿರಿ. ರಾಕ್ಷಸರು ಅಲ್ಲಿದ್ದುಕೊಂಡು ಭವಾನೀ ದೇವಿಯ ವರದಿಂದ ನಿರ್ಭಯರಾಗಿ ಹಿಂದೆ ಭೂಮಿಯಲ್ಲಿ ಜನರಿಗೆ ಹೇಗೆ ಹಿಂಸೆಯನ್ನುಂಟುಮಾಡುತ್ತಿದ್ದರೋ, ಹಾಗೆಯೇ ಸಮುದ್ರದಲ್ಲಿದ್ದರೂ ಜನರಿಗೆ ಹಿಂಸೆಯನ್ನುಂಟುಮಾಡುತ್ತಿದ್ದರು.

೩೭–೪೦. ಹೀಗಿರಲು ಒಂದಾನೊಂದು ಕಾಲದಲ್ಲಿ ಆ ರಾಕ್ಷಸಿಯು ಪಟ್ಟಣದಿಂದ ಹೊರಗೆ ಹೊರಟು ಸಮುದ್ರದ ನೀರಿನಲ್ಲಿ ನಿಂತು ಭೂಮಿಯಲ್ಲಿರುವ ಜನರನ್ನು ಹಿಂಸೆಪಡಿಸಬೇಕೆಂದು ದಾರಿಕಟ್ಟಿ ನಿಂತಳು. ಆ ಸಮಯದಲ್ಲಿ ಅನೇಕಬಗೆಯ ಹಡಗುಗಳು ಜನರನ್ನು ತುಂಬಿಕೊಂಡು ಬಂದವು. ರಾಕ್ಷಸರು ಆ ಹಡಗುಗಳನ್ನು ನೋಡಿ ಸಂತೋಷದಿಂದ ಬೇಗನೆ ಹೋಗಿ ಅವುಗಳಲ್ಲಿದ್ದ ಜನರನ್ನು ಹಿಡಿದು ತಂದು ಅವರಿಗೆ ಸಂಕೋಲೆಯನ್ನು ಹಾಕಿ ಸೆರೆಯಮನೆಯಲ್ಲಿಟ್ಟರು.

ಬದ್ಧಾಸ್ತೇ ನಿಗಡೈರ್ಲೋಕಾಸ್ಸಂಸ್ಥಿತಾ ಬಂಧನಾಲಯೇ ।
ಅತೀವ ದುಃಖಮಾಪನ್ನಾ ಭರ್ತ್ಸಿತಾಸ್ತೇ ಮುಹುರ್ಮುಹುಃ ॥ ೪೧ ॥

ತೇಷಾಂ ಮಧ್ಯೇ ಚ ಯೋಽಧೀಶಸ್ಸ ವೈಶ್ಯಸ್ಸುಪ್ರಿಯಾಭಿಧಃ ।
ಶಿವಪ್ರಿಯಶುಭಾಚಾರಶ್ಶೈವಶ್ಚಾಸೀತ್ಸದಾತನಃ ॥ ೪೨ ॥

ವಿನಾ ಚ ಶಿವಪೂಜಾಂ ವೈ ನ ತಿಷ್ಠತಿ ಕದಾಚನ ।
ಸರ್ವಥಾ ಶಿವಧರ್ಮಾ ಹಿ ಭಸ್ಮರುದ್ರಾಕ್ಷಭೂಷಣಃ ॥ ೪೩ ॥

ಯದಿ ಪೂಜಾ ನ ಜಾತಾ ಚೇನ್ನ ಭುನಕ್ತಿ ತದಾ ತು ಸಃ ।
ಅತಸ್ತತ್ರಾಪಿ ವೈಶ್ಯೋಽಸೌ ಚಕಾರ ಶಿವಪೂಜನಂ ॥ ೪೪ ॥

ಕಾರಾಗೃಹಗತಸ್ಸೋಽಪಿ ಬಹೂಂಶ್ಚಾಶಿಕ್ಷಯತ್ತದಾ ।
ಶಿವಮಂತ್ರಂ ಚ ಪೂಜಾಂ ಚ ಪಾರ್ಥಿವೀಂ ನೃಪಸತ್ತಮಾಃ ॥ ೪೫ ॥

ತೇ ಸರ್ವೇ ಚ ತದಾ ತತ್ರ ಶಿವಪೂಜಾಂ ಸ್ವಕಾಮದಾಂ ।
ಚಕ್ರಿರೇ ವಿಧಿವತ್ತತ್ರ ಯಥಾದೃಷ್ಟಂ ಯಥಾಶ್ರುತಂ ॥ ೪೬ ॥

---

೪೧-೪೫. ಸೆರೆಸಿಕ್ಕಿದ ಆ ಜನರು ಸೆರೆಮನೆಯಲ್ಲಿ ಭಯಪಡಿಸುತ್ತಿರುವ ರಾಕ್ಷಸರಿಂದ ವಿಶೇಷ ದುಃಖವನ್ನು ಹೊಂದಿದರು. ಅವರ ನಡುವೆ ಸುಪ್ರಿಯನೆಂಬ ವೈಶ್ಯರ ಯಜಮಾನನಿದ್ದನು. ಅವನು ಶಿವಪೂಜೆಯನ್ನು ಮಾಡದೆ ಇರತಕ್ಕವನಲ್ಲ. ಯಾವಾಗಲೂ ಭಸ್ಮ-ರುದ್ರಾಕ್ಷಗಳನ್ನು ಧರಿಸಿ ಶಿವಧರ್ಮವನ್ನು ನಡೆಸುತ್ತಿದ್ದನು. ಶಿವಪೂಜೆಯಿಲ್ಲದಿದ್ದರೆ ಅವನು ಊಟವನ್ನೇ ಮಾಡುತ್ತಿರಲಿಲ್ಲ. ಆದುದರಿಂದ ಆ ವೈಶ್ಯನು ಅಲ್ಲಿಯೂ ಶಿವಪೂಜೆಯನ್ನು ಮಾಡಿದನು. ಸೆರೆಮನೆಯಲ್ಲಿದ್ದ ಅವನು ಅನೇಕರಿಗೆ ಶಿವಮಂತ್ರವನ್ನು ಹೇಳಿಕೊಟ್ಟು ಪಾರ್ಥಿವಲಿಂಗಪೂಜಾಕ್ರಮವನ್ನು ಕಲಿಸಿಕೊಟ್ಟನು.

೪೬-೫೦. ಅವರೆಲ್ಲರೂ ಆ ಸೆರೆಮನೆಯಲ್ಲಿ ತಮ್ಮ ಇಷ್ಟಾರ್ಥಗಳನ್ನು ಕೊಡುವ ಶಿವಪೂಜೆಯನ್ನು ಕಂಡುಕೇಳಿದ ವಿಧಿಗನುಸಾರವಾಗಿ ಮಾಡಿದರು. ಕೆಲ

ಕೇಚಿತ್ತತ್ರ ಸ್ಥಿತಾ ಧ್ಯಾನೇ ಬದ್ಧ್ವಾಸನಮನುತ್ತಮಂ ।
ಮಾನಸೀಂ ಶಿವಪೂಜಾಂ ಚ ಕೇಚಿಚ್ಚಕ್ರುರ್ಮುದಾನ್ವಿತಾಃ ॥ ೪೭ ॥

ತದಾಧೀಶೇನ ತತ್ರೈವ ಪ್ರತ್ಯಕ್ಷಂ ಶಿವಪೂಜನಂ ।
ಕೃತಂ ಚ ಪಾರ್ಥಿವಸ್ಯೈವ ವಿಧಾನೇನ ಮುನೀಶ್ವರಾಃ ॥ ೪೮ ॥

ಅನ್ಯೇ ಚ ಯೇ ನ ಜಾನಂತಿ ವಿಧಾನಂ ಸ್ಮರಣಂ ಪರಂ ।
ನಮಶ್ಶಿವಾಯ ಮಂತ್ರೇಣ ಧ್ಯಾಯತಶ್ಶಂಕರಂ ಸ್ಥಿತಾಃ ॥ ೪೯ ॥

ಸುಪ್ರಿಯೋ ನಾಮ ಯಶ್ಚಾಸೀದ್ವೈಶ್ಯವರ್ಯಶ್ಶಿವಪ್ರಿಯಃ ।
ಧ್ಯಾಯಂಶ್ಚ ಮನಸಾ ತತ್ರ ಚಕಾರ ಶಿವಪೂಜನಂ ॥ ೫೦ ॥

ಯಥೋಕ್ತರೂಪೀ ಶಂಭುಶ್ಚ ಪ್ರತ್ಯಕ್ಷಂ ಸರ್ವಮಾದದೇ ।
ಸೋಽಪಿ ಸ್ವಯಂ ನ ಜಾನಾತಿ ಗೃಹ್ಯತೇ ನ ಶಿವೇನ ವೈ ॥ ೫೧ ॥

---

ವರು ಆಸನಬಂಧವನ್ನು ಮಾಡಿ ಧ್ಯಾನಮಾಡುತ್ತಿದ್ದರು. ಕೆಲವರು ಸಂತೋಷದಿಂದ ಮಾನಸ ಶಿವಪೂಜೆಯನ್ನು ಮಾಡಿದರು. ಆ ವೈಶ್ಯರ ಯಜಮಾನನು ಪಾರ್ಥಿವ ಲಿಂಗಪೂಜಾವಿಧಾನದಿಂದಲೇ ಶಿವಪೂಜೆಯನ್ನು ಮಾಡಿದನು. ಪೂಜಾವಿಧಾನವನ್ನು ತಿಳಿಯದ ಇತರರು ನಮಃ ಶಿವಾಯ ಎಂಬ ಮಂತ್ರದಿಂದ ಶಿವನನ್ನು ಧ್ಯಾನಿಸುತ್ತಿದ್ದರು. ಸುಪ್ರಿಯನೆಂಬ ಆ ವೈಶ್ಯಶ್ರೇಷ್ಠನು ಶಿವನಿಗೆ ಪ್ರೀತಿಪಾತ್ರನಾಗಿ ಮನಸ್ಸಿನಲ್ಲೇ ಶಿವನನ್ನು ಧ್ಯಾನಿಸುತ್ತ ಶಿವಪೂಜೆಯನ್ನು ಮಾಡಿದನು.

೫೧–೫೩. ಶಿವನು ಪ್ರತ್ಯಕ್ಷನಾಗಿ ಅವರ ಪೂಜೆಯನ್ನು ಸ್ವೀಕರಿಸುತ್ತಿದ್ದನು. ಹೀಗಿದ್ದರೂ ವೈಶ್ಯನಿಗೆ ಅದು ತಿಳಿಯಲಿಲ್ಲ. ಹೀಗೆ ಶಿವಪೂಜೆಯನ್ನು ಮಾಡು

ಏವಂ ಚ ಕ್ರಿಯಮಾಣಸ್ಯ ವೈಶ್ಯಸ್ಯ ಶಿವಪೂಜನಂ ।
ವ್ಯತೀಯುಸ್ತತ್ರ ಷಣ್ಮಾಸಾ ನಿರ್ವಿಘ್ನೇನ ಮುನೀಶ್ವರಾಃ ॥ ೫೨ ॥

ಅತಃ ಪರಂ ಚ ಯಜ್ಜಾತಂ ಚರಿತಂ ಶಶಿಮೌಲಿನಃ ।
ತಚ್ಛೃಣುಧ್ವಮೃಷಿಶ್ರೇಷ್ಠಾಃ ಸಾವಧಾನೇನ ಚೇತಸಾ ॥ ೫೩ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ನಾಗೇಶ್ವರಜ್ಯೋತಿರ್ಲಿಂಗಮಾಹಾತ್ಮ್ಯೇ ದಾರುಕಾವನರಾಕ್ಷಸೋ
ಪದ್ರವವರ್ಣನಂ ನಾಮೈಕೋನತ್ರಿಂಶೋಽಧ್ಯಾಯಃ



---

ತ್ತಿರಲು ಯಾವ ವಿಘ್ನವೂ ಇಲ್ಲದೆ ಆರು ತಿಂಗಳು ಕಳೆಯಿತು. ಆಮೇಲೆ ಚಂದ್ರಮೌಳಿಯಾದ ಶಿವನ ಚರಿತ್ರೆಯಲ್ಲಿ ಮುಂದೆ ಏನು ನಡೆಯಿತೆಂಬುದನ್ನು ಹೇಳುವೆನು, ಗಮನವಿಟ್ಟು ಕೇಳಿರಿ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ನಾಗೇಶ್ವರ ಜ್ಯೋತಿರ್ಲಿಂಗ ಮಾಹಾತ್ಮ್ಯೆಯಲ್ಲಿ
ದಾರುಕಾವನ ರಾಕ್ಷಸರ ಉಪದ್ರವವರ್ಣನೆಯೆಂಬ
ಇಪ್ಪತ್ತೊಂಭತ್ತನೆಯ ಅಧ್ಯಾಯುವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಕದಾಚಿತ್ಸೇವಕಸ್ತಸ್ಯ ರಾಕ್ಷಸಸ್ಯ ದುರಾತ್ಮನಃ ।
ತದಗ್ರೇ ಸುಂದರಂ ರೂಪಂ ಶಂಕರಸ್ಯ ದದರ್ಶ ಹ ॥ ೧ ॥

ತಸ್ಮೈ ನಿವೇದಿತಂ ರಾಜ್ಞೇ ರಾಕ್ಷಸಾನಾಂ ಯಥಾರ್ಥಕಂ ।
ಸರ್ವಂ ತಚ್ಚರಿತಂ ತೇನ ಸಕೌತುಕಮಥಾದ್ಭುತಂ ॥ ೨ ॥

ರಾಜಾಪಿ ತತ್ರ ಚಾಗತ್ಯ ರಾಕ್ಷಸಾನಾಂ ಸ ದಾರುಕಃ ।
ವಿಹ್ವಲಸ್ಸಬಲಶ್ಶೀಘ್ರಂ ಪರ್ಯಪೃಚ್ಛಚ್ಚ ತಂ ವಿಶಂ ॥ ೩ ॥

---

## ಮೂವತ್ತನೆಯ ಅಧ್ಯಾಯವು

೧-೪. ಸೂತಮುನಿ ಇಂತೆಂದನು.—ಒಂದಾನೊಂದು ದಿನ ಆ ದುಷ್ಟನಾದ ರಾಕ್ಷಸನ ಸೇವಕನು ಆ ಸುಪ್ರಿಯನೆಂಬ ವೈಶ್ಯನ ಮುಂದೆ ಶಿವನ ಸುಂದರವಾದ ರೂಪನ್ನು ಕಂಡನು. ಆ ಸೆರೆಮನೆಯಲ್ಲಿ ನಡೆಯುತ್ತಿದ್ದ ಆಶ್ಚರ್ಯಕರವಾದ ಎಲ್ಲ ಚರಿತ್ರೆಗಳನ್ನೂ ಆ ರಾಕ್ಷಸರಾಜನಿಗೆ ಹೇಳಿದನು. ರಾಕ್ಷಸರಾಜನಾದ ದಾರುಕನು ಅಲ್ಲಿಗೆ ಬಂದು ಭ್ರಾಂತನಾಗಿ ಬೇಗನೆ ಆ ವೈಶ್ಯನನ್ನು ಕುರಿತು, ಎಲೋ ವೈಶ್ಯ, ನೀನು

॥ ದಾರುಕ ಉವಾಚ ॥

ಕಿಂ ಧ್ಯಾಯಸಿ ಹಿ ವೈಶ್ಯ ತ್ವಂ ಸತ್ಯಂ ವದ ಮಮಾಗ್ರತಃ ।
ಏವಂ ಸತಿ ನ ಮೃತ್ಯುಸ್ತೇ ಮಮ ವಾಕ್ಯಂ ಚ ನಾನ್ಯಥಾ ॥ ೪ ॥

॥ ಸೂತ ಉವಾಚ ॥

ತೇನೋಕ್ತಂ ಚ ನ ಜಾನಾಮಿ ತಚ್ಛ್ರುತ್ವಾ ಕುಪಿತಸ್ಸ ವೈ ।
ರಾಕ್ಷಸಾನ್ಪ್ರೇರಯಾಮಾಸ ಹನ್ಯತಾಂ ರಾಕ್ಷಸಾ ಅಯಂ ॥ ೫ ॥

ತದುಕ್ತಾಸ್ತೇ ತದಾ ಹಂತುಂ ನಾನಾಯುಧಧರಾ ಗತಾಃ ।
ದ್ರುತಂ ತಂ ವೈಶ್ಯಶಾರ್ದೂಲಂ ಶಂಕರಾಸಕ್ತಚೇತಸಂ ॥ ೬ ॥

ತಾನಾಗತಾಂಸ್ತದಾ ದೃಷ್ಟ್ವಾ ಭಯವಿತ್ರಸ್ತಲೋಚನಃ ।
ಶಿವಂ ಸಸ್ಮಾರ ಸುಪ್ರೀತ್ಯಾ ತನ್ನಾಮಾನಿ ಜಗೌ ಮುಹುಃ ॥ ೭ ॥

॥ ವೈಶ್ಯಪತಿರುವಾಚ ॥

ಪಾಹಿ ಶಂಕರ ದೇವೇಶ ಪಾಹಿ ಶಂಭೋ ಶಿವೇತಿ ಚ ।
ದುಷ್ಟಾದಸ್ಮಾತ್ತ್ರಿಲೋಕೇಶ ಖಲಹನ್ಭಕ್ತವತ್ಸಲ ॥ ೮ ॥

---

ಏನನ್ನು ಧ್ಯಾನಮಾಡುತ್ತಿರುವೆ? ನನ್ನೆದುರಿಗೆ ನಿಜವನ್ನು ಹೇಳು. ನಿಜವನ್ನು ಹೇಳಿದರೆ ನಿನಗೆ ಮರಣಭಯವಿಲ್ಲ. ನನ್ನ ಮಾತು ಸುಳ್ಳಾಗದು ಎಂದನು.

೫-೭. ಆ ವೈಶ್ಯನು ನಾನು ಕಾಣೆನೆಂದನು. ಆ ಮಾತನ್ನು ಕೇಳಿ ಆ ದಾರುಕನು ಕೋಪಗೊಂಡು ಎಲೈ, ರಾಕ್ಷಸರೇ! ಈ ವೈಶ್ಯನನ್ನು ಕೊಲ್ಲಿರಿ, ಎಂದು ರಾಕ್ಷಸರನ್ನು ಆಜ್ಞಾಪಿಸಿ ಕಳುಹಿಸಿದನು. ಅವನ ಮಾತನ್ನು ಕೇಳಿ ರಾಕ್ಷಸರು ಬಗೆ ಬಗೆಯ ಆಯುಧಗಳನ್ನು ಧರಿಸಿ ಬೇಗನೆ ಅಲ್ಲಿಗೆ ಬಂದು ಶಿವನನ್ನೇ ಧ್ಯಾನಿಸುತ್ತಿರುವ ಆ ವೈಶ್ಯನನ್ನು ಕೊಲ್ಲಲು ಹೋದರು. ಆಗ ಬಂದ ಆ ರಾಕ್ಷಸರನ್ನು ನೋಡಿ ವೈಶ್ಯನು ಭಯದಿಂದ ಚಂಚಲವಾದ ಕಣ್ಣುಳ್ಳವನಾಗಿ ಭಕ್ತಿಯಿಂದ ಶಿವನನ್ನು ಸ್ಮರಿಸಿ ಬಾರಿ ಬಾರಿಗೂ ಅವನ ನಾಮುಗಳನ್ನು ಗಾನಮಾಡಿದನು.

೮-೯. ವೈಶ್ಯಪತಿಯು ಹೇಳಿದನು.—ದೇವತೆಗಳಿಗೆ ಒಡೆಯನಾದ ಓ ಶಂಕರನೇ, ರಕ್ಷಿಸು. ಶಂಭುವೇ, ಶಿವನೇ, ರಕ್ಷಿಸು. ದುಷ್ಟರನ್ನು ನಾಶಮಾಡುವವನು

ಸರ್ವಸ್ವಂ ಚ ಭವಾನದ್ಯ ಮಮ ದೇವ ತ್ವಮೇವ ಹಿ ।
ತ್ವದಧೀನಸ್ತ್ವದೀಯೋಽಹಂ ತ್ವತ್ಪ್ರಾಣಸ್ಸರ್ವದಾ ಪ್ರಭೋ ॥ ೯ ॥

॥ ಸೂತ ಉವಾಚ ॥

ಇತಿ ಸಂಪ್ರಾರ್ಥಿತಶ್ಶಂಭುರ್ವಿವರಾನ್ನಿರ್ಗತಸ್ತದಾ ।
ಭವನೇನೋತ್ತಮೇನಾಥ ಚತುರ್ದ್ವಾರಯುತೇನ ಚ ॥ ೧೦ ॥

ಮಧ್ಯೇ ಜ್ಯೋತಿಸ್ಸ್ವರೂಪಂ ಚ ಶಿವರೂಪಂ ತದದ್ಭುತಂ ।
ಪರಿವಾರಸಮಾಯುಕ್ತಂ ದೃಷ್ಟ್ವಾ ಚಾಪೂಜಯತ್ಸ ವೈ ॥ ೧೧ ॥

ಪೂಜಿತಶ್ಚ ತದಾ ಶಂಭುಃ ಪ್ರಸನ್ನೋ ಹ್ಯಭವತ್ಸ್ವಯಂ ।
ಅಸ್ತ್ರಂ ಪಾಶುಪತಂ ನಾಮ ದತ್ವಾ ರಾಕ್ಷಸಪುಂಗವಾನ್ ॥ ೧೨ ॥

ಜಘಾನ ಸೋಪಕರಣಾಂಸ್ತಾನ್ಸರ್ವಾನ್ಸಗಣಾನ್ದ್ರುತಂ ।
ಅರಕ್ಷಚ್ಚ ಸ್ವಭಕ್ತಂ ವೈ ದುಷ್ಟಹಾ ಸ ಹಿ ಶಂಕರಃ ॥ ೧೩ ॥

---

ಭಕ್ತರಲ್ಲಿ ಪ್ರೀತಿಯುಳ್ಳವನೂ ಮೂರು ಲೋಕಕ್ಕೂ ಒಡೆಯನೂ ಆದ ನೀನು, ಈ ದುಷ್ಟನ ದೆಸೆಯಿಂದ ನನ್ನನ್ನು ಕಾಪಾಡು. ಎಲೈ, ದೇವನೇ! ನೀನೇ ನನಗೆ ಸರ್ವಸ್ವಸ್ವರೂಪನು. ನಾನು ನಿನ್ನಧೀನನಾಗಿ ನಿನ್ನವನಾಗಿ ನಿನ್ನಿಂದಲೇ ಪ್ರಾಣವನ್ನು ಧರಿಸಿರುವೆನು ಎಂದು ಪ್ರಾರ್ಥಿಸಿದನು.

೧೦–೧೩. ಹೀಗೆ ಪ್ರಾರ್ಥನೆ ಮಾಡಲು ಶಿವನು ಒಂದು ಬಿಲದಿಂದ ಹೊರಗೆ ಕಾಣಿಸಿಕೊಂಡನು. ನಾಲ್ಕು ಬಾಗಿಲುಗಳುಳ್ಳ ಉತ್ತಮವಾದ ಒಂದು ಮನೆಯೂ ಕಾಣಿಸಿತು. ಅದರ ನಡುವೆ ಪ್ರಕಾಶಸ್ವರೂಪನಾಗಿ ಪರಿವಾರದಿಂದ ಕೂಡಿದ ಶಿವನನ್ನು ನೋಡಿ ವೈಶ್ಯನು ಅವನನ್ನು ಪೂಜಿಸಿದನು. ಪೂಜೆಮಾಡಿದಮೇಲೆ ಶಿವನು ಪ್ರಸನ್ನನಾಗಿ ತಾನೇ ಪಾಶುಪತಾಸ್ತ್ರಮನ್ನು ತೊಟ್ಟು ರಾಕ್ಷಸರ ಗುಂಪಿನೊಡನೆಕೂಡಿದ ದಾರುಕನನ್ನು ಕೊಂದು ತನ್ನ ಭಕ್ತನನ್ನು ಕಾಪಾಡಿದನು.

ಸರ್ವಾಂಸ್ತಾಂಶ್ಚ ತದಾ ಹತ್ವಾ ವರಂ ಪ್ರಾದಾದ್ವನಸ್ಯ ಚ ।
ಅತ್ಯದ್ಭುತಕರಶ್ಶಂಭುಸ್ಸ್ವಲೀಲಾತ್ತಸುವಿಗ್ರಹಃ ॥ ೧೪ ॥

ಅಸ್ಮಿನ್ವನೇ ಸದಾ ವರ್ಣಾಧರ್ಮಾ ವೈ ಸಂಭವಂತು ಚ ।
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಹಿ ತಥೈವ ಚ ॥ ೧೫ ॥

ಭವನ್ತ್ವತ್ರ ಮುನಿಶ್ರೇಷ್ಠಾಸ್ತಾಮಸಾ ನ ಕದಾಚನ ।
ಶಿವಧರ್ಮಪ್ರವಕ್ತಾರಶ್ಶಿವಧರ್ಮಪ್ರವರ್ತಕಾಃ ॥ ೧೬ ॥

॥ ಸೂತ ಉವಾಚ ॥

ಏತಸ್ಮಿನ್ಸಮಯೇ ಸಾ ವೈ ರಾಕ್ಷಸೀ ದಾರುಕಾಹ್ವಯಾ ।
ದೇವ್ಯಾಃ ಸ್ತುತಿಂ ಚಕಾರಾಸೌ ಪಾರ್ವತ್ಯಾ ದೀನಮಾನಸಾ ॥ ೧೭ ॥

ಪ್ರಸನ್ನಾ ಚ ತದಾ ದೇವೀ ಕಿಂಕರೋಮೀತ್ಯುವಾಚ ಹಿ ।
ಸಾಪ್ಯುವಾಚ ಪುನಸ್ತತ್ರ ವಂಶೋ ಮೇ ರಕ್ಷ್ಯತಾಂ ತ್ವಯಾ ॥ ೧೮ ॥

ರಕ್ಷಯಿಷ್ಯಾಮಿ ತೇ ವಂಶಂ ಸತ್ಯಂ ಚ ಕಥ್ಯತೇ ಮಯಾ ।
ಇತ್ಯುಕ್ತ್ವಾ ಚ ಶಿವೇನೈವ ವಿಗ್ರಹಂ ಸಾ ಚಕಾರ ಹ ॥ ೧೯ ॥

---

೧೪-೧೬. ಆ ಶಂಕರನು ತನ್ನ ಲೀಲೆಯಿಂದ ಸುಂದರವಾದ ಶರೀರವನ್ನು ಧರಿಸಿ ಆಶ್ಚರ್ಯಕರವಾದ ಕಾರ್ಯಗಳನ್ನು ಮಾಡುವನು. ಆ ಶಿವನು ರಾಕ್ಷಸರನ್ನೆಲ್ಲಾ ಕೊಂದು ಆ ವನಕ್ಕೆ ವರವನ್ನು ಕೊಟ್ಟನು. ಈ ವನದಲ್ಲಿ ಯಾವಾಗಲೂ ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಧರ್ಮಗಳೂ ನಾಶವಾಗದೆ ಇರುವುವು. ಇಲ್ಲಿ ತಾಮಸಗುಣವುಳ್ಳ ಜನರು ಎಂದಿಗೂ ಇರುವುದಿಲ್ಲ. ಶಿವಧರ್ಮವನ್ನು ತಿಳಿದು ಆ ಧರ್ಮವನ್ನು ನಡೆಸುವವರೇ ಇರುವರು. ಹೀಗೆಂದು ದಾರುಕವನಕ್ಕೆ ಶಿವನು ವರವನ್ನು ಕೊಟ್ಟನು.

೧೭-೨೧. ಈ ಸಮಯದಲ್ಲಿ ದಾರುಕಾ ಎಂಬ ರಾಕ್ಷಸಿಯು ಅತ್ಯಂತ ದೈನ್ಯದಿಂದ ಪಾರ್ವತೀದೇವಿಯ ಸ್ತೋತ್ರವನ್ನು ಮಾಡಿದಳು. ದೇವಿಯು ಪ್ರಸನ್ನಳಾಗಿ ನಿನಗೆ ನಾನು ಏನು ಮಾಡಬೇಕೆಂದು ಕೇಳಿದಳು. ಆ ರಾಕ್ಷಸಿಯು ನನ್ನ ವಂಶವನ್ನು ನೀನು ಕಾಪಾಡಬೇಕು ಎಂದಳು. ಪಾರ್ವತಿಯು—ಹಾಗೆಯೇ ಆಗಲಿ

ಶಿವೋಽಪಿ ಕುಪಿತಾಂ ದೇವೀಂ ದೃಷ್ಟ್ವಾ ವರವಶಃ ಪ್ರಭುಃ ।
ಪ್ರತ್ಯುವಾಚೇತಿ ಸುಪ್ರೀತ್ಯಾ ಯಥೇಚ್ಛಸಿ ತಥಾ ಕುರು ॥ ೨೦ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಸ್ವಪತೇಶ್ಶಂಕರಸ್ಯ ವೈ ।
ಸುಪ್ರಸನ್ನಾ ವಿಹಸ್ಯಾಶು ಪಾರ್ವತೀ ವಾಕ್ಯಮಬ್ರವೀತ್ ॥ ೨೧ ॥

ಪಾರ್ವತ್ಯುವಾಚ ॥

ಭವದೀಯಂ ವಚಸ್ತಥ್ಯಂ ಯುಗಾಂತೇ ಸಂಭವಿಷ್ಯತಿ ।
ತಾವಚ್ಚ ತಾಮಸೀ ಸೃಷ್ಟಿರ್ಭವತ್ವಿತಿ ಮತಂ ಮಮ ॥ ೨೨ ॥

ಅನ್ಯಥಾ ಪ್ರಲಯಸ್ಸ್ಯಾದ್ವೈ ಸತ್ಯಂ ಮೇ ವ್ಯಾಹೃತಂ ಶಿವ ।
ಪ್ರಮಾಣೀಕ್ರಿಯತಾಂ ನಾಥ ತ್ವದೀಯಾಸ್ಮಿ ತ್ವದಾಶ್ರಯಾ ॥ ೨೩ ॥

ಇಯಂ ಚ ದಾರುಕಾ ದೇವೀ ರಾಕ್ಷಸೀ ಶಕ್ತಿಕಾ ಮಮ ।
ಬಲಿಷ್ಠಾ ರಾಕ್ಷಸೀನಾಂ ಚ ರಕ್ಷೋರಾಜ್ಯಂ ಪ್ರಶಾಸ್ತು ಚ ॥ ೨೪

---

ಕಾಪಾಡುವೆನು. ಇದು ಸತ್ಯ ಎಂದು ಹೇಳಿ, ಈ ವನದಲ್ಲಿ ತಾಮಸಗುಣವುಳ್ಳವರು ಇರಬಾರದು ಎಂದು ಶಿವನು ಹೇಳಿದುದಕ್ಕೆ ದೇವಿಯು ಜಗಳವಾಡಿದಳು. ಶಿವನು ದೇವಿಯು ಕೋಪಗೊಂಡುದುದನ್ನು ನೋಡಿ, ಅವಳು ಕೊಟ್ಟ ವರವು ನೆರವೇರುವುದಕ್ಕಾಗಿ, ನಿನ್ನ ಇಷ್ಟ ಬಂದಂತೆ ಮಾಡು ಎಂದನು.

೨೨-೨೫. ಪಾರ್ವತಿಯು ಹೇಳಿದಳು—ಎಲೈ, ಶಿವನೇ! ಈ ವನಕ್ಕೆ ವರವನ್ನು ಕೊಟ್ಟಿರುವೆಯಷ್ಟೆ. ಆ ನಿನ್ನ ಮಾತು ಮತ್ತೊಂದು ಯುಗದಲ್ಲಿ ನಿಜವಾಗಲಿ. ಅಲ್ಲಿಯವರೆಗೂ ತಾಮಸಸೃಷ್ಟಿಯು ಇಲ್ಲಿ ನಡೆಯಲಿ ಎಂಬುದೇ ನನ್ನ ಅಭಿಮತವು. ಹಾಗಲ್ಲದಿದ್ದರೆ ಪ್ರಳಯವೇ ಉಂಟಾದೀತು. ನಾನು ನಿಜವನ್ನೇ ಹೇಳಿರುವೆನು. ಎಲೈ ಸ್ವಾಮಿಯೇ! ನಾನು ನಿನ್ನವಳಾಗಿ ನಿನ್ನ ಅಧೀನದಲ್ಲಿರುವೆನು. ನನ್ನ ಮಾತನ್ನು ಸತ್ಯವಾಗುವಂತೆ ಮಾಡಬೇಕು. ಈ ದಾರುಕಾರಾಕ್ಷಸಿಯು ನನ್ನ ಸಂಬಂಧವಾದ ರಾಕ್ಷಸೀಶಕ್ತಿಸ್ವರೂಪಳು. ಅತ್ಯಂತ ಬಲವುಳ್ಳವಳು. ಇವಳೇ ರಾಕ್ಷಸರ ರಾಜ್ಯ

ಇಮಾ ರಾಕ್ಷಸಪತ್ನ್ಯಸ್ತು ಪ್ರಸವಿಷ್ಯಂತಿ ಪುತ್ರಕಾನ್ ।
ತೇ ಸರ್ವೇ ಮಿಲಿತಾಶ್ಚೈವ ವನೇ ವಾಸಾಯ ಮೇ ಮತಾಃ ॥ ೨೫ ॥

॥ ಸೂತ ಉವಾಚ

ಇತ್ಯೇವಂ ವಚನಂ ಶ್ರುತ್ವಾ ಪಾರ್ವತ್ಯಾಸ್ಸ್ವಸ್ತ್ರಿಯಾಃ ಪ್ರಭುಃ ।
ಪ್ರಸನ್ನಮಾನಸೋ ಭೂತ್ವಾ ಶಂಕರೋ ವಾಕ್ಯಮಬ್ರವೀತ್ ॥ ೨೬ ॥

॥ ಶಂಕರ ಉವಾಚ ॥

ಇತಿ ಬ್ರವೀಷಿ ತ್ವಂ ವೈ ಚೇಚ್ಛೃಣು ಮದ್ವಚನಂ ಪ್ರಿಯೇ ।
ಸ್ಥಾಸ್ಯಾಮ್ಯಸ್ಮಿನ್ವನೇ ಪ್ರೀತ್ಯಾ ಭಕ್ತಾನಾಂ ಪಾಲನಾಯ ಚ ॥ ೨೭ ॥

ಅತ್ರ ಮೇ ವರ್ಣಧರ್ಮಸ್ಥೋ ದರ್ಶನಂ ಪ್ರೀತಿಸಂಯುತಂ ।
ಕರಿಷ್ಯತಿ ಚ ಯೋ ವೈ ಸ ಚಕ್ರವರ್ತೀ ಭವಿಷ್ಯತಿ ॥ ೨೮ ॥

ಅನ್ಯಥಾ ಕಲಿಪರ್ಯಾಯೇ ಸತ್ಯಸ್ಯಾದೌ ನೃಪೇಶ್ವರಃ ।
ಮಹಾಸೇನಯುತೋ ಯೋ ವೈ ವೀರಸೇನೇತಿ ವಿಶ್ರುತಃ ॥ ೨೯ ॥

---

ವನ್ನು ಆಳಲಿ. ಈ ರಾಕ್ಷಸಪತ್ನಿಯರು ಅನೇಕ ಮಕ್ಕಳುಗಳನ್ನು ಪಡೆಯುವರು. ಅವರೆಲ್ಲರೂ ಕೂಡಿ ಈ ವನದಲ್ಲಿ ಸುಖವಾಗಿ ವಾಸಮಾಡಿಕೊಂಡಿರಲಿ. ಇದೇ ನನ್ನ ಅಭಿಪ್ರಾಯವು ಎಂದಳು.

೨೬. ಸ್ವಾಮಿಯಾದ ಶಿವನು ತನ್ನ ಪತ್ನಿಯಾದ ಪಾರ್ವತಿಯು ಹೇಳಿದ ಮಾತನ್ನು ಕೇಳಿ ಪ್ರಸನ್ನನಾಗಿ ಇಂತೆಂದನು.

೨೭-೩೦. ಎಲೌ ಪ್ರೀತಿಪಾತ್ರಳಾದ ಪಾರ್ವತಿಯೇ! ನೀನು ಹೀಗೆ ಹೇಳುವುದಾದರೆ ನನ್ನ ಮಾತನ್ನು ಕೇಳು. ಆ ವನದಲ್ಲಿ ನಾನು ಭಕ್ತರನ್ನು ಕಾಪಾಡುವುದಕ್ಕಾಗಿ ನೆಲಸುವೆನು. ಈ ಪ್ರದೇಶದಲ್ಲಿ ವರ್ಣಧರ್ಮವನ್ನು ನಡೆಸುವ ಯಾವ ಮನುಷ್ಯನಾದರೂ ಪ್ರೀತಿಯಿಂದ ನನ್ನ ದರ್ಶನವನ್ನು ಮಾಡಿದರೆ, ಅವನು ಚಕ್ರವರ್ತಿಯಾಗುವನು. ಈ ಕಲಿಯುಗವು ಕಳೆದಮೇಲೆ ಕೃತಯುಗದ ಆದಿಯಲ್ಲಿ ನನ್ನ

ಸ ಮೇ ಭಕ್ತೇತಿ ವಿಕ್ರಾಂತೋ ದರ್ಶನಂ ಮೇ ಕರಿಷ್ಯತಿ ।
ದರ್ಶನಂ ಮೇ ಸ ಕೃತ್ವೈವ ಚಕ್ರವರ್ತೀ ಭವಿಷ್ಯತಿ ॥ ೩೦ ॥

॥ ಸೂತ ಉವಾಚ ॥

ಇತ್ಯೇವಂ ದಂಪತೀ ತೌ ಚ ಕೃತ್ವಾ ಹಾಸ್ಯಂ ಪರಸ್ಪರಂ ।
ಸ್ಥಿತೌ ತತ್ರ ಸ್ವಯಂ ಸಾಕ್ಷಾನ್ಮಹೋತೀಕಾರಕೌ ದ್ವಿಜಾಃ ॥ ೩೧ ॥

ಜ್ಯೋತಿರ್ಲಿಂಗಸ್ವರೂಪೋ ಹಿ ನಾಮ್ನಾ ನಾಗೇಶ್ವರಶ್ಶಿವಃ ।
ನಾಗೇಶ್ವರೀ ಶಿವಾ ದೇವೀ ಬಭೂವ ಚ ಸತಾಂ ಪ್ರಿಯಾ ॥ ೩೨ ॥

॥ ಋಷಯ ಊಚುಃ ॥

ವೀರಸೇನಃ ಕಥಂ ತತ್ರ ಯಾಸ್ಯತೇ ದಾರುಕಾವನೇ ।
ಕಥಮರ್ಚಿಷ್ಯತಿ ಶಿವಂ ತ್ವಂ ತದ್ವದ ಮಹಾಮತೇ ॥ ೩೩ ॥

---

ಭಕ್ತನೂ ಪರಾಕ್ರಮಶಾಲಿಯೂ ಆದ ವೀರಸೇನನೆಂಬ ಹೆಸರಿನ ರಾಜನು ವಿಶೇಷಸೇನೆಯಿಂದ ಕೂಡಿ ನನ್ನ ದರ್ಶನವನ್ನು ಮಾಡುವನು. ಆಮೇಲೆ ಅವನು ಚಕ್ರವರ್ತಿಯಾಗುವನು ಎಂದನು.

೩೧-೩೨. ಹೀಗೆ ಆ ಶಿವದಂಪತಿಗಳು ಪರಸ್ಪರವಾಗಿ ಹಾಸ್ಯಕರವಾದ ಮಾತುಗಳನ್ನಾಡುತ್ತಾ ಆ ದಾರುಕಾವನದಲ್ಲಿಯೇ ನೆಲಸಿದರು. ಶಿವನು ನಾಗೇಶ್ವರನೆಂಬ ಜ್ಯೋತಿರ್ಲಿಂಗರೂಪವಾಗಿಯೂ, ಪಾರ್ವತಿಯು ನಾಗೇಶ್ವರೀ ಎಂಬ ದೇವೀಪ್ರತಿಮಾರೂಪವಾಗಿಯೂ ಅಲ್ಲಿದ್ದು ಸಜ್ಜನರಿಗೆ ಸಂತೋಷವನ್ನುಂಟುಮಾಡುವವರಾಗಿದ್ದರು.

೩೩. ಋಷಿಗಳು ಕೇಳಿದರು—ಎಲೈ ಸೂತನೇ, ವೀರಸೇನನು ದಾರುಕಾವನಕ್ಕೆ ಹೇಗೆ ಹೋಗುವನು? ಶಿವನನ್ನು ಹೇಗೆ ಪೂಜಿಸುವನು? ಅದನ್ನು ನೀನು ನಮಗೆ ಹೇಳಬೇಕು ಎಂದರು.

॥ ಸೂತ ಉವಾಚ ॥

ನಿಷಧೇ ಸುಂದರೇ ದೇಶೇ ಕ್ಷತ್ರಿಯಾಣಾಂ ಕುಲೇ ಚ ಸಃ ।
ಮಹಾಸೇನಸುತೋ ವೀರಸೇನಶ್ಚೈವ ಶಿವಪ್ರಿಯಃ ॥ ೩೪ ॥

ಪಾರ್ಥಿವೇಶಾರ್ಚನಂ ಕೃತ್ವಾ ತಪಃ ಪರಮದುಷ್ಕರಂ ।
ಚಕಾರ ವೀರಸೇನೋ ವೈ ವರ್ಷಾಣಾಂ ದ್ವಾದಶಾವಧಿಃ ॥ ೩೫ ॥

ತತಃ ಪ್ರಸನ್ನೋ ದೇವೇಶಃ ಪ್ರತ್ಯಕ್ಷಂ ಪ್ರಾಹ ಶಂಕರಃ ।
ಕಾಷ್ಠಸ್ಯ ಮತ್ಸಿಕಾಂ ಕೃತ್ವಾ ತ್ರಪುಧಾತುವಿಲೇಪನಾಂ ॥ ೩೬ ॥

ವಿಧಾಯ ಯೋಗಮಾಯಾಂ ಚ ದಾಸ್ಯಾಮಿ ವೀರಸೇನಕ ।
ತಾಂ ಗೃಹೀತ್ವಾ ಪ್ರವಿಶ್ಯೈತಂ ನೃಭಿಸ್ಸಹ ವ್ರಜಾಧುನಾ ॥ ೩೭ ॥

ತತಸ್ತ್ವಂ ತತ್ರ ಗತ್ವಾ ಚ ವಿವರೇ ಚ ಕೃತೇ ಮಯಾ ।
ಪ್ರವಿಶ್ಯ ಚ ತದಾ ಪೂಜಾಂ ಕೃತ್ವಾ ನಾಗೇಶ್ವರಸ್ಯ ಚ ॥ ೩೮ ॥

ತತಃ ಪಾಶುಪತಂ ಪ್ರಾಪ್ಯ ಹತ್ವಾ ಚ ರಾಕ್ಷಸೀಮುಖಾನ್ ।
ಮಯಿ ದೃಷ್ಟೇ ತದಾ ಕಿಂಚಿನ್ನ್ಯೂನಂ ತೇ ನ ಭವಿಷ್ಯತಿ ॥ ೩೯ ॥

---

೩೪-೪೦. ಸೂತನು ಹೇಳಿದನು—ಸುಂದರವಾದ ನಿಷಧದೇಶದಲ್ಲಿ ಕ್ಷತ್ರಿಯ ವಂಶದಲ್ಲಿ ಹುಟ್ಟಿದ ಮಹಾಸೇನನಿಗೆ ವೀರಸೇನೆಂಬ ಮಗನಿದ್ದನು. ಅವನು ಶಿವನಲ್ಲಿ ಪ್ರೀತಿಯುಳ್ಳವನಾಗಿ ಪಾರ್ಥಿವಲಿಂಗಪೂಜೆಯನ್ನು ಮಾಡುತ್ತ ಹನ್ನೆರಡು ವರ್ಷಗಳ ವರಿಗೆ ಅತ್ಯುಗ್ರವಾದ ತಪಸ್ಸನ್ನು ಮಾಡಿದನು. ಆಮೇಲೆ ಸ್ವಾಮಿಯಾದ ಶಿವನು ಪ್ರತ್ಯಕ್ಷನಾಗಿ ಬಂದು ಆ ವೀರಸೇನನನ್ನು ಕುರಿತು ಎಲೈ, ವೀರಸೇನನೇ! ನಾನು ನಿನಗೆ ಮರದಿಂದ ಮಾಡಿದ ಒಂದು ಮಾನಿಗೆ ತವರವನ್ನು ಬಳಿದು ಕೊಡುವೆನು. ಅದನ್ನು ತೆಗೆದುಕೊಂಡು ನೀನು ನಿನ್ನ ಪರಿವಾರಜನರೊಂದಿಗೆ ಈಗಲೇ ದಾರುಕಾ ವನಕ್ಕೆ ಹೋಗು. ಅಲ್ಲಿ ನಾನು ಮಾಡಿದ ಒಂದು ಬಿಲ (ಗುಹೆಯಲ್ಲಿ) ದಲ್ಲಿ ಪ್ರವೇಶ ಮಾಡಿ ಅಲ್ಲಿರುವ ನಾಗೇಶ್ವರ ಲಿಂಗವನ್ನು ಪೂಜಿಸು. ಆಮೇಲೆ ಪಾಶುಪತಾಸ್ತ್ರವು

ಪಾರ್ವತ್ಯಾಶ್ಚ ಬಲಂ ಚೈವ ಸಂಪೂರ್ಣಾ ವೈ ಭವಿಷ್ಯತಿ ।
ಅನ್ಯೇ ಚ ಮ್ಲೇಚ್ಛರೂಪಾ ಯೇ ಭವಿಷ್ಯಂತಿ ವನೇ ಶುಭಾಃ ॥ ೪೦ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಶಂಕರಸ್ತತ್ರ ವೀರಸೇನಂ ಹಿ ದುಃಖಹಾ ।
ಕೃತ್ವಾ ಕೃಪಾಂ ಚ ಮಹತೀಂ ತತ್ರೈವಾಂತರ್ದಧೇ ಪ್ರಭುಃ ॥ ೪೧ ॥

ಇತಿ ದತ್ತವರಸ್ಸೋಽಪಿ ಶಿವೇನ ಪರಮಾತ್ಮನಾ ।
ಶಕ್ತಸ್ಸರ್ವಂ ತದಾ ಕರ್ತುಂ ಸಂಬಭೂವ ನ ಸಂಶಯಃ ॥ ೪೨ ॥

ಏವಂ ನಾಗೇಶ್ವರೋ ದೇವ ಉತ್ಪನ್ನೋ ಜ್ಯೋತಿಷಾಂ ಪತಿಃ ।
ಲಿಂಗರೂಪಸ್ತ್ರಿಲೋಕಸ್ಯ ಸರ್ವಕಾಮಪ್ರದಸ್ಸದಾ ॥ ೪೩ ॥

---

ನಿನಗೆ ಲಭಿಸುವುದು. ಅದರಿಂದ ಅಲ್ಲಿರುವ ರಾಕ್ಷಸರನ್ನೆಲ್ಲಾ ನಾಶಮಾಡು. ನನ್ನ ದರ್ಶನವಾದ ಮೇಲೆ ನಿನಗೆ ಯಾವುದಕ್ಕೂ ನ್ಯೂನತೆಯಿರುವುದಿಲ್ಲ. ಪಾರ್ವತಿಯ ವರವೂ ಪೂರ್ಣವಾಗುವುದು. ಆ ಶುಭಕರವಾದ ವನದಲ್ಲಿರುವ ಮ್ಲೇಚ್ಛರೂ ಇತರ ಜನರೂ ಸಜ್ಜನರಾಗುವರು ಎಂದನು.

೪೧-೪೨. ಸೂತನು ಹೇಳಿದನು.—ದುಃಖವನ್ನು ನಾಶಮಾಡುವ ಶಿವನು ವೀರಸೇನನಿಗೆ ಹೀಗೆಂದು ಹೇಳಿ, ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಪರಮಾತ್ಮನಾದ ಶಿವನು ಕೊಟ್ಟ ವರದಿಂದ ಆ ವೀರಸೇನನು ಅವನು ಹೇಳಿದ ಎಲ್ಲಾ ಕೆಲಸಗಳನ್ನೂ ಮಾಡಲು ಶಕ್ತನಾದನು.

೪೩. ಹೀಗೆ ನಾಗೇಶ್ವರವೆಂಬ ಜ್ಯೋತಿರ್ಲಿಂಗವು ಉತ್ಪನ್ನವಾಯಿತು. ಆ ಲಿಂಗವು ಮೂರು ಲೋಕಕ್ಕೂ ಸಮಸ್ತ ಇಷ್ಟಾರ್ಥಗಳನ್ನೂ ಕೊಡತಕ್ಕುದಾಗಿರುವುದು.

ಏತದ್ಯಚ್ಛೃಣುಯಾನ್ನಿತ್ಯಂ ನಾಗೇಶೋದ್ಭವಮಾದರಾತ್ ।
ಸರ್ವಾನ್ಕಾಮಾನಿಯಾದ್ಧೀಮಾನ್ಮಹಾಪಾತಕನಾಶನಾತ್ ॥ ೪೪ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ನಾಗೇಶ್ವರಜ್ಯೋತಿರ್ಲಿಂಗೋದ್ಭವಮಾಹಾತ್ಮ್ಯವರ್ಣನಂ ನಾಮ
ತ್ರಿಂಶೋಽಧ್ಯಾಯಃ

---

೪೪. ಈ ನಾಗೇಶ್ವರ ಜ್ಯೋತಿರ್ಲಿಂಗದ ಉತ್ಪತ್ತಿ ಕಥೆಯನ್ನು ಆದರದಿಂದ ಪ್ರತಿದಿನವೂ ಕೇಳುವ ವಿವೇಕಿಯಾದ ಪುರುಷನು ತಾನು ಮಾಡಿದ ಸಮಸ್ತ ಮಹಾ ಪಾತಕಗಳನ್ನೂ ನಾಶಮಾಡಿಕೊಂಡು ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ನಾಗೇಶ್ವರ ಜ್ಯೋತಿರ್ಲಿಂಗೋತ್ಪತ್ತಿವರ್ಣನೆಯೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಏಕತ್ರಿಂಶೋಽಧ್ಯಾಯಃ



॥ ಸೂತ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಲಿಂಗಂ ರಾಮೇಶ್ವರಾಭಿಧಂ ।
ಉತ್ಪನ್ನಂ ಚ ಯಥಾ ಪೂರ್ವಮೃಷಯಶ್ಶೃಣುತಾದರಾತ್ ॥ ೧ ॥

ಪುರಾ ವಿಷ್ಣುಃ ಪೃಥಿವ್ಯಾಂ ಚಾವತತಾರ ಸತಾಂ ಪ್ರಿಯಃ ॥ ೨ ॥

ತತ್ರ ಸೀತಾ ಹೃತಾ ವಿಪ್ರಾ ರಾವಣೇನೋರುಮಾಯಿನಾ ।
ಪ್ರಾಪಿತಾ ಸ್ವಗೃಹಂ ಸಾ ಹಿ ಲಂಕಾಯಾಂ ಜನಕಾತ್ಮಜಾ ॥ ೩ ॥

---

## ಮೂವತ್ತೊಂದನೆಯ ಅಧ್ಯಾಯವು.

೧-೫. ಸೂತನು ಹೇಳಿದನು.—ಎಲೈ ಋಷಿಗಳೇ! ಇಲ್ಲಿಂದ ಮುಂದೆ ರಾಮೇಶ್ವರನೆಂಬ ಜ್ಯೋತಿರ್ಲಿಂಗವು ಉತ್ಪತ್ತಿಯಾದ ಬಗೆಯನ್ನು ಹೇಳುವೆನು, ಆದರದಿಂದ ಕೇಳಿರಿ. ಹಿಂದೆ ಸಜ್ಜನರಿಗೆ ಪ್ರೀತಿಪಾತ್ರನಾದ ವಿಷ್ಣುವು ಭೂಮಿಯಲ್ಲಿ ರಾಮನಾಗಿ ಅವತಾರ ಮಾಡಿದನಷ್ಟೆ. ಆ ಸಂದರ್ಭದಲ್ಲಿ ಜನಕಪುತ್ರಿಯಾದ ಸೀತೆಯನ್ನು ಮಹಾಮಾಯಾವಿಯಾದ ರಾವಣನು ಕದ್ದುಕೊಂಡು ಹೋಗಿ ಲಂಕೆಯಲ್ಲಿ

ಅನ್ವೇಷಣಪರಸ್ತಸ್ಯಾಃ ಕಿಷ್ಕಿಂಧಾಖ್ಯಾಂ ಪುರೀಮಗಾತ್ ।
ಸುಗ್ರೀವಹಿತಕೃದ್ಭೂತ್ವಾ ವಾಲಿನಂ ಸಂಜಘಾನ ಹ ॥ ೪ ॥

ತತ್ರ ಸ್ಥಿತ್ವಾ ಕಿಯತ್ಕಾಲಂ ತದನ್ವೇಷಣತತ್ಪರಃ ।
ಸುಗ್ರೀವಾದ್ಯೈರ್ಲಕ್ಷ್ಮಣೇನ ವಿಚಾರಂ ಕೃತವಾನ್ಸ ವೈ ॥ ೫ ॥

ಕಪೀನ್ಸಂಪ್ರೇಷಯಾಮಾಸ ಚತುರ್ದಿಕ್ಷು ನೃಪಾತ್ಮಜಃ ।
ಹನುಮತ್ಪ್ರಮುಖಾನ್ರಾಮಸ್ತದನ್ವೇಷಣಹೇತವೇ ॥ ೬ ॥

ಅಥ ಜ್ಞಾತ್ವಾ ಗತಾಂ ಲಂಕಾಂ ಸೀತಾಂ ಕಪಿವರಾನನಾತ್ ।
ಸೀತಾಚೂಡಾಮಣಿಂ ಪ್ರಾಪ್ಯ ಮುಮುದೇ ಸೋಽತಿ ರಾಘವಃ ॥ ೭ ॥

ಸಕಪೀಶಸ್ತದಾ ರಾಮೋ ಲಕ್ಷ್ಮಣೇನ ಯುತೋ ದ್ವಿಜಾಃ ।
ಸುಗ್ರೀವಪ್ರಮುಖೈಃ ಪುಣ್ಯೈರ್ವಾನರೈರ್ಬಲವತ್ತರೈಃ ॥ ೮ ॥

ಪದ್ಮೈರಷ್ಟಾದಶಾಖ್ಯೈಶ್ಚ ಯಯೌ ತೀರಂ ಪಯೋನಿಧೇಃ ।
ದಕ್ಷಿಣೇ ಸಾಗರೇ ಯೋ ವೈ ದೃಶ್ಯತೇ ಲವಣಾಕರಃ ॥ ೯ ॥

---

ರುವ ತನ್ನ ಮನೆಯಲ್ಲಿರಿಸಿದನು. ರಾಮನು ಅವಳನ್ನು ಹುಡುಕುತ್ತ ಕಿಷ್ಕಿಂಧಾ ಪಟ್ಟಣಕ್ಕೆ ಬಂದನು. ಸುಗ್ರೀವನಿಗೆ ಹಿತವನ್ನು ಮಾಡುವುದಕ್ಕಾಗಿ ವಾಲಿಯನ್ನು ಕೊಂದನು. ಅಲ್ಲಿಯೇ ಕೆಲವು ದಿನಗಳಿದ್ದು, ಸೀತೆಯನ್ನು ಹುಡುಕುವುದರಲ್ಲಾಸಕ್ತನಾಗಿ ಸುಗ್ರೀವನೇ ಮೊದಲಾದ ಕಪಿಗಳಿಂದಲೂ, ತಮ್ಮನಾದ ಲಕ್ಷ್ಮಣನೊಡನೆಯೂ ಕೂಡಿ ವಿಚಾರಮಾಡಿದನು.

೬-೭. ರಾಜಪುತ್ರನಾದ ರಾಮನು ಸೀತೆಯನ್ನು ಹುಡುಕುವುದಕ್ಕಾಗಿ ಹನುಮಂತನೇ ಮುಂತಾದ ಕಪಿಗಳನ್ನು ನಾಲ್ಕು ದಿಕ್ಕುಗಳಿಗೂ ಕಳುಹಿಸಿದನು. ಕಪಿಶ್ರೇಷ್ಠನಾದ ಹನುಮಂತನ ಮಾತಿನಿಂದ ಸೀತೆಯು ಲಂಕೆಯಲ್ಲಿರುವುದನ್ನು ತಿಳಿದು ಸೀತೆಯ ಚೂಡಾಮಣಿಯನ್ನು ಹೊಂದಿ ಅತ್ಯಂತ ಸಂತೋಷಪಟ್ಟನು.

೮-೧೦. ಆಗ ರಾಮನು ಲಕ್ಷ್ಮಣನೊಡನೆಯೂ, ಕಪಿರಾಜನಾದ ಸುಗ್ರೀವನೊಡನೆಯೂ, ಪುಣ್ಯವಂತರಾದ ಹದಿನೆಂಟು ಪದ್ಮಸಂಖ್ಯೆಯ ವಾನರರಿಂದಲೂ ಕೂಡಿ

ತತ್ರಾಗತ್ಯ ಸ್ವಯಂ ರಾಮೋ ವೇಲಾಯಾಂ ಸಂಸ್ಥಿತೋ ಹಿ ಸಃ ।
ವಾನರೈಸ್ಸೇವ್ಯಮಾನಸ್ತು ಲಕ್ಷ್ಮಣೇನ ಶಿವಪ್ರಿಯಃ　　　　॥ ೧೦ ॥

ಹಾ ಜಾನಕೀ ಕುತೋ ಯಾತಾ ಕದಾ ಚೇಯಂ ಮಿಲಿಷ್ಯತಿ ।
ಅಗಾಧಸ್ಸಾಗರಶ್ಚೈವಾತಾರ್ಯೋ ಸೇನಾ ಚ ವಾನರೀ　　　　॥ ೧೧ ॥

ರಾಕ್ಷಸೋ ಗಿರಿಧರ್ತಾ ಚ ಮಹಾಬಲಪರಾಕ್ರಮಃ ।
ಲಂಕಾಖ್ಯಂ ದುರ್ಗಮಗಮದಿಂದ್ರಜಿತ್ತನಯೋಽಸ್ಯ ವೈ　　　　॥ ೧೨ ॥

ಇತ್ಯೇವಂ ಸ ವಿಚಾರ್ಯೈವ ತಟೇ ಸ್ಥಿತ್ವಾ ಸ ಲಕ್ಷ್ಮಣಃ ।
ಆಶ್ವಾಸಿತೋ ವನೌಕೋಭಿರಂಗದಾದಿಪುರಸ್ಸರೈಃ　　　　॥ ೧೩ ॥

ಏತಸ್ಮಿನ್ನಂತರೇ ತತ್ರ ರಾಘವಶ್ಶೈವಸತ್ತಮಃ ।
ಉವಾಚ ಭ್ರಾತರಂ ಪ್ರೀತ್ಯಾ ಜಲಾರ್ಥೀ ಲಕ್ಷ್ಮಣಾಭಿದಂ　　　　॥ ೧೪ ॥

---

ಸಮುದ್ರತೀರಕ್ಕೆ ಹೋದನು. ಶಿವನಲ್ಲಿ ಭಕ್ತಿಯುಳ್ಳ ರಾಮನು ದಕ್ಷಿಣದಿಕ್ಕಿನ ಲವಣಸಮುದ್ರತೀರದಲ್ಲಿ ಲಕ್ಷ್ಮಣನ ಮತ್ತು ವಾನರರ ಸೇವೆಯನ್ನು ಕೈಗೊಳ್ಳುತ್ತ ವಾಸವಾಗಿದ್ದನು.

೧೧-೧೩. ಅಲ್ಲಿ ರಾಮನು ಸೀತಾವಿರಹದಿಂದ ದುಃಖಪಡುತ್ತಾ ಹಾ! ಜಾನಕಿಯೇ! ಎಲ್ಲಿಗೆ ಹೋದೆ? ಯಾವಾಗ ನನ್ನನ್ನು ಸೇರುವೆ! ಈ ಸಾಗರವೋ ವಿಸ್ತಾರವಾದುದು. ವಾನರ ಸೇನೆಯು ಇದನ್ನು ಹೇಗೆ ದಾಟುವುದು? ರಾಕ್ಷಸನಾದ ರಾವಣನು ಕೈಲಾಸಪರ್ವತವನ್ನೆತ್ತಿದವನು. ಮಹಾಬಲಪರಾಕ್ರಮವುಳ್ಳವನು. ಲಂಕೆಯು ಸಮುದ್ರಮಧ್ಯದಲ್ಲಿ ಪ್ರವೇಶಿಸುವುದಕ್ಕಾಗದ ಮಹಾದುರ್ಗವಾಗಿರುವುದು. ಅವನ ಮಗನು ಇಂದ್ರನನ್ನು ಜಯಿಸಿದ ಮಹಾವೀರನು. ಹೀಗೆಂದು ವಿಚಾರ ಮಾಡುತ್ತ ಲಕ್ಷ್ಮಣನೊಡನೆ ಸಮುದ್ರದ ದಡದಲ್ಲಿ ನಿಂತು ಅಂಗದನೇ ಮುಂತಾದ ಕಪಿನಾಯಕರು ಹೇಳುವ ಸಮಾಧಾನವಾಕ್ಯಗಳನ್ನು ಕೇಳುತ್ತಿದ್ದನು.

೧೪-೧೬. ಈ ಸಮಯದಲ್ಲಿ ಶಿವಭಕ್ತರಲ್ಲಿ ಶ್ರೇಷ್ಠನಾದ ರಾಮನಿಗೆ ನೀರು ಬೇಕಾಗಲು ಅದನ್ನು ತರುವಂತೆ ತಮ್ಮನಾದ ಲಕ್ಷ್ಮಣನಿಗೆ ಹೇಳಿದನು. ಎಲೈ,

॥ ರಾಮ ಉವಾಚ ॥

ಭ್ರಾತರ್ಲಕ್ಷ್ಮಣ ವೀರೇಶಾಹಂ ಜಲಾರ್ಥೀ ಪಿಪಾಸಿತಃ ।
ತದಾನಯ ದ್ರುತಂ ಪಾಥೋ ವಾನರೈಃ ಕೈಶ್ಚಿದೇವ ಹಿ ॥ ೧೫ ॥

॥ ಸೂತ ಉವಾಚ ॥

ತಚ್ಛ್ರುತ್ವಾ ವಾನರಾಸ್ತತ್ರ ಹ್ಯಧಾವಂತ ದಿಶೋ ದಶ ।
ನೀತ್ವಾ ಜಲಂ ಚ ತೇ ಪ್ರೋಚುಃ ಪ್ರಣಿಪತ್ಯ ಪುರಃ ಸ್ಥಿತಃ ॥ ೧೬ ॥

॥ ವಾನರಾ ಊಚುಃ ॥

ಜಲಂ ಚ ಗೃಹ್ಯತಾಂ ಸ್ವಾಮಿನ್ನಾನೀತಂ ತತ್ತ್ವದಾಜ್ಞಯಾ ।
ಮಹೋತ್ತಮಂ ಚ ಸುಸ್ವಾದು ಶೀತಲಂ ಪ್ರಾಣತರ್ಪಣಂ ॥ ೧೭ ॥

॥ ಸೂತ ಉವಾಚ ॥

ಸುಪ್ರಸನ್ನತರೋ ಭೂತ್ವಾ ಕೃಪಾದೃಷ್ಟ್ಯಾ ವಿಲೋಕ್ಯ ತಾನ್ ।
ತಚ್ಛ್ರುತ್ವಾ ರಾಮಚಂದ್ರೋಽಸೌ ಸ್ವಯಂ ಜಗ್ರಾಹ ತಜ್ಜಲಂ ॥ ೧೮ ॥

ಸ ಶೈವಸ್ತಜ್ಜಲಂ ನೀತ್ವಾ ಪಾತುಮಾರಬ್ಧವಾನ್ಯದಾ ।
ತದಾ ಚ ಸ್ಮರಣಂ ಜಾತಮಿತ್ಥಮಸ್ಯ ಶಿವೇಚ್ಛಯಾ ॥ ೧೯ ॥

---

ಶೂರನಾದ ಲಕ್ಷ್ಮಣನೇ! ಬಾಯಾರಿಕೆಯಾಗುತ್ತಿರುವುದು. ವಾನರರಿಂದ ಬೇಗ ನೀರನ್ನು ತರಿಸಿಕೊಡು ಎಂದನು. ಆ ಮಾತನ್ನು ಕೇಳಿ ವಾನರರು ದಿಕ್ಕುಗಳಿಗೆ ಓಡಿ ಹೋಗಿ ಬೇಗನೆ ನೀರನ್ನು ತಂದುಕೊಟ್ಟು ನಮಸ್ಕಾರಮಾಡಿ ಹೇಳಿದರು.

೧೭. ಎಲೈ, ಸ್ವಾಮಿಯೇ! ನಿನ್ನ ಅಪ್ಪಣೆಯಂತೆ ನೀರನ್ನು ತಂದಿರುವೆವು ಅದನ್ನು ಸ್ವೀಕರಿಸು. ಈ ನೀರು ಅತ್ಯುತ್ತಮವಾದುದಾಗಿಯೂ, ತಣ್ಣಗೆ ಸಿಹಿ ಯಾಗಿಯೂ, ಹಿತಕರವಾಗಿಯೂ ಇರುವುದು ಎಂದರು.

೧೮-೨೧. ಈ ಮಾತನ್ನು ಕೇಳಿ, ರಾಮನು ಪ್ರಸನ್ನನಾಗಿ ದಯಾದೃಷ್ಟಿ ಯಿಂದ ಆ ವಾನರರನ್ನು ನೋಡಿ ತಾನೇ ಆ ನೀರನ್ನು ತೆಗೆದುಕೊಂಡನು. ಶಿವ ಭಕ್ತನಾದ ಆ ರಾಮನು ಆ ನೀರನ್ನು ತೆಗೆದುಕೊಂಡು ಕುಡಿಯುವುದಕ್ಕೆ ಪ್ರಾರಂಭಿಸಿ ದಾಗ ಶಿವೇಚ್ಛೆಯಿಂದ ಅವನಿಗೆ ಈ ವಿಷಯವು ಜ್ಞಾಪಕಕ್ಕೆ ಬಂದಿತು. ನಾನು ಪರಮೇಶ್ವರನಾದ ಶಿವನ ದರ್ಶನವನ್ನು ಮಾಡಲಿಲ್ಲ. ಆ ಶಿವನು ನನಗೆ ಸ್ವಾಮಿಯು

ನ ಕೃತಂ ದರ್ಶನಂ ಶಂಭೋರ್ಗೃಹ್ಣತೇ ಚ ಜಲಂ ಕಥಂ ।
ಸ್ವಸ್ವಾಮಿನಃ ಪರೇಶಸ್ಯ ಸರ್ವಾನಂದಪ್ರದಸ್ಯ ವೈ ॥ ೨೦ ॥

ಇತ್ಯುಕ್ತ್ವಾ ಚ ಜಲಂ ಪೀತಂ ತದಾ ರಘುವರೇಣ ಚ ।
ಪಶ್ಚಾಚ್ಚ ಪಾರ್ಥಿವೀಂ ಪೂಜಾಂ ಚಕಾರ ರಘುನಂದನಃ ॥ ೨೧ ॥

ಆವಾಹನಾದಿಕಂ ಚೈವ ಹ್ಯುಪಚಾರಾನ್ಪ್ರಕಲ್ಪ್ಯ ವೈ ।
ವಿಧಿವತ್ಷೋಡಶ ಪ್ರೀತ್ಯಾ ದೇವಮಾನರ್ಚ ಶಂಕರಂ ॥ ೨೨ ॥

ಪ್ರಣಿಪಾತೈಸ್ತವೈರ್ದಿವ್ಯೈಶ್ಶಿವಂ ಸಂತೋಷ್ಯ ಯತ್ನತಃ ।
ಪ್ರಾರ್ಥಯಾಮಾಸ ಸದ್ಭಕ್ತ್ಯಾ ಸ ರಾಮಶ್ಶಂಕರಂ ಮುದಾ ॥ ೨೩ ॥

॥ ರಾಮ ಉವಾಚ ॥

ಸ್ವಾಮಿಶ್ಶಂಭೋ ಮಹಾದೇವ ಸರ್ವದಾ ಭಕ್ತವತ್ಸಲ ।
ಪಾಹಿ ಮಾಂ ಶರಣಾಪನ್ನಂ ತ್ವದ್ಭಕ್ತಂ ದೀನಮಾನಸಂ ॥ ೨೪ ॥

ಏತಜ್ಜಲಮಗಾಧಂ ಚ ವಾರಿಧೇರ್ಭವತಾರಣ ।
ರಾವಣಾಖ್ಯೋ ಮಹಾವೀರೋ ರಾಕ್ಷಸೋ ಬಲವತ್ತರಃ ॥ ೨೫ ॥

---

ಸಕಲರಿಗೂ ಆನಂದವನ್ನುಂಟುಮಾಡುವವನು. ಇಂತಹ ಪರಮೇಶ್ವರನನ್ನು ದರ್ಶನ ಮಾಡದೆ ನೀರನ್ನು ಹೇಗೆ ಕುಡಿಯಲಿ? ಹೀಗೆಂದು ಹೇಳಿ ರಾಮನು ನೀರನ್ನು ಕುಡಿದನು. ಆಮೇಲೆ ಅವನು ಪಾರ್ಥಿವಲಿಂಗದ ಪೂಜೆಯನ್ನು ಮಾಡಿದನು.

೨೨–೨೩. ಆವಾಹನಾದಿ ಷೋಡಶೋಪಚಾರಗಳಿಂದ ವಿಧಿಗನುಸಾರವಾಗಿ ಶಿವನ ಪೂಜೆಯನ್ನು ಮಾಡಿದನು. ನಮಸ್ಕಾರ, ದಿವ್ಯವಾದ ಸ್ತೋತ್ರ, ಇವುಗಳಿಂದ ಪ್ರಯತ್ನಪೂರ್ವಕವಾಗಿ ಶಿವನನ್ನು ಸಂತೋಷಪಡಿಸಿ ಭಕ್ತಿಯಿಂದಲೂ ಸಂತೋಷ ದಿಂದಲೂ ಶಿವನನ್ನು ಪ್ರಾರ್ಥಿಸಿದನು.

೨೪-೨೯. ಎಲೈ, ಸ್ವಾಮಿಯಾದ ಮಹಾದೇವನೇ! ನೀನು ಯಾವಾಗಲೂ ಭಕ್ತರಲ್ಲಿ ಪ್ರೀತಿಯುಳ್ಳವನು. ನಿನ್ನ ಭಕ್ತನಾಗಿ ನಿನ್ನನ್ನೇ ಶರಣುಹೊಂದಿದ ದೀನ ನಾದ ನನ್ನನ್ನು ಕಾಪಾಡು. ಸಂಸಾರ ಸಮುದ್ರವನ್ನು ದಾಟಿಸುವ ಓ ಶಿವನೇ! ಈ ಲವಣಸಮುದ್ರವು ವಿಸ್ತಾರವಾದುದಾಗಿರುವುದು. ರಾವಣನೆಂಬ ರಾಕ್ಷಸನು

ವಾನರಾಣಾಂ ಬಲಂ ಹ್ಯೇತಚ್ಚ್ಚಂಚಲಂ ಯುದ್ಧಸಾಧನಂ ।
ಮಮ ಕಾರ್ಯಂ ಕಥಂ ಸಿದ್ಧಂ ಭವಿಷ್ಯತಿ ಪ್ರಿಯಾಪ್ತಯೇ ॥ ೨೬ ॥

ತಸ್ಮಿನ್ನೇವ ತ್ವಯಾ ಕಾರ್ಯಂ ಸಾಹಾಯ್ಯಂ ಮಮ ಸುವ್ರತ ।
ಸಾಹಾಯ್ಯಂ ತೇ ವಿನಾ ನಾಥ ಮಮ ಕಾರ್ಯಂ ಹಿ ದುರ್ಲಭಂ ॥ ೨೭ ॥

ತ್ವದೀಯೋ ರಾವಣೋಽಪೀಹ ದುರ್ಜಯಸ್ಸರ್ವಥಾಖಿಲೈಃ ।
ತ್ವದ್ದತ್ತವರದೃಪ್ತಶ್ಚ ಮಹಾವೀರಸ್ತ್ರಿಲೋಕಜಿತ್ ॥ ೨೮ ॥

ಅಪ್ಯಹಂ ತವ ದಾಸೋಽಸ್ಮಿ ತ್ವದಧೀನಶ್ಚ ಸರ್ವಥಾ ।
ವಿಚಾರ್ಯೇತಿ ತ್ವಯಾ ಕಾರ್ಯಃ ಪಕ್ಷಪಾತಸ್ಸದಾಶಿವ ॥ ೨೯ ॥

॥ ಸೂತ ಉವಾಚ ॥

ಇತ್ಯೇವಂ ಸ ಚ ಸಂಪ್ರಾರ್ಥ್ಯ ನಮಸ್ಕೃತ್ಯ ಪುನಃ ಪುನಃ ।
ತದಾ ಜಯಜಯೇತ್ಯುಚ್ಚೈರುದ್ಘೋಷ್ಯೈಶ್ಶಂಕರೇತಿ ಚ ॥ ೩೦ ॥

ಇತಿ ಸ್ತುತ್ವಾ ಶಿವಂ ತತ್ರ ಮಂತ್ರಧ್ಯಾನಪರಾಯಣಃ ।
ಪುನಃ ಪೂಜಾಂ ತತಃ ಕೃತ್ವಾ ಸ್ವಾಮ್ಯಗ್ರೇ ಸ ನನರ್ತ ಹ ॥ ೩೧ ॥

---

ಮಹಾಶೂರನು. ಅತ್ಯಂತ ಬಲಿಷ್ಠನು. ನಾವು ಮಾಡುವ ಯುದ್ಧಕ್ಕೆ ಸಾಧನವಾದ ಈ ಕಪಿಸೇನೆಯು ಅತ್ಯಂತ ಚಂಚಲವಾದುದು. ನನ್ನ ಪ್ರಿಯಳಾದ ಸೀತೆಯನ್ನು ಪಡೆಯುವ ನನ್ನ ಕಾರ್ಯವು ಹೇಗೆ ಸಿದ್ಧಿಯಾಗುವುದು ? ನೀನು ಭಕ್ತರು ಮಾಡುವ ಒಳ್ಳೆಯ ವ್ರತಗಳಿಂದ ಸಂತೋಷಗೊಳ್ಳುವೆ. ನೀನು ಎಲ್ಲರಿಗೂ ಸ್ವಾಮಿಯು. ಈಗ ನೀನು ನನ್ನ ಈ ಕೆಲಸದಲ್ಲಿ ಸಹಾಯವನ್ನು ಮಾಡಬೇಕು. ನಿನ್ನ ಸಹಾಯವಿಲ್ಲದೆ ನನ್ನ ಕಾರ್ಯವು ಸಿದ್ಧಿಸುವುದಿಲ್ಲ. ರಾವಣನು ನಿನ್ನ ಭಕ್ತನು. ಅವನನ್ನು ಯಾರೂ ಜಯಿಸಲಾರರು. ನೀನು ಕೊಟ್ಟ ವರದಿಂದ ಗರ್ವವುಳ್ಳವನಾಗಿ ಮೂರು ಲೋಕವನ್ನೂ ಜಯಿಸಿರುವನು. ನಾನೂ ನಿನ್ನ ಸೇವಕನು. ಯಾವಾಗಲೂ ನಿನ್ನ ಅಧೀನನಾಗಿರುವೆನು. ಎಲೈ, ಸದಾಶಿವನೇ, ಇವುಗಳೆಲ್ಲವನ್ನೂ ವಿಚಾರಮಾಡಿ ನೀನು ಯಾರಿಗೆ ಸಹಾಯವನ್ನು ಮಾಡಬೇಕೋ ಹಾಗೆ ಮಾಡು ಎಂದು ಸ್ತುತಿಸಿದನು.

೩೦–೩೩. ರಾಮನು ಹೀಗೆ ಪ್ರಾರ್ಥಿಸಿ ಪುನಃ ಪುನಃ ನಮಸ್ಕಾರವನ್ನು ಮಾಡಿ ಜಯ ಜಯವೆಂದು ಗಟ್ಟಿಯಾಗಿ ಧ್ವನಿ ಮಾಡಿ ಧ್ಯಾನಗಳಲ್ಲಿ ಆಸಕ್ತನಾಗಿ

ಪ್ರೇಮವಿಕ್ಲಿನ್ನಹೃದಯೋ ಗಲನಾದಂ ಯದಾಕರೋತ್ ।
ತದಾ ಚ ಶಂಕರೋ ದೇವಸ್ಸುಪ್ರಸನ್ನೋ ಬಭೂವ ಹ ॥ ೩೨ ॥

ಸಾಂಗಸ್ಸಪರಿವಾರಶ್ಚ ಜ್ಯೋತೀರೂಪೋ ಮಹೇಶ್ವರಃ ।
ಯಥೋಕ್ತರೂಪಮಮಲಂ ಕೃತ್ವಾವಿರಭವದ್ದ್ರುತಂ ॥ ೩೩ ॥

ತತಸ್ಸಂತುಷ್ಟಹೃದಯೋ ರಾಮಭಕ್ತ್ಯಾ ಮಹೇಶ್ವರಃ ।
ಶಿವಮಸ್ತು ವರಂ ಬ್ರೂಹಿ ರಾಮೇತಿ ಸ ತದಾಬ್ರವೀತ್ ॥ ೩೪ ॥

ತದ್ರೂಪಂ ಚ ತದಾ ದೃಷ್ಟ್ವಾ ಸರ್ವೇ ಪೂತಾಸ್ತತಸ್ಸ್ವಯಂ ।
ಕೃತವಾನ್ರಾಘವಃ ಪೂಜಾಂ ಶಿವಧರ್ಮಪರಾಯಣಃ ॥ ೩೫ ॥

ಸ್ತುತಿಂ ಚ ವಿವಿಧಾಂ ಕೃತ್ವಾ ಪ್ರಣಿಪತ್ಯ ಶಿವಂ ಮುದಾ ।
ಜಯಂ ಚ ಪ್ರಾರ್ಥಯಾಮಾಸ ರಾವಣಾಜೌ ತದಾತ್ಮನಃ ॥ ೩೬ ॥

---

ಸ್ತೋತ್ರ ಮಂತ್ರಾದಿಗಳಿಂದ ಪುನಃ ಪೂಜೆಯನ್ನು ಮಾಡಿ ಶಿವನೆದುರಿಗೆ ನರ್ತನ ಮಾಡಿದನು. ಅತ್ಯಂತ ಪ್ರೀತಿಯಿಂದ ಕೂಡಿದ ಮನಸ್ಸುಳ್ಳವನಾಗಿ ಸಂತೋಷ ಧ್ವನಿಯನ್ನು ಮಾಡಲು ಶಿವನು ಸಂತುಷ್ಟನಾಗಿ ಪ್ರಕಾಶಸ್ವರೂಪವಾದ ಸುಂದರ ರೂಪದಿಂದ ತನ್ನ ಪರಿವಾರದೊಡನೆ ಅಲ್ಲಿ ಆವಿರ್ಭವಿಸಿದನು.

೩೪-೩೬. ಬಳಿಕ ಮಹೇಶ್ವರನು ರಾಮನನ್ನು ಕುರಿತು ಎಲೈ ರಾಮನೇ, ನಿನ್ನ ಭಕ್ತಿಯಿಂದ ಸಂತುಷ್ಟನಾಗಿರುವೆನು. ನಿನಗೆ ಮಂಗಳವಾಗಲಿ, ವರವನ್ನು ಕೇಳು ಎಂದನು. ಆಗ ರಾಮನು ಶಿವನ ರೂಪವನ್ನು ನೋಡಿ ಪರಿಶುದ್ಧಹೃದಯದಿಂದ ಶಿವಧರ್ಮವಿಧಿಗನುಸಾರವಾಗಿ ಎಲ್ಲರೊಡನೆ ಆ ಶಿವನಿಗೆ ಪೂಜೆಯನ್ನು ಮಾಡಿದನು. ಬಗೆಬಗೆಯ ಸ್ತೋತ್ರಗಳನ್ನು ಮಾಡಿ, ಪ್ರೀತಿಯಿಂದ ಶಿವನಿಗೆ ನಮಸ್ಕಾರ ಮಾಡಿ ರಾವಣನೊಡನೆ ಮಾಡುವ ಯುದ್ಧದಲ್ಲಿ ತನಗೆ ಜಯವಾಗಬೇಕೆಂದು ಪ್ರಾರ್ಥಿಸಿದನು.

ತತಃ ಪ್ರಸನ್ನಹೃದಯೋ ರಾಮಭಕ್ತ್ಯಾ ಮಹೇಶ್ವರಃ ।
ಜಯೋಽಸ್ತು ತೇ ಮಹಾರಾಜ ಪ್ರೀತ್ಯಾ ಸ ಪುನರಬ್ರವೀತ್ ॥ ೩೭ ॥

ಶಿವದತ್ತಂ ಜಯಂ ಪ್ರಾಪ್ಯ ಹ್ಯನುಜ್ಞಾಂ ಸಮವಾಪ್ಯ ಚ ।
ಪುನಶ್ಚ ಪ್ರಾರ್ಥಯಾಮಾಸ ಸಾಂಜಲಿರ್ನತಮಸ್ತಕಃ ॥ ೩೮ ॥

॥ ರಾಮ ಉವಾಚ ॥

ತ್ವಯಾಽತ್ರ ಸ್ಥೇಯಮಿಹ ಸ್ವಾಮಿಂಲ್ಲೋಕಾನಾಂ ಪಾವನಾಯ ಚ ।
ಪರೇಷಾಮುಪಕಾರಾರ್ಥಂ ಯದಿ ತುಷ್ಟೋಽಸಿ ಶಂಕರ ॥ ೩೯ ॥

॥ ಸೂತ ಉವಾಚ ॥

ಇತ್ಯುಕ್ತಸ್ತು ಶಿವಸ್ತತ್ರ ಲಿಂಗರೂಪೋಽಭವತ್ತದಾ ।
ರಾಮೇಶ್ವರಶ್ಚ ನಾಮ್ನಾ ವೈ ಪ್ರಸಿದ್ಧೋ ಜಗತೀತಲೇ ॥ ೪೦ ॥

ರಾಮಸ್ತು ತತ್ಪ್ರಭಾವಾದ್ವೈ ಸಿಂಧುಮುತ್ತೀರ್ಯ ಚಾಂಜಸಾ ।
ರಾವಣಾದೀನ್ನಿಹತ್ಯಾಶು ರಾಕ್ಷಸಾನ್ಪ್ರಾಪ ತಾಂ ಪ್ರಿಯಾಂ ॥ ೪೧ ॥

---

೩೭-೩೮. ರಾಮನ ಭಕ್ತಿಯಿಂದ ಮಹೇಶ್ವರನು ಪ್ರಸನ್ನನಾಗಿ ಎಲೈ ಮಹಾರಾಜನೇ! ನಿನಗೆ ಜಯವಾಗಲಿ ಎಂದು ಪ್ರೀತಿಯಿಂದ ಹೇಳಿದನು. ಶಿವನು ಕೊಟ್ಟ ವರವನ್ನು ಪಡೆದು, ಶಿವನಪ್ಪಣೆಯಿಂದ ರಾಮನು ಕೈಜೋಡಿಸಿ ತಲೆಯನ್ನು ಬಗ್ಗಿಸಿಕೊಂಡು ಮತ್ತೆ ಶಿವನನ್ನು ಪ್ರಾರ್ಥಿಸಿದನು.

೩೯. ಎಲೈ ಸ್ವಾಮಿಯೇ! ನೀನು ಪ್ರಸನ್ನನಾಗಿದ್ದರೆ ಪರೋಪಕಾರಾರ್ಥವಾಗಿಯೂ ಈ ಲೋಕದ ಜನರನ್ನು ಪರಿಶುದ್ಧಮಾಡುವುದಕ್ಕಾಗಿಯೂ ಈ ಸ್ಥಳದಲ್ಲಿ ನೀನು ಸದಾ ನೆಲಸಿರಬೇಕು ಎಂದನು.

೪೦-೪೧. ರಾಮನು ಹೀಗೆ ಪ್ರಾರ್ಥನೆ ಮಾಡಲು ಶಿವನು ಅಲ್ಲಿ ರಾಮೇಶ್ವರನೆಂಬ ಹೆಸರಿನ ಲಿಂಗ ರೂಪದಿಂದ ನೆಲಸಿದನು. ರಾಮನು ಆ ಶಿವಲಿಂಗದ ಮಹಿಮೆಯಿಂದಲೇ ಬೇಗನೆ ಸಮುದ್ರವನ್ನು ದಾಟಿ, ರಾವಣನೇ ಮೊದಲಾದ ರಾಕ್ಷಸರನ್ನು ಕೊಂದು ಸೀತೆಯನ್ನು ಪಡೆದನು.

ರಾಮೇಶ್ವರಸ್ಯ ಮಹಿಮಾದ್ಭುತೋಽಭೂದ್ಭುವಿ ಚಾತುಲಃ ।
ಭುಕ್ತಿಮುಕ್ತಿಪ್ರದಶ್ಚೈವ ಸರ್ವದಾ ಭಕ್ತಕಾಮದಃ　　　　॥ ೪೨ ॥

ದಿವ್ಯಗಂಗಾಜಲೇನೈವ ಸ್ನಾಪಯಿಷ್ಯತಿ ಯಶ್ಶಿವಂ ।
ರಾಮೇಶ್ವರಂ ಚ ಸದ್ಭಕ್ತ್ಯಾ ಸ ಜೀವನ್ಮುಕ್ತ ಏವ ಹಿ　　　　॥ ೪೩ ॥

ಇಹ ಭುಕ್ತ್ವಾಖಿಲಾನ್ಭೋಗಾನ್ದೇವಾನಾಂ ದುರ್ಲಭಾನಪಿ ।
ಅಂತೇ ಪ್ರಾಪ್ಯ ಪರಂ ಜ್ಞಾನಂ ಕೈವಲ್ಯಂ ಪ್ರಾಪ್ನುಯಾದ್ಧ್ರುವಂ　　　　॥ ೪೪ ॥

ಇತಿ ವಶ್ಚ ಸಮಾಖ್ಯಾತಂ ಜ್ಯೋತಿರ್ಲಿಂಗಂ ಶಿವಸ್ಯ ತು ।
ರಾಮೇಶ್ವರಾಭಿಧಂ ದಿವ್ಯಂ ಶೃಣ್ವತಾಂ ಪಾಪಹಾರಕಂ　　　　॥ ೪೫ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ರಾಮೇಶ್ವರ ಜ್ಯೋತಿರ್ಲಿಂಗಮಾಹಾತ್ಮ್ಯವರ್ಣನಂ ನಾಮ
ಏಕತ್ರಿಂಶೋಽಧ್ಯಾಯಃ

---

೪೨-೪೫. ರಾಮೇಶ್ವರಲಿಂಗದ ಮಹಿಮೆಯು ಭೂಮಿಯಲ್ಲಿ ಜನರಿಗೆ ಭುಕ್ತಿ ಮುಕ್ತಿಗಳನ್ನು ಕೊಡುವುದು. ಭಕ್ತರ ಇಷ್ಟಾರ್ಥಗಳನ್ನು ಪೂರಯಿಸುವುದು. ಈ ರಾಮೇಶ್ವರಲಿಂಗದ ಮಹಿಮೆಯು ಅದ್ಭುತವಾಗಿರುವುದು. ಇದಕ್ಕೆ ಸಮಾನವಾದುದು ಬೇರೊಂದಿಲ್ಲ. ದಿವ್ಯವಾದ ಗಂಗೆಯ ನೀರಿನಿಂದ ರಾಮೇಶ್ವರಲಿಂಗಕ್ಕೆ ಯಾವನು ಅಭಿಷೇಕವನ್ನು ಮಾಡುವನೋ ಅವನು ಜೀವನ್ಮುಕ್ತನೇ ಆಗುವನು. ಅವನು ದೇವತೆಗಳಿಗೂ ಅಸಾಧ್ಯವಾದ ಸುಖಗಳನ್ನು ಈ ಲೋಕದಲ್ಲಿ ಅನುಭವಿಸಿ ಕೊನೆಯಲ್ಲಿ ಉತ್ತಮವಾದ ಜ್ಞಾನವನ್ನು ಪಡೆದು ಮೋಕ್ಷವನ್ನು ಹೊಂದುವನು. ಕೇಳಿದವರ ಪಾಪಗಳನ್ನು ನಾಶಮಾಡುವ ರಾಮೇಶ್ವರವೆಂಬ ಜ್ಯೋತಿರ್ಲಿಂಗದ ಮಹಿಮೆಯನ್ನು ನಿಮಗೆ ಹೇಳಿರುವೆನು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ರಾಮೇಶ್ವರ ಮಾಹಾತ್ಮ್ಯ ವರ್ಣನೆಯೆಂಬ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ದ್ವಾತ್ರಿಂಶೋಽಧ್ಯಾಯಃ

|| ಸೂತ ಉವಾಚ ||

ಅತಃ ಪರಂ ಚ ಘುಶ್ಮೇಶಂ ಜ್ಯೋತಿರ್ಲಿಂಗಮುದಾಹೃತಂ ।
ತಸ್ಯೈವ ಚ ಸುಮಾಹಾತ್ಮ್ಯಂ ಶ್ರೂಯತಾಮೃಷಿಸತ್ತಮಾಃ || ೧ ||

ದಕ್ಷಿಣಸ್ಯಾಂ ದಿಶಿ ಶ್ರೇಷ್ಠೋ ಗಿರಿರ್ದೇವೇತಿಸಂಜ್ಞಕಃ ।
ಮಹಾಶೋಭಾನ್ವಿತೋ ನಿತ್ಯಂ ರಾಜತೇಽದ್ಭುತದರ್ಶನಃ || ೨ ||

ತಸ್ಯೈವ ನಿಕಟೇ ಕಶ್ಚಿದ್ಭಾರದ್ವಾಜಕುಲೋದ್ಭವಃ ।
ಸುಧರ್ಮಾ ನಾಮ ವಿಪ್ರಶ್ಚ ನ್ಯವಸದ್ಬ್ರಹ್ಮವಿತ್ತಮಃ || ೩ ||

---

## ಮೂವತ್ತೆರಡನೆಯ ಅಧ್ಯಾಯವು

೧-೪. ಸೂತಮುನಿ ಇಂತೆಂದನು.—ಎಲೈ ಋಷಿಶ್ರೇಷ್ಠರೇ! ಇನ್ನು ಮುಂದೆ ಘುಶ್ಮೇಶವೆಂಬ ಜ್ಯೋತಿರ್ಲಿಂಗದ ದಿವ್ಯವಾದ ಮಹಿಮೆಯನ್ನು ಹೇಳುವೆನು ಕೇಳಿರಿ. ದಕ್ಷಿಣದಿಕ್ಕಿನಲ್ಲಿ ದೇವಗಿರಿ ಎಂಬ ಪರ್ವತವು ಅತ್ಯಂತ ಅಲಂಕಾರವಾಗಿ ನೋಟಕರಿಗೆ ಆಶ್ಚರ್ಯಕರವಾಗಿ ಪ್ರಕಾಶಿಸುತ್ತಿರುವುದು. ಅದರ ಸಮೀಪದಲ್ಲಿ ಭಾರದ್ವಾಜ ಗೋತ್ರದಲ್ಲಿ ಹುಟ್ಟಿದ ಬ್ರಹ್ಮಜ್ಞಾನಿಯಾದ ಸುಧರ್ಮನೆಂಬ ಓರ್ವ ಬ್ರಾಹ್ಮಣನು

ತಸ್ಯ ವಿಪ್ರಾ ಸುದೇಹಾ ಚ ಶಿವಧರ್ಮಪರಾಯಣಾ ।
ಪತಿಸೇವಾಪರಾ ನಿತ್ಯಂ ಗೃಹಕರ್ಮವಿಚಕ್ಷಣಾ ॥ ೪ ॥

ಸುಧರ್ಮಾ ಚ ದ್ವಿಜಶ್ರೇಷ್ಠೋ ದೇವತಾತಿಥಿಪೂಜಕಃ ।
ವೇದಮಾರ್ಗಪರೋ ನಿತ್ಯಮಗ್ನಿಸೇವಾಪರಾಯಣಃ ॥ ೫ ॥

ತ್ರಿಕಾಲಸಂಧ್ಯಯಾ ಯುಕ್ತಸ್ಸೂರ್ಯರೂಪಸಮದ್ಯುತಿಃ ।
ಶಿಷ್ಯಾಣಾಂ ಪಾಠಕಶ್ಚೈವ ವೇದಶಾಸ್ತ್ರವಿಚಕ್ಷಣಃ ॥ ೬ ॥

ಧನವಾಂಶ್ಚ ಪರೋ ದಾತಾ ಸೌಜನ್ಯಗುಣಭಾಜನಃ ।
ಶಿವಕರ್ಮರತೋ ನಿತ್ಯಂ ಶೈವಶ್ಚೈವಜನಪ್ರಿಯಃ ॥ ೭ ॥

ಆಯುರ್ಬಹು ವ್ಯತೀಯಾಯ ತಸ್ಯ ಧರ್ಮಂ ಪ್ರಕುರ್ವತಃ ।
ಪುತ್ರಶ್ಚ ನಾಭವತ್ತಸ್ಯ ಋತುಃ ಸ್ಯಾದಫಲಸ್ತ್ರಿಯಾಃ ॥ ೮ ॥

ತೇನ ದುಃಖಂ ಕೃತಂ ನೈವ ವಸ್ತುಜ್ಞಾನಪರೇಣ ಹಿ ।
ಆತ್ಮನಸ್ತಾರಕಶ್ಚಾತ್ಮಾ ಹ್ಯಾತ್ಮನಃ ಪಾವನಶ್ಚ ಸಃ ॥ ೯ ॥

---

ವಾಸವಾಗಿದ್ದನು. ಅವನ ಹೆಂಡತಿಯಾದ ಸುದೇಹೆ ಎಂಬುವಳು ಶಿವಧರ್ಮಾಸಕ್ತಳಾಗಿ ಪ್ರತಿದಿನವೂ ಪತಿಸೇವೆಯನ್ನು ಮಾಡುತ್ತಾ ಗೃಹಕೃತ್ಯಗಳಲ್ಲಿ ಆಸಕ್ತಳಾಗಿದ್ದಳು.

೫-೧೦. ಆ ಸುಧರ್ಮನೆಂಬ ಬ್ರಾಹ್ಮಣಶ್ರೇಷ್ಠನು ವೇದಮಾರ್ಗಾಸಕ್ತನಾಗಿ ಪ್ರತಿದಿನವೂ ಅಗ್ನಿಸೇವೆಯನ್ನು ಮಾಡುತ್ತ ದೇವತೆಗಳನ್ನೂ ಅತಿಥಿಗಳನ್ನೂ ಪೂಜಿಸುತ್ತಿದ್ದನು. ತ್ರಿಕಾಲದಲ್ಲಿಯೂ ಸಂಧ್ಯೆಯನ್ನು ಮಾಡುತ್ತ ಸೂರ್ಯನ ಸಮಾನವಾದ ತೇಜಸ್ಸುಳ್ಳವನಾಗಿ ಶಿಷ್ಯರಿಗೆ ಪಾಠಗಳನ್ನು ಹೇಳಿಕೊಡುತ್ತ ವೇದಶಾಸ್ತ್ರಗಳಲ್ಲಿ ಬುದ್ಧಿವಂತನಾಗಿದ್ದನು. ಅವನು ಅತ್ಯಂತ ಧನವಂತನಾಗಿದ್ದುದಲ್ಲದೆ ಯಾಚಕರಿಗೆ ವಿಶೇಷವಾಗಿ ದಾನಮಾಡುತ್ತಲಿದ್ದನು. ಸಜ್ಜನರ ಗುಣಗಳೆಲ್ಲವೂ ಅವನಲ್ಲಿದ್ದವು. ಪ್ರತಿದಿನವೂ ಶಿವಪೂಜೆಯನ್ನು ಮಾಡುತ್ತ ಶಿವಭಕ್ತನಾಗಿ ಶಿವಭಕ್ತರಲ್ಲಿ ಪ್ರೀತಿಯುಳ್ಳವನಾಗಿದ್ದನು. ಕಾಲಕ್ರಮದಲ್ಲಿ ಅವನಿಗೆ ಆಯುಸ್ಸು ಕಳೆಯುತ್ತಾ ಬಂದಿತು. ಇಷ್ಟು ಧರ್ಮಕಾರ್ಯಗಳನ್ನು ಮಾಡುತ್ತಿದ್ದರೂ ಅವನಿಗೆ ಮಕ್ಕಳಾಗಲಿಲ್ಲ. ಅವನ ಹೆಂಡತಿಯಾದ ಸುದೇಹೆಯ ಋತುಸಮಯವು ನಿಷ್ಫಲವಾಯಿತು. ಆ ಸುಧರ್ಮನು ಪ್ರಪಂ

ಇತ್ಯೇವಂ ಮಾನಸಂ ಧೃತ್ವಾ ದುಃಖಂ ನ ಕೃತವಾಂಸ್ತದಾ ।
ಸುದೇಹಾ ಚ ತದಾ ದುಃಖಂ ಚಕಾರಾಪುತ್ರಸಂಭವಂ ॥ ೧೦ ॥

ನಿತ್ಯಂ ಚ ಸ್ವಾಮಿನಂ ಸಾ ವೈ ಪ್ರಾರ್ಥಯದ್ಯತ್ನಸಾಧನೇ ।
ಪುತ್ರೋತ್ಪಾದನಹೇತೋಶ್ಚ ಸರ್ವವಿದ್ಯಾವಿಶಾರದಂ ॥ ೧೧ ॥

ಸೋಽಪಿ ಸ್ತ್ರಿಯಂ ತದಾಭರ್ತ್ಸ್ಯ ಕಿಂ ಪುತ್ರಶ್ಚ ಕರಿಷ್ಯತಿ ।
ಕಾ ಮಾತಾ ಕಃ ಪಿತಾ ಪುತ್ರಃ ಕೋ ಬಂಧುಶ್ಚ ಪ್ರಿಯಶ್ಚ ಕಃ ॥ ೧೨ ॥

ಸರ್ವಂ ಸ್ವಾರ್ಥಪರಂ ದೇವಿ ತ್ರಿಲೋಕ್ಯಾಂ ನಾತ್ರ ಸಂಶಯಃ ।
ಜಾನೀಹಿ ತ್ವಂ ವಿಶೇಷೇಣ ಬುದ್ಧ್ಯಾ ಶೋಕಂ ನ ವೈ ಕುರು ॥ ೧೩ ॥

ತಸ್ಮಾದ್ದೇವಿ ತ್ವಯಾ ದುಃಖಂ ತ್ಯಜನೀಯಂ ಸುನಿಶ್ಚಿತಂ ।
ನಿತ್ಯಂ ಮಹ್ಯಂ ತ್ವಯಾ ನೈವ ಕಥನೀಯಂ ಶುಭವ್ರತೇ ॥ ೧೪ ॥

---

ಚದ ವಸ್ತುಸ್ವರೂಪವನ್ನು ತಿಳಿದವನಾದುದರಿಂದ ಮಕ್ಕಳಾಗಲಿಲ್ಲವೆಂದು ಅವನು ದುಃಖಪಡಲಿಲ್ಲ. ಆತ್ಮನೇ ಜೀವನನ್ನು ದುಃಖಪಾಪಗಳಿಂದ ಬಿಡಿಸಿ ಶುದ್ಧಿಮಾಡಿ ಸಂಸಾರ ಸಮುದ್ರವನ್ನು ದಾಟಿಸತಕ್ಕವನೆಂದು ತಿಳಿದಿದ್ದನು. ಈ ಕಾರಣದಿಂದಲೂ ಮನಸ್ಸಿನ ನಿಶ್ಚಯಜ್ಞಾನದಿಂದಲೂ ಅವನು ದುಃಖಪಡಲಿಲ್ಲ. ಸುದೇಹೆಯು ಮಾತ್ರ ಪುತ್ರನಾಗದಿದ್ದುದಕ್ಕಾಗಿ ದುಃಖಪಡುತ್ತಿದ್ದಳು.

೧೧–೧೫. ಸುದೇಹೆಯು ತನಗೆ ಮಕ್ಕಳಾಗಬೇಕೆಂದು ಪ್ರತಿದಿನವೂ ಅನೇಕ ಪ್ರಯತ್ನಗಳಿಂದ ವ್ರತಾದಿಗಳನ್ನು ಮಾಡುತ್ತಾ ಸಮಸ್ತ ವಿದ್ಯಾಪಾರಂಗತನಾದ ಪತಿಯನ್ನೇ ಧ್ಯಾನಿಸುತ್ತಿದ್ದಳು. ಇದನ್ನೆಲ್ಲಾ ನೋಡಿ ಅವಳ ಪತಿಯು ತನ್ನ ಪತ್ನಿಯನ್ನು ಗದರಿಸಿ ಎಲೌ ಮೂಢಳೇ, ಏತಕ್ಕೆ ದುಃಖಪಡುವೆ? ಮಗನೇನು ಮಾಡುವನು? ತಾಯಿಯಾರು? ತಂದೆಯಾರು? ಮಗನಾರು? ನಂಟರಾರು? ಸ್ನೇಹಿತರಾರು? ಮೂರು ಲೋಕದಲ್ಲಿ ಎಲ್ಲರೂ ಸ್ವಪ್ರಯೋಜನದಲ್ಲಿಯೇ ಆಸಕ್ತರು. ಈ ವಿಷಯದಲ್ಲಿ ಸಂದೇಹವಿಲ್ಲ. ಇದನ್ನು ತಿಳಿದು ನೀನು ಚೆನ್ನಾಗಿ ಆಲೋಚಿಸಿ ದುಃಖವನ್ನು ಬಿಡು. ನೀನು ಒಳ್ಳೆಯ ವ್ರತಗಳನ್ನು ಮಾಡುತ್ತಲಿರುವೆ. ಆದರೆ ಪ್ರತಿ

ಏವಂ ತಾಂ ಸನ್ನಿವಾರ್ಯೈವ ಭಗವದ್ಧರ್ಮತತ್ಪರಃ ।
ಆಸೀತ್ಪರಮಸಂತುಷ್ಟೋ ದ್ವಂದ್ವದುಃಖಂ ಸಮುತ್ಸೃಜತ್ ॥ ೧೫ ॥

ಕದಾಚಿಚ್ಚ ಸುದೇಹಾ ವೈ ಗೇಹೇ ಚ ಸಹವಾಸಿನಃ ।
ಜಗಾಮ ಪ್ರಿಯಗೋಷ್ಠ್ಯರ್ಥಂ ವಿವಾದಸ್ತತ್ರ ಸಂಗತಃ ॥ ೧೬ ॥

ತತ್ಪತ್ನೀ ಸ್ತ್ರೀಸ್ವಭಾವಾಚ್ಚ ಭರ್ತ್ಸಿತಾ ಸಾ ತಯಾ ತದಾ ।
ಉಕ್ತಾ ಚೇತಿ ದುರುಕ್ತ್ಯಾ ವೈ ಸುದೇಹಾ ವಿಪ್ರಕಾಮಿನೀ ॥ ೧೭ ॥

॥ ಪತ್ನ್ಯುವಾಚ ॥

ಅಪುತ್ರಿಣಿ ಕಥಂ ಗರ್ವಂ ಕುರುಷೇ ಪುತ್ರಿಣೀ ಹ್ಯಹಂ ।
ಮದ್ಧನಂ ಭೋಕ್ಷ್ಯತೇ ಪುತ್ರೋ ಧನಂ ತೇ ಕಶ್ಚ ಭೋಕ್ಷ್ಯತೇ ॥ ೧೮ ॥

ನೂನಂ ಹರಿಷ್ಯತೇ ರಾಜಾ ತ್ವದ್ಧನಂ ನಾತ್ರ ಸಂಶಯಃ ।
ಧಿಗ್ಧಿಕ್ತ್ವಾಂ ತೇ ಧನಂ ಧಿಕ್ಚ ಧಿಕ್ತೇ ಮಾನಂ ಹಿ ವಂಧ್ಯಕೇ ॥ ೧೯ ॥

---

ದಿನವೂ ಈ ವಿಷಯವನ್ನು ನನಗೆ ಹೇಳಬೇಡ. ಹೀಗೆಂದು ಅವಳಿಗೆ ಹೇಳಿ ಸುಧರ್ಮನು ಭಗವಂತನ ಪೂಜಾಧರ್ಮದಲ್ಲಾಸಕ್ತನಾಗಿ ಅತ್ಯಂತ ಸಂತೋಷದಿಂದ ಸುಖದುಃಖಾದಿದ್ವಂದ್ವರಹಿತನಾಗಿ ನಿಶ್ಚಿಂತೆಯಿಂದಿದ್ದನು.

೧೬-೧೭. ಒಂದಾನೊಂದು ದಿನ ಸುದೇಹೆಯು ತನ್ನ ಗೆಳತಿಯ ಮನೆಯಲ್ಲಿ ಸಂತೋಷವಾಗಿ ಕಾಲವನ್ನು ಕಳೆಯುವುದಕ್ಕಾಗಿ ಹೋಗಿದ್ದಳು. ಅಲ್ಲಿ ಒಂದು ವಿವಾದವುಂಟಾಯಿತು. ಆ ಗೆಳತಿಯು ಸ್ತ್ರೀಸ್ವಭಾವಕ್ಕನುಸಾರವಾಗಿ ಸುದೇಹೆಯನ್ನು ಕೆಟ್ಟ ಮಾತುಗಳಿಂದ ನಿಂದಿಸಿದಳು.

೧೮-೧೯. ಗೆಳತಿಯು ಹೇಳಿದಳು.—ನೀನು ಮಕ್ಕಳಿಲ್ಲದವಳು, ನಿನಗೆಷ್ಟು ಅಹಂಕಾರ? ನನಗೆ ಅನೇಕ ಮಕ್ಕಳಿರುವರು. ನನ್ನ ಧನವನ್ನು ನನ್ನ ಮಗನು ಅನುಭವಿಸುವನು. ನಿನ್ನ ಧನವನ್ನು ಅನುಭವಿಸುವವರಾರು? ಖಂಡಿತವಾಗಿ ನಿನ್ನ ಧನವು ರಾಜನ ಪಾಲಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ನಿನಗೂ, ನಿನ್ನ ಹಣಕ್ಕೂ, ನಿನ್ನ ಮಾನಕ್ಕೂ ಧಿಕ್ಕಾರವಿರಲಿ ಎಂದಳು.

॥ ಸೂತ ಉವಾಚ ॥

ಭರ್ತ್ಸಿತಾ ತಾಭಿರಿತಿ ಸಾ ಗೃಹಮಾಗತ್ಯ ದುಃಖಿತಾ ।
ಸ್ವಾಮಿನೇ ಕಥಯಾಮಾಸ ತದುಕ್ತಂ ಸರ್ವಮಾದರಾತ್ ॥ ೨೦ ॥

ಬ್ರಾಹ್ಮಣೋಽಪಿ ತದಾ ದುಃಖಂ ನ ಚಕಾರ ಸುಬುದ್ಧಿಮಾನ್ ।
ಕಥಿತಂ ಕಥ್ಯತಾಮೇವ ಯದ್ಭಾವಿ ತದ್ಭವೇತ್ಪ್ರಿಯೇ ॥ ೨೧ ॥

ಇತ್ಯೇವಂ ಚ ತದಾ ತೇನ ಹ್ಯಾಶ್ವಸ್ತಾಪಿ ಪುನಃ ಪುನಃ ।
ನ ತದಾ ಸಾತ್ಯಜದ್ದುಃಖಂ ಹ್ಯಾಗ್ರಹಂ ಕೃತವತ್ಯಸೌ ॥ ೨೨ ॥

॥ ಸುದೇಹೋವಾಚ ॥

ಯಥಾ ತಥಾ ತ್ವಯಾ ಪುತ್ರಸ್ಸಮುತ್ಪಾದ್ಯಃ ಪ್ರಿಯೋಽಸಿ ಮೇ ।
ತ್ಯಕ್ಷ್ಯಾಮಿ ಹ್ಯನ್ಯಥಾಹಂ ಚ ದೇಹಂ ದೇಹಭೃತಾಂ ವರ ॥ ೨೩ ॥

॥ ಸೂತ ಉವಾಚ ॥

ಏವಮುಕ್ತಂ ತಯಾ ಶ್ರುತ್ವಾ ಸುಧರ್ಮಾ ಬ್ರಾಹ್ಮಣೋತ್ತಮಃ ।
ಶಿವಂ ಸಸ್ಮಾರ ಮನಸಾ ತದಾಗ್ರಹನಿಪೀಡಿತಃ ॥ ೨೪ ॥

---

೨೦-೨೨. ಆ ಸ್ತ್ರೀಯರು ಸುದೇಹೆಯನ್ನು ಹೀಗೆ ನಿಂದಿಸಲು ಅವಳು ಮನೆಗೆ ಬಂದು ದುಃಖಪಡುತ್ತ, ಅದೆಲ್ಲವನ್ನೂ ತನ್ನ ಪತಿಗೆ ಹೇಳಿದಳು. ಬ್ರಾಹ್ಮಣನು ಬುದ್ಧಿವಂತನಾದುದರಿಂದ ಅದಕ್ಕಾಗಿ ದುಃಖಪಡದೆ ಎಲೌ, ಪ್ರಿಯೆ, ಅವರು ಹೇಳಿದರೆ ಹೇಳಿಕೊಳ್ಳಲಿ, ಯಾವುದು ಆಗಬೇಕೋ ಅದು ಆಗಿಯೇ ಆಗುವುದು. ಅದಕ್ಕಾಗಿ ದುಃಖಪಡುವುದೇಕೆ? ಹೀಗೆಂದು ಅವನು ಸಮಾಧಾನವನ್ನು ಹೇಳಿದರೂ ಅವಳು ದುಃಖವನ್ನು ಬಿಡದೆ ಗಂಡನಮೇಲೆ ಕೋಪವನ್ನೇ ಮಾಡಿದಳು.

೨೩. ಸುದೇಹೆಯಿಂತೆಂದಳು :—ಎಲೈ, ಪುರುಷಶ್ರೇಷ್ಠನೇ! ನಾನು ಎಷ್ಟು ಬೇಡಿಕೊಂಡರೂ ನೀನು ನನ್ನಲ್ಲಿ ಪುತ್ರೋತ್ಪಾದನೆಯನ್ನು ಮಾಡಲಿಲ್ಲ. ಈ ಕಾರಣ ದಿಂದ ನಾನು ಶರೀರವನ್ನು ತ್ಯಾಗಮಾಡುವೆನು ಎನ್ನಲು,

೨೪-೨೮. ಸುಧರ್ಮನೆಂಬ ಬ್ರಾಹ್ಮಣಶ್ರೇಷ್ಠನು ತನ್ನ ಪತ್ನಿಯು ಹೇಳಿದ ಮಾತನ್ನು ಕೇಳಿ ಅವಳ ಬಲಾತ್ಕಾರದಿಂದ ಶಿವನನ್ನು ಮನದಲ್ಲಿ ಧ್ಯಾನಿಸಿದನು. ಆ

ಅಗ್ನೇರಗ್ರೇऽಕ್ಷಿಪತ್ಪುಷ್ಪದ್ವಯಂ ವಿಪ್ರೋ ಹ್ಯತಂದ್ರಿತಃ ।
ಮನಸಾ ದಕ್ಷಿಣಂ ಪುಷ್ಪಂ ತಂ ಮೇನೇ ಪುತ್ರಕಾಮುದಂ ॥ ೨೫ ॥

ಏವಂ ಕೃತ್ವಾ ಪಣಂ ಪತ್ನೀಮುವಾಚ ಬ್ರಾಹ್ಮಣಸ್ಸ ಚ ।
ಅನಯೋರ್ಗ್ರಾಹ್ಯಮೇಕಂ ತೇ ಪುಷ್ಪಂ ಪುತ್ರಫಲಾಪ್ತಯೇ ॥ ೨೬ ॥

ತಯಾ ಚ ಮನಸಾ ಧೃತ್ವಾ ಪುತ್ರಶ್ಚೈವ ಭವೇನ್ಮಮ ।
ತದಾ ಚ ಸ್ವಾಮಿನಾ ಯಚ್ಚ ಧೃತಂ ಪುಷ್ಪಂ ಸಮೇತು ಮಾಂ ॥ ೨೭ ॥

ಇತ್ಯುಕ್ತ್ವಾ ಚ ತಯಾ ತತ್ರ ನಮಸ್ಕೃತ್ಯ ಶಿವಂ ತದಾ ।
ನತ್ವಾ ಚಾಗ್ನಿಂ ಪುನಃ ಪ್ರಾರ್ಥ್ಯ ಗೃಹೀತಂ ಪುಷ್ಪಮೇಕಕಂ ॥ ೨೮ ॥

ಸ್ವಾಮಿನಾ ಚಿಂತಿತಂ ಯಚ್ಚ ತದ್ಗೃಹೀತಂ ತಯಾ ನ ಹಿ ।
ಸುದೇಹಯಾ ವಿಮೋಹೇನ ಶಿವೇಚ್ಛಾಸಂಭವೇನ ವೈ ॥ ೨೯ ॥

ತದ್ದೃಷ್ಟ್ವಾ ಪುರುಷಶ್ಚೈವ ನಿಶ್ವಾಸಂ ಪರ್ಯಮೋಚಯತ್ ।
ಸ್ಮೃತ್ವಾ ಶಿವಪದಾಂಭೋಜಮುವಾಚ ನಿಜಕಾಮಿನೀಂ ॥ ೩೦ ॥

---

ಬ್ರಾಹ್ಮಣನು ಮನಸ್ಸಿನಲ್ಲಿ ದಕ್ಷಿಣದಿಕ್ಕಿನ ಪುಷ್ಪವು ಪುತ್ರಫಲವನ್ನು ಕೊಡತಕ್ಕುದೆಂದು ನಿಶ್ಚಯಿಸಿ ಅಗ್ನಿಯ ಮುಂಭಾಗದಲ್ಲಿ ಎರಡು ಹೂಗಳನ್ನಿಟ್ಟನು. ಈ ರೀತಿಯಲ್ಲಿ ಪಣವನ್ನು ನಿಷ್ಕರ್ಷಿಸಿ ಪತ್ನಿಯನ್ನು ಕುರಿತು ಪುತ್ರಫಲಪ್ರಾಪ್ತಿಗಾಗಿ ಈ ಎರಡು ಹೂಗಳಲ್ಲಿ ಒಂದನ್ನು ನೀನು ತೆಗೆದುಕೋ ಎಂದು ಹೇಳಿದನು. ಆಗ ಆಕೆಯು ನನಗೆ ಪುತ್ರನೇ ಆಗಬೇಕು. ನನ್ನ ಪತಿಯು ಮನಸ್ಸಿನಲ್ಲಿ ಪುತ್ರಪ್ರಾಪ್ತಿಗೆ ಗೊತ್ತು ಮಾಡಿದ ಪುಷ್ಪವೇ ನನಗೆ ಬರಲಿ ಎಂದು ಹೇಳಿ ಶಿವನಿಗೆ ನಮಸ್ಕಾರವನ್ನು ಮಾಡಿ ಅಗ್ನಿಗೂ ನಮಸ್ಕರಿಸಿ ಪ್ರಾರ್ಥನೆಯನ್ನು ಮಾಡಿಕೊಂಡು ಒಂದು ಹೂವನ್ನು ತೆಗೆದುಕೊಂಡಳು.

೨೯-೩೦. ಆ ಸುದೇಹೆಯು ಶಿವನ ಇಚ್ಛೆಯಿಂದ ತನ್ನ ಪತಿಯು ಪುತ್ರ ಪ್ರಾಪ್ತಿಗಾಗಿ ಯಾವ ಹೂವನ್ನು ಮನಸ್ಸಿನಲ್ಲಿ ಯೋಚಿಸಿದ್ದನೋ ಅದನ್ನು ತೆಗೆದು ಕೊಳ್ಳದೆ ಅಜ್ಞಾನದಿಂದ ಮತ್ತೊಂದನ್ನು ತೆಗೆದುಕೊಂಡಳು. ಅದನ್ನು ನೋಡಿ ಸುಧರ್ಮನು ನಿಟ್ಟುಸಿರನ್ನು ಬಿಟ್ಟು ಶಿವನ ಪಾದಕಮಲವನ್ನು ಸ್ಮರಿಸಿ ತನ್ನ ಪತ್ನಿಗೆ ಹೇಳಿದನು.

॥ ಸುಧರ್ಮೋವಾಚ ॥

ನಿರ್ಮಿತಂ ಚೇಶ್ವರೇಣೈವ ಕಥಂ ಚೈವಾನ್ಯಥಾ ಭವೇತ್ ।
ಆಶಾಂ ತ್ಯಜ ಪ್ರಿಯೇ ತ್ವಂ ಚ ಪರಿಚರ್ಯಾಂ ಕುರು ಪ್ರಭೋ ॥ ೩೧ ॥

ಇತ್ಯುಕ್ತ್ವಾ ತು ಸ್ವಯಂ ವಿಪ್ರ ಆಶಾಂ ಪರಿವಿಹಾಯ ಚ ।
ಧರ್ಮಕಾರ್ಯರತಸ್ಸೋಽಭೂಚ್ಛಂಕರಧ್ಯಾನತತ್ಪರಃ ॥ ೩೨ ॥

ಸಾ ಸುದೇಹಾಗ್ರಹಂ ನೈವ ಮುಮೋಚಾತ್ಮಜಕಾಮ್ಯಯಾ ।
ಪ್ರತ್ಯುವಾಚ ಪತಿಂ ಪ್ರೇಮ್ಣಾ ಸಾಂಜಲಿರ್ನತಮಸ್ತಕಾ ॥ ೩೩ ॥

॥ ಸುದೇಹೋವಾಚ ॥

ಮಯಿ ಪುತ್ರೋ ನ ಚಾಸ್ತ್ವನ್ಯಾಂ ಪತ್ನೀಂ ಕುರು ಮದಾಜ್ಞಯಾ ।
ತಸ್ಯಾಂ ನೂನಂ ಸುತಶ್ಚೈವ ಭವಿಷ್ಯತಿ ನ ಸಂಶಯಃ । ॥ ೩೪ ॥

॥ ಸೂತ ಉವಾಚ ॥

ತದೈವ ಪ್ರಾರ್ಥಿತೋ ವೈ ಸ ಬ್ರಾಹ್ಮಣಶ್ಶೈವಸತ್ತಮಃ ।
ಉವಾಚ ಸ್ವಪ್ರಿಯಾಂ ತಾಂ ಚ ಸುದೇಹಾಂ ಧರ್ಮತತ್ಪರಃ ॥ ೩೫ ॥

---

೩೧-೩೨. ಎಲೌ, ಪ್ರಿಯೆ! ಈಶ್ವರನ ಸಂಕಲ್ಪವು ಬೇರೆ ವಿಧವಾಗಿ ಹೇಗೆ ಆಗುವುದು? ನೀನು ಪುತ್ರನ ಆಸೆಯನ್ನು ಬಿಡು. ಶಿವನ ಸೇವೆಯನ್ನು ಮಾಡು. ಹೀಗೆಂದು ಹೇಳಿ ಆ ಬ್ರಾಹ್ಮಣನು ತಾನೂ ಪುತ್ರನ ಆಸೆಯನ್ನು ಬಿಟ್ಟು, ಧರ್ಮ ಕಾರ್ಯಗಳನ್ನು ಮಾಡುತ್ತ ಶಿವಧ್ಯಾನಾಸಕ್ತನಾಗಿದ್ದನು.

೩೩. ಆ ಸುದೇಹೆಯು ಪುತ್ರಕಾಮನೆಯಿಂದ ಮನಸ್ಸಿನ ಆಸೆಯನ್ನು ಬಿಡದೆ ಕೈ ಮುಗಿದುಕೊಂಡು ಪ್ರೀತಿಯಿಂದ ಪತಿಯನ್ನು ಕುರಿತು,

೩೪-೩೬. ಎಲೈ, ಪತಿಯೇ! ನನ್ನಲ್ಲಿ ಪುತ್ರನು ಉತ್ಪತ್ತಿಯಾಗದಿದ್ದರೆ ಹೋಗಲಿ, ನಾನು ಅನುಮತಿಯನ್ನು ಕೊಡುವೆನು. ಮತ್ತೊಬ್ಬಳನ್ನು ಮದುವೆಯಾಗು. ಅವಳಲ್ಲಿ ಮಗನಾಗುವನು ಸಂದೇಹವಿಲ್ಲ ಎಂದಳು. ತನ್ನ ಪತ್ನಿಯು ಮಾಡಿಕೊಂಡ ಈ ಪ್ರಾರ್ಥನೆಯನ್ನು ಕೇಳಿ ಶಿವಭಕ್ತಶ್ರೇಷ್ಠನಾದ ಆ ಸುಧರ್ಮನು

॥ ಸುಧರ್ಮೋವಾಚ ॥

ತ್ವದೀಯಂ ಚ ಮದೀಯಂ ಚ ಸರ್ವಂ ದುಃಖಂ ಗತಂ ಧ್ರುವಂ ।
ತಸ್ಮಾತ್ತ್ವಂ ಧರ್ಮವಿಘ್ನಂ ಚ ಪ್ರಿಯೇ ಮಾ ಕುರು ಸಾಂಪ್ರತಂ ॥ ೩೬ ॥

॥ ಸೂತ ಉವಾಚ ॥

ಇತ್ಯೇವಂ ವಾರಿತಾ ಸಾ ಚ ಸ್ವಮಾತುಃ ಪುತ್ರಿಕಾಂ ತದಾ ।
ಗೃಹಮಾನೀಯ ಭರ್ತಾರಂ ವೃಣು ತ್ವೇನಾಮಿದಂ ಜಗೌ ॥ ೩೭ ॥

॥ ಸುಧರ್ಮೋವಾಚ ॥

ಇದಾನೀಂ ವದಸಿ ತ್ವಂ ಚ ಮತ್ಪ್ರಿಯೇಯಂ ತತಃ ಪುನಃ ।
ಪುತ್ರಸೂಶ್ಚ ಯದಾ ಸ್ಯಾದ್ವೈ ತದಾ ಸ್ಪರ್ಧಾಂ ಕರಿಷ್ಯತಿ ॥ ೩೮ ॥

॥ ಸೂತ ಉವಾಚ ॥

ಇತ್ಯುಕ್ತಾ ತೇನ ಪತಿನಾ ಸಾ ಸುದೇಹಾ ಚ ತತ್ಪ್ರಿಯಾ ।
ಪುನಃ ಪ್ರಾಹ ಕರೌ ಬದ್ಧ್ವಾ ಸುಧರ್ಮಾಣಂ ಪತಿಂ ದ್ವಿಜಾಃ ॥ ೩೯ ॥

ನಾಹಂ ಸ್ಪರ್ಧಾಂ ಭಗಿನ್ಯಾ ವೈ ಕರಿಷ್ಯೇ ದ್ವಿಜಸತ್ತಮ ।
ಉಪಯಚ್ಛಸ್ವ ಪುತ್ರಾರ್ಥಮಿಮಾಮಾಜ್ಞಾಪಯಾಮಿ ಚ ॥ ೪೦ ॥

---

ಎಲೌ, ಪ್ರಿಯೆ ! ನಿನ್ನ ಮತ್ತು ನನ್ನ ದುಃಖವೆಲ್ಲವೂ ಹೊರಟುಹೋಯಿತು. ಆದ ಕಾರಣ ಈಗ ನೀನು ಧರ್ಮಕ್ಕೆ ವಿಘ್ನವನ್ನು ಮಾಡಬೇಡ ಎಂದನು.

೩೭. ಹೀಗೆಂದು ತಡೆಮಾಡುತ್ತಲು ಆಕೆಯು ತನ್ನ ತಾಯಿಯ ಮಗಳನ್ನು ಮನೆಗೆ ಕರೆದುಕೊಂಡು ಬಂದು ಇವಳನ್ನು ಮದುವೆಯಾಗೆಂದು ಗಂಡನಿಗೆ ಹೇಳಿದಳು.

೩೮. ಸುಧರ್ಮನು ಹೇಳಿದನು.—ಈಗ ನೀನು ಹೀಗೆ ಹೇಳುತ್ತೀಯೆ, ಮದುವೆಯಾದಮೇಲೆ ಇವಳು ನನಗೆ ಪ್ರೀತಿಪಾತ್ರಳಾಗುವಳು. ಮಕ್ಕಳೂ ಆದ ಮೇಲೆ ನಿಮ್ಮಿಬ್ಬರಿಗೂ ಅಸೂಯೆಯು ಹುಟ್ಟುವುದು ಎಂದನು.

೩೯-೪೦. ಹೀಗೆಂದು ಗಂಡನು ಹೇಳುತ್ತಲು, ಆ ಸುದೇಹೆಯು ಕೈ ಜೋಡಿಸಿಕೊಂಡು ಪತಿಯನ್ನು ಕುರಿತು ಮತ್ತೆ ಹೇಳಿದಳು. ಎಲೈ, ಬ್ರಾಹ್ಮಣಶ್ರೇಷ್ಠನೇ ನನ್ನ ತಂಗಿಯೊಡನೆ ನಾನು ಸ್ಪರ್ಧಿಸುವುದಿಲ್ಲ. ನಾನು ಒಪ್ಪಿಕೊಂಡಿರುವೆನು. ಪುತ್ರಾರ್ಥವಾಗಿ ನೀನು ಇವಳನ್ನು ವಿವಾಹ ಮಾಡಿಕೋ ಎಂದಳು. ಹೀಗೆ ತನ್ನ ಪ್ರಿಯ ಪತ್ನಿಯು ಪ್ರಾರ್ಥನೆಯನ್ನು ಮಾಡಿಕೊಳ್ಳಲು ಆ ಸುಧರ್ಮನು ಘುಶ್ಮೆ ಎಂಬುವಳನ್ನು ವಿವಾಹವಿಧಿಯಿಂದ ಮದುವೆಮಾಡಿಕೊಂಡನು.

ಇತ್ಯೇವಂ ಪ್ರಾರ್ಥಿತಸ್ಸೋಽಪಿ ಸುಧರ್ಮಾ ಪ್ರಿಯಯಾ ತದಾ ।
ಘುಶ್ಮಾಂ ತಾಂ ಸಮುಪಾಯಂಸ್ತ ವಿವಾಹವಿಧಿನಾ ದ್ವಿಜಃ ॥ ೪೧ ॥

ತತಸ್ತಾಂ ಪರಿಣೀಯಾಥ ಪ್ರಾರ್ಥಯಾಮಾಸ ತಾಂ ದ್ವಿಜಃ ।
ತ್ವದೀಯೇಯಂ ಕನಿಷ್ಠಾ ಹಿ ಸದಾ ಪೋಷ್ಯಾನಘೇ ಪ್ರಿಯೇ ॥ ೪೨ ॥

ಉಕ್ತ್ವೈವ ಸ ಚ ಧರ್ಮಾತ್ಮಾ ಸುಧರ್ಮಾ ಶೈವಸತ್ತಮಃ ।
ಯಥಾಯೋಗ್ಯಂ ಚಕಾರಾಶು ಧರ್ಮಸಂಗ್ರಹಮಾತ್ಮನಃ ॥ ೪೩ ॥

ಸಾ ಚಾಪಿ ಮಾತೃಪುತ್ರೀಂ ತಾಂ ದಾಸೀವತ್ಪರ್ಯವರ್ತತ ।
ಪರಿತ್ಯಜ್ಯ ವಿರೋಧಂ ಹಿ ಪುಪೋಷಾಹರ್ನಿಶಂ ಪ್ರಿಯಾ ॥ ೪೪ ॥

ಕನಿಷ್ಠಾ ಚೈವ ಯಾ ಪತ್ನೀ ಸ್ವಸ್ರನುಜ್ಞಾಮವಾಪ್ಯ ಚ ।
ಪಾರ್ಥಿವಾನ್ಸಾ ಚಕಾರಾಶು ನಿತ್ಯಮೇಕೋತ್ತರಂ ಶತಂ ॥ ೪೫ ॥

ವಿಧಾನಪೂರ್ವಕಂ ಘುಶ್ಮಾ ಸೋಪಚಾರಸಮನ್ವಿತಂ ।
ಕೃತ್ವಾ ತಾನ್ಪ್ರಾಕ್ಷಿಪತ್ತತ್ರ ತಡಾಗೇ ನಿಕಟಸ್ಥಿತೇ ॥ ೪೬ ॥

---

೪೧. ಆಮೇಲೆ ಆ ಬ್ರಾಹ್ಮಣನು ಅವಳನ್ನು ಮದುವೆಯಾಗಿ ಹಿರಿಯ ಹೆಂಡತಿಯನ್ನು ಪ್ರಾರ್ಥಿಸಿಕೊಂಡನು. ಎಲೌ, ಪ್ರಿಯೆ! ಈ ಚಿಕ್ಕ ಹೆಂಡತಿಯು ನಿನ್ನವಳು. ನಿರ್ದುಷ್ಟಳಾದ ನೀನೇ ಇವಳನ್ನು ಪೋಷಿಸಬೇಕು ಎಂದನು.

೪೨–೪೬. ಶಿವಭಕ್ತಶ್ರೇಷ್ಠನೂ, ಧರ್ಮಾತ್ಮನೂ ಆದ ಸುಧರ್ಮನು ಹೀಗೆಂದು ಹೇಳಿ ತಾನು ಶಕ್ತ್ಯಾನುಸಾರವಾಗಿ ಧರ್ಮಕಾರ್ಯಗಳನ್ನು ಮಾಡುತ್ತಿದ್ದನು. ಆ ಸುದೇಹೆಯು ತನ್ನ ತಂಗಿಗೆ ದಾಸಿಯಂತೆ ಅತ್ಯಂತ ಪ್ರೀತಿಯಿಂದ ವಿರೋಧವಿಲ್ಲದೆ ಹಗಲೂ, ರಾತ್ರಿಯೂ ಅವಳನ್ನು ಪೋಷಿಸುತ್ತಿದ್ದಳು. ಚಿಕ್ಕ ಹೆಂಡತಿಯಾದ ಘುಶ್ಮೆಯು ತನ್ನ ಅಕ್ಕನ ಅಪ್ಪಣೆಯನ್ನು ಪಡೆದು ಪ್ರತಿದಿನವೂ ನೂರೊಂದು ಪಾರ್ಥಿವಲಿಂಗವನ್ನು ಮಾಡಿ ಸಮಸ್ತ ಉಪಚಾರಗಳೊಡನೆ ವಿಧಿಗನುಸಾರವಾಗಿ ಪೂಜೆಯನ್ನು ಮಾಡಿ ಅವುಗಳನ್ನು ಸಮೀಪದಲ್ಲಿದ್ದ ಕೆರೆಯಲ್ಲಿ ಬಿಡುತ್ತಿದ್ದಳು.

ಏವಂ ನಿತ್ಯಂ ಸಾ ಚಕಾರ ಶಿವಪೂಜಾಂ ಸ್ವಕಾಮದಾಂ ।
ವಿಸೃಜ್ಯ ಪುನರಾವಾಹ್ಯ ತತ್ಸಪರ್ಯಾವಿಧಾನತಃ ॥ ೪೭ ॥

ಕುರ್ವಂತ್ಯಾ ನಿತ್ಯಮೇವಂ ಹಿ ತಸ್ಯಾಶ್ಶಂಕರಪೂಜನಂ ।
ಲಕ್ಷಸಂಖ್ಯಾಭವತ್ಪೂರ್ಣಾ ಸರ್ವಕಾಮಫಲಪ್ರದಾ ॥ ೪೮ ॥

ಕೃಪಯಾ ಶಂಕರಸ್ಯೈವ ತಸ್ಯಾಃ ಪುತ್ರೋ ವ್ಯಜಾಯತ ।
ಸುಂದರಶ್ಶುಭಗಶ್ಚೈವ ಕಲ್ಯಾಣಗುಣಭಾಜನಃ ॥ ೪೯ ॥

ತಂ ದೃಷ್ಟ್ವಾ ಪರಮಪ್ರೀತೋ ಸ ವಿಪ್ರೋ ಧರ್ಮವಿತ್ತಮಃ ।
ಅನಾಸಕ್ತಸ್ಸುಖಂ ಭೇಜೇ ಜ್ಞಾನಧರ್ಮಪರಾಯಣಃ ॥ ೫೦ ॥

ಸುದೇಹಾ ತಾವದಸ್ಯಾಸ್ತು ಸ್ಪರ್ಧಾಮುಗ್ರಾಂ ಚಕಾರ ಸಾ ।
ಪ್ರಥಮಂ ಶೀತಲಂ ತಸ್ಯಾ ಹೃದಯಂ ಹ್ಯಸಿವತ್ಪುನಃ ॥ ೫೧ ॥

---

೪೭-೪೯. ಈ ರೀತಿಯಲ್ಲಿ ಅವಳು ಇಷ್ಟಾರ್ಥವನ್ನು ಕೊಡುವ ಶಿವಪೂಜೆಯನ್ನು ಪ್ರತಿದಿನವೂ ಮಾಡಿ ಲಿಂಗಗಳನ್ನು ವಿಸರ್ಜಿಸಿ ಪೂಜಾವಿಧಾನವನ್ನನುಸರಿಸಿ ಮತ್ತೆ ಆವಾಹನೆಯನ್ನು ಮಾಡುತ್ತಿದ್ದಳು. ಪ್ರತಿದಿನವೂ ಹೀಗೆ ಶಿವಪೂಜೆಯನ್ನು ಮಾಡುತ್ತಿರಲು ಸಕಲ ಇಷ್ಟಾರ್ಥಗಳನ್ನೂ ಕೊಡುವ ಲಕ್ಷ ಸಂಖ್ಯೆಯ ಶಿವಪೂಜೆಯು ಸಂಪೂರ್ಣವಾಯಿತು. ಶಿವನ ಕೃಪೆಯಿಂದ ಅವಳಿಗೆ ಪುತ್ರನೂ ಹುಟ್ಟಿದನು. ಅವನು ಸುಂದರನೂ, ಭಾಗ್ಯಶಾಲಿಯೂ ಸದ್ಗುಣಿಯೂ ಆಗಿದ್ದನು.

೫೦. ಧರ್ಮಜ್ಞರಲ್ಲಿ ಶ್ರೇಷ್ಠನಾದ ಆ ಬ್ರಾಹ್ಮಣನು ಆ ಪುತ್ರನನ್ನು ನೋಡಿ ಜ್ಞಾನಧರ್ಮಾಸಕ್ತನಾದುದರಿಂದ ಅನಾಸಕ್ತಿಯಾಗಿಯೇ ಸುಖವನ್ನು ಅನುಭವಿಸಿದನು.

೫೧. ಸುದೇಹೆಗಾದರೋ ತನ್ನ ಸವತಿಯಲ್ಲಿ ಕ್ರೂರವಾದ ಹೊಟ್ಟೇಕಿಚ್ಚುಂಟಾಯಿತು. ಮೊದಲು ಅವಳ ಮನಸ್ಸು ತಣ್ಣಗಿದ್ದುದು ಈಗ ಕತ್ತಿಯಂತಾಯಿತು.

**ತತಃ ಪರಂ ಚ ಯಜ್ಜಾತಂ ಕುತ್ಸಿತಂ ಕರ್ಮ ದುಃಖದಂ ।**
**ಸಾವಧಾನೇನ ಮನಸಾ ಶ್ರೂಯತಾಂ ತನ್ಮುನೀಶ್ವರಾಃ ॥ ೫೨ ॥**

**ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ ಘುಶ್ಮೇಶ್ವರಮಾಹಾತ್ಮ್ಯೇ ಸುದೇಹಾಸುಧರ್ಮಚರಿತವರ್ಣನಂ ನಾಮ ದ್ವಾತ್ರಿಂಶೋಽಧ್ಯಾಯಃ**

---

೫೨. ಎಲೈ, ಋಷಿಶ್ರೇಷ್ಠರೇ, ಆಮೇಲೆ ದುಃಖವನ್ನುಂಟುಮಾಡುವ ನೀಚ ಕೆಲಸವು ಏನು ನಡೆಯಿತೆಂಬುದನ್ನು ಗಮನವಿಟ್ಟು ಕೇಳಿರಿ. ಹೇಳುವೆನು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ ಘುಶ್ಮೇಶ್ವರ ಮಹಾತ್ಮೆಯಲ್ಲಿ ಸುದೇಹಾ ಸುಧರ್ಮಚರಿತ್ರ ವರ್ಣನೆಯೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ತ್ರಯಸ್ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಪುತ್ರಂ ದೃಷ್ಟ್ವಾ ಕನಿಷ್ಠಾಯಾ ಜ್ಯೇಷ್ಠಾ ದುಃಖಮುಪಾಗತಾ ।
ವಿರೋಧಂ ಸಾ ಚಕಾರಾಶು ನ ಸಹಂತೀ ಚ ತತ್ಸುಖಂ ॥ ೧ ॥

ಸರ್ವೇ ಪುತ್ರಪ್ರಸೂತಿಂ ತಾಂ ಪ್ರಶಶಂಸುರ್ನಿರಂತರಂ ।
ತಯಾ ತತ್ಸಹ್ಯತೇ ನ ಸ್ಮ ಶಿಶೋ ರೂಪಾದಿಕಂ ತಥಾ ॥ ೨ ॥

ಸುಪ್ರಿಯಂ ತನಯಂ ತಂ ಚ ಪಿತ್ರೋಸ್ಸದ್ಗುಣಭಾಜನಂ ।
ದೃಷ್ಟ್ವಾಽಭವತ್ತದಾ ತಸ್ಯಾ ಹೃದಯಂ ತಪ್ತಮಗ್ನಿವತ್ ॥ ೩ ॥

---

### ಮೂವತ್ತಮೂರನೆಯ ಅಧ್ಯಾಯವು

೧-೩. ಸೂತನು ಹೇಳಿದನು.—ಕಿರಿಯ ಹೆಂಡತಿಯ ಮಗನನ್ನು ಕಂಡರೆ ಹಿರಿಯ ಹೆಂಡತಿಗೆ ಬಹು ದುಃಖವಾಗುತ್ತಿತ್ತು. ಅವಳ ಸುಖವನ್ನು ನೋಡಿ ಸಹಿಸದೆ ಅವಳಲ್ಲಿ ವಿರೋಧವನ್ನೇ ಮಾಡಿದಳು. ಎಲ್ಲರೂ ಮಗನನ್ನು ಪಡೆದ ಘುಶ್ಮೆಯನ್ನು ಯಾವಾಗಲೂ ಹೊಗಳುತ್ತಿದ್ದರು. ಹಿರಿಯಳು ಅದನ್ನೂ, ಮಗುವಿನ ರೂಪಾದಿಗಳನ್ನೂ ನೋಡಿ ಸಹಿಸಲಿಲ್ಲ. ತಂದೆ ತಾಯಿಗಳ ಸದ್ಗುಣಗಳನ್ನು ಪಡೆದ ಅತ್ಯಂತ ಪ್ರೀತಿಪಾತ್ರನಾದ ಆ ಮಗನನ್ನು ನೋಡಿ ಆ ಸುದೇಹೆಯ ಮನಸ್ಸು ಉರಿಯುತ್ತಿರುವ ಬೆಂಕಿಯಂತೆ ಆಯಿತು.

ಏತಸ್ಮಿನ್ನಂತರೇ ವಿಪ್ರಾಃ ಕನ್ಯಾಂ ದಾತುಂ ಸಮಾಗತಾಃ ।
ವಿವಾಹಂ ತಸ್ಯ ತತ್ರೈವ ಚಕಾರ ವಿಧಿವಚ್ಚ ಸಃ ॥ ೪ ॥

ಸುಧರ್ಮಾ ಘುಶ್ಮಯಾ ಸಾರ್ಧಮಾನಂದಂ ಪರಮಂ ಗತಃ ।
ಸರ್ವೇ ಸಂಬಂಧಿನಸ್ತಸ್ಯಾಂ ಘುಶ್ಮಾಯಾಂ ಮಾನಮಾದಧುಃ ॥ ೫ ॥

ತಂ ದೃಷ್ಟ್ವಾ ಸಾ ಸುದೇಹಾ ಹಿ ಮನಸಿ ಜ್ವಲಿತಾ ತದಾ ।
ಅತ್ಯಂತಂ ದುಃಖಮಾಪನ್ನಾ ಹಾ ಹತಾಸ್ಮೀತಿ ವಾದಿನೀ ॥ ೬ ॥

ಸುಧರ್ಮಾ ಗೃಹಮಾಗತ್ಯ ವಧೂಂ ಪುತ್ರಂ ವಿವಾಹಿತಂ ।
ಉತ್ಸಾಹಂ ದರ್ಶಯಾಮಾಸ ಪ್ರಿಯಾಭ್ಯಾಂ ಹರ್ಷಯನ್ನಿವ ॥ ೭ ॥

ಅಭವದ್ಧರ್ಷಿತಾ ಘುಶ್ಮಾ ಸುದೇಹಾ ದುಃಖಮಾಗತಾ ।
ನ ಸಹಂತೀ ಸುಖಂ ತಚ್ಚ ದುಃಖಂ ಕೃತ್ವಾಪತದ್ಭುವಿ ॥ ೮ ॥

---

೪–೬. ಮಗನಿಗೆ ವಯಸ್ಸಾಗುತ್ತಲು ಅನೇಕ ಬ್ರಾಹ್ಮಣರು ಅವನಿಗೆ ಕನ್ಯೆಯನ್ನು ಕೊಡುತ್ತೇವೆಂದು ಬಂದರು. ಸುಧರ್ಮನು ತನ್ನ ಮಗನಿಗೆ ವಿಧ್ಯುಕ್ತವಾಗಿ ಮದುವೆಯನ್ನು ಮಾಡಿ ಘುಶ್ಮೆಯೊಡನೆ ಆನಂದವನ್ನು ಹೊಂದಿದನು. ಎಲ್ಲ ನಂಟರೂ ಘುಶ್ಮೆಗೆ ಮರ್ಯಾದೆಯನ್ನು ಮಾಡಿದರು. ಇದನ್ನು ನೋಡಿ ಆ ಸುದೇಹೆಯ ಮನಸ್ಸಿನಲ್ಲಿ ಸಹಿಸದೆ ಉರಿಯುತ್ತ ಅಯ್ಯೋ, ನಾನು ಕೆಟ್ಟೆನು ಎಂದ ಅಳುತ್ತಾ ಅತ್ಯಂತ ದುಃಖವನ್ನು ಹೊಂದಿದಳು.

೭–೮. ಸುಧರ್ಮನು ಮನೆಗೆ ಬಂದು, ವಿವಾಹಮಾಡಿಕೊಂಡು ಬಂದ ತನ್ನ ಮಗನನ್ನೂ, ಸೊಸೆಯನ್ನೂ ಅತ್ಯಂತ ಸಂತೋಷದಿಂದ ತನ್ನ ಪತ್ನಿಯರಿಗೆ ತೋರಿಸಿದನು. ಇದನ್ನು ನೋಡಿ ಘುಶ್ಮೆಯು ಸಂತೋಷಪಟ್ಟಳು. ಸುದೇಹೆಯು ದುಃಖಪಟ್ಟಳು. ಅವರ ಸುಖವನ್ನು ನೋಡಿ ಸಹಿಸದೆ ನೆಲದಮೇಲೆ ಬಿದ್ದು ದುಃಖದಿಂದ ಹೊರಳಾಡಿದಳು.

ಘುಶ್ಮ್ಯಾವದದ್ವಧೂಪುತ್ರೌ ತ್ವದೀಯೌ ನ ಮದೀಯಕೌ
ವಧೂಃ ಪುತ್ರಶ್ಚ ತಾಂ ಪ್ರೀತ್ಯಾ ಪ್ರಸೂಂ ಶ್ವಶ್ರೂಮಮನ್ಯತ ॥ ೯ ॥

ಭರ್ತಾ ಪ್ರಿಯಾಂ ತಾಂ ಜ್ಯೇಷ್ಠಾಂ ಚ ಮೇನೇ ನೈವ ಕನಿಷ್ಠಿಕಾಂ ।
ತಥಾಪಿ ಸಾ ತದಾ ಜ್ಯೇಷ್ಠಾ ಸ್ವಾಂತರ್ಮಲವತೀ ಹ್ಯಭೂತ್ ॥ ೧೦ ॥

ಏಕಸ್ಮಿನ್ದಿವಸೇ ಜ್ಯೇಷ್ಠಾ ಸಾ ಸುದೇಹಾ ಚ ದುಃಖಿನೀ ।
ಹೃದಯೇ ಸಂಚಿಚಿಂತೇತಿ ದುಃಖಶಾಂತಿಃ ಕಥಂ ಭವೇತ್ ॥ ೧೧ ॥

॥ ಸುದೇಹೋವಾಚ ॥

ಮದೀಯೋ ಹೃದಯಾಗ್ನಿಶ್ಚ ಘುಶ್ಮಾನೇತ್ರಜಲೇನ ವೈ ।
ಭವಿಷ್ಯತಿ ಧ್ರುವಂ ಶಾಂತೋ ನಾನ್ಯಥಾ ದುಃಖಜೇನ ಹಿ ॥ ೧೨ ॥

ಅತೋಽಹಂ ಮಾರಯಾಮ್ಯದ್ಯ ತತ್ಪುತ್ರಂ ಪ್ರಿಯವಾದಿನಂ ।
ಅಗ್ರೇ ಭಾವಿ ಭವೇದೇವಂ ನಿಶ್ಚಯಃ ಪರಮೋ ಮಮ ॥ ೧೩ ॥

---

೯-೧೧. ಘುಶ್ಮೆಯು ಅಕ್ಕನನ್ನು ಕುರಿತು ಮಗನೂ, ಸೊಸೆಯೂ ನನ್ನವರಲ್ಲ, ನಿನ್ನವರೇ ಆಗಿರುವರು ಎಂದು ಎಷ್ಟೋ ಬಗೆಯಾಗಿ ಹೇಳಿದಳು. ಸೊಸೆಯೂ, ಮಗನೂ ಆಕೆಯನ್ನು ಪ್ರೀತಿಯಿಂದ ಅತ್ತೆ ಎಂದೂ, ತಾಯಿಯೆಂದೂ ತಿಳಿದುಕೊಂಡಿದ್ದರು. ಗಂಡನೂ ಹಿರಿಯ ಹೆಂಡತಿಯನ್ನೇ ಪ್ರೀತಿಯಿಂದ ಕಾಣುತ್ತಿದ್ದನು. ಕಿರಿಯುಳನ್ನು ಅಷ್ಟು ಪ್ರೀತಿಸುತ್ತಿರಲಿಲ್ಲ. ಹೀಗಿದ್ದರೂ ಹಿರಿಯುಳು ತನ್ನ ಮನಸ್ಸಿನಲ್ಲಿ ಕಲ್ಮಷವುಳ್ಳವಳಾಗಿದ್ದಳು. ಒಂದಾನೊಂದು ದಿನ ಹಿರಿಯುಳಾದ ಸುದೇಹೆಯು ತನ್ನ ದುಃಖಶಾಂತಿಯು ಹೇಗೆ ಆಗುವುದೆಂದು ಮನಸ್ಸಿನಲ್ಲಿ ಯೋಚಿಸತೊಡಗಿದಳು.

೧೨-೧೩. ನನ್ನ ಮನಸ್ಸಿನಲ್ಲಿರುವ ಬೆಂಕಿಯು ಘುಶ್ಮೆಯ ದುಃಖದಿಂದ ಹುಟ್ಟಿದ ಕಣ್ಣೀರಿನಿಂದ ಮಾತ್ರವೇ ಶಾಂತಿಯಾಗುವುದು. ಆದುದರಿಂದ ನಾನು ಈದಿನ ಪ್ರಿಯವಾಗಿ ಮಾತನಾಡುವ ಅವಳ ಮಗನನ್ನು ಕೊಲ್ಲುವೆನು. ಮುಂದೆ ಆಗುವುದು ಆಗಲಿ. ಹೀಗೆ ಮಾಡುವುದೇ ಸರಿ ಎಂದು ಮನಸ್ಸಿನಲ್ಲಿ ನಿಶ್ಚಯಿಸಿದಳು.

॥ ಸೂತ ಉವಾಚ ॥

ಕದರ್ಯೋಣಾಂ ವಿಚಾರಶ್ಚ ಕೃತ್ಯಾಕೃತ್ಯೇ ಭವೇನ್ನ ಹಿ ।
ಕಠೋರಃ ಪ್ರಾಯಶೋ ವಿಪ್ರಾಃ ಸಾಪತ್ನ್ಯೇ ಭಾವ ಆತ್ಮಹಾ ॥ ೧೪ ॥

ಏಕಸ್ಮಿನ್ದಿವಸೇ ಜ್ಯೇಷ್ಠಾ ಸುಪ್ತಂ ಪುತ್ರಂ ವಧೂಯುತಂ ।
ಚಿಚ್ಛಿದೇ ನಿಶಿ ಚಾಂಗೇಷು ಗೃಹೀತ್ವಾ ಛುರಿಕಾಂ ಚ ಸಾ ॥ ೧೫ ॥

ಸರ್ವಾಂಗಂ ಖಂಡಯಾಮಾಸ ರಾತ್ರೌ ಘುಶ್ಮಾಸುತಸ್ಯ ಸಾ ।
ನೀತ್ವಾ ಸರಸಿ ತತ್ರೈವಾಕ್ಷಿಪದ್ದೃಷ್ಟಾ ಮಹಾಬಲಾ ॥ ೧೬ ॥

ಯತ್ರ ಕ್ಷಿಪ್ತಾನಿ ಲಿಂಗಾನಿ ಘುಶ್ಮಯಾ ನಿತ್ಯಶೋಽವ ಹಿ ।
ತತ್ರ ಕ್ಷಿಪ್ತ್ವಾ ಸಮಾಯಾತಾ ಸುಷ್ವಾಪ ಸುಖಮಾಗತಾ ॥ ೧೭ ॥

ಪ್ರಾತಶ್ಚೈವ ಸಮುತ್ಥಾಯ ಘುಶ್ಮಾ ನಿತ್ಯಂ ತಥಾಕರೋತ್ ।
ಸುಧರ್ಮಾ ಚ ಸ್ವಯಂ ಶ್ರೇಷ್ಠೋ ನಿತ್ಯಕರ್ಮ ಸಮಾಚರತ್ ॥ ೧೮ ॥

---

೧೪. ನೀಚರಿಗೆ ಇದನ್ನು ಮಾಡಬಹುದು, ಇದನ್ನು ಮಾಡಬಾರದು ಎಂಬ ವಿಚಾರವೇ ಇರುವುದಿಲ್ಲ. ಸವತಿಯರ ಭಾವವು ಪ್ರಾಯಶಃ ಕ್ರೂರವೂ, ಆತ್ಮ ನಾಶಕವೂ ಆದುದಾಗಿರುವುದು.

೧೫-೧೭. ಒಂದು ದಿನ ರಾತ್ರಿಯಲ್ಲಿ ಹಿರಿಯ ಹೆಂಡತಿಯು ಚೂರಿಯನ್ನು ತೆಗೆದುಕೊಂಡು ಹೆಂಡತಿಯೊಡನೆ ಮಲಗಿದ್ದ ಮಗನನ್ನು ಕತ್ತರಿಸಿದಳು. ಮಹಾ ದುಷ್ಟೆಯಾದ ಆ ಹಿರಿಯಳು ತನ್ನ ಆ ಘುಶ್ಮೆಯ ಮಗನ ಪ್ರತಿಯೊಂದು ಅಂಗಗಳನ್ನು ಕೊಯ್ದು, ಅವನ ಶರೀರವನ್ನು ತೆಗೆದುಕೊಂಡು ಹೋಗಿ ಅಲ್ಲಿಯೇ ಇದ್ದ ಸರೋವರ ದಲ್ಲಿ ಹಾಕಿದಳು. ಘುಶ್ಮೆಯು ಪ್ರತಿದಿನವೂ ಲಿಂಗಪೂಜೆಯನ್ನು ಮಾಡಿ ಆ ಲಿಂಗಗ ಳನ್ನು ಆ ಸರೋವರದಲ್ಲಿಯೇ ಹಾಕುತ್ತಿದ್ದಳು. ಆ ಸರೋವರದಲ್ಲಿಯೇ ಮಗನ ಶರೀ ರವನ್ನು ಹಾಕಿ ಬಂದು ಸುದೇಹೆಯು ಸುಖವಾಗಿ ಮಲಗಿಕೊಂಡಳು.

೧೮-೨೦. ಪ್ರಾತಃಕಾಲದಲ್ಲಿ ಎದ್ದು ಘುಶ್ಮೆಯು ತಾನು ಪ್ರತಿದಿನವೂ ಮಾಡ ಬೇಕಾದ ಕೆಲಸಗಳನ್ನು ಮಾಡುತ್ತಿದ್ದಳು. ಸುಧರ್ಮನೂ ತನ್ನ ನಿತ್ಯಕರ್ಮಗಳನ್ನು

ಏತಸ್ಮಿನ್ನಂತರೇ ಸಾ ಚ ಜ್ಯೇಷ್ಠಾ ಕಾರ್ಯಂ ಗೃಹಸ್ಯ ವೈ ।
ಚಕಾರಾನಂದಸಂಯುಕ್ತಾ ಸುಶಾಂತಹೃದಯಾನಲಾ ॥ ೧೯ ॥

ಪ್ರಾತಃಕಾಲೇ ಸಮುತ್ಥಾಯ ವಧೂಶ್ಶಯ್ಯಾಂ ವಿಲೋಕ್ಯ ಸಾ ।
ರುಧಿರಾರ್ದ್ರಾಂ ದೇಹಖಂಡೈರ್ಯುಕ್ತಾಂ ದುಃಖಮುಪಾಗತಾ ॥ ೨೦ ॥

ಶ್ವಶ್ರೂಂ ನಿವೇದಯಾಮಾಸ ಪುತ್ರಸ್ತೇ ಚ ಕುತೋ ಗತಃ ।
ಶಯ್ಯಾ ಚ ರುಧಿರಾರ್ದ್ರಾ ವೈ ದೃಶ್ಯಂತೇ ದೇಹಖಂಡಕಾಃ ॥ ೨೧ ॥

ಹಾ ಹತಾಸ್ಮಿ ಕೃತಂ ಕೇನ ದುಷ್ಟಂ ಕರ್ಮ ಶುಚಿವ್ರತೇ ।
ಇತ್ಯುಚ್ಚಾರ್ಯ ರುರೋದಾತಿ ವಿವಿಧಂ ತತ್ಪ್ರಿಯಾ ಚ ಸಾ ॥ ೨೨ ॥

ಜ್ಯೇಷ್ಠಾ ದುಃಖಂ ತದಾಪನ್ನಾ ಹಾ ಹತಾಸ್ಮಿ ಕಿಲೇತಿ ಚ ।
ಬಹಿರ್ದುಃಖಂ ಚಕಾರಾಸೌ ಮನಸಾ ಹರ್ಷಸಂಯುತಾ ॥ ೨೩ ॥

ಘುಶ್ಮಾ ಚಾಪಿ ತದಾ ತಸ್ಯಾ ವಧ್ವಾ ದುಃಖಂ ನಿಶಮ್ಯ ಸಾ ।
ನ ಚಚಾಲ ವ್ರತಾತ್ತಸ್ಮಾನ್ನಿತ್ಯಪಾರ್ಥಿವಪೂಜನಾತ್ ॥ ೨೪ ॥

---

ಮಾಡಿದನು. ಈ ಸಮಯದಲ್ಲಿ ಹಿರಿಯ ಹೆಂಡತಿಯಾದ ಸುದೇಹೆಯು ಆನಂದದಿಂದ ಶಾಂತವಾದ ಮನಸ್ಸುಳ್ಳವಳಾಗಿ ಮನೆಯ ಕೆಲಸಗಳನ್ನು ಮಾಡುತ್ತಿದ್ದಳು. ಪ್ರಾತಃ ಕಾಲದಲ್ಲಿ ಸೊಸೆಯು ಎದ್ದು ಹಾಸಿಗೆಯನ್ನು ನೋಡಿ ರಕ್ತದಿಂದ ನೆನೆದುಹೋಗಿದ್ದು ದನ್ನೂ ಶರೀರದ ತುಂಡುಗಳು ಬಿದ್ದಿದ್ದುದನ್ನೂ ನೋಡಿ ದುಃಖಪಡುತ್ತಾ,

೨೧-೨೫. ಅತ್ತೆಯನ್ನು ಕುರಿತು, ನಿನ್ನ ಮಗನೆಲ್ಲಿಗೆ ಹೋದನು? ಹಾಸಿಗೆ ಯಲ್ಲಾ ರಕ್ತಮಯವಾಗಿದೆ. ಶರೀರದ ತುಂಡುಗಳು ಅಲ್ಲಲ್ಲಿ ಬಿದ್ದಿವೆ. ಅಯ್ಯೊ, ನಾನು ಕೆಟ್ಟೆನು. ಈ ದುಷ್ಕಾರ್ಯವನ್ನು ಯಾರು ಮಾಡಿದರು? ಹೀಗೆಂದು ಹೇಳಿ ವಿಶೇಷ ವಾಗಿ ಅತ್ತಳು. ಹಿರಿಯ ಅತ್ತೆಯು ಹೊರಗೆ ಎಲ್ಲರಿಗೂ ಕಾಣುವಂತೆ ತಾನೂ ಅಳುತ್ತಾ ಹಾ! ನಾನು ಕೆಟ್ಟೆನು, ಎಂದು ದುಃಖವನ್ನು ನಟಿಸುತ್ತ ಮನಸ್ಸಿನಲ್ಲಿ ಸಂತೋಷದಿಂದಿ ದ್ದಳು. ಘುಶ್ಮೆಯು ತನ್ನ ಸೊಸೆಯ ದುಃಖವನ್ನು ಕೇಳಿದರೂ ಪ್ರತಿದಿನವೂ ತಾನು ಮಾಡುತ್ತಿದ್ದಂತೆ ಆ ದಿನವೂ ಪಾರ್ಥಿವಲಿಂಗ ಪೂಜೆಯನ್ನು ಮಾಡುತ್ತಿದ್ದುದರಿಂದ ಆ

ಮನಸ್ಯೈವೋತ್ಸುಕಂ ನೈವ ಜಾತಂ ತಸ್ಯಾ ಮನಾಗಪಿ ।
ಭರ್ತಾಪಿ ಚ ತಥೈವಾಸೀದ್ಯಾವದ್ವ್ರತವಿಧಿರ್ಭವೇತ್ ॥ ೨೫ ॥

ಮಧ್ಯಾಹ್ನೇ ಪೂಜನಾಂತೇ ಚ ದೃಷ್ಟ್ವಾ ಶಯ್ಯಾಂ ಭಯಾವಹಾಂ ।
ತಥಾಪಿ ನ ತದಾ ಕಿಂಚಿತ್ಕೃತಂ ದುಃಖಂ ಹಿ ಘುಶ್ಮಯಾ ॥ ೨೬ ॥

ಯೇನೈವ ಚಾರ್ಪಿತಶ್ಚಾಯಂ ಸ ವೈ ರಕ್ಷಾಂ ಕರಿಷ್ಯತಿ ।
ಭಕ್ತಪ್ರಿಯಸ್ಸ ವಿಖ್ಯಾತಃ ಕಾಲಕಾಲಸ್ಸತಾಂ ಗತಿಃ ॥ ೨೭ ॥

ಯದಿ ನೋ ರಕ್ಷಿತಾ ಶಂಭುರೀಶ್ವರಃ ಪ್ರಭುರೇಕಲಃ ।
ಮಾಲಾಕಾರ ಇವಾಸೌ ಯಾನ್ಯುಂಕ್ತೇ ತಾನ್ವಿಯುನಕ್ತಿ ಚ ॥ ೨೮ ॥

ಅದ್ಯ ಮೇ ಚಿಂತಯಾ ಕಿಂ ಸ್ಯಾದಿತಿ ತತ್ತ್ವಂ ವಿಚಾರ್ಯ ಸಾ ।
ನ ಚಕಾರ ತದಾ ದುಃಖಂ ಶಿವೇ ಧೈರ್ಯಂ ಸಮಾಗತಾ ॥ ೨೯ ॥

---

ಪೂಜೆಯನ್ನು ಬಿಟ್ಟು ಸ್ವಲ್ಪವೂ ಚಲಿಸಲೇ ಇಲ್ಲ. ಅವಳ ಮನಸ್ಸಿಗೆ ಸ್ವಲ್ಪವಾದರೂ ವಿಕಾರವಾಗಲಿಲ್ಲ. ಅವಳ ಗಂಡನೂ ವ್ರತವು ಪೂರ್ತಿಯಾಗುವವರೆಗೂ ಹಾಗೆಯೇ ಇದ್ದನು.

೨೬-೨೮. ಪೂಜೆಯೆಲ್ಲ ಮುಗಿದಮೇಲೆ ಮಧ್ಯಾಹ್ನ ಸಮಯದಲ್ಲಿ ಭಯಂಕರವಾದ ಹಾಸಿಗೆಯನ್ನು ನೋಡಿದರೂ ಘುಶ್ಮೆಯು ಸ್ವಲ್ಪವೂ ದುಃಖಪಡಲಿಲ್ಲ. ಯಾವ ದೇವನು ಪುತ್ರನನ್ನು ಕೊಟ್ಟನೋ, ಅವನೇ ಅವನನ್ನು ಕಾಪಾಡುವನು. ಆ ಮಹೇಶ್ವರನು ಭಕ್ತವತ್ಸಲನೆಂದು ಪ್ರಸಿದ್ಧಿಯೂ ಅವನು ಯಮನಿಗೆ ಯಮಸ್ವರೂಪನು. ಸಜ್ಜನರ ರಕ್ಷಕನೂ ಆಗಿರುವನು. ನಮ್ಮನ್ನು ರಕ್ಷಿಸಬೇಕಾದರೆ ಸರ್ವಸ್ವಾಮಿಯಾದ ಶಿವನೊಬ್ಬನೇ ಸಮರ್ಥನು. ಅವನು ಹೂವಾಡಿಗನಂತೆ ಜೀವರುಗಳನ್ನು ಒಂದೆಡೆಗೆ ಸೇರಿಸುವನು, ಮತ್ತು ಅಗಲಿಸುವನು.

೨೯-೩೧. ಈ ದಿವಸ ಚಿಂತೆಮಾಡುವುದರಿಂದ ಪ್ರಯೋಜನವೇನು? ಎಂದು ತತ್ವವಿಚಾರವನ್ನು ಮಾಡಿ ಆ ಘುಶ್ಮೆಯು ಶಿವನಲ್ಲಿ ದೃಢಭಕ್ತಿಯನ್ನಿಟ್ಟು ದುಃಖ

ಪಾರ್ಥಿವಾಂಶ್ಚ ಗೃಹೀತ್ವಾ ಸಾ ಪೂರ್ವವತ್ಸ್ವಸ್ಥಮಾನಸಾ ।
ಶಂಭೋರ್ನಾಮಾನ್ಯುಚ್ಚರಂತೀ ಜಗಾಮ ಸರಸಸ್ತಟೇ ॥ ೩೦ ॥

ಕ್ಷಿಪ್ತ್ವಾ ಚ ಪಾರ್ಥಿವಾಂಸ್ತತ್ರ ಪರಾವರ್ತತ ಸಾ ಯದಾ ।
ತದಾ ಪುತ್ರಸ್ತಡಾಗಸ್ಯೋಽೇ ದೃಶ್ಯತೇ ಸ್ಮ ತಟೇ ತಯಾ ॥ ೩೧ ॥

॥ ಪುತ್ರ ಉವಾಚ ॥

ಮಾತರೇಹಿ ಮಿಲಿಷ್ಯಾಮಿ ಮೃತೋಽಹಂ ಜೀವಿತೋಽಧುನಾ ।
ತವ ಪುಣ್ಯಪ್ರಭಾವಾದ್ಧಿ ಕೃಪಯಾ ಶಂಕರಸ್ಯ ವೈ ॥ ೩೨ ॥

॥ ಸೂತ ಉವಾಚ ॥

ಜೀವಿತಂ ತಂ ಸುತಂ ದೃಷ್ಟ್ವಾ ಘುಶ್ಮಾ ಸಾ ತತ್ಪ್ರಸೂರ್ದ್ವಿಜಾಃ ।
ಪ್ರಹೃಷ್ಟಾ ನಾಭವತ್ತತ್ರ ದುಃಖಿತಾ ನ ಯಥಾ ಪುರಾ ॥ ೩೩ ॥

ಏತಸ್ಮಿನ್ಸಮಯೇ ತತ್ರ ಸ್ವಾವಿರಾಸೀಚ್ಛಿವೋ ದ್ರುತಂ ।
ಜ್ಯೋತೀರೂಪೋ ಮಹೇಶಶ್ಚ ಸಂತುಷ್ಟಃ ಪ್ರತ್ಯುವಾಚ ಹ ॥ ೩೪ ॥

---

ಪಡಲಿಲ್ಲ. ಅವಳು ಪಾರ್ಥಿವಲಿಂಗಗಳನ್ನು ತೆಗೆದುಕೊಂಡು ಹಿಂದಿನಂತೆ ಶಾಂತಚಿತ್ತಳಾಗಿ ಶಿವನಾಮಗಳನ್ನುಚ್ಚರಿಸುತ್ತ ಸರೋವರದ ದಡಕ್ಕೆ ಹೋದಳು. ಅಲ್ಲಿ ಲಿಂಗಗಳನ್ನು ಬಿಟ್ಟು ಹಿಂದಿರುಗುವಾಗ ಆ ಸರೋವರದ ದಡದಲ್ಲಿ ಅವಳ ಮಗನು ಕಾಣಿಸಿಕೊಂಡನು.

೩೨. ಮಗನು ಹೇಳಿದನು.—ಅಮ್ಮಾ! ಇಲ್ಲಿ ಬಾ, ನಿನ್ನ ಪುಣ್ಯಪ್ರಭಾವದಿಂದಲೂ ಶಿವನ ಕೃಪೆಯಿಂದಲೂ ಮೃತನಾಗಿದ್ದ ನಾನು ಪುನಃ ಬದುಕಿರುವೆನು· ನಿನ್ನೊಡನೆ ಬರುವೆನು ಎಂದನು.

೩೩-೩೪. ಬದುಕಿದ ಮಗನನ್ನು ನೋಡಿ ಅವನನ್ನು ಹೆತ್ತ ಆ ಘುಶ್ಮೆಯು ಹಿಂದೆ ಹೇಗೆ ದುಃಖಪಡಲಿಲ್ಲವೋ ಹಾಗೆ ಈಗ ಅತಿಯಾಗಿ ಸಂತೋಷವನ್ನೂ ಹೊಂದಲಿಲ್ಲ. ಈ ಸಮಯದಲ್ಲಿ ಅದೇ ಸ್ಥಳದಲ್ಲಿ ಬೇಗನೆ ಶಿವನು ಆವಿರ್ಭವಿಸಿದನು. ಮಹೇಶ್ವರನು ಅಲ್ಲಿ ಪ್ರಕಾಶರೂಪದಿಂದ ಪ್ರತ್ಯಕ್ಷನಾಗಿ ಆ ಘುಶ್ಮೆಯನ್ನು ಕುರಿತು,

॥ ಶಿವ ಉವಾಚ ॥

ಪ್ರಸನ್ನೋಽಸ್ಮಿ ವರಂ ಬ್ರೂಹಿ ದುಷ್ಟಯಾ ಮಾರಿತೋ ಹ್ಯಯಂ ।
ಏನಾಂ ಚ ಮಾರಯಿಷ್ಯಾಮಿ ತ್ರಿಶೂಲೇನ ವರಾನನೇ ॥ ೩೫ ॥

॥ ಸೂತ ಉವಾಚ ॥

ಘುಶ್ಮಾ ತದಾ ವರಂ ವವ್ರೇ ಸುಪ್ರಣಮ್ಯ ಶಿವಂ ನತಾ ।
ರಕ್ಷಣೀಯಾ ತ್ವಯಾ ನಾಥ ಸುದೇಹೇಯಂ ಸ್ವಸಾ ಮಮ ॥ ೩೬ ॥

॥ ಶಿವ ಉವಾಚ ॥

ಅಪಕಾರಃ ಕೃತಸ್ತಸ್ಯಾಮುಪಕಾರಃ ಕಥಂ ತ್ವಯಾ ।
ಕ್ರಿಯತೇ ಹನನೀಯಾ ಚ ಸುದೇಹಾ ದುಷ್ಟಕಾರಿಣೀ ॥ ೩೭ ॥

॥ ಘುಶ್ಮೋವಾಚ ॥

ತವ ದರ್ಶನಮಾತ್ರೇಣ ಪಾತಕಂ ನೈವ ತಿಷ್ಠತಿ ।
ಇದಾನೀಂ ತ್ವಾಂ ಚ ವೈ ದೃಷ್ಟ್ವಾ ತತ್ಪಾಪಂ ಭಸ್ಮತಾಂ ವ್ರಜೇತ್ ॥ ೩೮ ॥

---

೩೫. ಎಲೈ, ಘುಶ್ಮೆಯೇ! ನಿನಗೆ ನಾನು ಪ್ರಸನ್ನನಾಗಿರುತ್ತೇನೆ, ವರವನ್ನು ಕೇಳು. ಈ ನಿನ್ನ ಮಗನನ್ನು ದುಷ್ಟಳಾದ ಸುದೇಹೆಯು ಕೊಂದಳು. ಅವಳನ್ನು ತ್ರಿಶೂಲದಿಂದ ಕೊಲ್ಲುವೆನು ಎಂದನು.

೩೬. ಆಗ ಘುಶ್ಮೆಯು ಶಿವನಿಗೆ ನಮಸ್ಕಾರವನ್ನು ಮಾಡಿ ಎಲೈ, ಸ್ವಾಮಿಯೇ, ನೀನು ನಮ್ಮಕ್ಕನಾದ ಸುದೇಹೆಯನ್ನು ಕೊಲ್ಲಕೂಡದು. ಅವಳನ್ನು ರಕ್ಷಿಸಬೇಕು. ಎಂದು ವರವನ್ನು ಕೇಳಿಕೊಂಡಳು.

೩೭. ಶಿವನು ಹೇಳಿದನು.—ಆ ಸುದೇಹೆಯು ಅಪಕಾರವನ್ನು ಮಾಡಿದವಳು. ಅವಳಿಗೆ ನೀನು ಉಪಕಾರವನ್ನು ಹೇಗೆ ಮಾಡುವೆ? ದುಷ್ಕಾರ್ಯವನ್ನು ಮಾಡಿದ ಆ ಸುದೇಹೆಯನ್ನು ಕೊಲ್ಲಬೇಕಾದುದು ನ್ಯಾಯವಲ್ಲವೇ? ಎಂದನು.

೩೮-೪೦. ಘುಶ್ಮೆಯು ಹೇಳಿದಳು.—ನಿನ್ನ ದರ್ಶನವನ್ನು ಮಾಡಿದ ಮಾತ್ರದಿಂದಲೇ ಪಾಪಗಳೆಲ್ಲ ನಾಶವಾಗುವುವು. ಈಗ ನಿನ್ನನ್ನು ನೋಡಿದರೆ, ಅವಳ ಪಾಪಗಳೆಲ್ಲ ಬೂದಿಯಾಗುವುವು. ಅಪಕಾರಮಾಡಿದವರಿಗೆ ಯಾರು ಉಪಕಾರವನ್ನು

ಅಪಕಾರೇಷು ಯಶ್ಚೈವ ಹ್ಯುಪಕಾರಂ ಕರೋತಿ ಚ ।
ತಸ್ಯ ದರ್ಶನಮಾತ್ರೇಣ ಪಾಪಂ ದೂರತರಂ ವ್ರಜೇತ್ ॥ ೩೯ ॥

ಇತಿ ಶ್ರುತಂ ಮಯಾ ದೇವ ಭಗವದ್ವಾಕ್ಯಮುದ್ಭುತಂ ।
ತಸ್ಮಾಚ್ಚೈವಂ ಕೃತಂ ಯೇನ ಕ್ರಿಯತಾಂ ಚ ಸದಾಶಿವ ॥ ೪೦ ॥

॥ ಸೂತ ಉವಾಚ ॥

ಇತ್ಯುಕ್ತಸ್ತು ತಯಾ ತತ್ರ ಪ್ರಸನ್ನೋಽತ್ಯಭವತ್ಪುನಃ ।
ಮಹೇಶ್ವರಃ ಕೃಪಾಸಿಂಧುಃ ಸಮುವಾಚೇ ಭಕ್ತವತ್ಸಲಃ ॥ ೪೧ ॥

॥ ಶಿವ ಉವಾಚ ॥

ಅನ್ಯದ್ವರಂ ಬ್ರೂಹಿ ಘುಶ್ಮೇ ದದಾಮಿ ಚ ಹಿತಂ ತವ ।
ತ್ವದ್ಭಕ್ತ್ಯಾ ಸುಪ್ರಸನ್ನೋಽಸ್ಮಿ ನಿರ್ವಿಕಾರಸ್ವಭಾವತಃ ॥ ೪೨ ॥

॥ ಸೂತ ಉವಾಚ ॥

ಸೋವಾಚ ತದ್ವಚಶ್ಶ್ರುತ್ವಾ ಯದಿ ದೇಯೋ ವರಸ್ತ್ವಯಾ ।
ಲೋಕಾನಾಂ ಚೈವ ರಕ್ಷಾರ್ಥಮತ್ರ ಸ್ಥೇಯಂ ಮದಾಖ್ಯಯಾ ॥ ೪೩ ॥

---

ಮಾಡುವರೋ ಅವರನ್ನು ನೋಡಿದ ಮಾತ್ರದಿಂದಲೇ, ನೋಡಿದವರ ಪಾಪವು ದೂರವಾಗಿ ಹೋಗುವುದು. ಹೀಗೆಂದು ನಾನು ಕೇಳಿರುವೆನು. ಇದು ಭಗವಂತನ ಮಾತು, ಅದ್ಭುತವಾದುದು. ಆದುದರಿಂದ ನಾನು ಹೀಗೆ ಹೇಳಿದೆನು. ಓ ಸದಾಶಿವನೇ, ನನ್ನ ವರವನ್ನು ನಡೆಸಿಕೊಡು ಎಂದು ಪ್ರಾರ್ಥಿಸಿದಳು.

೪೧. ಹೀಗೆ ಆ ಘುಶ್ಮೆಯು ಹೇಳುತ್ತಲು ದಯಾಸಮುದ್ರನಾದ ಮಹೇಶ್ವರನು ಪುನಃ ಪ್ರಸನ್ನನಾಗಿ ಭಕ್ತರಲ್ಲಿ ಪ್ರೀತಿಯಿಂದ ಹೇಳಿದನು.

೪೨. ಎಲೈ, ಘುಶ್ಮೆಯೇ! ನಿನ್ನ ಭಕ್ತಿಯಿಂದಲೂ ನಿರ್ವಿಕಾರವಾದ ಸ್ವಭಾವದಿಂದಲೂ ನಾನು ಸಂತುಷ್ಟನಾದೆನು. ನಿನಗೆ ಹಿತವಾದ ಮತ್ತೊಂದು ವರವನ್ನು ಕೇಳು, ಕೊಡುವೆನು, ಎಂದನು.

೪೩. ಶಿವನ ಮಾತನ್ನು ಕೇಳಿ ಘುಶ್ಮೆಯು ಮತ್ತಿಂತೆಂದಳು. ಎಲೈ, ಸ್ವಾಮಿಯೇ! ನೀನು ವರವನ್ನು ಕೊಡುವುದಾದರೆ ಲೋಕವನ್ನು ಕಾಪಾಡಲು ನನ್ನ ಹೆಸರಿನಿಂದ ಈ ಪ್ರದೇಶದಲ್ಲಿ ನೀನು ಸದಾ ನೆಲಸಿರಬೇಕು ಎಂದಳು.

ತದೋವಾಚ ಶಿವಸ್ತತ್ರ ಸುಪ್ರಸನ್ನೋ ಮಹೇಶ್ವರಃ ।
ಸ್ಥಾಸ್ಯೇಽತ್ರ ತವ ನಾಮ್ನಾಹಂ ಘುಶ್ಮೇಶಾಖ್ಯಸ್ಸುಖಪ್ರದಃ ॥ ೪೪ ॥

ಘುಶ್ಮೇಶಾಖ್ಯಂ ಸುಪ್ರಸಿದ್ಧಂ ಲಿಂಗಂ ಮೇ ಜಾಯತಾಂ ಶುಭಂ ।
ಇದಂ ಸರಸ್ತು ಲಿಂಗಾನಾಮಾಲಯಂ ಜಾಯತಾಂ ಸದಾ ॥ ೪೫ ॥

ತಸ್ಮಾಚ್ಛಿವಾಲಯಂ ನಾಮ ಪ್ರಸಿದ್ಧಂ ಭುವನತ್ರಯೇ ।
ಸರ್ವಕಾಮಪ್ರದಂ ಹ್ಯೇತದ್ದರ್ಶನಾತ್ಸ್ಯಾತ್ಸದಾ ಸರಃ ॥ ೪೬ ॥

ತವ ವಂಶೇ ಶತಂ ಚೈಕಂ ಪುರುಷಾವಧಿ ಸುವ್ರತೇ ।
ಈದೃಶಾಃ ಪುತ್ರಕಾಃ ಶ್ರೇಷ್ಠಾ ಭವಿಷ್ಯಂತಿ ನ ಸಂಶಯಃ ॥ ೪೭ ॥

ಸುಸ್ತ್ರೀಕಾಸ್ಸಧನಾಶ್ಚೈವ ಸ್ವಾಯುಷ್ಯಾಶ್ಚ ವಿಚಕ್ಷಣಾಃ ।
ವಿದ್ಯಾವಂತೋ ಹ್ಯುದಾರಾಶ್ಚ ಭುಕ್ತಿಮುಕ್ತಿಫಲಾಪ್ತಯೇ ॥ ೪೮ ॥

ಶತಮೇಕೋತ್ತರಂ ಚೈವ ಭವಿಷ್ಯಂತಿ ಗುಣಾಧಿಕಾಃ ।
ಈದೃಶೋ ವಂಶವಿಸ್ತಾರೋ ಭವಿಷ್ಯತಿ ಸುಶೋಭನಃ ॥ ೪೯ ॥

---

೪೪-೪೯. ಆ ಮಾತನ್ನು ಕೇಳಿ ಶಿವನು ಪ್ರಸನ್ನನಾಗಿ ಎಲೈ, ಘುಶ್ಮೆಯೇ ನಿನ್ನ ಹೆಸರಿನಿಂದ ನಾನು ಇಲ್ಲಿ ನೆಲಸಿ ಭಕ್ತರಿಗೆ ಸುಖವನ್ನುಂಟುಮಾಡುವೆನು. ಇಲ್ಲಿ ಘುಶ್ಮೇಶನೆಂಬ ಹೆಸರಿನ ಮಂಗಳಕರವಾದ ಪ್ರಸಿದ್ಧಲಿಂಗವಾಗಲಿ. ಈ ಸರೋವರವು ಯಾವಾಗಲೂ ಲಿಂಗಗಳಿಗೆ ನೆಲೆಯಾಗಲಿ. ಆ ಕಾರಣದಿಂದ ಇದು ಮೂರು ಲೋಕದಲ್ಲಿಯೂ ಪ್ರಸಿದ್ಧವಾದ ಶಿವಾಲಯವೆಂಬ ಕ್ಷೇತ್ರವಾಗಲಿ. ಈ ಸರೋವರದರ್ಶನದಿಂದ ಸಮಸ್ತ ಇಷ್ಟಾರ್ಥಗಳೂ ಉಂಟಾಗಲಿ. ಎಲೈ, ಒಳ್ಳೆಯ ವ್ರತವನ್ನು ಮಾಡಿದ ಘುಶ್ಮೆಯೇ, ನಿನ್ನ ವಂಶದಲ್ಲಿ ನೂರೊಂದು ತಲೆಯವರಿಗೂ ಇಂತಹ ಶ್ರೇಷ್ಠರಾದ ಮಕ್ಕಳೇ ಹುಟ್ಟಲಿ. ಅವರು ಒಳ್ಳೆಯ ಆಯುಸ್ಸುಳ್ಳವರಾಗಿ ವಿದ್ಯಾವಂತರೂ, ಬುದ್ಧಿವಂತರೂ, ಉದಾರಿಗಳೂ ಆಗಿ ಉತ್ತಮರಾದ ಪತ್ನಿಯರನ್ನು ಪಡೆದು ಭುಕ್ತಿಮುಕ್ತಿಗಳನ್ನು ಅನುಭವಿಸಲಿ. ಗುಣವಂತರಾದ ನೂರೊಂದು ಜನರುಳ್ಳ ವಿಸ್ತಾರವಾದ ಈ ವಂಶವು ಮಂಗಳಕರವಾಗಿರುವುದು ಎಂದನು.

॥ ಸೂತ ಉವಾಚ ॥

ಇತ್ಯುಕ್ತ್ವಾ ಚ ಶಿವಸ್ತತ್ರ ಲಿಂಗರೂಪೋಽಭವತ್ತದಾ ।
ಘುಶ್ಮೇಶೋ ನಾಮ ವಿಖ್ಯಾತಃ ಸರಶ್ಚೈವ ಶಿವಾಲಯಂ ॥ ೫೦ ॥

ಸುಧರ್ಮಾ ಸ ಚ ಘುಶ್ಮಾ ಚ ಸುದೇಹಾ ಚ ಸಮಾಗತಾಃ ।
ಪ್ರದಕ್ಷಿಣಂ ಶಿವಸ್ಯಾಶು ಶತಮೇಕೋತ್ತರಂ ದಧುಃ ॥ ೫೧ ॥

ಪೂಜಾಂ ಕೃತ್ವಾ ಮಹೇಶಸ್ಯ ಮಿಲಿತ್ವಾ ಚ ಪರಸ್ಪರಂ ।
ಹಿತ್ವಾ ಚಾಂತರ್ಮಲಂ ತತ್ರ ಲೇಭಿರೇ ಪರಮಂ ಸುಖಂ ॥ ೫೨ ॥

ಪುತ್ರಂ ದೃಷ್ಟ್ವಾ ಸುದೇಹಾ ಸಾ ಜೀವಿತಂ ಲಜ್ಜಿತಾಭವತ್ ।
ತೌ ಕ್ಷಮಾಪ್ಯಾಚರದ್ವಿಪ್ರಾ ನಿಜಪಾಪಾಪಹಂ ವ್ರತಂ ॥ ೫೩ ॥

ಘುಶ್ಮೇಶಾಖ್ಯಮಿದಂ ಲಿಂಗಮಿತ್ಥಂ ಜಾತಂ ಮುನೀಶ್ವರಾಃ ।
ತದ್ದೃಷ್ಟ್ವಾ ಪೂಜಯಿತ್ವಾ ಹಿ ಸುಖಂ ಸಂವರ್ಧತೇ ಸದಾ ॥ ೫೪ ॥

---

೫೦-೫೩. ಹೀಗೆಂದು ಹೇಳಿ ಶಿವನು ಅಲ್ಲಿ ಲಿಂಗರೂಪನಾಗಿ ಘುಶ್ಮೇಶನೆಂಬ ಪ್ರಸಿದ್ಧಿಯನ್ನು ಪಡೆದನು. ಸರೋವರವು ಶಿವಾಲಯವೆಂದು ಹೆಸರನ್ನು ಹೊಂದಿತ್ತು. ಸುಧರ್ಮನೂ, ಘುಶ್ಮೆಯೂ, ಸುದೇಹೆಯೂ ಅಲ್ಲಿಗೆ ಬಂದು ಶಿವನಿಗೆ ನೂರೊಂದು ಪ್ರದಕ್ಷಿಣೆಯನ್ನು ಮಾಡಿದರು. ಎಲ್ಲರೂ ಸೇರಿ ಮಹೇಶ್ವರನ ಪೂಜೆಯನ್ನು ಮಾಡಿ ಮನಸ್ಸಿನ ಕೊಳೆಯನ್ನು ಕಳೆದುಕೊಂಡು ಪರಮಸುಖವನ್ನು ಹೊಂದಿದರು. ಸುದೇಹೆಯು ಬದುಕಿ ಬಂದ ಮಗನನ್ನು ಕಂಡು ನಾಚಿಕೊಂಡಳು. ಅವರ ಕ್ಷಮಾಪಣೆಯನ್ನು ಕೇಳಿಕೊಂಡು ತನ್ನ ಪಾಪಪರಿಹಾರಕ್ಕಾಗಿ ವ್ರತವನ್ನು ಮಾಡಿದಳು.

೫೪-೫೬. ಎಲೈ ಋಷಿಶ್ರೇಷ್ಠರೇ, ಘುಶ್ಮೇಶವೆಂಬ ಲಿಂಗವು ಹೀಗೆ ಹುಟ್ಟಿತು. ಅದನ್ನು ದರ್ಶನಮಾಡಿ ಪೂಜೆ ಮಾಡಿದವರಿಗೆ ಯಾವಾಗಲೂ ಸುಖವು ಅಭಿವೃದ್ಧಿ

ಇತಿ ವತ್ಸ ಸಮಾಖ್ಯಾತಾ ಜ್ಯೋತಿರ್ಲಿಂಗಾವಲೀ ಮಯಾ ।
ದ್ವಾದಶಪ್ರಮಿತಾ ಸರ್ವಕಾಮದಾ ಭುಕ್ತಿಮುಕ್ತಿದಾ ॥ ೫೫ ॥

ಏತಜ್ಜ್ಯೋತಿರ್ಲಿಂಗಕಥಾಂ ಯಃ ಪಠೇಚ್ಛೃಣುಯಾದಪಿ ।
ಮುಚ್ಯತೇ ಸರ್ವಪಾಪೇಭ್ಯೋ ಭುಕ್ತಿಂ ಮುಕ್ತಿಂ ಚ ವಿಂದತಿ ॥ ೫೬ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಘುಶ್ಮೇಶಜ್ಯೋತಿರ್ಲಿಂಗೋತ್ಪತ್ತಿಮಾಹಾತ್ಮ್ಯವರ್ಣನಂ ನಾಮ
ತ್ರಯಸ್ತ್ರಿಂಶೋಽಧ್ಯಾಯಃ



---

ಯಾಗುವುದು. ನಾನು ನಿಮಗೆ ಜ್ಯೋತಿರ್ಲಿಂಗಗಳನ್ನೆಲ್ಲಾ ಹೇಳಿದೆನು. ಈ ಹನ್ನೆರಡು ಜ್ಯೋತಿರ್ಲಿಂಗಗಳೂ ಭುಕ್ತಿ ಮುಕ್ತಿಗಳನ್ನೂ ಸಕಲೇಷ್ಟಾರ್ಥಗಳನ್ನೂ ಕೊಡುವುವು. ಈ ಜ್ಯೋತಿರ್ಲಿಂಗಗಳ ಕಥೆಯನ್ನು ಯಾರು ಹೇಳುವರೋ, ಕೇಳುವರೋ ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಭುಕ್ತಿ ಮುಕ್ತಿಗಳನ್ನು ಪಡೆಯುವರು.

ಇಲ್ಲಿಗೆ ಶ್ರೀಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಘುಶ್ಮೇಶಜ್ಯೋತಿರ್ಲಿಂಗೋತ್ಪತ್ತಿಮಾಹಾತ್ಮ್ಯವರ್ಣನೆಯೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಚತುಸ್ತ್ರಿಂಶೋಽಧ್ಯಾಯಃ



|| ಸೂತ ಉವಾಚ ||

ಇತಿ ಶ್ರುತ್ವಾ ವಚಸ್ತಸ್ಯ ಸೂತಸ್ಯ ಚ ಮುನೀಶ್ವರಾಃ ।
ಸಮೂಚುಸ್ತಂ ಸುಪ್ರಶಸ್ಯ ಲೋಕಾನಾಂ ಹಿತಕಾಮ್ಯಯಾ || ೧ ||

|| ಋಷಯ ಊಚುಃ ||

ಸೂತ ಸರ್ವಂ ವಿಜಾನಾಸಿ ತತಃ ಪೃಚ್ಛಾಮಹೇ ವಯಂ ।
ಹರೀಶ್ವರಸ್ಯ ಲಿಂಗಸ್ಯ ಮಹಿಮಾನಂ ವದ ಪ್ರಭೋ || ೨ ||

ಚಕ್ರಂ ಸುದರ್ಶನಂ ಪ್ರಾಪ್ತಂ ವಿಷ್ಣುನೇತಿ ಶ್ರುತಂ ಪುರಾ ।
ತದಾರಾಧನತಸ್ತಾತ ತತ್ಕಥಾ ಚ ವಿಶೇಷತಃ || ೩ ||

---

### ಮೂವತ್ತನಾಲ್ಕನೆಯ ಅಧ್ಯಾಯವು.

೧. ವ್ಯಾಸಮುನಿಯಿಂತೆಂದನು.—ಸೂತನು ಹೇಳಿದ ಮಾತುಗಳನ್ನು ಕೇಳಿ ಋಷಿಗಳೆಲ್ಲರೂ ಅವನನ್ನು ಹೊಗಳಿ ಲೋಕಹಿತಕ್ಕಾಗಿ ಮತ್ತೆ ಪ್ರಶ್ನೆಮಾಡಿದರು.

೨-೩. ಎಲೈ, ಸೂತನೇ! ನೀನು ಎಲ್ಲವನ್ನೂ ತಿಳಿದಿರುವೆ. ಆದುದರಿಂದ ನಿನ್ನನ್ನು ನಾವು ಪ್ರಶ್ನೆ ಮಾಡುವೆವು. ಹರೀಶ್ವರಲಿಂಗದ ಮಹಿಮೆಯನ್ನು ನಮಗೆ ಹೇಳು. ಹಿಂದೆ ವಿಷ್ಣುವು ಶಿವನನ್ನು ಪೂಜಿಸಿ ಸುದರ್ಶನವೆಂಬ ಚಕ್ರವನ್ನು ಪಡೆದನೆಂದು ಕೇಳಿರುವೆವು. ಅದರ ಕಥೆಯನ್ನು ನಮಗೆ ಹೇಳಬೇಕು ಎಂದರು.

॥ ಸೂತ ಉವಾಚ ॥

ಶ್ರೂಯತಾಂ ಚ ಋಷಿಶ್ರೇಷ್ಠಾ ಹರೀಶ್ವರಕಥಾ ಶುಭಾ ।
ಯತಸ್ಸುದರ್ಶನಂ ಲಬ್ಧಂ ವಿಷ್ಣುನಾ ಶಂಕರಾತ್ಪರಾ ॥ ೪ ॥

ಕಸ್ಮಿಂಶ್ಚಿತ್ಸಮಯೇ ದೈತ್ಯಾಃ ಸಂಜಾತಾ ಬಲವತ್ತರಾಃ ।
ಲೋಕಾಂಸ್ತೇ ಪೀಡಯಾಮಾಸುರ್ಧರ್ಮಲೋಪಂ ಚ ಚಕ್ರಿರೇ ॥ ೫ ॥

ತೇ ದೇವಾಃ ಪೀಡಿತಾ ದೈತ್ಯೈರ್ಮಹಾಬಲಪರಾಕ್ರಮೈಃ ।
ಸ್ವಂ ದುಃಖಂ ಕಥಯಾಮಾಸುರ್ವಿಷ್ಣುಂ ನಿರ್ಜರರಕ್ಷಕಂ ॥ ೬ ॥

॥ ದೇವಾ ಊಚುಃ ॥

ಕೃಪಾಂ ಕುರು ಪ್ರಭೋ ತ್ವಂ ಚ ದೈತ್ಯೈಸ್ಸಂಪೀಡಿತಾ ಭೃಶಂ ।
ಕುತ್ರ ಯಾಮಶ್ಚ ಕಿಂ ಕುರ್ಮಶ್ಶರಣ್ಯಂ ತ್ವಾಂ ಸಮಾಶ್ರಿತಾಃ ॥ ೭ ॥

॥ ಸೂತ ಉವಾಚ ॥

ಇತ್ಯೇವಂ ವಚನಂ ಶ್ರುತ್ವಾ ದೇವಾನಾಂ ದುಃಖಿತಾತ್ಮನಾಂ ।
ಸ್ಮೃತ್ವಾ ಶಿವಪದಾಂಭೋಜಂ ವಿಷ್ಣುರ್ವಚನಮಬ್ರವೀತ್ ॥ ೮ ॥

---

೪-೬. ಸೂತನು ಹೇಳಿದನು.—ಎಲೈ, ಋಷಿಶ್ರೇಷ್ಠರೇ. ಹಿಂದೆ ಶಂಕರನಿಂದ ವಿಷ್ಣುವು ಸುದರ್ಶನ ಚಕ್ರವನ್ನು ಪಡೆದ ಶುಭಕರವಾದ ಹರೀಶ್ವರ ಕಥೆಯನ್ನು ಹೇಳುವೆನು, ಕೇಳಿರಿ. ಒಂದಾನೊಂದು ಕಾಲದಲ್ಲಿ ದೈತ್ಯರು ಅತ್ಯಂತ ಬಲಶಾಲಿಗಳಾದರು. ಅವರು ಲೋಕವನ್ನೆಲ್ಲಾ ಪೀಡಿಸಿ ಧರ್ಮಲೋಪವನ್ನು ಮಾಡಿದರು. ಮಹಾಬಲಶಾಲಿಗಳಾದ ದೈತ್ಯರಿಂದ ಪೀಡಿತರಾದ ದೇವತೆಗಳು ತಮ್ಮನ್ನು ಕಾಪಾಡುವ ವಿಷ್ಣುವಿನ ಬಳಿಗೆ ಹೋಗಿ ಅವನಲ್ಲಿ ತಮ್ಮ ದುಃಖವನ್ನು ಹೇಳಿಕೊಂಡರು.

೭. ಎಲೈ, ಸ್ವಾಮಿಯೇ! ನಮ್ಮಲ್ಲಿ ದಯೆಯನ್ನು ತೋರಿಸು. ದೈತ್ಯರು ವಿಶೇಷವಾಗಿ ನಮ್ಮನ್ನು ಬಾಧೆಪಡಿಸುತ್ತಿರುವರು. ನಾವು ಎಲ್ಲಿಗೆ ಹೋಗೋಣ? ಏನು ಮಾಡೋಣ? ನಿನ್ನನ್ನೇ ಮರೆಹೊಕ್ಕಿರುವೆವು ಎಂದನು.

೮. ದುಃಖಪಡುತ್ತಿರುವ ದೇವತೆಗಳ ಈ ಮಾತನ್ನು ಕೇಳಿ, ವಿಷ್ಣುವು ಶಿವನ ಪಾದಕಮಲವನ್ನು ಧ್ಯಾನಿಸಿ,

॥ ವಿಷ್ಣುರುವಾಚ ॥

ಕರಿಷ್ಯಾಮಿ ಚ ವಃ ಕಾರ್ಯಮಾರಾಧ್ಯ ಗಿರಿಶಂ ಸುರಾಃ ।
ಬಲಿಷ್ಠಾಶ್ಶತ್ರವೋ ಹ್ಯೇತೇ ವಿಜೇತವ್ಯಾಃ ಪ್ರಯತ್ನತಃ ॥ ೯ ॥

॥ ಸೂತ ಉವಾಚ ॥

ಇತ್ಯುಕ್ತಾಸ್ತೇ ಸುರಾಸ್ಸರ್ವೇ ವಿಷ್ಣುನಾ ಪ್ರಭವಿಷ್ಣುನಾ ।
ಮತ್ವಾ ದೈತ್ಯಾನ್ಹತಾನ್ಪುಷ್ಟಾನ್ಯಯುರ್ಧಾಮ ಸ್ವಕಂ ಸ್ವಕಂ ॥ ೧೦ ॥

ವಿಷ್ಣುರಪ್ಯಮರಾಣಾಂ ತು ಜಯಾರ್ಥಮಭಜಚ್ಛಿವಂ ।
ಸರ್ವಾಮರಾಣಾಮಧಿಪಂ ಸರ್ವಸಾಕ್ಷಿಣಮವ್ಯಯಂ ॥ ೧೧ ॥

ಗತ್ವಾ ಕೈಲಾಸನಿಕಟೇ ತಪಸ್ತೇಪೇ ಹರಿಸ್ಸ್ವಯಂ ।
ಕೃತ್ವಾ ಕುಂಡಂ ಚ ಸಂಸ್ಥಾಪ್ಯ ಜಾತವೇದಸಮುಗ್ರತಃ ॥ ೧೨ ॥

ಪಾರ್ಥಿವೇನ ವಿಧಾನೇನ ಮಂತ್ರೈರ್ನಾನಾವಿಧೈರಪಿ ।
ಸ್ತೋತ್ರೈಶ್ಚೈವಾಪ್ಯನೇಕೈಶ್ಚ ಗಿರಿಶಂ ಚಾಭಜನ್ಮುದಾ ॥ ೧೩ ॥

---

೯. ಎಲೈ, ದೇವತೆಗಳೇ, ನಾನು ಶಿವನನ್ನು ಪೂಜಿಸಿ ನಿಮ್ಮ ಕಾರ್ಯವನ್ನು ಸಾಧಿಸುವೆನು. ಶತ್ರುಗಳಾದ ರಾಕ್ಷಸರು ಮಹಾ ಬಲಿಷ್ಠರು. ಅವರನ್ನು ಪ್ರಯತ್ನ ಪೂರ್ವಕವಾಗಿ ಜಯಿಸಬೇಕು ಎಂದನು.

೧೦-೧೨. ವಿಷ್ಣುವು ಹೇಳಿದ ಮಾತನ್ನು ಕೇಳಿ ದೇವತೆಗಳೆಲ್ಲರೂ ದುಷ್ಟರಾದ ದೈತ್ಯರು ನಾಶವಾದರೆಂದೇ ತಿಳಿದು ತಂತಮ್ಮ ಸ್ಥಳಗಳಿಗೆ ಹೋದರು. ವಿಷ್ಣುವಾದರೋ ದೇವತೆಗಳ ಜಯಕ್ಕಾಗಿ ಶಿವನನ್ನು ಪೂಜಿಸಿದನು. ಸಮಸ್ತ ದೇವತೆಗಳಿಗೂ ಪತಿಯೂ ಸರ್ವಸಾಕ್ಷಿಯೂ, ನಾಶರಹಿತನೂ ಆದ ಶಿವನನ್ನು ಕುರಿತು ಕೈಲಾಸಪರ್ವತದ ಸಮೀಪದಲ್ಲಿ ಅಗ್ನಿಕುಂಡವನ್ನು ಮಾಡಿ, ಅಗ್ನಿಯನ್ನು ಸ್ಥಾಪಿಸಿ ತಪಸ್ಸನ್ನು ಮಾಡಿದನು.

೧೩-೧೫. ಪಾರ್ಥಿವಲಿಂಗಪೂಜಾವಿಧಾನದಿಂದಲೂ, ನಾನಾ ವಿಧವಾದ ಮಂತ್ರ, ಜಪದಿಂದಲೂ, ಅನೇಕ ಬಗೆಯ ಸ್ತೋತ್ರಗಳಿಂದಲೂ, ಸಂತೋಷದಿಂದ

ಕಮಲೈಸ್ಸರಸೋ ಜಾತೈರ್ಮಾನಸಾಖ್ಯಾನ್ಮುನೀಶ್ವರಾಃ ।
ಬಧ್ವಾ ಚೈವಾಸನಂ ತತ್ರ ನ ಚಚಾಲ ಹರಿಸ್ಸ್ವಯಂ ॥ ೧೪ ॥

ಪ್ರಸಾದಾವಧಿ ಚೈವಾತ್ರ ಸ್ಥೇಯಂ ವೈ ಸರ್ವಥಾ ಮಯಾ ।
ಇತ್ಯೇವಂ ನಿಶ್ಚಯಂ ಕೃತ್ವಾ ಸಮಾನರ್ಚ ಶಿವಂ ಹರಿಃ ॥ ೧೫ ॥

ಯದಾ ನೈವ ಹರಸ್ತುಷ್ಟೋ ಬಭೂವ ಹರಯೇ ದ್ವಿಜಾಃ ।
ತದಾ ಸ ಭಗವಾನ್ವಿಷ್ಣುರ್ವಿಚಾರೇ ತತ್ಪರೋಽಭವತ್ ॥ ೧೬ ॥

ವಿಚಾರ್ಯೈವಂ ಸ್ವಮನಸಿ ಸೇವನಂ ಬಹುಧಾ ಕೃತಂ ।
ತಥಾಪಿ ನ ಹರಸ್ತುಷ್ಟೋ ಬಭೂವೋತಿಕರಃ ಪ್ರಭುಃ ॥ ೧೭ ॥

ತತಸ್ಸುವಿಸ್ಮಿತೋ ವಿಷ್ಣುರ್ಭಕ್ತ್ಯಾ ಪರಮಯಾನ್ವಿತಃ ।
ಸಹಸ್ರೈರ್ನಾಮಭಿಃ ಪ್ರೀತ್ಯಾ ತುಷ್ಟಾವ ಪರಮೇಶ್ವರಂ ॥ ೧೮ ॥

ಪ್ರತ್ಯೇಕಂ ಕಮಲಂ ತಸ್ಮೈ ನಾಮಮಂತ್ರಮುದೀರ್ಯ ಚ ।
ಪೂಜಯಾಮಾಸ ವೈ ಶಂಭುಂ ಶರಣಾಗತವತ್ಸಲಂ ॥ ೧೯ ॥

ಪರೀಕ್ಷಾರ್ಥಂ ವಿಷ್ಣುಭಕ್ತೇಸ್ತದಾ ವೈ ಶಂಕರೇಣ ಹ ।
ಕಮಲಾನಾಂ ಸಹಸ್ರಾತ್ತು ಹೃತಮೇಕಂ ಚ ನೀರಜಂ ॥ ೨೦ ॥

---

ಶಂಕರನನ್ನು ಸೇವಿಸಿದನು. ಎಲೈ, ಋಷಿಶ್ರೇಷ್ಠರೇ! ಆ ಹರಿಯು ಮಾನಸಸರೋವರದಲ್ಲಿ ಹುಟ್ಟಿದ ಕಮಲಗಳಿಂದ ಶಿವನನ್ನು ಪೂಜಿಸಿ ಯೋಗಾಸನವನ್ನು ಹಾಕಿ ಚಲಿಸದೆ ತಪಸ್ಸಿಗೆ ಕುಳಿತನು. ಶಿವನು ಪ್ರಸನ್ನನಾಗುವವರೆಗೂ ಇಲ್ಲಿಯೇ ಕುಳಿತಿರುವೆನೆಂದು ನಿಶ್ಚಯಿಸಿ ಹರಿಯು ಶಿವನನ್ನು ಪೂಜಿಸಿದನು.

೧೬-೨೦. ಎಲೈ, ಬ್ರಾಹ್ಮಣರೇ! ಕೇಳಿ. ಹರಿಯ ತಪಸ್ಸಿಗೆ ಹರನು ಸಂತುಷ್ಟನಾಗದಿರಲು ಹರಿಯು ತನ್ನ ಮನಸ್ಸಿನಲ್ಲಿ ವಿಚಾರಮಾಡಿ ಅನೇಕ ಬಗೆಯಲ್ಲಿ ಶಿವನ ಸೇವೆಯನ್ನು ಮಾಡಿದನು. ಹಾಗಾದರೂ ಮಹಾಮಹಿಮೆಯನ್ನು ತೋರಿಸುವ ಶಿವನು ಸಂತುಷ್ಟನಾಗಲಿಲ್ಲ. ಆಮೇಲೆ ವಿಷ್ಣುವು ಆಶ್ಚರ್ಯಪಡುತ್ತ ವಿಶೇಷವಾದ ಭಕ್ತಿಯಿಂದ ಕೂಡಿ ಪ್ರೀತಿಯಿಂದ ಪರಮೇಶ್ವರನನ್ನು ಸಹಸ್ರ ನಾಮಗಳಿಂದ ಸ್ತೋತ್ರ ಮಾಡಿದನು. ವಿಷ್ಣುವಿನ ಭಕ್ತಿಯನ್ನು ಪರೀಕ್ಷೆಮಾಡಬೇಕೆಂದು ಶಿವನು ಸಾವಿರ ಕಮಲಗಳಲ್ಲಿ ಒಂದು ಕಮಲವು ಕಾಣದಂತೆ ಮಾಡಿದನು.

ನ ಜ್ಞಾತಂ ವಿಷ್ಣುನಾ ತಚ್ಚ ಮಾಯಾಕಾರಣಮದ್ಭುತಂ ।
ನ್ಯೂನಂ ತಚ್ಚಾಪಿ ಸಂಜ್ಞಾಯ ತದನ್ವೇಷಣತತ್ಪರಃ ॥ ೨೧ ॥

ಬಭ್ರಾಮ ಸಕಲಾಂ ಪೃಥ್ವೀಂ ತತ್ಪ್ರೀತ್ಯೈ ಸುದೃಢವ್ರತಃ ।
ತದಪ್ರಾಪ್ಯ ವಿಶುದ್ಧಾತ್ಮಾ ನೇತ್ರಮೇಕಮುದಾಹರತ್ ॥ ೨೨ ॥

ತಂ ದೃಷ್ಟ್ವಾ ಸ ಪ್ರಸನ್ನೋಽಭೂಚ್ಛಂಕರಸ್ಸರ್ವದುಃಖಹಾ ।
ಆವಿರ್ಬಭೂವ ತತ್ರೈವ ಜಗಾದ ವಚನಂ ಹರಿಂ ॥ ೨೩ ॥

॥ ಶಿವ ಉವಾಚ ॥

ಪ್ರಸನ್ನೋಽಸ್ಮಿ ಹರೇ ತುಭ್ಯಂ ವರಂ ಬ್ರೂಹಿ ಯಥೇಪ್ಸಿತಂ ।
ಮನೋಽಭಿಲಷಿತಂ ದದ್ಮಿ ನಾದೇಯಂ ವಿದ್ಯತೇ ತವ ॥ ೨೪ ॥

॥ ಸೂತ ಉವಾಚ ॥

ತಚ್ಛ್ರುತ್ವಾ ಶಂಭುವಚನಂ ಕೇಶವಃ ಪ್ರೀತಮಾನಸಃ ।
ಮಹಾಹರ್ಷಸಮಾಪನ್ನೋ ಹ್ಯಬ್ರವೀತ್ಸಾಂಜಲಿಶ್ಶಿವಂ ॥ ೨೫ ॥

---

೨೧-೨೩. ಶಿವನ ಆ ಅದ್ಭುತವಾದ ಮಾಯೆಯನ್ನು ವಿಷ್ಣುವು ತಿಳಿಯಲಿಲ್ಲ. ಒಂದು ಕಮಲವು ಕಡಿಮೆಯಾದುದನ್ನು ತಿಳಿದು ಅದನ್ನು ಹುಡುಕಬೇಕೆಂದು ಭೂಮಿಯನ್ನೆಲ್ಲಾ ತಿರುಗಿದನು. ಅದು ಸಿಕ್ಕಲಿಲ್ಲ. ಶಿವನ ಪ್ರೀತ್ಯರ್ಥವಾಗಿ ಶುದ್ಧವಾದ ಮನಸ್ಸಿನಿಂದ ತನ್ನ ಒಂದು ಕಣ್ಣನ್ನು ಕಿತ್ತು ಕಮಲಕ್ಕೆ ಬದಲಾಗಿ ಶಿವನಿಗೆ ಸಮರ್ಪಿಸಿದನು. ಇದನ್ನು ಕಂಡು ಸಕಲ ದುಃಖಗಳನ್ನೂ ನಾಶಮಾಡುವ ಶಂಕರನು ಪ್ರಸನ್ನನಾಗಿ ಅಲ್ಲಿಯೇ ಆವಿರ್ಭವಿಸಿ ಹರಿಯನ್ನು ಕುರಿತು,

೨೪. ಎಲೈ, ಹರಿಯೇ! ನಿನಗೆ ನಾನು ಪ್ರಸನ್ನನಾಗಿರುವೆನು. ನಿನಗಿಷ್ಟವಾದ ವರವನ್ನು ಕೇಳು, ಕೊಡುವೆನು. ನಿನಗೆ ಕೊಡದಿರುವುದು ಯಾವುದೂ ಇರುವುದಿಲ್ಲ ಎಂದನು.

೨೫. ಸೂತನು ಹೇಳಿದನು.—ಶಿವನ ಮಾತನ್ನು ಕೇಳಿ, ವಿಷ್ಣುವು ಮಹಾ ಸಂತೋಷಚಿತ್ತದಿಂದ ಕೈ ಮುಗಿದುಕೊಂಡು ಶಿವನನ್ನು ಕುರಿತು,

॥ ವಿಷ್ಣುರುವಾಚ ॥

ವಾಚ್ಯಂ ಕಿಂ ಮೇ ತ್ವದಗ್ರೇ ವೈ ಹ್ಯಂತರ್ಯಾಮಿ ತ್ವಮಾಸ್ಥಿತಃ ।
ತಥಾಪಿ ಕಥ್ಯತೇ ನಾಥ ತವ ಶಾಸನಗೌರವಾತ್ ॥ ೨೬ ॥

ದೈತ್ಯೈಶ್ಚ ಪೀಡಿತಂ ವಿಶ್ವಂ ಸುಖಂ ನೋ ನಸ್ಸದಾಶಿವ ।
ದೈತ್ಯಾನ್ಹಂತುಂ ಮಮ ಸ್ವಾಮಿನ್ಸ್ವಾಯುಧಂ ನ ಪ್ರವರ್ತತೇ ॥ ೨೭ ॥

ಕಿಂ ಕರೋಮಿ ಕ್ವ ಗಚ್ಛಾಮಿ ನಾನ್ಯೋ ಮೇ ರಕ್ಷಕಃ ಪರಃ ।
ಅತೋಽಹಂ ಪರಮೇಶಾನ ಶರಣಂ ತ್ವಾಂ ಸಮಾಗತಃ ॥ ೨೮ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಚ ನಮಸ್ಕೃತ್ಯ ಶಿವಾಯ ಪರಮಾತ್ಮನೇ ।
ಸ್ಥಿತಶ್ಚೈವಾಗ್ರತಶ್ಶಂಭೋಃ ಸ್ವಯಂ ಚ ಪುರುಪೀಡಿತಃ ॥ ೨೯ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚೋ ವಿಷ್ಣೋರ್ದೇವದೇವೋ ಮಹೇಶ್ವರಃ ।
ದದೌ ತಸ್ಮೈ ಸ್ವಕಂ ಚಕ್ರಂ ತೇಜೋರಾಶಿಂ ಸುದರ್ಶನಂ ॥ ೩೦ ॥

---

೨೬-೨೯. ಎಲೈ, ಸ್ವಾಮಿಯೇ, ಅಂತರ್ಯಾಮಿಯಾಗಿರುವ ನಿನ್ನೆದುರಿಗೆ ನಾನು ಮಾತನಾಡುವುದೇನಿರುವುದು? ಆದರೂ ನಿನ್ನ ಅಪ್ಪಣೆಯ ಗೌರವದಿಂದ ಹೇಳುವೆನು. ಪ್ರಪಂಚವು ದೈತ್ಯರ ಬಾಧೆಗೆ ಗುರಿಯಾಗಿ ನಮಗೆ ಸುಖವಿಲ್ಲದಿರುವುದು. ಆ ದೈತ್ಯರನ್ನು ಕೊಲ್ಲಲು ನನ್ನ ಆಯುಧವು ಉಪಯುಕ್ತವಿಲ್ಲದುದಾಗಿರುವುದು. ಏನು ಮಾಡಲಿ? ಎಲ್ಲಿಗೆ ಹೋಗಲಿ? ನನ್ನನ್ನು ರಕ್ಷಿಸುವವರು ಮತ್ತಾರು ಇಲ್ಲ. ಆದುದರಿಂದ ಪರಮೇಶ್ವರನಾದ ನಿನ್ನನ್ನು ಮರೆ ಹೊಕ್ಕಿರುವೆನು. ಹೀಗೆಂದು ಹೇಳಿ ಪರಮಾತ್ಮನಾದ ಶಿವನಿಗೆ ನಮಸ್ಕರಿಸಿ ಅವನೆದುರಿಗೆ ನಿಂತುಕೊಂಡನು.

೩೦-೩೨. ವಿಷ್ಣುವು ಹೇಳಿದ ಮಾತನ್ನು ಕೇಳಿ ಮಹೇಶ್ವರನು ತೇಜಸ್ಸಿನ ಸಮೂಹದಿಂದ ಕೂಡಿದ ತನ್ನ ಸುದರ್ಶನವೆಂಬ ಚಕ್ರವನ್ನು ವಿಷ್ಣುವಿಗೆ ಕೊಟ್ಟನು. ಮಹಾಮಹಿಮನಾದ ವಿಷ್ಣುವು ಬಲಶಾಲಿಗಳಾದ ದೈತ್ಯರನ್ನು ಆ ಚಕ್ರದಿಂದ ಶ್ರಮ

ತತ್ಪ್ರಾಪ್ಯ ಭಗವಾನ್ವಿಷ್ಣುರ್ದೈತ್ಯಾಂಸ್ತಾನ್ಬಲವತ್ತರಾನ್ ।
ಜಘಾನ ತೇನ ಚಕ್ರೇಣ ದ್ರುತಂ ಸರ್ವಾನ್ವಿನಾ ಶ್ರಮಂ ॥ ೩೧ ॥

ಜಗತ್ಸ್ವಾಸ್ಥ್ಯಂ ಪರಂ ಲೇಭೇ ಬಭೂವುಸ್ಸುಖಿನಸ್ಸುರಾಃ ।
ಸುಪ್ರೀತಃ ಸ್ವಾಯುಧಂ ಪ್ರಾಪ್ಯ ಹರಿರಾಸೀನ್ಮಹಾಸುಖೀ ॥ ೩೨ ॥

॥ ಋಷಯ ಊಚುಃ ॥

ಕಿಂ ತನ್ನಾಮಸಹಸ್ರಂ ವೈ ಕಥಯ ತ್ವಂ ಹಿ ಶಾಂಕರಂ ।
ಯೇನ ತುಷ್ಟೋ ದದೌ ಚಕ್ರಂ ಹರಯೇ ಸ ಮಹೇಶ್ವರಃ ॥ ೩೩ ॥

ತನ್ಮಾಹಾತ್ಮ್ಯಂ ಮಮ ಬ್ರೂಹಿ ಶಿವಸಂವಾದಪೂರ್ವಕಂ ।
ಕೃಪಾಲುತ್ವಂ ಚ ಶಂಭೋರ್ಹಿ ವಿಷ್ಣೂಪರಿ ಯಥಾತಥಂ ॥ ೩೪ ॥

---

ವಿಲ್ಲದೆ ಸಂಹಾರಮಾಡಿದನು. ಪ್ರಪಂಚಕ್ಕೆ ಉತ್ತಮವಾದ ಶಾಂತಿಯು ಲಭಿಸಿತು. ದೇವತೆಗಳು ಸುಖವನ್ನು ಹೊಂದಿದರು. ಹರಿಯು ಉತ್ತಮವಾದ ಆಯುಧವನ್ನು ಪಡೆದು ಸಂತೋಷದಿಂದಿದ್ದನು.

೩೩-೩೪. ಋಷಿಗಳು ಕೇಳಿದರು.—ಯಾವ ಸಹಸ್ರ ನಾಮಗಳಿಂದ ಮಹೇಶ್ವರನು ಸಂತುಷ್ಟನಾಗಿ ಹರಿಗೆ ಚಕ್ರವನ್ನು ಕೊಟ್ಟನೋ, ಆ ದಿವ್ಯಸಹಸ್ರನಾಮವಾವುದು? ಶಿವನಿಗೆ ವಿಷ್ಣುವಿನ ಮೇಲೆ ಹೇಗೆ ದಯೆಯೋ ಹಾಗೆ ನಮ್ಮ ಮೇಲೆ ನಿನ್ನ ದಯೆಯಿರುವುದು. ಆದುದರಿಂದ ಆ ಶಿವಸಹಸ್ರನಾಮವನ್ನೂ ಶಿವಸಂವಾದಪೂರ್ವಕವಾದ ಅದರ ಮಹಾತ್ಮ್ಯವನ್ನೂ ನಮಗೆ ಹೇಳಬೇಕು ಎಂದು ಪ್ರಾರ್ಥಿಸಿದರು.

॥ ವ್ಯಾಸ ಉವಾಚ ॥

ಇತಿ ತೇಷಾಂ ವಚಶ್ಶ್ರುತ್ವಾ ಮುನೀನಾಂ ಭಾವಿತಾತ್ಮನಾಂ ।
ಸ್ಮೃತ್ವಾ ಶಿವಪದಾಂಭೋಜಂ ಸೂತೋ ವಚನಮಬ್ರವೀತ್ ॥ ೩೫ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ವಿಷ್ಣುಸುದರ್ಶನಚಕ್ರಲಾಭವರ್ಣನಂ ನಾಮ
ಚತುಸ್ತ್ರಿಂಶೋಽಧ್ಯಾಯಃ



---

೩೫. ವ್ಯಾಸನು ಹೇಳಿದನು.—ಹೀಗೆಂದು ಹೇಳಿದ ಋಷಿಗಳ ಮಾತನ್ನು ಕೇಳಿ ಸೂತನು ಶಿವನ ಪಾದಕಮಲವನ್ನು ಧ್ಯಾನಮಾಡಿ ಇಂತೆಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ವಿಷ್ಣುವಿಗೆ ಸುದರ್ಶನಚಕ್ರಪ್ರಾಪ್ತಿಯ ವರ್ಣನೆಯೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಪಂಚತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

**ಶ್ರೂಯತಾಂ ಭೋ ಋಷಿಶ್ರೇಷ್ಠಾ ಯೇನ ತುಷ್ಟೋ ಮಹೇಶ್ವರಃ ।**
**ತದಹಂ ಕಥಯಾಮ್ಯದ್ಯ ಶೈವಂ ನಾಮಸಹಸ್ರಕಂ ॥ ೧ ॥**

॥ ವಿಷ್ಣುರುವಾಚ ॥

**ಶಿವೋ ಹರೋ ಮೃಡೋ ರುದ್ರಃ ಪುಷ್ಕರಃ ಪುಷ್ಪಲೋಚನಃ ।**
**ಅರ್ಥಿಗಮ್ಯಸ್ಸದಾಚಾರಶ್ಶರ್ವಶ್ಶಂಭುರ್ಮಹೇಶ್ವರಃ ॥ ೨ ॥**

---

## ಮುವತ್ತೈದನೆಯ ಅಧ್ಯಾಯ

೧. ಸೂತಮುನಿ ಇಂತೆಂದನು.—ಎಲೈ ಋಷಿಗಳಿರಾ, ಈಗ ನಾನು ಶಿವಸಹಸ್ರನಾಮವನ್ನು ನಿಮಗೆ ಹೇಳುವೆನು. ಅದನ್ನು ಕೇಳುವುದರಿಂದ ಮಹೇಶ್ವರನು ಪ್ರಸನ್ನನಾಗಿ ಸಂತೋಷಗೊಳ್ಳುವನು.

೨. **ಶಿವಃ**—ಜಗತ್ತಿಗೆ ಮಂಗಳವನ್ನುಂಟುಮಾಡುವವನು ಅಥವಾ ತ್ರಿಗುಣರಹಿತನು. **ಹರಃ**—ಸೃಷ್ಟಿಸಿದ ಜಗತ್ತನ್ನು ಕಡೆಯಲ್ಲಿ ಸಂಹಾರಮಾಡುವವನು **ಮೃಡಃ** ಸುಖದಾಯಕನು. **ರುದ್ರಃ**—ಜಗತ್ಸಂಹಾರಕಾಲದಲ್ಲಿ ಪ್ರಜೆಗಳನ್ನು ರೋದನಮಾಡುವಂತೆ ದುಃಖವನ್ನುಂಟುಮಾಡುವವನು. ಅಥವಾ ಜನಗಳಿಗೆ ಒದಗುವ ದುಃಖವನ್ನು

**ಚಂದ್ರಾಪೀಡಶ್ಚಂದ್ರಮೌಳಿರ್ವಿಶ್ವಂ ವಿಶ್ವಂಭರೇಶ್ವರಃ ।**
**ವೇದಾಂತಸಾರಸಂದೋಹಃ ಕಪಾಲೀ ನೀಲಲೋಹಿತಃ** ॥ ೩ ॥

**ಧ್ಯಾನಾಧಾರೋಽಪರಿಚ್ಛೇದ್ಯೋ ಗೌರೀಭರ್ತಾ ಗಣೇಶ್ವರಃ ।**
**ಅಷ್ಟಮೂರ್ತಿರ್ವಿಶ್ವಮೂರ್ತಿಸ್ತ್ರಿವರ್ಗಸ್ಸರ್ಗಸಾಧನಃ** ॥ ೪ ॥

---

ಅಥವಾ ರೋದನವನ್ನು ದೂರಮಾಡುವವನು. **ಪುಷ್ಕರಃ**—ಪುಷ್ಟಿಯನ್ನುಂಟುಮಾಡುವವನು. **ಪುಷ್ಪಲೋಚನಃ**—ಪುಷ್ಪದಂತೆ ಸುಂದರವಾದ ನೇತ್ರಗಳುಳ್ಳವನು. **ಅರ್ಥಿಗಮ್ಯಃ**—ಸ್ವರ್ಗಮೋಕ್ಷಾದಿ ಕಾಮುಗಳನ್ನು ಅಪೇಕ್ಷಿಸುವವರಿಂದ ಉಪಾಸಿಸಲ್ಪಡುವವನು. **ಸದಾಚಾರಃ**—ಸತ್ಪುರುಷರಂತೆ ಆಚಾರವುಳ್ಳವನು. **ಶರ್ವಃ**—ಸಮಸ್ತ ಪ್ರಜೆಗಳಿಗೂ ಅಂತಕನಾದವನು. **ಶಂಭುಃ**—ಭಕ್ತರಿಗೆ ಸುಖದಾಯಕನು. **ಮಹೇಶ್ವರಃ**—ಪರಮೇಶ್ವರನು ಎಂದರೆ ಎಲ್ಲಾ ದೇವತೆಗಳಿಗಿಂತಲೂ ಅಧಿಕನಾದವನು. " ಯಃ ಪರಃ ಸ ಮಹೇಶ್ವರಃ " ಎಂದು ಶ್ರುತಿಯು ಹೇಳುವುದು.

೩. **ಚಂದ್ರಾಪೀಡಃ**—ಶಿರಸ್ಸಿನಲ್ಲಿ ಚಂದ್ರನನ್ನು ಆಭರಣವನ್ನಾಗಿ ಧರಿಸಿರುವವನು. **ಚಂದ್ರಮೌಳಿಃ**—ಶಿರಸ್ಸಿನಲ್ಲಿ ಚಂದ್ರನನ್ನಿಟ್ಟುಕೊಂಡಿರುವವನು. **ವಿಶ್ವಂ** ಸಮಸ್ತಚರಾಚರಪ್ರಪಂಚಸ್ವರೂಪನು ಎಂದರೆ ಪರಬ್ರಹ್ಮಸ್ವರೂಪನು. **ವಿಶ್ವಂಭರೇಶ್ವರಃ**—ಸಮಸ್ತ ಪ್ರಪಂಚವನ್ನು ಪೋಷಿಸುವವನು. ಮತ್ತು ಪ್ರಪಂಚಕ್ಕೂ ಒಡೆಯನು. **ವೇದಾಂತಸಾರಸಂದೋಹಃ**—ವೇದಾಂತಸಾರವನ್ನು ತಿಳಿದಿರುವವನು. **ಕಪಾಲೀ**—ಕಪಾಲವನ್ನು ಧರಿಸಿರುವವನು. **ನೀಲಲೋಹಿತಃ**—ಕಪ್ಪಾದ ಜಟೆಯುಳ್ಳವನು.

೪. **ಧ್ಯಾನಾಧಾರೋಽಪರಿಚ್ಛೇದ್ಯಃ**—ಧ್ಯಾನಕ್ಕೆ ವಿಷಯನಾದವನು ಮತ್ತು ದೇಶಕಾಲಪರಿಚ್ಛೇದಶೂನ್ಯನು. **ಗೌರೀಭರ್ತಾ** ಪಾರ್ವತೀಪತಿಯು. **ಗಣೇಶ್ವರಃ**—ಪ್ರಮಥಗಣಗಳಿಗೆ ಸ್ವಾಮಿಯು. **ಅಷ್ಟಮೂರ್ತಿಃ**—ಭೂಮಿ, ಜಲ, ಅಗ್ನಿ, ಪವನ, ಆಕಾಶ ಕ್ಷೇತ್ರಜ್ಞ, ಸೂರ್ಯ, ಚಂದ್ರ ಇವುಗಳ ಸ್ವರೂಪನಾದ, ಶರ್ವ, ಭವ, ರುದ್ರ, ಉಗ್ರ ಭೀಮ, ಪಶುಪತಿ, ಈಶಾನ, ಮಹಾದೇವ ಎಂಬ ಅಷ್ಟಮೂರ್ತಿಸ್ವರೂಪನಾದವನು. **ವಿಶ್ವಮೂರ್ತಿಃ**—ಜಗತ್ತೇ ಶರೀರವಾಗಿ ಉಳ್ಳವನು. **ತ್ರಿವರ್ಗಸ್ಸರ್ಗಸಾಧನಃ**—ಧರ್ಮ, ಅರ್ಥ, ಕಾಮ, ಎಂಬ ಮೂರುಪುರುಷಾರ್ಥಗಳನ್ನು ಕೊಡುವವನು.

**ಜ್ಞಾನಗಮ್ಯೋ ದೃಢಪ್ರಜ್ಞೋ ದೇವದೇವಸ್ತ್ರಿಲೋಚನಃ ।**
**ವಾಮದೇವೋ ಮಹಾದೇವೋ ಪಟುಃ ಪರಿವೃಢೋ ದೃಢಃ ॥ ೫ ॥**

**ವಿಶ್ವರೂಪೋ ವಿರೂಪಾಕ್ಷೋ ವಾಗೀಶಸ್ಸುರಸತ್ತಮಃ ।**
**ಸರ್ವಪ್ರಮಾಣಸಂವಾದೀ ವೃಷಾಂಕೋ ವೃಷವಾಹನಃ ॥ ೬ ॥**

---

೫. **ಜ್ಞಾನಗಮ್ಯಃ**—ವೇದಾಂತಜನ್ಯಜ್ಞಾನದಿಂದ ಮಾತ್ರವೇ ತಿಳಿಯಲ್ಪಡ ತಕ್ಕವನು. **ದೃಢಪ್ರಜ್ಞಃ**—ನಿತ್ಯಜ್ಞಾನಯುಕ್ತನು. ಎಂದರೆ ಅವನ ಜ್ಞಾನಕ್ಕೆ ಯಾವಾಗಲೂ ಸಂಕೋಚಾದಿನ್ಯೂನತೆಗಳಿಲ್ಲ. **ದೇವದೇವಃ**—ದೇವತೆಗಳಿಗೂ ದೇವ ನಾದವನು ಎಂದರೆ ಸ್ವಾಮಿಯಾದವನು. ಅಥವಾ ಅತ್ಯಂತ ತೇಜಸ್ಸಿನಿಂದ ಪ್ರಕಾಶಿ ಸುತ್ತಿರುವವನು. **ತ್ರಿಲೋಚನಃ**—ಸೋಮಸೂರ್ಯಾಗ್ನಿಗಳೆಂಬ ಮೂರು ನೇತ್ರಗಳು ಳ್ಳವನು ಅಥವಾ ಸತ್ತ್ವರಜಸ್ತಮಗಳೆಂಬ ಮೂರುಗುಣಗಳಿಂದ ಯುಕ್ತನಾದವನು· ಅಥವಾ ಯಗ್ಯಜುಸ್ಸಾಮಗಳೆಂಬ ಮೂರುವೇದಗಳಿಂದ ತಿಳಿಯಲ್ಪಡುವವನು ಅಥವಾ ಅಕಾರ, ಉಕಾರ, ಮಕಾರಗಳೆಂಬ ಮೂರುವರ್ಣಗಳಿಂದ ಕೂಡಿದ ಓಂ ಎಂಬ ಪ್ರಣ ವಮಂತ್ರಸ್ವರೂಪನು, ಅಥವಾ ಧ್ಯಾನ, ಧ್ಯಾತೃ ಧ್ಯೇಯಸ್ವರೂಪನಾದವನು. **ವಾಮ ದೇವಃ**—ದುಷ್ಟರ ಮದವನ್ನು ಧ್ವಂಸಮಾಡುವವನು. ಅಥವಾ ಲೋಕಕ್ಕೆ ವಿಪರೀತ ವಾಗಿರುವವನು ಎಂದರೆ ಸುಂದರಾಕಾರ ಉಳ್ಳವನು. ಅಥವಾ ಕರ್ಮಗಳಿಗೆ ಫಲವಿ ಭಾಗಮಾಡಿ ಕೊಡತಕ್ಕವನು. **ಮಹಾದೇವಃ**—ಬ್ರಹ್ಮಾದಿ ದೇವತೆಗಳಿಂದಲೂ ಪೂಜಿಸಲ್ಪಡುವವನು. **ಪಟುಃ**—ಭಕ್ತರ ದುಃಖವನ್ನು ನಾಶಮಾಡುವುದರಲ್ಲೂ ಅವ ರಿಗೆ ಕಲ್ಯಾಣವನ್ನುಂಟುಮಾಡುವುದರಲ್ಲಿಯೂ ಚತುರನು. **ಪರಿವೃಢಃ**—ಜಗತ್ತಿಗೆ ಸ್ವಾಮಿಯು **ದೃಢಃ**—ಬಲವುಳ್ಳವನು.

೬. **ವಿಶ್ವರೂಪಃ**—ಸರ್ವಜಗತ್ಸ್ವರೂಪನು. **ವಿರೂಪಾಕ್ಷಃ**—ವಿಷಮನೇತ್ರನು ಎಂದರೆ ಮೂರು ಕಣ್ಣುಳ್ಳವನು. **ವಾಗೀಶಃ**—ವೇದವಾಕ್ಯಗಳಿಗೆ ಪತಿಯು. **ಸುರ ಸತ್ತಮಃ**—ದೇವತೆಗಳಲ್ಲಿ ಶ್ರೇಷ್ಠನಾದವನು. **ಸರ್ವಪ್ರಮಾಣಸಂವಾದೀ**—ಸರ್ವ ವೇದಗಳಿಗೆ ಪ್ರಮಾಣಭೂತನು. ಗ್ರಂಥಗಳಿಗೆಲ್ಲಾ ವೇದವು ಹೇಗೆ ಪ್ರಮಾಣವೋ ಹಾಗೆ ಸರ್ವವಿಷಯಗಳಿಗೂ ಈಶ್ವರನೇ ಪ್ರಮಾಣವಾಗಿರುವನು. ಎಂದರೆ ಅವನಿ ಗಿಂತ ಅಧಿಕವಾದವಸ್ತುವು ಯಾವುದೂ ಇಲ್ಲ. **ವೃಷಾಂಕಃ**—ವೃಷಭವೇ ಚಿಹ್ನ ವಾಗಿ ಉಳ್ಳವನು ಅಥವಾ ಧರ್ಮಯುಕ್ತನು. **ವೃಷವಾಹನಃ**—ನಂದಿವಾಹನನು.

**ಈಶಃ ಪಿನಾಕೀ ಖಟ್ವಾಂಗೀ ಚಿತ್ರವೇಷಶ್ಚಿರಂತನಃ ।**
**ತಮೋಹರೋ ಮಹಾಯೋಗೀ ಗೋಪ್ತಾ ಬ್ರಹ್ಮಾಂಡಹೃಜ್ಜಟೀ ॥ ೭ ॥**

**ಕಾಲಕಾಲಃ ಕೃತ್ತಿವಾಸಾಃ ಸುಭಗಃ ಪ್ರಣವಾತ್ಮಕಃ ।**
**ಉನ್ನಧ್ರಃ ಪುರುಷೋ ಜುಷ್ಯೋ ದುರ್ವಾಸಾಃ ಪುರಶಾಸನಃ ॥ ೮ ॥**

---

೭. **ಈಶಃ**—ಸರ್ವಜಗದೊಡೆಯನು. **ಪಿನಾಕೀ**—ಪಿನಾಕವೆಂಬ ಧನುಸ್ಸನ್ನು ಧರಿಸಿರುವವನು. **ಖಟ್ವಾಂಗೀ**—ಖಟ್ವಾಂಗಾಯುಧಧಾರಿಯು. **ಚಿತ್ರವೇಷಃ**—ಕಾರ್ಯಾನುಸಾರ ಅನೇಕಪ್ರಕಾರವಾದ ವೇಷವನ್ನು ಧರಿಸುವವನು. **ಚಿರಂತನಃ**—ಭೂತಭವಿಷದ್ವರ್ತಮಾನಗಳೆಂಬ ತ್ರಿಕಾಲಾಬಾಧ್ಯನು. **ತಮೋಹರಃ**—ಅವಿದ್ಯವನ್ನು ನಾಶಮಾಡುವವನು. **ಮಹಾಯೋಗೀ**—ಅಷ್ಟಾಂಗಯೋಗಸ್ವರೂಪವನ್ನು ತಿಳಿದವನು. **ಗೋಪ್ತಾ**—ಜಗದ್ರಕ್ಷಕನು. **ಬ್ರಹ್ಮಾಂಡಹೃತ್**—ಚರಾಚರಾತ್ಮಕವಾದ ಸಮಸ್ತ ಪ್ರಪಂಚವನ್ನೂ ಅಂತ್ಯದಲ್ಲಿ ನಾಶಮಾಡುವವನು. **ಜಟೀ**—ಜಟಾಧಾರಿಯು.

೮. **ಕಾಲಕಾಲಃ**—ಮೃತ್ಯು ಅಥವಾ ಯಮನಿಗೂ ಮೃತ್ಯುಸ್ವರೂಪನು. **ಕೃತ್ತಿವಾಸಾಃ**—ಚರ್ಮವನ್ನೇ ವಸ್ತ್ರವನ್ನಾಗಿ ಧರಿಸಿರುವವನು. "ಪಿನಾಕಹಸ್ತಃ ಕೃತ್ತಿವಾಸಾಃ" ಎಂದು ಶ್ರುತಿಯು ಹೇಳುವುದು. **ಸುಭಗಃ**—ಐಶ್ವರ್ಯವುಳ್ಳವನು. **ಪ್ರಣವಾತ್ಮಕಃ**—ಓಂಕಾರಸ್ವರೂಪನು. "ಓಮಿತ್ಯೇಕಾಕ್ಷರಂ ಬ್ರಹ್ಮ" ಎಂದು ಶ್ರುತಿಯು ಸಾರುವುದು. **ಉನ್ನಧ್ರಃ**—ಪಾಪಿಗಳಿಗೆ ತೊಂದರೆಕೊಡುವವನು. **ಪುರುಷಃ**—ಶರೀರದಲ್ಲಿ ಚೈತನ್ಯಸ್ವರೂಪದಿಂದ ವ್ಯಾಪಿಸಿರುವವನು ಅಥವಾ ಸೃಷ್ಟ್ಯರ್ಥವಾಗಿ ಪ್ರಕೃತಿ ಪುರುಷರೆಂದು ವಿಭಾಗವನ್ನು ಹೊಂದಿ ಅವುಗಳ ಪೈಕಿ ಚೈತನ್ಯಸ್ವರೂಪನೆಂದು ಹೇಳಲ್ಪಡುವ ಪುರುಷನು. **ಜುಷ್ಯಃ**—ಮನೋವಾಕ್ಕಾಯಗಳಿಂದ ಸೇವಿಸಲ್ಪಡುವವನು. **ದುರ್ವಾಸಾಃ**—ವಲ್ಕಲಾದಿವಸ್ತ್ರವನ್ನು ಧರಿಸಿದವನು ಅಥವಾ ಅತ್ರಿಪುತ್ರನಾಗಿ ದುರ್ವಾಸನೆಂಬ ಹೆಸರಿನಿಂದ ಅವತರಿಸಿದವನು. **ಪುರಶಾಸನಃ**—ತ್ರಿಪುರಗಳನ್ನ ನಾಶಮಾಡಿದವನು.

**ದಿವ್ಯಾಯುಧಃ ಸ್ಕಂದಗುರುಃ ಪರಮೇಷ್ಠೀ ಪರಾತ್ಪರಃ ।**
**ಅನಾದಿಮಧ್ಯನಿಧನೋ ಗಿರೀಶೋ ಗಿರಿಜಾಧವಃ ॥ ೯ ॥**

**ಕುಬೇರಬಂಧುಶ್ರೀಕಂಠೋ ಲೋಕವರ್ಣೋತ್ತಮೋ ಮೃದುಃ ।**
**ಸಮಾಧಿವೇದ್ಯಃ ಕೋದಂಡೀ ನೀಲಕಂಠಃ ಪರಶ್ವಧೀ ೧೦ ॥**

**ವಿಶಾಲಾಕ್ಷೋ ಮೃಗವ್ಯಾಧಸ್ಸುರೇಶಸ್ಸೂರ್ಯತಾಪನಃ ।**
**ಧರ್ಮಾಧ್ಯಕ್ಷಃ ಕ್ಷಮಾಕ್ಷೇತ್ರಂ ಭಗವಾನ್ಭಗನೇತ್ರಭಿತ್ ॥ ೧೧ ॥**

---

೯. **ದಿವ್ಯಾಯುಧಃ**—ಪಿನಾಕವೇ ಮೊದಲಾದ ದಿವ್ಯಾಯುಧಗಳನ್ನು ಧರಿಸಿರುವವನು. **ಸ್ಕಂದಗುರುಃ**—ಷಡಾನನ ತಂದೆಯು. **ಪರಮೇಷ್ಠೀ**—ತನ್ನ ಮಹಿಮೆಯಿಂದ ಆಕಾಶಾದಿ ಸಮಸ್ತ ವಿಶ್ವವನ್ನೂ ವ್ಯಾಪಿಸಿ ಇರುವವನು. **ಪರಾತ್ಪರಃ**—ವ್ಯಕ್ತವಾದ ಸಮಸ್ತ ದೃಶ್ಯಪ್ರಪಂಚಕ್ಕಿಂತಲೂ ಬೇರೆಯಾದವನು. ಉತ್ತಮವಸ್ತುಗಳಲ್ಲೆಲ್ಲಾ ಉತ್ತಮನೆನಿಸಿದವನು. **ಅನಾದಿಮಧ್ಯನಿಧನಃ**—ಕಾಲದೇಶಪರಿಚ್ಛಿನ್ನನು. ಎಂದರೆ ಆದ್ಯಂತರಹಿತನು, **ಗಿರೀಶಃ**—ಕೈಲಾಸಪರ್ವತಕ್ಕೆ ಸ್ವಾಮಿಯು· **ಗಿರಿಜಾಧವಃ**—ಪಾರ್ವತೀಪತಿಯು.

೧೦. **ಕುಬೇರಬಂಧುಃ**—ಕುಬೇರನ ಸ್ನೇಹಿತನು ಅಥವಾ ಕುಬೇರನನ್ನು ಅನುಗ್ರಹಿಸಿದವನು. **ಶ್ರೀಕಂಠಃ**—ಶೋಭಾಯಮಾನವಾದ ಕಂಠವುಳ್ಳವನು. **ಲೋಕವರ್ಣೋತ್ತಮಃ**—ಲೋಕದ ಬ್ರಾಹ್ಮಣಾದಿ ವರ್ಣಗಳಿಗೆ ಶ್ರೇಷ್ಠನು. **ಮೃದುಃ**—ಭಕ್ತರವಿಷಯದಲ್ಲಿ ಸೌಮ್ಯರೂಪದಿಂದಿರುವವನು. **ಸಮಾಧಿವೇದ್ಯಃ**—ಯೋಗಾಭ್ಯಾಸಕಾಲದಲ್ಲಿ ಸಮಾಧಿಸ್ಥಿತಿಯಲ್ಲಿ ತಿಳಿಯಲ್ಪಡುವವನು. ಸಮಾಧಿಗೆ ಮುಖ್ಯವಿಷಯನಾದವನು. **ಕೋದಂಡೀ**—ಧನುರ್ಧಾರಿಯು. **ನೀಲಕಂಠಃ**—ಅಮೃತಮಥನಕಾಲದಲ್ಲಿ ವಿಷಪಾನಮಾಡಿದ್ದರಿಂದ ಕತ್ತಿನಲ್ಲಿ ಕೃಷ್ಣವರ್ಣವುಳ್ಳವನು. **ಪರಶ್ವಧೀ**—ಭಕ್ತರಿಗೆ ಸದ್ಬುದ್ಧಿಯನ್ನು ಕೊಡುವವನು.

೧೧. **ವಿಶಾಲಾಕ್ಷಃ**—ವಿಶಾಲವಾದ ನೇತ್ರಗಳುಳ್ಳವನು. **ಮೃಗವ್ಯಾಧಃ**—ಭಕ್ತನಾದ ಅರ್ಜುನನಿಗೆ ಅನುಗ್ರಹಮಾಡುವುದಕ್ಕಾಗಿ ವ್ಯಾಧರೂಪವನ್ನು ಕೈಗೊಂಡವನು. **ಸುರೇಶಃ**—ದೇವತೆಗಳಿಗೆ ಸ್ವಾಮಿಯು. **ಸೂರ್ಯತಾಪನಃ**—ದುರ್ಜನರಾದವರಿಗೆ ಸೂರ್ಯನಂತೆ ತಾಪವನ್ನುಂಟುಮಾಡುವವನು ಅಥವಾ ಸೂರ್ಯನಿಗೆ ತಾಪವನ್ನುಂಟುಮಾಡುವವನು. “ಭೀಷೋದೇತಿ ಸೂರ್ಯಃ” ಎಂದು ಶ್ರುತಿಯು.

**ಉಗ್ರಃ ಪಶುಪತಿಸ್ತಾರ್ಕ್ಷ್ಯಃ ಪ್ರಿಯಭಕ್ತಃ ಪರಂತಪಃ ।**
**ದಾತಾ ದಯಾಕರೋ ದಕ್ಷಃ ಕಪರ್ದೀ ಕಾಮಶಾಸನಃ ॥ ೧೨ ॥**

**ಶ್ಮಶಾನನಿಲಯಸ್ಸೂಕ್ಷ್ಮಶ್ಶ್ಮಶಾನಸ್ಥೋ ಮಹೇಶ್ವರಃ ।**
**ಲೋಕಕರ್ತಾ ಮೃಗಪತಿರ್ಮಹಾಕರ್ತಾ ಮಹೌಷಧಿಃ ॥ ೧೩ ॥**

---

**ಧರ್ಮಾಧ್ಯಕ್ಷಃ**—ವರ್ಣಾಶ್ರಮಾದಿಧರ್ಮಗಳಿಗೆ ನಿಯಂತೃವು. **ಕ್ಷಮಾಕ್ಷೇತ್ರಂ**—ಕ್ಷಮಾಗುಣಕ್ಕೆ ಉತ್ಪತ್ತಿಸ್ಥಾನನು. **ಭಗವಾನ್**—ಷಡ್ಗುಣೈಶ್ವರ್ಯಸಂಪನ್ನನು. **ಭಗನೇತ್ರಭಿತ್**—ದಕ್ಷಯಜ್ಞದಲ್ಲಿ ಭಗದೇವನ ನೇತ್ರವನ್ನು ನಾಶಮಾಡಿದವನು.

೧೨. **ಉಗ್ರಃ**—ಸರ್ವಸಂಹಾರಕಾರಣನಾದುದರಿಂದ ಕ್ರೂರಸ್ವಭಾವವುಳ್ಳವನೆನಿಸಿದವನು. **ಪಶುಪತಿಃ**—ಪಶು ಎಂದರೆ ಜೀವರುಗಳಿಗೆ ಪಾಲಕನು ಅಥವಾ ಸ್ವಾಮಿಯು. "ತಸ್ಮಾದ್ರುದ್ರಃ ಪಶೂನಾಮಧಿಪತಿಃ" ಎಂದು ಶ್ರುತಿಯು. **ತಾರ್ಕ್ಷ್ಯಃ**—ಕಶ್ಯಪರೂಪನು. **ಪ್ರಿಯಭಕ್ತಃ**—ಭಕ್ತರಿಗೆ ಪ್ರಿಯವನ್ನುಂಟುಮಾಡುವವನು. **ಪರಂತಪಃ**—ಶತ್ರುಗಳಿಗೆ ತಾಪವನ್ನು ಎಂದರೆ ಬಾಧೆಯನ್ನುಂಟುಮಾಡುವವನು. **ದಾತಾ**—ಭಕ್ತರಿಗೆ ಐಶ್ವರ್ಯಾದಿ ಇಷ್ಟಾರ್ಥಗಳನ್ನು ಕೊಡುವವನು. **ದಯಾಕರಃ**—ಭಕ್ತರ ಉದ್ಧಾರವಿಚಾರದಲ್ಲಿ ದಯಾನಿಧಿಯು. **ದಕ್ಷಃ**—ಜಗತ್ತಿನ ಸೃಷ್ಟಿಸ್ಥಿತಿಸಂಹಾರಾದಿಕರ್ಮಗಳಲ್ಲಿ ಸಮರ್ಥನು. **ಕಪರ್ದೀ**—ಧನುರ್ಧಾರಿಯು. **ಕಾಮಶಾಸನಃ**—ಕಾಮ ಅಥವಾ ಮನ್ಮಥನನ್ನು ಸಂಹಾರಮಾಡಿದವನು.

೧೩. **ಶ್ಮಶಾನನಿಲಯಃ**—ಶ್ಮಶಾನದಲ್ಲಿ ವಾಸಮಾಡುವವನು. **ಸೂಕ್ಷ್ಮಃ**—ಸೂಕ್ಷ್ಮರೂಪದಿಂದಿರುವವನು. "ಅಣೋರಣೀಯಾನ್" ಎಂದು ಶ್ರುತಿಯು. **ಶ್ಮಶಾನಸ್ಥಃ**—ಶ್ಮಶಾನಭೂಮಿಯಲ್ಲಿರುವವನು. **ಮಹೇಶ್ವರಃ**—ಸರ್ವರಿಗೂ ಸ್ವಾಮಿಯು. **ಲೋಕಕರ್ತಾ**—ಸರ್ವಲೋಕಗಳ ಉತ್ಪಾದಕನು. **ಮೃಗಪತಿಃ**—ಮೃಗ ಎಂದರೆ ಜೀವರುಗಳಿಗೆ ರಕ್ಷಕನು. ಎಂದರೆ ಪಶುಪತಿಯು. **ಮಹಾಕರ್ತಾ**—ಪಂಚಮಹಾಭೂತಗಳ ಸೃಷ್ಟಿಕರ್ತಾ ಅಥವಾ ಪ್ರಪಂಚದ ಸೃಷ್ಟಿಕರ್ತನು. "ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ" ಎಂದು ಶ್ರುತಿಯು. **ಮಹೌಷಧಿಃ**—ವ್ರೀಹಿಯವಾದಿ ಓಷಧಿಸ್ವರೂಪನು ಅಥವಾ ಸಂಸಾರವೆಂಬ ರೋಗಕ್ಕೆ ಓಷಧಿಸ್ವರೂಪನು. ಎಂದರೆ ಜೀವರುಗಳ ಸಂಸಾರಬಂಧನಗಳನ್ನು ನಾಶಮಾಡಿ ಮುಕ್ತಿಯನ್ನು ಕೊಡುವವನು.

**ಸೋಮಪೋಽಮೃತಪಸ್ಸೌಮ್ಯೋ ಮಹಾತೇಜೋ ಮಹಾದ್ಯುತಿಃ ।**
**ತೇಜೋಮಯೋಽಮೃತಮಯೋಽನ್ನಮಯಶ್ಚ ಸುಧಾಪತಿಃ ॥ ೧೪ ॥**

**ಉತ್ತರೋ ಗೋಪತಿರ್ಗೋಪ್ತಾ ಜ್ಞಾನಗಮ್ಯಃ ಪುರಾತನಃ ।**
**ನೀತಿಸ್ಸುನೀತಿಶ್ಶುದ್ಧಾತ್ಮಾ ಸೋಮಸ್ಸೋಮರತಸ್ಸುಖೀ ॥ ೧೫ ॥**

---

೧೪. **ಸೋಮಪಃ**—ಯಜ್ಞದಲ್ಲಿ ದೇವತಾರೂಪದಿಂದ ಅಥವಾ ಯಜಮಾನರೂಪದಿಂದ ಸೋಮಪಾನವನ್ನು ಮಾಡುವವನು. **ಅಮೃತಪಃ**—ಆತ್ಮಧ್ಯಾನವೆಂಬ ಅಮೃತಪಾನದಲ್ಲಿ ಆಸಕ್ತನಾದನು. **ಸೌಮ್ಯಃ**—ಭಕ್ತರ ವಿಷಯದಲ್ಲಿ ಸೌಮ್ಯರೂಪದಿಂದಿರುವವನು. **ಮಹಾತೇಜಃ**—ಸೂರ್ಯನಂತೆ ಮಹಾತೇಜಸ್ಸಿನಿಂದ ಬೆಳಗುವವನು ಅಥವಾ ಇವನ ತೇಜಸ್ಸಿನಿಂದ ಸೂರ್ಯನೇ ಮೊದಲಾದವರು ಪ್ರಕಾಶಿಸುವರು. “ಯಸ್ಯ ಭಾಸಾ ಸರ್ವಮಿದಂ ವಿಭಾತಿ” ಎಂದು ಶ್ರುತಿಯಿರುವುದು. **ಮಹಾದ್ಯುತಿಃ**—ಸ್ವಯಂ ಪ್ರಕಾಶಸ್ವರೂಪನು. **ತೇಜೋಮಯಃ**—ತೇಜೋಯುಕ್ತನು ಅಥವಾ ಪ್ರಪಂಚವನ್ನು ತನ್ನ ತೇಜಸ್ಸಿನಿಂದ ಪ್ರಕಾಶಪಡಿಸುವವನು. **ಅಮೃತಮಯಃ**—ಮರಣರಹಿತನು ಅಥವಾ ಜಲಮಯನು. “ಅಮೃತಂ ವಾ ಆಪಃ” ಎಂದು ಶ್ರುತಿಯು. ಅಷ್ಟಮೂರ್ತಿಗಳಲ್ಲಿ ಜಲಸ್ವರೂಪನು ಅಥವಾ ಅಮೃತವೆಂದರೆ ಜರಾಮರಣರಹಿತವಾದ ಮೋಕ್ಷಾನಂದಮಯಸ್ವರೂಪನು. **ಅನ್ನಮಯಃ**—ಅನ್ನ ಅಥವಾ ಆಹಾರಸ್ವರೂಪನು. “ಅನ್ನಂ ಬ್ರಹ್ಮೇತಿ ವ್ಯಜಾನಾತ್” ಎಂದು ಶ್ರುತಿಯು ಹೇಳುವುದು. **ಸುಧಾಪತಿಃ**—ಅಮೃತಕ್ಕೆ ರಕ್ಷಕನು ಅಥವಾ ಅಮೃತವೆಂದು ಕರೆಯಲ್ಪಡುವ ಮೋಕ್ಷವನ್ನು ಕೊಡುವವನು.

೧೫. **ಉತ್ತರಃ**—ಜನ್ಮಮರಣಾದಿಸಂಸಾರಸಾಗರವನ್ನು ದಾಟಿಸುವವನು. “ವಿಶ್ವಸ್ಮಾದಿಂದ್ರ ಉತ್ತರಃ” ಎಂದು ಶ್ರುತಿಯು. **ಗೋಪತಿಃ**—ಸ್ವರ್ಗ ಅಥವಾ ಪೃಥ್ವೀ ಅಥವಾ ಪಶು ಅಥವಾ ವಾಕ್ ಅಥವಾ ಜಲ ಇವಕ್ಕೆ ಸ್ವಾಮಿಯು. **ಗೋಪ್ತಾ**—ಸರ್ವಪ್ರಾಣಿಗಳನ್ನು ಕಾಪಾಡುವವನು. **ಜ್ಞಾನಗಮ್ಯಃ**—ಕರ್ಮಮಾರ್ಗದಿಂದ ಇವನನ್ನು ತಿಳಿಯಲು ಸಾಧ್ಯವಿಲ್ಲ. ಆದರೆ ಭಕ್ತಿಜ್ಞಾನವೈರಾಗ್ಯಗಳಿಂದ ಚಿತ್ತಶುದ್ಧಿಯುಂಟಾಗಿ ಜನಿಸುವ ಶುದ್ಧಜ್ಞಾನದಿಂದ ಮಾತ್ರ ತಿಳಿಯಲ್ಪಡುವವನು. **ಪುರಾತನಃ** ಕಾಲಾಪರಿಚ್ಛಿನ್ನನು. **ನೀತಿಃ**—ದಂಡಯೋಗ್ಯರಿಗೆ ಶಿಕ್ಷೆಮಾಡುವ ಮತ್ತು ಸಜ್ಜನರಿಗೆ ಅನುಗ್ರಹಮಾಡುವ ನೀತಿಯುಳ್ಳವನು. **ಸುನೀತಿಃ**—ಸುಂದರವಾದ ನೀತಿ ಎಂದರೆ ಮೋಕ್ಷಾದಿಸುಖಗಳನ್ನು ಭಕ್ತರಿಗೆ ಅನುಗ್ರಹಿಸುವವನು ಅಥವಾ ಸಜ್ಜನರಿಗೆ

**ಅಜಾತಶತ್ರುರಾಲೋಕಸ್ಸಂಭಾವ್ಯೋ ಹವ್ಯವಾಹನಃ ।**
**ಲೋಕಕರೋ ವೇದಕರಸ್ಸೂತ್ರಕಾರಸ್ಸನಾತನಃ ॥ ೧೬ ॥**

**ಮಹರ್ಷಿಃ ಕಪಿಲಾಚಾರ್ಯೋ ವಿಶ್ವದೀಪ್ತಿಸ್ತ್ರಿಲೋಚನಃ ।**
**ಪಿನಾಕಪಾಣಿರ್ಭೂದೇವಸ್ಸ್ವಸ್ತಿದಸ್ಸುಕೃತಸ್ಸುಧೀಃ ॥ ೧೭ ॥**

---

ಮಾರ್ಗದರ್ಶಕನು. **ಶುದ್ಧಾತ್ಮಾ**—ಶುದ್ಧಚಿತ್ತನು, ಪರಮಾತ್ಮನು, ಮೋಹಾದಿ ದೋಷರಹಿತನು. **ಸೋಮಃ**—ಚಂದ್ರನ ಸಂಬಂಧವಾದ ಓಷಧಿಗಳಿಗೆ ಒಡೆಯನು "ಓಷಧೀನಾಂ ಪತಯೇ" ಎಂದು ಶ್ರುತಿಯು. ಅಥವಾ ಉಮಾದೇವಿಯಿಂದ ಸಹಿತ ನಾದವನು. **ಸೋಮರತಃ**—ಚಂದ್ರ, ಅಮೃತ ಅಥವಾ ಸೋಮರಸದಲ್ಲಿ ಪ್ರೀತಿ ಯುಳ್ಳವನು. **ಸುಖೀ**—ಆನಂದಮಯನು. "ಆನಂದೋ ಬ್ರಹ್ಮೇತಿ ವ್ಯಜಾನಾತ್" ಎಂದು ಶ್ರುತಿಯು ಅಥವಾ ಭಕ್ತರಿಗೆ ಆನಂದದಾಯಕನು. "ಏಷ ಹ್ಯೇವಾನಂದಯಾತಿ" ಎಂದು ಶ್ರುತಿಯು.

೧೬. **ಅಜಾತಶತ್ರುಃ**—ಶತ್ರುರಹಿತನಾದವನು. ಯಾರಲ್ಲಿಯೂ ಪಕ್ಷಪಾತ ವಿಲ್ಲದೆ ಸರ್ವಪ್ರಾಣಿಗಳಲ್ಲಿಯೂ ಸರ್ವಸಮದೃಷ್ಟಿಯಿಂದ ವರ್ತಿಸುವುದರಿಂದ ಪರ ಮೇಶ್ವರನಿಗೆಶತ್ರುವಾದವರು ಯಾರೂ ಇರುವುದಿಲ್ಲ. **ಆಲೋಕಃ**—ಸ್ವಪ್ರಕಾಶ ಸ್ವರೂಪನು. **ಸಂಭಾವ್ಯಃ**—ದೇವಾಸುರ ಮಾನುಷಾದಿಸಮಸ್ತರಿಂದಲೂ ಗೌರವಿ ಸಲ್ಪಡುವವನು. **ಹವ್ಯವಾಹನಃ**—ಅಗ್ನಿಸ್ವರೂಪನು. ಅಗ್ನಿಯಲ್ಲಿ ಹೋಮ ಮಾಡಿದ ಹವಿಸ್ಸು ದೇವತೆಗಳನ್ನು ಸೇರುವುದರಿಂದ ಅಗ್ನಿಗೆ ಹವ್ಯವಾಹನನೆಂದು ಹೆಸರು. ಅದರಂತೆ ಈಶ್ವರಪೂಜೆಯಿಂದ ಸಮಸ್ತದೇವತೆಗಳೂ ಸಂತುಷ್ಟರಾಗುವುದ ರಿಂದ ಈಶ್ವರಪೂಜೆಯನ್ನು ಮಾಡಿದರೆ ಸಮಸ್ತದೇವತೆಗಳ ಪೂಜೆಯನ್ನೂ ಮಾಡಿ ದಂತಾಗುವುದು. **ಲೋಕಕರಃ**—ಲೋಕಕರ್ತನು, ಲೋಕಗಳನ್ನು ಸೃಷ್ಟಿಸಿದವನು **ವೇದಕರಃ**—ಋಗ್ವೇದಾದಿಗಳನ್ನು ಪ್ರಕಾಶಪಡಿಸಿದವನು. ವೇದಗಳೆಲ್ಲವೂ ಪರ ಮೇಶ್ವರ ಮುಖದಿಂದ ಹೊರಟ ವಾಕ್ಯಗಳಾಗಿರುವುವು. **ಸೂತ್ರಕಾರಃ**—ವ್ಯಾಸಾದಿ ಋಷಿಗಳ ರೂಪದಿಂದ ವೇದಾಂತಾದಿ ಸೂತ್ರಗಳನ್ನು ರಚಿಸಿದವನು. **ಸನಾತನಃ**—ಕಾಲಾಪರಿಚ್ಛಿನ್ನನು, ಸದಾಕಾಲದಲ್ಲಿಯೂ ಇರುವವನು.

೧೭. **ಮಹರ್ಷಿಃ ಕಪಿಲಾಚಾರ್ಯಃ**—ಕಪಿಲನೆಂಬ ಮಹರ್ಷಿಯಾಗಿ ಅವತರಿಸಿ ಸಾಂಖ್ಯಸಿದ್ಧಾಂತವನ್ನು ಪ್ರಕಾಶಪಡಿಸಿದವನು. "ಋಷಿಂ ಪ್ರಸೂತಂ

**ಧಾತೃಧಾಮಾ ಧಾಮಕರಸ್ಸರ್ವದಸ್ಸರ್ವಗೋಚರಃ ।**
**ಬ್ರಹ್ಮಸೃಗ್ವಿಶ್ವಸೃಕ್ಸರ್ಗಃ ಕರ್ಣಿಕಾರಪ್ರಿಯಃ ಕವಿಃ** ॥ ೧೮ ॥

**ಶಾಖೋ ವಿಶಾಖೋ ಗೋಶಾಖಶ್ಶಿವೋ ಭಿಷಗನುತ್ತಮಃ ।**
**ಗಂಗಾಪ್ಲವೋದಕೋ ಭವ್ಯಃ ಪುಷ್ಕಲಃ ಸ್ಥಪತಿಃ ಸ್ಥಿರಃ** ॥ ೧೯ ॥

---

ಕಪಿಲಂ ಮಹಾಂತಂ" ಎಂದು ಶ್ರುತಿಯು. **ವಿಶ್ವದೀಪ್ತಿಃ**—ಪ್ರಪಂಚವನ್ನೆಲ್ಲಾ ತನ್ನ ತೇಜಸ್ಸಿನಿಂದ ಬೆಳಗುವವನು. "ಯಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂದು ಶ್ರುತಿವಾಕ್ಯವು. **ತ್ರಿಲೋಚನಃ**—ಮೂರು ಕಣ್ಣುಗಳುಳ್ಳವನು, ವಿಷಮಾಕ್ಷನು. **ಪಿನಾಕಪಾಣಿಃ**—ಕೈಯಲ್ಲಿ ಪಿನಾಕವೆಂಬ ಧನುಸ್ಸನ್ನು ಧರಿಸಿರುವವನು. **ಭೂದೇವಃ**—ಭೂಮಿಯಲ್ಲಿ ದುರ್ವಾಸ ಮೊದಲಾದ ಬ್ರಾಹ್ಮಣರೂಪದಿಂದ ಅವತರಿಸಿದವನು. **ಸ್ವಸ್ತಿದಃ**—ಭಕ್ತರಿಗೆ ಮಂಗಳವನ್ನೂ ಸುಖವನ್ನೂ ಕೊಡತಕ್ಕವನು. **ಸ್ವಸ್ತಿಕೃತ್**—ಮಂಗಳವನ್ನುಂಟುಮಾಡುವವನು. **ಸುಧೀಃ**—ಶ್ರೇಷ್ಠ ಜ್ಞಾನಯುಕ್ತನು.

೧೮. **ಧಾತೃಧಾಮಾ**—ವಿಶ್ವಸೃಷ್ಟಿಮಾಡುವುದರಲ್ಲಿ ಸಮರ್ಥನು, ತೇಜಶ್ಶಾಲಿಯು. **ಧಾಮಕರಃ**—ತೇಜಸ್ಸಿಗೆ ಆಕರನು ಅಥವಾ ಸೂರ್ಯಾದಿಗಳಿಗೆ ಕರ್ತನು ಅಥವಾ ಸರ್ವಪ್ರಾಣಿಗಳ ದೇಹಗಳ ಕರ್ತನು. **ಸರ್ವದಃ**—ಸಮಸ್ತ ಇಷ್ಟಾರ್ಥಗಳನ್ನು ಭಕ್ತರಿಗೆ ಕೊಡುವವನು. **ಸರ್ವಗೋಚರಃ**—ಸಮಸ್ತ ಜಗತ್ತನ್ನೂ ಪ್ರತ್ಯಕ್ಷವಾಗಿ ನೋಡುವವನು, ಸಮಸ್ತವನ್ನೂ ತಿಳಿಯುವವನು, ಸರ್ವಜ್ಞನು **ಬ್ರಹ್ಮಸೃಕ್**—ಚತುರ್ಮುಖ ಬ್ರಹ್ಮ ಮತ್ತು ವೇದಗಳನ್ನು ಸೃಷ್ಟಿಮಾಡಿದವನು. **ವಿಶ್ವಸೃಕ್**—ಸಮಸ್ತ ವಿಶ್ವವನ್ನೂ ಎಂದರೆ ಅಖಿಲಾಂಡಕೋಟಿಬ್ರಹ್ಮಾಂಡಗಳನ್ನು ಸೃಷ್ಟಿಮಾಡಿದವನು. **ಸರ್ಗಃ**—ಸೃಷ್ಟಿರೂಪನು ಎಂದರೆ ಸೃಷ್ಟಿಯಾಗಿರುವ ಚರಾಚರ ಪ್ರಪಂಚವೆಲ್ಲವೂ ಪರಮೇಶ್ವರ ಸ್ವರೂಪವೇ ಆಗಿರುವುದು. **ಕರ್ಣಿಕಾರಪ್ರಿಯಃ**—ಕರ್ಣಿಕಾರವೆಂಬ ಪುಷ್ಪಪ್ರಿಯನು. **ಕವಿಃ**—ಕವಿಯು, ಬುದ್ಧಿವಂತನು, "ಕವಿರ್ಮನೀಷೀ ಪರಿಭೂಃ ಸ್ವಯಂಭೂರಿತಿ ಶ್ರುತಿಃ"

೧೯. **ಶಾಖಃ**—ಶಾಖ ಎಂಬ ಹೆಸರಿನ ಋಷಿರೂಪನು. **ವಿಶಾಖಃ**—ವಿಶಾಖಋಷಿರೂಪನು ಅಥವಾ ಸ್ಕಂದರೂಪನು. **ಗೋಶಾಖಃ**—ವೇದಶಾಖಾಸ್ವರೂಪನು ಎಂದರೆ ಸರ್ವವೇದಸ್ವರೂಪನು. **ಶಿವಃ**—ಮಂಗಳಕರನು, ಪರಾಪರ

**ವಿಜಿತಾತ್ಮಾ ವಿಧೇಯಾತ್ಮಾ ಭೂತವಾಹನಸಾರಥಿಃ ।**
**ಸಗಣೋ ಗಣಕಾಯಶ್ಚ ಸುಕೀರ್ತಿಶ್ಛಿನ್ನಸಂಶಯಃ** ॥ ೨೦ ॥

**ಕಾಮದೇವಃ ಕಾಮಪಾಲೋ ಭಸ್ಮೋದ್ಧೂಲಿತವಿಗ್ರಹಃ ।**
**ಭಸ್ಮಪ್ರಿಯೋ ಭಸ್ಮಶಾಯೀ ಕಾಮೀ ಕಾಂತಃ ಕೃತಾಗಮಃ** ॥ ೨೧ ॥

---

ವಸ್ತುವು, ಪರಬ್ರಹ್ಮನು, "ಸ ಬ್ರಹ್ಮ ಸ ಶಿವಃ" ಎಂದು ಶ್ರುತಿವಾಕ್ಯವು. **ಭಿಷಕ್**—ಧನ್ವಂತರಿರೂಪನು ಅಥವಾ ಸಂಸಾರವೆಂಬ ರೋಗವನ್ನು ನಾಶಮಾಡುವ ವೈದ್ಯನು. **ಅನುತ್ತಮಃ**—ತನಗಿಂತಲೂ ಅಧಿಕರಿಲ್ಲದವನು, ಎಲ್ಲರಿಗಿಂತಲೂ ಶ್ರೇಷ್ಠನು. **ಗಂಗಾಪ್ಲವೋದಕಃ**—ಗಂಗಾಪ್ರವಾಹದಂತೆ ಜನರನ್ನು ಪವಿತ್ರಮಾಡುವವನು. **ಭವ್ಯಃ**—ಸರ್ವಕಲ್ಯಾಣಯುಕ್ತನು. **ಪುಷ್ಕಲಃ**—ಸರ್ವವ್ಯಾಪಿಯು. **ಸ್ಥಪತಿಃ ಸ್ಥಿರಃ**—ಅನಂತ ಬ್ರಹ್ಮಾಂಡಗಳ ಸೃಷ್ಟಿಕರ್ತನು, ನಾಶವಿಲ್ಲದವನು.

೨೦. **ವಿಜಿತಾತ್ಮಾ**—ಆತ್ಮಸ್ವರೂಪವನ್ನು ತಿಳಿದಿರುವವನು. **ವಿಧೇಯಾತ್ಮಾ**—ಸರ್ವಪ್ರಪಂಚಕ್ಕೂ ಆತ್ಮನು, ಅಂತರ್ಯಾಮಿಸ್ವರೂಪನು. **ಭೂತವಾಹನಸಾರಥಿಃ**—ಭೂತಗಳಿಗೆ ಅಥವಾ ಪ್ರಾಣಿಗಳಿಗೆ ಅವರವರ ಕರ್ಮಗಳಿಗೆ ತಕ್ಕಂತೆ ಫಲವನ್ನು ಕೊಟ್ಟು ಅವರ ಪ್ರವೃತ್ತಿನಿವೃತ್ತಿಗಳಿಗೆ ನಿಯಂತೃವಾದವನು. **ಸಗಣಃ**—ಪ್ರಮಥಾದಿಗಣಯುಕ್ತನು. **ಗಣಕಾಯಃ**—ಗಣಗಳೇ ಶರೀರವಾಗಿವುಳ್ಳವನು. **ಸುಕೀರ್ತಿಃ**—ಶೋಭನವಾದ ಕೀರ್ತಿಯುಳ್ಳವನು. **ಛಿನ್ನಸಂಶಯಃ**—ಸಂಶಯರಹಿತನು, ಸರ್ವಜ್ಞನು.

೨೧. **ಕಾಮದೇವಃ**—ಭಕ್ತರ ಇಷ್ಟಾರ್ಥಗಳನ್ನು ಕೊಡುವ ದೇವನು. **ಕಾಮಪಾಲಃ**—ಮನ್ಮಥನಿಗೆ ಅನುಗ್ರಹಮಾಡಿದವನು. **ಭಸ್ಮೋದ್ಧೂಲಿತವಿಗ್ರಹಃ**—ಭಸ್ಮದಿಂದ ಶರೀರವನ್ನು ಲೇಪನಮಾಡಿಕೊಂಡಿರುವವನು. ಭಸ್ಮಭೂಷಿತನು. **ಭಸ್ಮಪ್ರಿಯೋ ಭಸ್ಮಶಾಯೀ**—ಭಸ್ಮಪ್ರಿಯನು, ಭಸ್ಮವೇ ಶಯನವಾಗಿ ಉಳ್ಳವನು. **ಕಾಮೀ**—ಪೂರ್ಣಕಾಮನು ಅಥವಾ ಸೃಷ್ಟಿಸ್ಥಿತಿಸಂಹಾರ ಕಾರ್ಯಗಳಲ್ಲಿ ಮನಸ್ಸುಳ್ಳವನು "ಸೋऽಕಾಮಯತ ಪ್ರಜಾಸ್ಸೃಜೇಯೇತಿ" ಎಂದು ಶ್ರುತಿಯು. **ಕಾಂತಃ**—ಮನೋಹರವಾದ ರೂಪವುಳ್ಳವನು. **ಕೃತಾಗಮಃ**—ಶ್ರುತಿಸ್ಮೃತ್ಯಾದಿ ಆಗಮಗಳ ಕರ್ತನು.

**ಸಮಾವರ್ತೋ ನಿವೃತ್ತಾತ್ಮಾ ಧರ್ಮಪುಂಜಃ ಸದಾಶಿವಃ ।**
**ಅಕಲ್ಮಷಶ್ಚ ಪುಣ್ಯಾತ್ಮಾ ಚತುರ್ಬಾಹುರ್ದುರಾಸದಃ ॥ ೨೨ ॥**

**ದುರ್ಲಭೋ ದುರ್ಗಮೋ ದುರ್ಗಃ ಸರ್ವಾಯುಧವಿಶಾರದಃ ।**
**ಅಧ್ಯಾತ್ಮಯೋಗನಿಲಯಸ್ಸುತಂತುಸ್ತಂತುವರ್ಧನಃ ॥ ೨೩ ॥**

**ಶುಭಾಂಗೋ ಲೋಕಸಾರಂಗೋ ಜಗದೀಶೋ ಜನಾರ್ದನಃ ।**
**ಭಸ್ಮಶುದ್ಧಿಕರೋಽಭೀರುರೋಜಸ್ವೀ ಶುದ್ಧವಿಗ್ರಹಃ ॥ ೨೪ ॥**

---

೨೨. **ಸಮಾವರ್ತಃ**—ದೇವಾದಿಗಳಿಂದ ಪರಿವೃತನಾಗಿರುವವನು, ಭಕ್ತರಲ್ಲದವರಿಗೆ ಅಗೋಚರನು. **ಅನಿವೃತ್ತಾತ್ಮಾ**—ಸರ್ವಸ್ಥಾನಗತನು, ವ್ಯಾಪಕನು, ಜನನಮರಣರಹಿತನು. **ಧರ್ಮಪುಂಜಃ**—ಧರ್ಮಗಳಿಗೆ ಆಕರನು. **ಸದಾಶಿವಃ**—ಸದಾಕಲ್ಯಾಣಸ್ವರೂಪನು. **ಅಕಲ್ಮಷಃ**—ನಿತ್ಯಶುದ್ಧನು. **ಪುಣ್ಯಾತ್ಮಾ**—ಶುದ ಸ್ವರೂಪನು. **ಚತುರ್ಬಾಹುಃ**—ನಾಲ್ಕುಭುಜಗಳುಳ್ಳವನು, ವಿಷ್ಣುಸ್ವರೂಪನು. **ದುರಾಸದಃ**—ವ್ರತಸಿಯಮ ತಪಃಕ್ಲೇಶಾದಿಗಳಿಂದ ಮಾತ್ರವೇ ಲಭ್ಯನು.

೨೩. **ದುರ್ಲಭಃ**—ಭಕ್ತರಲ್ಲದವರಿಗೆ ಅಲಭ್ಯನು. **ದುರ್ಗಮಃ**—ಸುಲಭವಾಗಿ ತಿಳಿಯಲು ಅಥವಾ ಹೊಂದಲು ಸಾಧ್ಯನಲ್ಲ. **ದುರ್ಗಃ**—ಕಷ್ಟಸಾಧ್ಯನು ಇವನನ್ನು ತಿಳಿಯಬೇಕಾದರೆ ಬಹುಕಷ್ಟಪಡಬೇಕು. **ಸರ್ವಾಯುಧವಿಶಾರದಃ**—ಸಮಸ್ತ ಅಸ್ತ್ರಾದ್ಯಾಯುಧಪ್ರಯೋಗದಲ್ಲಿ ಪಾರಂಗತನು. **ಅಧ್ಯಾತ್ಮಯೋಗನಿಲಯಃ**—ಅಸಂಪ್ರಜ್ಞಾತಸಮಾಧಿಯಿಂದ ತಿಳಿಯಲ್ಪಡುವವನು ಎಂದರೆ ಸಮಾಧಿಗಮ್ಯನು. ಸಮಾಧಿಗೆ ವಿಷಯಭೂತನಾದವನು. **ಸುತಂತುಃ**—ಶ್ರೇಷ್ಠವಾದ ಈ ಪ್ರಪಂಚದಲ್ಲಿ ವಿಸ್ತಾರವಾಗಿ ವ್ಯಾಪಿಸಿರುವವನು. **ತಂತುವರ್ಧನಃ**—ಪ್ರಾಣಿಗಳಿಗೆ ಸಂಸಾರಬಂಧನವನ್ನೂ ಅದರ ವಿಮೋಚನೆಯನ್ನೂ ಉಂಟುಮಾಡುವವನು.

೨೪. **ಶುಭಾಂಗಃ**—ಶ್ರೇಷ್ಠವಾದ ಅವಯವಗಳುಳ್ಳವನು. **ಲೋಕಸಾರಂಗಃ**—ಲೋಕದ ಚರಾಚರವಸ್ತುಗಳಲ್ಲಿ ಸಾರಭೂತನಾದವನು. **ಜಗದೀಶಃ**—ಜಗದೊಡೆಯನು. **ಜನಾರ್ದನಃ**—ಜಗತ್ಸಂಹಾರಕನು. **ಭಸ್ಮಶುದ್ಧಿಕರಃ**—ಭಸ್ಮಲೇಪನದಿಂದ ಭಸ್ಮಕ್ಕೆ ಪವಿತ್ರತೆಯನ್ನುಂಟುಮಾಡುವವನು. **ಮೇರುಃ**—ಮೇರುಪರ್ವತಸ್ವರೂಪನು ಅಥವಾ ಮೇರುಪರ್ವತದಂತೆ ಜಗದಧಿಷ್ಠಾತೃವು. **ಓಜಸ್ವೀ**—ಆತ್ಮಶಕ್ತಿಸ್ವರೂಪನು. **ಶುದ್ಧವಿಗ್ರಹಃ**—ಚಿದಾತ್ಮಕನು.

**ಅಸಾಧ್ಯಃ ಸಾಧುಸಾಧ್ಯಶ್ಚ ಭೃತ್ಯಮರ್ಕಟರೂಪಧೃಕ್ ।**
**ಹಿರಣ್ಯರೇತಾಃ ಪೌರಾಣೋ ರಿಪುಜೀವಹರೋ ಬಲೀ ॥ ೨೫ ॥**

**ಮಹಾಹ್ರದೋ ಮಹಾಗರ್ತಸ್ಸಿದ್ಧೋ ವೃಂದಾರವಂದಿತಃ ।**
**ವ್ಯಾಘ್ರಚರ್ಮಾಂಬರೋ ವ್ಯಾಲೀ ಮಹಾಭೂತೋ ಮಹಾನಿಧಿಃ ॥ ೨೬ ॥**

---

೨೫. **ಅಸಾಧ್ಯಃ**—ದುಶ್ಚರಿತ್ರರಾದವರಿಗೆ ಅಗಮ್ಯನು. **ಸಾಧುಸಾಧ್ಯಃ**—ಸಜ್ಜನರಿಗೆ ಗಮ್ಯನು. **ಭೃತ್ಯಮರ್ಕಟರೂಪಧೃಕ್**—ಹನುಮಾನ್‌ರೂಪಧಾರಿಯು. **ಹಿರಣ್ಯರೇತಾಃ**—ಅಗ್ನಿಸ್ವರೂಪನು. **ಪೌರಾಣಃ**—ಪುರಾಣಗಳಲ್ಲಿ ಪ್ರತಿಪಾದ್ಯನು ವೇದಾಂತವೇದ್ಯನು. **ರಿಪುಜೀವಹರಃ**—ಶತ್ರುಪ್ರಾಣಹಾರಕನು. **ಬಲೀ**—ಸರ್ವಶಕ್ತನು.

೨೬. **ಮಹಾಹ್ರದಃ**—ಸರೋವರವು ಉದಕಕ್ಕೆ ಆಲಯವಾಗಿರುವಂತೆ ಯೋಗಿಗಳಿಗೆ ಅಥವಾ ಯೋಗಿಗಳ ಧ್ಯಾನಕ್ಕೆ ನಿಲಯಸ್ವರೂಪನು. **ಮಹಾಗರ್ತಃ**—ದುರತ್ಯಯಮಾಯಾಸ್ವರೂಪನು ಅಥವಾ ಮಹಾರಥಸ್ವರೂಪನು. **ಸಿದ್ಧವೃಂದಾರವಂದಿತಃ**—ಸಿದ್ಧಸಾಧ್ಯದೇವತಾದಿಗಳಿಂದ ನಮಸ್ಕರಿಸಲ್ಪಡುವವನು. **ವ್ಯಾಘ್ರಚರ್ಮಾಂಬರಃ**—ವ್ಯಾಘ್ರಚರ್ಮವನ್ನು ವಸ್ತ್ರವನ್ನಾಗಿ ಧರಿಸಿರುವವನು. ವ್ಯಾಘ್ರರೂಪದಿಂದಿದ್ದ ದೈತ್ಯನನ್ನು ಸಂಹಾರಮಾಡಿ ವ್ಯಾಘ್ರೇಶ್ವರನೆಂದು ಪ್ರಸಿದ್ಧಿಪಡೆದು, ಆ ವ್ಯಾಘ್ರಚರ್ಮವನ್ನು ಧರಿಸಿ ಭಕ್ತಪರಿಪಾಲಕನಾಗಿರುವನೆಂದು ಉಪಾಖ್ಯಾನವಿದೆ. **ವ್ಯಾಲೀ**—ವಾಸುಕಿಯೇ ಮೊದಲಾದ ಸರ್ಪಗಳನ್ನು ಭೂಷಣಾರ್ಥವಾಗಿ ಧರಿಸಿರುವವನು. **ಮಹಾಭೂತಃ**—ಕಾಲತ್ರಯಾವಿಚ್ಛಿನ್ನನೂ ಮಹತ್ತತ್ತ್ವಸ್ವರೂಪನೂ ಎಂದು ಪ್ರಸಿದ್ಧನಾದವನು ಅಥವಾ ಬ್ರಹ್ಮನೇ ಮೊದಲಾದವರನ್ನು ಸೃಷ್ಟಿಸಲು ಮಹಾವಿರಾಡ್ರೂಪವನ್ನು ಕೈಗೊಂಡವನು "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ" ಎಂದು ಶ್ರುತಿಯು. **ಮಹಾನಿಧಿಃ**—ಸಮಸ್ತಚರಾಚರಪ್ರಪಂಚಕ್ಕೂ ಆಶ್ರಯಭೂತನು.

**ಅಮೃತೋಽಮೃತಪಃ ಶ್ರೀಮಾನ್ಪಾಂಚಜನ್ಯಃ ಪ್ರಭಂಜನಃ ।**
**ಪಂಚವಿಂಶತಿತತ್ತ್ವಸ್ಥಃ ಪಾರಿಜಾತಃ ಪರಾತ್ಪರಃ ॥ ೨೭ ॥**

**ಸುಲಭಸ್ಸುವ್ರತಶ್ಶೂರೋ ವಾಙ್ಮಯೈಕನಿಧಿರ್ನಿಧಿಃ ।**
**ವರ್ಣಾಶ್ರಮಗುರುರ್ವರ್ಣೀ ಶತ್ರುಜಿಚ್ಛತ್ರುತಾಪನಃ ॥ ೨೮ ॥**

**ಆಶ್ರಮಃ ಕ್ಷಪಣಃ ಕ್ಷಾಮೋ ಜ್ಞಾನವಾನಚಲೇಶ್ವರಃ ।**
**ಪ್ರಮಾಣಭೂತೋ ದುರ್ಜ್ಞೇಯಸ್ಸುಪರ್ಣೋ ವಾಯುವಾಹನಃ ॥ ೨೯ ॥**

---

೨೭. **ಅಮೃತಃ**—ಜರಾಮರಣರಹಿತನು, ಮೋಕ್ಷಸ್ವರೂಪನು. **ಅಮೃತಪಃ**—ಅಮೃತವನ್ನು ಪಾನಮಾಡುವವನು, ದೇವನು ಅಥವಾ ಅಮೃತರೂಪವಾದ ಮೋಕ್ಷವನ್ನು ಅನುಗ್ರಹಿಸುವವನು. **ಶ್ರೀಮಾನ್ ಪಾಂಚಜನ್ಯಃ**—ಅಗ್ನಿರೂಪನು "ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ" ಎಂದು ಶ್ರುತಿಯು. **ಪ್ರಭಂಜನಃ**—ಭಕ್ತರ ಮಾಯಾರೂಪವಾದ ಆವರಣವನ್ನು ನಾಶಪಡಿಸತಕ್ಕವನು ಅಥವಾ ವಾಯುಸ್ವರೂಪನು. **ಪಂಚವಿಂಶತಿತತ್ತ್ವಸ್ಥಃ**—ಪೃಥಿವ್ಯಾದಿ ಇಪ್ಪತ್ತೈದು ತತ್ತ್ವಗಳಲ್ಲಿ ಅಂತರ್ಯಾಮಿಯಾಗಿ ಇದ್ದುಕೊಂಡು ಜಗತ್ತಿನ ನಿಯಂತೃವಾಗಿರುವವನು. "ತತ್ಸೃಷ್ಟ್ವಾ । ತದೇವಾನುಪ್ರಾವಿಶತ್" ಎಂದು ಶ್ರುತಿಯು. **ಪಾರಿಜಾತಃ**—ಕಲ್ಪವೃಕ್ಷಸ್ವರೂಪನು. **ಪರಾಪರಃ**—ಪರಬ್ರಹ್ಮ ಮತ್ತು ಜಗದ್ರೂಪನು.

೨೮. **ಸುಲಭಃ**—ಪತ್ರಪುಷ್ಪಸಮರ್ಪಣಾದಿಯಾದ ಸುಲಭಪೂಜಾವಿಧಾನದಿಂದ ಭಕ್ತರಿಗೆ ಪ್ರಸನ್ನನಾಗುವವನು. **ಸುವ್ರತಃ ಶೂರಃ**—ಶೋಭನವ್ರತದಿಂದ ಸಂತುಷ್ಟನಾಗುವವನು, ಪರಾಕ್ರಮಶಾಲಿಯು. **ವಾಙ್ಮಯೈಕನಿಧಿಃ**—ವೇದಗಳ ಪ್ರಾದುರ್ಭಾವಕ್ಕೆ ಸ್ಥಾನಭೂತನು. "ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯದೃಗ್ವೇದ ಇತ್ಯಾದಿ ಶ್ರುತೇಃ" **ನಿಧಿಃ**—ಸರ್ವಜಗದಾಶ್ರಯನು. **ವರ್ಣಾಶ್ರಮಗುರುಃ**—ಬ್ರಾಹ್ಮಣಾದಿವರ್ಣಗಳಿಗೂ ಬ್ರಹ್ಮಚರ್ಯಾದ್ಯಾಶ್ರಮಗಳಿಗೂ ಉಪದೇಶಕನು, ಗುರುವು ಅಥವಾ ಉತ್ಪನ್ನಕರ್ತನು. **ವರ್ಣೀ**—ಬ್ರಹ್ಮಚಾರಿಸ್ವರೂಪನು. **ಶತ್ರುಜಿಚ್ಛತ್ರುತಾಪನಃ**—ಶತ್ರುಗಳನ್ನು ಜಯಿಸುವವನು, ಶತ್ರುತಾಪಕನು, ಅರಿಮರ್ದನನು.

೨೯. **ಆಶ್ರಮಃ**—ಬ್ರಹ್ಮಚರ್ಯಾದ್ಯಾಶ್ರಮಸ್ವರೂಪನು. **ಕ್ಷಪಣಃ**—ಯತಿಯು, ಭಿಕ್ಷುವು. **ಕ್ಷಾಮಃ**—ಪ್ರಳಯಕಾಲದಲ್ಲಿ ಪ್ರಜೆಗಳನ್ನು ಕ್ಷೀಣಗೊಳಿಸು

**ಧನುರ್ಧರೋ ಧನುರ್ವೇದೋ ಗಣಃ ಶಶಿಗುಣಾಕರಃ ।**
**ಸತ್ಯಸ್ಸತ್ಯಪರೋಽದೀನೋ ಧರ್ಮೋ ಗೋಧರ್ಮಶಾಸನಃ ॥ ೩೦ ॥**

**ಅನಂತದೃಷ್ಟಿರಾನಂದೋ ದಂಡೋ ದಮಯಿತಾ ದಮಃ ।**
**ಅಭಿಚಾರ್ಯೋ ಮಹಾಮಾಯೋ ವಿಶ್ವಕರ್ಮವಿಶಾರದಃ ॥ ೩೧ ॥**

---

ವವನು. **ಜ್ಞಾನವಾನ್**—ನಿತ್ಯಜ್ಞಾನಯುಕ್ತನು, ಜ್ಞಾನಸ್ವರೂಪನು "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಶ್ರುತಿಯು. **ಅಚಲೇಶ್ವರಃ**—ಚಲಿಸದಿರುವ ಪೃಥ್ವೀ ಪರ್ವತಾದಿಗಳಿಗೆ ಸ್ವಾಮಿಯು. **ಪ್ರಮಾಣಭೂತಃ**—ಪ್ರತ್ಯಕ್ಷಾದಿಪ್ರಮಾಣ ಗಳಿಗೆ ವಿಷಯಭೂತನು. **ದುರ್ಜ್ಞೇಯಃ**—ಬಹುಶ್ರಮದಿಂದ ತಿಳಿಯಲ್ಪಡುವವನು. **ಸುಪರ್ಣಃ**—ಧರ್ಮಾಧರ್ಮಪಕ್ಷಯುಕ್ತನು ಅಥವಾ ಗರುಡರೂಪನು ಅಥವಾ ಸಮಸ್ತಜಗದುತ್ಪಾದಕನು "ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ" ಎಂದು ಶ್ರುತಿವಾಕ್ಯವು. **ವಾಯುವಾಹನಃ**—ವಾಯುವೇ ರಥವಾಗಿ ಉಳ್ಳವನು ಅಥವಾ ಇವನ ಭಯದಿಂದ ವಾಯುವು ವಹಿಸುತ್ತಿರುವುದು ಅಥವಾ ಬೀಸುತ್ತಿರುವುದು. "ಭೀಷಾಸ್ಮಾದ್ವಾತಃ ಪವತೇ" ಎಂದು ಶ್ರುತಿಯು.

೩೦. **ಧನುರ್ಧರೋ ಧನುರ್ವೇದಃ**—ಪಿನಾಕಧಾರಿಯು, ಧನುರ್ವೇದ ಪ್ರಕಾಶಕನು ಅಥವಾ ಧನುರ್ವಿದ್ಯಾಪಾರಂಗತನು. **ಗುಣರಾಶಿರ್ಗುಣಾಕರಃ**—ಯೋಗ, ತಪಃ ವಿದ್ಯಾ, ವಿಧಿ ಕ್ರಿಯಾ, ಋತ ಸತ್ಯ ದಯಾ ಅಹಿಂಸಾ ಶ್ರೇಷ್ಠಮತಿ ಕ್ಷಮಾ, ಧ್ಯಾನ, ಧ್ಯೇಯ, ದಮ, ಶಾಂತಿ, ಧೃತಿ, ಕಾಂತಿ ನೀತಿ ಪ್ರಥಾ, ಮೇಧಾ, ಲಜ್ಜಾ, ದೃಷ್ಟಿ ಸರಸ್ವತೀ, ತುಷ್ಟಿ, ಪುಷ್ಟಿ ಕ್ರಿಯಾ ಪ್ರಸಾದ, ಪ್ರತಿಷ್ಠಾ, ಮೊದಲಾದ ಗುಣಗಳಿಗೆ ನಿಧಿಯು, ಆವಾಸಸ್ಥಾನಸ್ವರೂಪನು. ಗುಣರಾಶಿಃ ಮತ್ತು ಗುಣಾಕರ ಎಂಬ ಎರಡು ಪದಗಳೂ ಏಕಾರ್ಥವಾಚಕಗಳು. **ಸತ್ಯಃ ಸತ್ಯಪರಃ**—ಸತ್ಯಸ್ವರೂಪನು. "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಶ್ರುತಿವಾಕ್ಯವು. **ಅದೀನಃ**—ಐಶ್ವರ್ಯಯುಕ್ತನು, ಸಂತುಷ್ಟನು. **ಧರ್ಮೋ ಗೋಧರ್ಮಶಾಸನಃ**—ಯಜ್ಞಾದಿ ಧರ್ಮಸ್ವರೂಪನು, ಯಜ್ಞನಿಯಂತೃವು, ಪಶುಪತಿಯು.

೩೧. **ಅನಂತದೃಷ್ಟಿಃ**—ಸರ್ವವ್ಯಾಪಕವಾದ ದೃಷ್ಟಿಯುಳ್ಳವನು, "ಸಹಸ್ರಾಕ್ಷಃ ಸಹಸ್ರಪಾತ್" ಎಂದು ಶ್ರುತಿಯು. **ಆನಂದಃ**—ಆನಂದಸ್ವರೂಪನು.

**ವೀತರಾಗೋ ವಿನೀತಾತ್ಮಾ ತಪಸ್ವೀ ಭೂತಭಾವನಃ ।**
**ಉನ್ಮತ್ತವೇಷಃ ಪ್ರಚ್ಛನ್ನೋ ಜಿತಕಾಮೋ ಜಿತಪ್ರಿಯಃ** ॥ ೩೨ ॥

**ಕಲ್ಯಾಣಪ್ರಕೃತಿಃ ಕಲ್ಪಃ ಸರ್ವಲೋಕಪ್ರಜಾಪತಿಃ ।**
**ತರಸ್ವೀ ತಾರಕೋ ಧೀಮಾನ್ಪ್ರಧಾನಃ ಪ್ರಭುರವ್ಯಯಃ** ॥ ೩೩ ॥

---

"ಆನಂದೋ ಬ್ರಹ್ಮೇತಿ ವ್ಯಜಾನಾತ್" ಎಂದು ಶ್ರುತಿವಾಕ್ಯವು. **ದಂಡೋ ದಮಯಿತಾ**—ಇಂದ್ರಾದಿಗಳ ರೂಪದಲ್ಲಿ ಪ್ರಜೆಗಳನ್ನು ಅವರವರ ಕರ್ಮಗಳಲ್ಲಿ ನಿಯುಕ್ತರಾಗಿರುವಂತೆ ದಮನಮಾಡುವವನು. ದುಷ್ಟರಿಗೆ ಶಿಕ್ಷೆಯನ್ನು ಮಾಡುವವನು. **ದಮಃ**—ಇಂದ್ರಿಯನಿಗ್ರಹವುಳ್ಳವನು ಅಥವಾ ಸ್ವರೂಪನು. **ಅಭಿವಾದ್ಯೋ ಮಹಾಮಾಯಃ**—ಸುರಾಸುರಾದಿಗಳಿಂದ ನಮಸ್ಕರಿಸಲ್ಪಡುವವನು. ಪ್ರಾಣಿಗಳಿಗೆ ಮೋಹವನ್ನುಂಟುಮಾಡುವವನು. **ವಿಶ್ವಕರ್ಮವಿಶಾರದಃ**—ವಿಶ್ವ (ಪ್ರಪಂಚ) ನಿರ್ಮಾಣಕಾರ್ಯದಲ್ಲಿ ಚತುರನು.

೩೨. **ವೀತರಾಗಃ**—ರಾಗದ್ವೇಷಾದಿಗಳಿಲ್ಲದವನು. **ವಿನೀತಾತ್ಮಾ**—ಭಕ್ತರ ವಿಷಯದಲ್ಲಿ ಸೌಮ್ಯಸ್ವಭಾವದಿಂದಿರುವವನು. **ತಪಸ್ವೀ**—ತಪೋಯುಕ್ತನು. **ಭೂತಭಾವನಃ**—ಪ್ರಾಣಿಗಳಿಗೆ ಜೀವನಸ್ವರೂಪನು. **ಉನ್ಮತ್ತವೇಷಃ ಪ್ರಚ್ಛನ್ನಃ**—ದಿಗ್ವಾಸಾದಿಯುಕ್ತನಾದುದರಿಂದ ಗೂಢರೂಪವುಳ್ಳವನು. **ಜಿತಕಾಮಃ**—ಮನ್ಮಥನನ್ನು ಜಯಿಸಿದವನು, ಪೂರ್ಣಕಾಮನು ಅಥವಾ ಕಾಮನಾರಹಿತನು. **ಜಿತಪ್ರಿಯಃ**—ವಿಷ್ಣುಪ್ರಿಯನು.

೩೩. **ಕಲ್ಯಾಣಪ್ರಕೃತಿಃ**—ಶ್ರೇಷ್ಠಸ್ವಭಾವವುಳ್ಳವನು. **ಕಲ್ಪಃ**—ಸರ್ವಕ್ಕೂ ಆದಿಕಾರಣನು. **ಸರ್ವಲೋಕಪ್ರಜಾಪ್ರತಿಃ**—ಸಮಸ್ತ ಲೋಕದ ಜನರಿಗೂ ಪಾಲಕನು. **ತರಸ್ವೀ**—ಭಕ್ತರಕ್ಷಾರ್ಥವಾಗಿ ವೇಗವಾದ ಗಮನವುಳ್ಳವನು. **ತಾರಕಃ**—ಸಂಸಾರಸಾಗರವನ್ನು ದಾಟಿಸತಕ್ಕವನು. **ಧೀಮಾನ್**—ಶ್ರೇಷ್ಠಜ್ಞಾನಯುಕ್ತನು. **ಪ್ರಧಾನಪ್ರಭುಃ**—ಪ್ರಕೃತಿಗೆ ಸ್ವಾಮಿಯು ಅಥವಾ ಪ್ರಭುಗಳೆನಿಸಿದ ದೇವಾಧಿದೇವತೆಗಳಿಗೂ ಸ್ವಾಮಿಯು. **ಅವ್ಯಯಃ**—ನಾಶರಹಿತನು.

**ಲೋಕಪಾಲೋಽಂತರಾತ್ಮಾ ಚ ಕಲ್ಪಾದಿಃ ಕಮಲೇಕ್ಷಣಃ ।**
**ವೇದಶಾಸ್ತ್ರಾರ್ಥತತ್ತ್ವಜ್ಞೋ ನಿಯಮೀ ನಿಯಮಾಶ್ರಯಃ** ॥ ೩೪ ॥

**ಚಂದ್ರಃ ಸೂರ್ಯಃ ಶನಿಃ ಕೇತುರ್ವರಾಂಗೋ ವಿದ್ರುಮಚ್ಛವಿಃ ।**
**ಭಕ್ತಿವಶ್ಯಃ ಪರಂ ಬ್ರಹ್ಮ ಮೃಗಬಾಣಾರ್ಪಣೋಽನಘಃ** ॥ ೩೫ ॥

**ಅದ್ರಿರದ್ರ್ಯಾಲಯಃ ಕಾಂತಃ ಪರಮಾತ್ಮಾ ಜಗದ್ಗುರುಃ ।**
**ಸರ್ವಕರ್ಮಾಲಯಸ್ತುಷ್ಟೋ ಮಂಗಲ್ಯೋ ಮಂಗಲಾವೃತಃ** ॥ ೩೬ ॥

---

೩೪. **ಲೋಕಪಾಲಃ**—ಲೋಕಸಂರಕ್ಷನು. **ಅಂತರಾತ್ಮಾ**—ಪ್ರಾಣಿಗಳ ಶರೀರದಲ್ಲಿ ಅಂತರಾತ್ಮನಾಗಿ ನೆಲಸಿ ಅವರವರು ಮಾಡುವ ಕರ್ಮಗಳನ್ನು ಪ್ರೇರಿಸುತ್ತಿರುವನು. "ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಗ್ಂ ಸರ್ವಾತ್ಮಾ" ಎಂದು ಶ್ರುತಿಯು. **ಕಲ್ಪಾದಿಃ**—ಶಾಸ್ತ್ರಗಳಿಗೆ ಆದಿಕಾರಣನು. **ಕಮಲೇಕ್ಷಣಃ**—ಕಮಲದಂತೆ ಸುಂದರವಾದ ಕಣ್ಣುಳ್ಳವನು. **ವೇದಶಾಸ್ತ್ರಾರ್ಥತತ್ತ್ವಜ್ಞಃ**—ವೇದ, ಶಾಸ್ತ್ರ, ಇವುಗಳ ಸರಿಯಾದ ಅರ್ಥವನ್ನೂ ತತ್ತ್ವವನ್ನೂ ತಿಳಿದವನು. **ಅನಿಯಮಃ**—ಇವನೇ ಸ್ವಯಂ ನಿಯಂತೃವು. ಇವನಿಗೆ ಶಿಕ್ಷಕರಾರೂ ಇಲ್ಲ. **ನಿಯತಾಶ್ರಯಃ**—ಸಕಲಜಗತ್ತಿಗೂ ಆಶ್ರಯಭೂತನು.

೩೫. **ಚಂದ್ರಃ**–ಚಂದ್ರನಂತೆ ಪ್ರಸನ್ನವಾದ ರೂಪವುಳ್ಳವನು. **ಸೂರ್ಯಃ**–ಸೂರ್ಯನಂತೆ ತೇಜಸ್ವಿಯು, ಆದಿತ್ಯಸ್ವರೂಪನು. **ಶನಿಃ**–ಶನಿರೂಪನು. **ಕೇತುಃ**–ಕೇತು ಅಥವಾ ಧೂಮಕೇತುರೂಪನು. **ವರಾಂಗಃ**—ಉತ್ತಮವಾದ ಅಂಗಗಳುಳ್ಳವನು. **ವಿದ್ರುಮಚ್ಛವಿಃ**—ಹವಳದಂತೆ ವಿರಾಜಿಸುತ್ತಿರುವ ಶರೀರಕಾಂತಿಯುಳ್ಳವನು. **ಭಕ್ತಿವಶ್ಯಃ**-ಭಕ್ತಿಗೆ ವಶನಾಗುವವನು, ಭಕ್ತಾಧೀನನು. **ಪರಬ್ರಹ್ಮ**–ಪರಬ್ರಹ್ಮರೂಪನು, ನಿರ್ವಿಕಲ್ಪನು. **ಮೃಗಬಾಣಾರ್ಪಣಃ**—ಮೃಗ ಅಥವಾ ಪಶುವೆಂದು ಹೇಳಲ್ಪಡುವ ಭಕ್ತಜನರ ಮನಸ್ಸೆಂಬ ಬಾಣಗಳಿಗೆ ಅರ್ಪಿಸಲ್ಪಟ್ಟವನು ಎಂದರೆ ಭಕ್ತರಿಂದ ಧ್ಯಾನಿಸಲ್ಪಡುವವನು. **ಅನಘಃ**—ಪಾಪರಹಿತನು.

೩೬. **ಅದ್ರಿಃ**—ಸುಮೇರುರೂಪನು ಅಥವಾ ಪರ್ವತದಂತೆ ದೊಡ್ಡದಾದ ಆಕಾರವುಳ್ಳವನು. "ಮಹತೋ ಮಹೀಯಾನ್" ಎಂದು ಶ್ರುತಿಯು. **ಅದ್ರ್ಯಾಲಯಃ**—ಕೈಲಾಸಪರ್ವತದಲ್ಲಿ ನಿವಾಸಸ್ಥಾನವುಳ್ಳವನು. **ಕಾಂತಃ**—ಮನೋಹರನು ಅಥವಾ ಪ್ರಳಯಕಾಲದಲ್ಲಿ ಚತುರ್ಮುಖಬ್ರಹ್ಮನಿಗೂ ನಾಶವನ್ನುಂಟುಮಾ

**ಮಹಾತಪಾ ದೀರ್ಘತಪಾಃ ಸ್ಥವಿಷ್ಠಃ ಸ್ಥವಿರೋ ಧ್ರುವಃ ।**
**ಅಹಸ್ಸಂವತ್ಸರೋ ವ್ಯಾಪ್ತಿಃ ಪ್ರಮಾಣಂ ಪರಮಂ ತಪಃ ॥ ೩೭ ॥**

**ಸಂವತ್ಸರಕರೋ ಮಂತ್ರಃ ಪ್ರತ್ಯಯಃ ಸರ್ವತಾಪನಃ ।**
**ಅಜಃ ಸರ್ವೇಶ್ವರಸಿದ್ಧೋ ಮಹಾತೇಜಾ: ಮಹಾಬಲಃ ॥ ೩೮ ॥**

---

ಡುವವನು ಅಥವಾ ಬ್ರಹ್ಮನಲ್ಲಿ ಅಂತರ್ಯಾಮಿಯಾಗಿರುವವನು. **ಜಗದ್ಗುರುಃ**—ಜಗತ್ತಿಗೆ ಹಿತೋಪದೇಶಕನು. **ಸರ್ವಕರ್ಮಾಲಯಃ**—ನಿತ್ಯನೈಮಿತ್ತಿಕ ಕರ್ಮಗಳಿಗೆ ಅರ್ಪಣಸ್ಥಾನಭೂತನು. **ತುಷ್ಟಃ**—ನಿತ್ಯಸಂತುಷ್ಟನು, ಪೂರ್ಣಕಾಮನು. **ಮಂಗಲ್ಯೋ ಮಂಗಲಾವೃತಃ**—ಭಕ್ತರಿಗೆ ಹಿತವನ್ನು ಅಥವಾ ಮಂಗಳವನ್ನು ಕರುಣಿಸುವವನು.

೩೭. **ಮಹಾತಪಾಃ**–ತಪಸ್ಸ್ವರೂಪನು, ತಪಸ್ಸಿಗೆ ವಿಷಯಭೂತನಾದವನು. ಮಹಾತಪಸ್ವಿಯು. **ದೀರ್ಘತಪಾಃ**—ಬಹುಕಾಲ ತಪೋನಿರತನಾದವನು. **ಸ್ಥವಿಷ್ಠಃ**—ಅತಿಸ್ಥೂಲನು. **ಸ್ಥವಿರಃ**—ವೃದ್ಧರೂಪನು. **ಧ್ರುವಃ**—ನಿಶ್ಚಲನು. **ಅಹಃ**—ಪ್ರಕಾಶಸ್ವರೂಪನು ಅಥವಾ ದಿನಸ್ವರೂಪನು. **ಸಂವತ್ಸರಃ**—ವರ್ಷಾತ್ಮಕನು, ಕಾಲರೂಪನು. **ವ್ಯಾಪ್ತಿಃ**—ಸರ್ವತ್ರ ವ್ಯಾಪಿಸಿ ಇರುವವನು. **ಪ್ರಮಾಣಃ**–ಸ್ವಯಂ ಪ್ರಮಾಣಭೂತನು. "ಪ್ರಜ್ಞಾನಂ ಬ್ರಹ್ಮೇತಿ ಶ್ರುತೇಃ" **ಪರಮಂ**—ಶೋಭಾಯುಕ್ತನು, ಮುಕ್ತಿರೂಪಲಕ್ಷ್ಮೀಯುಕ್ತನು. **ತಪಃ**—ತಪಸ್ಸ್ವರೂಪನು, ಸತ್ಯಸ್ವರೂಪನು. "ಋತಂ ತಪಃ ಸತ್ಯಂ ತಪಃ" ಎಂದು ಶ್ರುತಿಯು.

೩೮. **ಸಂವತ್ಸರಕರಃ**—ಕಾಲಚಕ್ರಪ್ರವರ್ತಕನು ಅಥವಾ ಪ್ರಭವಾದಿಸಂವತ್ಸರಕರ್ತನು. **ಮಂತ್ರಪ್ರತ್ಯಯಃ**—ಋಗ್ಯಜುಸ್ಸಾಮಮಂತ್ರಗಳಿಂದ ಸ್ತುತ್ಯನಾದವನು. **ಸರ್ವದರ್ಶನಃ**—ಸರ್ವಸ್ಥಳಗಳಲ್ಲಿ ಏಕಕಾಲದಲ್ಲಿ ದೃಷ್ಟಿಯುಳ್ಳವನು. ಸಮಸ್ತವನ್ನೂ ನೋಡುವವನು. "ವಿಶ್ವತಶ್ಚಕ್ಷುಃ" ಎಂದು ಶ್ರುತಿವಾಕ್ಯವು. **ಸರ್ವೇಶ್ವರಃ**–ಸರ್ವಪ್ರಪಂಚಕ್ಕೂ ಸ್ವಾಮಿಯು. "ಏಷ ಸರ್ವೇಶ್ವರ ಇತಿ ಶ್ರುತೇಃ" **ಸಿದ್ಧಃ**—ನಿತ್ಯನಿಷ್ಪನ್ನರೂಪನು. **ಮಹಾತೇಜಾಃ**—ಮಹಾತೇಜಸ್ಸಿನಿಂದ ಬೆಳಗುವವನು ಅಥವಾ ಮಹಾಪ್ರಭಾವಯುಕ್ತನು. **ಮಹಾಬಲಃ**—ಮಹಾಪರಾಕ್ರಮಶಾಲಿಯು.

**ಯೋಗೀ ಯೋಗ್ಯೋ ಮಹಾರೇತಾಸ್ಸಿದ್ಧಿಸ್ಸರ್ವಾದಿರಗ್ರಹಃ ।**
**ವಸುರ್ವಸುರ್ಮನಾಃ ಸತ್ಯಃ ಸರ್ವಪಾಪಹರೋ ಹರಃ ॥ ೩೯ ॥**

**ಸುಕೀರ್ತಿಃ ಶೋಭನಸ್ಸ್ರಗ್ವೀ ವೇದಾಂಗೋ ವೇದವಿನ್ಮುನಿಃ ।**
**ಭ್ರಾಜಿಷ್ಣುರ್ಭೋಜನಂ ಭೋಕ್ತಾ ಲೋಕನಾಥೋ ದುರಾಧರಃ ॥ ೪೦ ॥**

---

೩೯. **ಯೋಗೀ**—ನಿತ್ಯಯೋಗಯುಕ್ತನು, ಸದಾಯೋಗದಲ್ಲಿ ನಿರತನಾದವನು. **ಯೋಗ್ಯಃ ಮಹಾರೇತಾ**—ಮಹಾವೀರ್ಯವಂತನು. "ಊರ್ಧ್ವರೇತಂ ವಿರೂಪಾಕ್ಷಮಿತಿ ಶ್ರುತೇಃ" **ಸಿದ್ಧಿಃ**—ಅಣಿಮಾದಿಅಷ್ಟಸಿದ್ಧಿಸ್ವರೂಪನು ಅಥವಾ ಮೋಕ್ಷವೆಂಬ ಉತ್ತಮನಾದ ಸಿದ್ಧಿಸ್ವರೂಪನು. **ಸರ್ವಾದಿಃ**—ಸರ್ವಕ್ಕೂ ಆದಿ ಕಾರಣನು. **ಅಗ್ರಹಃ**—ಪಾಪಾತ್ಮರಿಂದ ತಿಳಿಯಲಶಕ್ಯನು. **ವಸ್ತುಃ**—ಸರ್ವ ಪ್ರಾಣಿಗಳಿಗೂ ನಿವಾಸಭೂತನು, ಆಶ್ರಯನು. **ವಸುಮನಃ**—ರಾಗದ್ವೇಷಾದಿ ಕಲ್ಮಷರಹಿತವಾದ ಉತ್ತಮವಾದ ಮನಸ್ಸುಳ್ಳವನು. **ಸತ್ಯಃ**—ಅವಿತಥರೂಪನು, ಸತ್ಯಸ್ವರೂಪನು. "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಶ್ರುತಿಯು. **ಸರ್ವಪಾಪಹರ**—ಭಕ್ತರ ಕಾಯಿಕ, ವಾಚಿಕ ಮಾನಸಿಕವೆಂಬ ಮೂರುವಿಧವಾದ ಪಾಪಗಳನ್ನು ನಾಶಮಾಡತಕ್ಕವನು. **ಹರಃ**—ಜಗತ್ಸಂಹಾರಕನು.

೪೦. **ಸುಕೀರ್ತಿಃ**—ಸುಂದರಯಶೋಯುಕ್ತನು. **ಶೋಭನಃ**—ಮಂಗಳಕರನು, ಸರ್ವಶೋಭಾಯುಕ್ತನು. **ವೇದಾಂಗಃ**—ವೇದಗಳ ಷಡಂಗಸ್ವರೂಪನು. **ವೇದವಿನ್ಮುನಿಃ**—ವೇದದ್ರಷ್ಟೃವು, ವೇದವನ್ನು ತಿಳಿದವನು, ಮುನಿಯು **ಭ್ರಾಜಿಷ್ಣುಃ**—ಪ್ರಕಾಶಸ್ವರೂಪನು. **ಭೋಜನಂ**—ಭಕ್ಷಭೋಜ್ಯಾದಿ ಆಹಾರಸ್ವರೂಪನು. "ಅನ್ನಂ ಬ್ರಹ್ಮೇತಿ ವ್ಯಜಾನಾತ್" ಎಂದು ಶ್ರುತಿವಾಕ್ಯವು. **ಭೋಕ್ತಾ**-ಪುರುಷರೂಪದಿಂದ ಭೋಗಾನುಭವಮಾಡುವವನು. **ಲೋಕನಾಥಃ**-ಲೋಕಗಳಿಗೆ ಶಾಸನಕರ್ತೃವು. **ದುರಾಧರಃ**—ದೈತ್ಯಾದಿದುಷ್ಟರಿಂದ ಆರಾಧಿತನಲ್ಲದವನು ಅಥವಾ ತಿಳಿಯಲ್ಪಡಲಶಕ್ಯನು.

**ಅಮೃತಶ್ಶಾಶ್ವತಶ್ಶಾಂತೋ ಬಾಣಹಸ್ತಃ ಪ್ರತಾಪವಾನ್ ।**
**ಕಮಂಡಲುಧರೋ ಧನ್ವೀ ಹ್ಯವಾಙ್ಮನಸಗೋಚರಃ ॥ ೪೧ ॥**

**ಅತೀಂದ್ರಿಯೋ ಮಹಾಮಾಯಸ್ಸರ್ವಾವಾಸಶ್ಚತುಷ್ಪಥಃ ।**
**ಕಾಲಯೋಗೀ ಮಹಾನಾದೋ ಮಹೋತ್ಸಾಹೋ ಮಹಾಬಲಃ ॥ ೪೨ ॥**

**ಮಹಾಬುದ್ಧಿರ್ಮಹಾವೀರ್ಯೋ ಭೂತಚಾರೀ ಪುರಂದರಃ ।**
**ನಿಶಾಚರಃ ಪ್ರೇತಚಾರೀ ಮಹಾಶಕ್ತಿರ್ಮಹಾದ್ಯುತಿಃ ॥ ೪೩ ॥**

---

೪೧. **ಅಮೃತಃ**–ಅಮರನು "ಅಜರೋಽಮೃತ ಇತಿ ಶ್ರುತೇಃ" **ಶಾಶ್ವತಃ**–ನಿತ್ಯನು, ಸದಾಕಾಲದಲ್ಲಿಯೂ ಇರುವವನು. **ಶಾಂತಃ**—ಇಚ್ಛಾರಹಿತನು ತರಂಗ ರಹಿತವಾದ ಸಾಗರದಂತೆ ಶಾಂತವಾದ ಮನಸ್ಸುಳ್ಳವನು. **ಬಾಣಹಸ್ತಃಪ್ರತಾಪವಾನ್**—ತ್ರಿಪುರನಾಶಕಾಲದಲ್ಲಿ ಕೈಯಲ್ಲಿ ಬಾಣವನ್ನು ಹಿಡಿದು ಪರಾಕ್ರಮದಿಂದ ಯುದ್ಧಮಾಡಿದವನು. **ಕಮಂಡಲುಧರಃ**—ಕಮಂಡಲುವನ್ನು ಕೈಯಲ್ಲಿ ಹಿಡಿದಿರುವವನು. **ಧನ್ವೀ**—ಧನುರ್ಧರನು. **ಅವಾಙ್ಮನಸಗೋಚರಃ**—ಇವನ ಸ್ವರೂಪವನ್ನು ವಾಕ್ಯಗಳಿಂದ ಹೀಗೆಯೇ ಸರಿ ಎಂದು ವರ್ಣಿಸುವುದಾಗಲಿ, ಮನಸ್ಸಿನಲ್ಲಿ ಚಿಂತಿಸುವುದಾಗಲಿ ಸಾಧ್ಯವಿಲ್ಲ. "ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ" ಎಂದು ಶ್ರುತಿವಾಕ್ಯವು.

೪೨. **ಅತೀಂದ್ರಿಯೋ ಮಹಾಮಾಯಃ**–ಇಂದ್ರಿಯಗಳಿಗೆ ಅಗೋಚರನು, ಮಹಾಮಾಯಾಸ್ವರೂಪನು. **ಸರ್ವಾವಾಸಃ**—ಎಲ್ಲೆಲ್ಲಿಯೂ ವಾಸಮಾಡುವವನು. ಇವನಿಲ್ಲದ ಸ್ಥಳವಿಲ್ಲ. ಸರ್ವವ್ಯಾಪಿಯು. **ಚತುಷ್ಪಥಃ**—ಚತುರ್ವಿಧಪುರುಷಾರ್ಥಗಳಿಗೆ ಮಾರ್ಗದರ್ಶಕನು. **ಕಾಲಯೋಗೀ**—ಪ್ರಾಣಿಗಳಿಗೆ ಕರ್ಮಪರಿಪಾಕದ ಸಮಯದಲ್ಲಿ ಅವರವರ ಕರ್ಮಗಳಿಗನುಸಾರವಾಗಿ ಫಲಗಳನ್ನು ಕೊಡುವವನು. **ಮಹಾನಾದಃ**—ಗಂಭೀರವಾದ ಧ್ವನಿಯುಳ್ಳವನು, ನಾದಬ್ರಹ್ಮಸ್ವರೂಪನು. **ಮಹೋತ್ಸಾಹಃ**—ಜಗದುತ್ಪತ್ತಿಸ್ಥಿತಿಪ್ರಲಯಕರ್ಮಗಳಲ್ಲಿ ಸಮರ್ಥನು. **ಮಹಾಬಲಃ**—ಅಮಿತಪರಾಕ್ರಮಶಾಲಿಯು.

೪೩. **ಮಹಾಬುದ್ಧಿಃ**—ಅತ್ಯಂತ ಜ್ಞಾನಯುಕ್ತನು. **ಮಹಾವೀರ್ಯಃ**–ಮಹಾಪರಾಕ್ರಮವಂತನು. **ಭೂತಚಾರೀ**–ಪ್ರಾಣಿಗಳ ಚಲನವಲನಗಳಿಗೆ ನಿಯಂತೃವು, **ಪುರಂದರಃ**—ತ್ರಿಪುರವಿಧ್ವಂಸಿಯು. **ನಿಶಾಚರಃ**—ಸಾಯಂಕಾಲದಲ್ಲಿ

**ಅನಿರ್ದೇಶ್ಯವಪುಃ ಶ್ರೀಮಾನ್ಸರ್ವಾಚಾರ್ಯಮನೋಗತಿಃ ।**
**ಬಹುಶ್ರುತಿರ್ಮಹಾಮಾಯೋ ನಿಯತಾತ್ಮಾ ಧ್ರುವೋಽಧ್ರುವಃ ॥ ೪೪ ॥**

**ತೇಜಸ್ತೇಜೋ ದ್ಯುತಿಧರೋ ಜನಕಃ ಸರ್ವಶಾಸನಃ ।**
**ನೃತ್ಯಪ್ರಿಯೋ ನಿತ್ಯನೃತ್ಯಃ ಪ್ರಕಾಶಾತ್ಮಾ ಪ್ರಕಾಶಕಃ ॥ ೪೫ ॥**

---

ಸಂಚರಿಸುವವನು. **ಪ್ರೇತಚಾರೀ**— ಭೂತಪ್ರೇತಪಿಶಾಚಾದಿಗಳಿಗೆ ಚಲನಕರ್ತೃವು ಅಥವಾ ಅವರೊಡನೆ ಸಂಚರಿಸುವವನು. **ಮಹಾಶಕ್ತಿರ್ಮಹಾದ್ಯುತಿಃ**—ಮಹಾ ಸಾಮರ್ಥ್ಯವಂತನು ಮತ್ತು ಮಹಾಜ್ಯೋತಿಸ್ಸ್ವರೂಪನು. "ಜ್ಯೋತಿಷಾಂ ಜ್ಯೋತಿರಿತ್ಯಾದಿ ಶ್ರುತೇಃ"

೪೪. **ಅನಿರ್ದೇಶ್ಯವಪುಃ**—ಇವನ ಶರೀರವು ಅಥವಾ ಸ್ವರೂಪವು ಹೀಗೆಯೇ ಇದೆಯೆಂದು ಹೇಳಲಸಾಧ್ಯವು, ಶರೀರರಹಿತನು. **ಶ್ರೀಮಾನ್**—ಷಡ್ಗುಣೈಶ್ವರ್ಯ ಸಂಪನ್ನನು. **ಸರ್ವಾಚಾರ್ಯಮನೋಗತಿಃ**—ಸಮಸ್ತ ಆಚಾರ್ಯರ ಅಥವಾ ಜ್ಞಾನೋಪದೇಶಕರ ಮನಸ್ಸಿನ ಮೂಲಕ ಜನಗಳಿಗೆ ಜ್ಞಾನವನ್ನು ಉಪದೇಶಿಸು ವವನು. **ಬಹುಶ್ರುತಿಃ**—ಅನೇಕ ಶಾಸ್ತ್ರಗಳನ್ನು ತಿಳಿದವನು. **ಮಹಾಮಾಯಃ**—ಜಗತ್ತನ್ನು ತನ್ನ ಮಾಯಾಪ್ರಭಾವದಿಂದ ಮೋಹಗೊಳಿಸುವವನು. **ನಿಯತಾತ್ಮಾ**–ನಿತ್ಯಾತ್ಮಸ್ವರೂಪನು. **ಧ್ರುವೋಽಧ್ರುವಃ**--ನಿಶ್ಚಲನು, ಸತ್ಯಸ್ವರೂಪನು. ಇವನಿಗಿಂತಲೂ ಸತ್ಯಸ್ವರೂಪರು ಬೇರೆ ಇಲ್ಲ.

೪೫. **ಓಜಸ್ತೇಜೋದ್ಯುತಿಧರಃ**—ಪ್ರಾಣ ಬಲಶೌರ್ಯಾದಿಗುಣಗಳಿಂದ ಶೋಭಿಸುವವನು. **ನರ್ತಕಃ**—ತಾಂಡವನರ್ತನಮಾಡುವವನು. **ಜನಕಃ**—ಜಗತ್ಸೃಷ್ಟಿಕರ್ತನು. **ಸರ್ವಶಾಸನಃ**—ಸರ್ವರಿಗೂ ನಿಯಾಮಕನು. "ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಗ್ಂ ಸರ್ವಾತ್ಮಾ" ಎಂದು ಶ್ರುತಿವಾಕ್ಯವು. **ನೃತ್ಯಪ್ರಿಯೋ ನಿತ್ಯನೃತ್ಯಃ**-ಭಕ್ತರು ಮಾಡುವ ನೃತ್ಯಾದಿಗಳಿಂದ ಸಂತುಷ್ಟನಾಗುವವನು. **ಪ್ರಕಾಶಾತ್ಮಾ ಪ್ರಕಾಶಕಃ**- ಸರ್ವಜಗತ್ತನ್ನೂ ಪ್ರಕಾಶಗೊಳಿಸುವವನು.

**ಸ್ಪಷ್ಟಾಕ್ಷರೋ ಬುಧೋ ಮಂತ್ರಸ್ಸಮಾನಸ್ಸಾರಸಂಪ್ಲವಃ ।**
**ಯುಗಾದಿಕೃದ್ಯುಗಾವರ್ತೋ ಗಂಭೀರೋ ವೃಷವಾಹನಃ ॥ ೪೬ ॥**

**ಇಷ್ಟೋ ವಿಶಿಷ್ಟಶ್ಶಿಷ್ಟೇಷ್ಟಃ ಸುಲಭಃ ಸಾರಶೋಧನಃ ।**
**ತೀರ್ಥರೂಪಸ್ತೀರ್ಥನಾಮಾ ತೀರ್ಥದೃಶ್ಯಸ್ತು ತೀರ್ಥದಃ ॥ ೪೭ ॥**

**ಅಪಾಂನಿಧಿರಧಿಷ್ಠಾನಂ ದುರ್ಜಯೋ ಜಯಕಾಲವಿತ್ ।**
**ಪ್ರತಿಷ್ಠಿತಃ ಪ್ರಮಾಣಜ್ಞೋ ಹಿರಣ್ಯಕವಚೋ ಹರಿಃ ॥ ೪೮ ॥**

---

೪೬ **ಸ್ಪಷ್ಟಾಕ್ಷರಃ**—ಓಂಕಾರಸ್ವರೂಪನು. **ಬುಧಃ**—ಸರ್ವಜ್ಞನು. **ಮಂತ್ರಃ**—ಋಗ್ಯಜುಸ್ಸಾಮಲಕ್ಷಣಯುಕ್ತನು. **ಸಮಾನಃ**—ಯಾರಲ್ಲಿಯೂ ಪಕ್ಷಪಾತವಿಲ್ಲದೆ ಸರ್ವಸಮಭಾವವುಳ್ಳವನು. **ಸಾರಸಂಪ್ಲವಃ**—ವೇದಾಂತರೂಪನು, ಸಂಸಾರಸಾಗರವನ್ನು ದಾಟಿಸುವವನು. **ಯುಗಾದಿಕೃದ್ಯುಗಾವರ್ತಃ**—ಯುಗಾದಿ ಕಾಲಭೇದಗಳನ್ನು ಸೃಷ್ಟಿಸಿ ಕಾಲನಿಯಾಮಕನಾಗಿ ಕಾಲಾತ್ಮನೆನಿಸಿದವನು. **ಗಂಭೀರಃ**—ಜ್ಞಾನೈಶ್ವರ್ಯಾದಿಬಲಗಳಿಂದ ಗಂಭೀರಸ್ವಭಾವವುಳ್ಳವನು. **ವೃಷವಾಹನಃ**—ನಂದಿವಾಹನನು.

೪೭ **ಇಷ್ಟಃ**—ಭಕ್ತರಿಗೆ ಪ್ರಿಯನಾದವನು, ಪರಮಾನಂದಾತ್ಮಕನು ಅಥವಾ ಯಜ್ಞಯಾಗಾದಿಗಳಲ್ಲಿ ಆರಾಧಿಸಲ್ಪಡುವವನು. **ವಿಶಿಷ್ಟಃ**—ಸರ್ವೋತ್ಕೃಷ್ಟನು. **ಶಿಷ್ಟೇಷ್ಟಃ**—ಸಾಧುಜನಗಳಿಗೆ ಪ್ರಿಯನು. **ಸುಲಭಃ**—ಭಕ್ತರಿಗೆ ಸುಲಭಗಮ್ಯನು. **ಸಾರಶೋಧನಃ**—ಸಾರವಸ್ತುಗಳಲ್ಲಿಯೂ ಸಾರಭೂತನಾದವನು. **ತೀರ್ಥರೂಪಃ**—ಸರ್ವವಿದ್ಯಾಸ್ವರೂಪನು. **ತೀರ್ಥನಾಮಾ**—ಗಂಗಾದಿ ತೀರ್ಥಗಳಂತೆ ಭಕ್ತರನ್ನು ಉದ್ಧರಿಸುವುದರಿಂದ ತೀರ್ಥನೆನಿಸಿದವನು. **ತೀರ್ಥದೃಶ್ಯ**—ಗಂಗಾದಿತೀರ್ಥಗಳಿಂದ ಸೇವಿಸಲ್ಪಡುವವನು. **ತೀರ್ಥದಃ**—ತೀರ್ಥಸ್ನಾನಾದಿಗಳನ್ನು ಮಾಡುವವರಿಗೆ ಫಲಗಳನ್ನು ಕೊಡುವವನು.

೪೮. **ಅಪಾಂನಿಧಿಃ**—ಸಾಗರನಂತೆ ಗಂಭಿರಸ್ವಭಾವವುಳ್ಳವನು. **ಅಧಿಷ್ಠಾನಂ**—ಸರ್ವಪ್ರಾಣಿಗಳಿಗೂ ಉಪಾದಾನಕಾರಣನು. **ದುರ್ಜಯಃ**—ಜ್ಞಾನವೈರಾಗ್ಯಾದಿಗುಣಗಳಿಲ್ಲದ ಸಂಸಾರಿಗಳಿಂದ ಜಯಿಸಲಶಕ್ಯನು ಎಂದರೆ ತಿಳಿಯಲಶಕ್ಯನು. **ಜಯಕಾಲವಿತ್**—ಅಸುರಾದಿಗಳ ನಾಶದ ಮತ್ತು ದೇವಾದಿಗಳ ಜಯದ

**ವಿಮೋಚನಸ್ಸುರಗಣೋ ವಿದ್ಯೇಶೋ ಬಿಂದುಸಂಶ್ರಯಃ ।**
**ವಾತರೂಪೋsಮಲೋನ್ಮಾಯೀ ವಿಕರ್ತಾ ಗಹನೋ ಗುಹಃ ॥ ೪೯ ॥**

**ಕರಣಂ ಕಾರಣಂ ಕರ್ತಾ ಸರ್ವಬಂಧವಿಮೋಚನಃ ।**
**ವ್ಯವಸಾಯೋ ವ್ಯವಸ್ಥಾನಃ ಸ್ಥಾನದಃ ಜಗದಾದಿಜಃ ॥ ೫೦ ॥**

---

ಕಾಲವನ್ನು ತಿಳಿದವನು ಎಂದರೆ ದೇವಾಸುರರ ಜಯಾಪಜಯಗಳ ನಿಯಾಮಕನು. **ಪ್ರತಿಷ್ಠಿತಃ**—ತನ್ನ ಮಹಾಮಹಿಮೆಯಿಂದ ಸರ್ವಜಗತ್ತಿನಲ್ಲಿಯೂ ಬೆಳಗುತ್ತಿರುವವನು. "ಸ ಭಗವಾನ್ ಕಸ್ಮಿನ್ಪ್ರತಿಷ್ಠಿತ ಇತಿ ಸ್ವೇ ಮಹಿಮ್ನೀತಿ ಶ್ರುತೇಃ" **ಪ್ರಮಾಣಜ್ಞಃ**—ಪ್ರತ್ಯಕ್ಷಾದಿಪ್ರಮಾಣಗಳಿಂದ ಸರ್ವಪ್ರಾಣಿಗಳಿಂದಲೂ ತಿಳಿಯಲ್ಪಡುವವನು. **ಹಿರಣಕವಚಃ**—ಸುವರ್ಣಕವಚಧಾರಿಯು "ನಮೋ ಹಿರಣ್ಯಬಾಹವೇ" "ಹಿರಣ್ಯವರ್ಣಾಯ ಹಿರಣ್ಯರೂಪಾಯೇತಿ" ಶ್ರುತೇಃ **ಹರಿಃ**—ಸರ್ವಪಾಪಹರನು.

೪೯. **ವಿಮೋಚನಃ**-ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವತಗಳೆಂಬ ಮೂರು ವಿಧವಾದ ದುಃಖಗಳನ್ನು ನಾಶಮಾಡುವವನು. **ಸುರಗಣಃ**—ಸರ್ವದೇವಾತ್ಮಕನು. **ವಿದ್ಯೇಶಃ**—ಸರ್ವವಿದ್ಯಾಪ್ರವರ್ತಕನು. **ಬಿಂದುಸಂಶ್ರಯಃ**—ಪ್ರಣವಮಂತ್ರಕ್ಕೆ ಆತ್ಮಭೂತನು, ಓಂಕಾರಸ್ವರೂಪನು. **ಭಾಲರೂಪಃ**—ಬ್ರಹ್ಮನ ಲಲಾಟದಲ್ಲಿ ಉತ್ಪನ್ನನಾದವನು. **ಬಲೋನ್ಮತ್ತಃ**—ತನ್ನ ಬಲದಿಂದ ಸರ್ವಶತ್ರುಗಳನ್ನು ಸಂಹಾರ ಮಾಡುವವನು. **ವಿಕರ್ತಾ**—ವಿಚಿತ್ರವಾದ ಭುವನಗಳ ಕರ್ತೃವು. **ಗಹನಃ**—ಇವನ ಸಾಮರ್ಥ್ಯವನ್ನೂ ಲೀಲೆಗಳನ್ನೂ ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. **ಗುಹಃ**—ಮಾಯಾಸ್ವರೂಪನು. ರಹಸ್ಯನಾಗಿರುವ ಈ ಸ್ವರಸ್ವರೂಪವನ್ನು ತಿಳಿಯಲು ಕಷ್ಟವು.

೫೦. **ಕರಣಂ**—ಜಗದುತ್ಪತ್ತಿಗೆ ಸಾಧಕನು. **ಕಾರಣಂ**—ಉಪಾದಾನ ಮತ್ತು ನಿಮಿತ್ತಕಾರಣನು. **ಕರ್ತಾ**—ಸೃಷ್ಟಿಕರ್ತನು, ಸ್ವತಂತ್ರನು **ಸರ್ವಬಂಧವಿಮೋಚನಃ**—ಶ್ರೇಷ್ಠವಾದ ಆತ್ಮಜ್ಞಾನವನ್ನು ಭಕ್ತರುಗಳಿಗೆ ಕರುಣಿಸುವುದರಿಂದ ಅವರ ಅವಿದ್ಯವೇ ಮೊದಲಾದ ಸಂಸಾರ ಬಂಧನಗಳನ್ನು ನಾಶಮಾಡುವವನು. **ವ್ಯವಸಾಯಃ**—ಸಚ್ಚಿನ್ಮಾತ್ರಸ್ವರೂಪನು. **ವ್ಯವಸ್ಥಾನಃ**—ವರ್ಣಾಶ್ರಮಾದಿಧರ್ಮಗಳ ನಿಯಾಮಕನು. **ಸ್ಥಾನದಃ**—ಪ್ರಾಣಿಗಳಿಗೆ ಅವರವರ ಕರ್ಮಾನುಸಾರವಾಗಿ ಸ್ವರ್ಗನರಕ, ಮೋಕ್ಷಾದಿಸ್ಥಾನಗಳನ್ನು ಕೊಡುವವನು. **ಜಗದಾದಿಜಃ**—ಹಿರಣ್ಯಗರ್ಭರೂಪದಿಂದ ಜಗತ್ತಿಗೆ ಆದಿಯಲ್ಲಿ ಉತ್ಪನ್ನನಾದವನು.

**ಗುರುದೋ ಲಲಿತೋ ಭೇದೋ ನವಾತ್ಮಾತ್ಮನಿ ಸಂಸ್ಥಿತಃ ।**
**ವೀರೇಶ್ವರೋ ವೀರಭದ್ರೋ ವೀರಾಸನವಿಧಿರ್ಗುರುಃ** ॥ ೫೧ ॥

**ವೀರಚೂಡಾಮಣಿರ್ವೇತ್ತಾ ಚಿದಾನಂದೋ ನದೀಶ್ವರಃ ।**
**ಆಜ್ಞಾಧರಸ್ತ್ರಿಶೂಲೀ ಚ ಶಿಪಿವಿಷ್ಟಃ ಶಿವಾಲಯಃ** ॥ ೫೨ ॥

**ವಾಲಖಿಲ್ಯೋ ಮಹಾವೀರಸ್ತಿಗ್ಮಾಂಶುರ್ಬಧಿರಃ ಖಗಃ ।**
**ಅಭಿರಾಮಸ್ಸುಶರಣಸ್ಸುಬ್ರಹ್ಮಣ್ಯಃ ಸುಧಾಪತಿಃ** ॥ ೫೩ ॥

---

೫೧. **ಗುರುದಃ**–ಶ್ರೇಷ್ಠವಾದ ಮೋಕ್ಷಪ್ರದನು ಅಥವಾ ಜ್ಞಾನೋಪದೇಶಕನಾದ ಗುರುವನ್ನು ಅನುಗ್ರಹಿಸುವವನು. **ಲಲಿತಃ**—ಸರ್ವಸುಂದರರೂಪನು. **ಅಭೇದಃ**–ಅದ್ವೈತಸ್ವರೂಪನು. **ನವಾತ್ಮಾತ್ಮನಿ ಸಂಸ್ಥಿತಃ**—ಪಂಚಭೂತಾತ್ಮಕವಾದ ಜೀವರುಗಳ ಶರೀರದಲ್ಲಿ ಅಂತರ್ಯಾಮಿರೂಪದಿಂದ ಇರುವವನು. **ವೀರೇಶ್ವರಃ**—ಶೂರರಿಗೆ ಅಧಿಪತಿಯು. **ವೀರಭದ್ರಃ**—ವೀರಭದ್ರನಾಮಕ ಗಣಸ್ವರೂಪನು. **ವೀರಾಸನವಿಧಿಃ**—ವೀರರ ಆಸನವಿಧಾನದಲ್ಲಿ ಕುಳಿತಿರುವವನು. **ಗುರುಃ**–ಸಮಸ್ತ ಜಗತ್ತಿಗೂ ಗುರುವು, ಜ್ಞಾನೋಪದೇಶಕನು.

೫೨. **ವೀರಚೂಡಾಮಣಿ**—ವೀರರಿಗೆ ಶಿರೋರತ್ನಪ್ರಾಯನು ವೇತ್ತಾ ಸರ್ವಜ್ಞನು. **ಚಿದಾನಂದಃ**—ಸಚ್ಚಿದಾನಂದಸ್ವರೂಪನು. **ನದೀಶ್ವರಃ**—ನದಿಗಳಿಗೆ ಈಶ್ವರನಾದ ಸಾಗರನಂತೆ ಗಂಭೀರಸ್ವಭಾವವುಳ್ಳವನು. **ಆಜ್ಞಾಧರಃ**—ಅವಿಚ್ಛಿನ್ನ ಸಂತತಿರೂಪವಾಗಿ ಅಭಿವೃದ್ಧಿಗೊಳ್ಳುತ್ತಿರುವ ಜಗತ್ತಿಗೆ ಆಜ್ಞೆಯನ್ನು ಕೊಡುವವನು, ನಿಯಮಕನು. **ತ್ರಿಶೂಲೀ**—ತ್ರಿಶೂಲವೆಂಬ ಆಯುಧವನ್ನು ಧರಿಸಿರುವವನು." **ಶಿಪಿವಿಷ್ಟಃ**— ಯಜ್ಞದಲ್ಲಿ ವಿಷ್ಣುರೂಪನಿಂದಲೂ ಪಶುರೂಪದಿಂದ ಇರುವವನು. "ಯಜ್ಞೋ ವೈ ವಿಷ್ಣುಃ ಪಶವಃ ಶಿಪಿರ್ಯಜ್ಞ ಏವ ಪಶುಷು ಪ್ರವಿಶ್ಯ ತಿಷ್ಠತೀತಿ. ಶ್ರುತೇಃ **ಶಿವಾಲಯಃ**—ಕಲ್ಯಾಣಯುಕ್ತಸ್ಥಾನದಲ್ಲಿರುವವನು.

೫೩. **ವಾಲಖಿಲ್ಯಃ**—ವಾಲಖಿಲ್ಯಋಷಿರೂಪನು. **ಮಹಾವೀರಃ**—ಮಹಾ ಪರಾಕ್ರಮಿಯು. **ತಿಗ್ಮಾಂಶುಃ**— ಸೂರ್ಯರೂಪನು. **ಬಧಿರಃ**— ಶ್ರೋತ್ರೇಂದ್ರಿಯ ರಹಿತನು. ಈಶ್ವರನು ಸರ್ವಶಕ್ತನಾದುದರಿಂದ ಶ್ರವಣಾದಿವಿಷಯಗ್ರಹಣಾದಿಗಳಿಗೆ ಶ್ರೋತ್ರೇಂದ್ರಿಯಾದಿ ಇಂದ್ರಿಯ ಸಾಧನಗಳು ಇವನಿಗೆ ಅವಶ್ಯಕವಿರುವುದಿಲ್ಲ.

**ಮಘವಾ ಕೌಶಿಕೋ ಗೋಮಾನ್ವಿರಾಮಃ ಸರ್ವಸಾಧನಃ ।**
**ಲಲಾಟಾಕ್ಷೋ ವಿಶ್ವದೇಹಸ್ಸಾರಸ್ಸಂಸಾರಚಕ್ರಭೃತ್ ॥ ೫೪ ॥**

**ಅಮೋಘದಂಡೀ ಮಧ್ಯಸ್ಥೋ ಹರಿಣೋ ಬ್ರಹ್ಮವರ್ಚಸಃ ।**
**ಪರಮಾರ್ಥಃ ಪರಮಾಯಸ್ಸಂಚಯೋ ವ್ಯಾಘ್ರಕೋಮಲಃ ॥ ೫೫ ॥**

---

**ಖಗಃ**—ಆಕಾಶಸಂಚಾರಸಾಮರ್ಥ್ಯವುಳ್ಳವನು. **ಅಭಿರಾಮಃ**—ಯೋಗಿರೂಪದಿಂದ ಆತ್ಮಧ್ಯಾನದಲ್ಲಿ ತಲ್ಲೀನನಾಗಿ ವಿಹರಿಸುವವನು. **ಸುಶರಣಃ**—ದುಃಖಿತರಾದ ಜನರಿಗೆ ಶರಣ್ಯನು. **ಸುಬ್ರಹ್ಮಣ್ಯಃ**—ಬ್ರಹ್ಮಸ್ವರೂಪಜ್ಞನು. ಬ್ರಹ್ಮಜ್ಞಾನಿಗಳಿಗೆ ಹಿತಕಾರಕನು. **ಸುಧಾಪತಿಃ**—ಅಮೃತಕ್ಕೆ ಅಥವಾ ಮೋಕ್ಷಕ್ಕೆ ಸ್ವಾಮಿಯು.

೫೪. **ಮಘವಾನ್ ಕೌಶಿಕಃ**—ಇಂದ್ರಸ್ವರೂಪನು. **ಗೋಮಾನ್**—ರಶ್ಮಿಮಂತನು, ಸ್ವಯಂಪ್ರಕಾಶಕನು ಅಥವಾ ಪಶುಪತಿಯು. **ವಿರಾಮಃ**—ಪ್ರಾಣಿಗಳಿಗೆ ಅವಸಾನ ಕರ್ತೃವು. **ಸರ್ವಸಾಧನಃ**—ಸರ್ವಪುರುಷಾರ್ಥಗಳಿಗೂ ಸಾಧನಭೂತನು ಎಂದರೆ ಈಶ್ವರಭಕ್ತಿಯಿಂದ ಸಮಸ್ತಪುರುಷಾರ್ಥಗಳನ್ನೂ ಸಾಧಿಸಬಹುದು. **ಲಲಾಟಾಕ್ಷಃ**—ಭಾಲನೇತ್ರನು, ಲಲಾಟದಲ್ಲಿ ಮೂರನೆಯ ಕಣ್ಣುಳ್ಳವನು, ವಿರೂಪಾಕ್ಷನು. **ವಿಶ್ವದೇಹಃ**—ಜಗತ್ತೇ ಶರೀರವಾಗಿವುಳ್ಳವನು ಎಂದರೆ ಜಗತ್ಸ್ವರೂಪನು. **ಸಾರಃ**—ಸರ್ವಶ್ರೇಷ್ಠನು. **ಸಂಸಾರಚಕ್ರಭೃತ್**—ಸಮಸ್ತಚರಾಚರ ಪ್ರಪಂಚವನ್ನೂ ಧರಿಸಿ ಪೋಷಿಸುವವನು.

೫೫. **ಅಮೋಘದಂಡೀ**-ನಿಷ್ಪಕ್ಷಪಾತವಾಗಿ ವರ್ತಿಸುವವನು. **ಮಧ್ಯಸ್ಥಃ**-ಪಕ್ಷಪಾತರಹಿತನು. ನ್ಯಾಯದಿಂದ ವರ್ತಿಸುವವನು. **ಹರಿಣಃ**—ತೇಜಸ್ಸ್ವರೂಪನು. **ಬ್ರಹ್ಮವರ್ಚಸಃ**-ಬ್ರಹ್ಮಸಂಬಂಧವಾದ ತೇಜಸ್ಸಿನಿಂದ ಬೆಳಗುವವನು. **ಪರಮಾರ್ಥಃ**-ಮೋಕ್ಷರೂಪವಾದ ಪುರುಷಾರ್ಥಸ್ವರೂಪನು. **ಪರೋಮಾಯಾ**—ಉತ್ಕೃಷ್ಟಮಾಯಾಸ್ವರಪನು. **ಸಂಚಯಃ**—ಗುಣಗಳ ರಾಶಿಯು. **ವ್ಯಾಘ್ರಲೋಚನಃ**—ವ್ಯಾಘ್ರದಂತೆ ಕ್ರೂರವಾದ ನೇತ್ರವುಳ್ಳವನು.

**ರುಚಿರ್ಬಹುರುಚಿರ್ವೈದ್ಯೋ ವಾಚಸ್ಪತಿರಹಸ್ಪತಿಃ ।**
**ರವಿರ್ವಿರೋಚನಃ ಸ್ಕಂದಃ ಶಾಸ್ತಾ ವೈವಸ್ವತೋ ಯಮಃ ॥ ೫೬ ॥**

**ಯುಕ್ತಿರುನ್ನತಕೀರ್ತಿಶ್ಚ ಸಾನುರಾಗಃ ಪುರಂಜನಃ ।**
**ಕೈಲಾಸಾಧಿಪತಿಃ ಕಾಂತಸ್ಸವಿತಾ ರವಿಲೋಚನಃ ॥ ೫೭ ॥**

**ವಿಶ್ವೋತ್ತಮೋ ವೀತಭಯೋ ವಿಶ್ವಭರ್ತಾ ನಿವಾರಿತಃ ।**
**ನಿತ್ಯೋ ನಿಯತಕಲ್ಯಾಣಃ ಪುಣ್ಯಶ್ರವಣಕೀರ್ತನಃ ॥ ೫೮ ॥**

---

೫೬. **ರುಚಿಃ**—ದೀಪ್ತಿರೂಪನು. **ಬಹುರುಚಿಃ**—ಅತ್ಯಂತಕಾಂತಿಯುಕ್ತನು. **ವೈದ್ಯಃ**—ಸಂಸಾರಸಾಗರವನ್ನು ದಾಟಿಸುವ ವೈದ್ಯನು, ಧನ್ವಂತರಿಸ್ವರೂಪನು. **ವಾಚಸ್ಪತಿಃ**—ಚತುರ್ಮುಖಬ್ರಹ್ಮಸ್ವರೂಪನು. **ಅಹಸ್ಪತಿಃ**—ಸೂರ್ಯಸ್ವರೂಪನು. **ರವಿಃ**—ರಸಗ್ರಹಣಶಕ್ತನು, ಸೂರ್ಯನಂತೆ ಪ್ರಕಾಶಮಾನನು. **ವಿರೋಚನಃ**—ಅಗ್ನಿ ಅಥವಾ ಸೂರ್ಯರೂಪನು. **ಸ್ಕಂದಃ**—ಅಮೃತರೂಪದಿಂದ ಸ್ರವಿಸುತ್ತಲೂ ವಾಯುರೂಪದಿಂದ ಶೋಷಿಸುತ್ತಲೂ ಇರುವವನು. **ಶಾಸ್ತಾ ವೈವಸ್ವತೋ ಯಮಃ**—ಸೂರ್ಯಪುತ್ರನಾದ ಯಮನಂತೆ ಪ್ರಾಣಿಗಳ ಕರ್ಮಾಕರ್ಮಗಳನ್ನು ವಿವೇಚನೆ ಮಾಡಿ ಶಾಸನ ಅಥವಾ ಆಜ್ಞೆಮಾಡುವವನು, ಕರ್ಮನಿಯಾಮಕನು.

೫೭. **ಯುಕ್ತಿರುನ್ನತಕೀರ್ತಿಃ**—ಅಷ್ಟಾಂಗಸಹಿತಯೋಗ ಅಥವಾ ನ್ಯಾಯ ರೂಪವಾದ ಕೀರ್ತಿಯುಳ್ಳವನು. **ಸಾನುರಾಗಃ**—ಭಕ್ತರಲ್ಲಿ ಪ್ರೀತಿಯುಳ್ಳವನು. **ಪುರಂಜಯಃ**—ತ್ರಿಪುರಧ್ವಂಸಿಯು. **ಕೈಲಾಸಾಧಿಪತಿಃ**—ಕೈಲಾಸಕ್ಕೆ ಸ್ವಾಮಿಯು. **ಕಾಂತಃ**—ಮನೋಹರನು. **ಸವಿತಾ**—ಸರ್ವಜಗದುತ್ಪನ್ನನು, ಸವಿತೃಸ್ವರೂಪನು. **ರವಿಲೋಚನಃ**—ಸೂರ್ಯರೂಪವಾದ ನೇತ್ರವುಳ್ಳವನು. "ಅಗ್ನಿರ್ಮೂರ್ಧಾ ಚಕ್ಷುಷೀ ಸೂರ್ಯಾವಿತಿ ಶ್ರುತೇಃ"

೫೮. **ವಿಶ್ವೋತ್ತಮಃ**—ಸರ್ವಶ್ರೇಷ್ಠನು. **ವೀತಭಯಃ**—ಭಯರಹಿತನು. **ವಿಶ್ವಭರ್ತಾ**—ಸಂಸಾರಪೋಷಕನು, ಜಗದೊಡೆಯನು. **ಅನಿವಾರಿತಃ**—ಕರ್ಮಫಲಗಳನ್ನು ಕೊಡುವುದರಲ್ಲಿ ತಡೆಯಿಲ್ಲದವನು. ಇವನು ಮಾಡುವ ಕಾರ್ಯಗಳನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. **ನಿತ್ಯಃ**—ಉತ್ಪತ್ತಿನಾಶರಹಿತನು. **ನಿಯತಕಲ್ಯಾಣಃ**—ಅಖಂಡಕಲ್ಯಾಣದಾಯಕನು. **ಪುಣ್ಯಶ್ರವಣಕೀರ್ತನಃ**—ಇವನ ನಾಮಸಂಕೀರ್ತನೆಯಿಂದಲೂ, ನಾಮಶ್ರವಣದಿಂದಲೂ ಜನರು ಪವಿತ್ರರಾಗುವರು.

**ದೂರಶ್ರವೋ ವಿಶ್ವಸಹೋ ಧ್ಯೇಯೋ ದುಃಸ್ವಪ್ನನಾಶನಃ ।**
**ಉತ್ತಾರಣೋ ದುಷ್ಕೃತಿಹಾ ವಿಜ್ಞೇಯೋ ದುಸ್ಸಹೋ ಭವಃ ॥ ೫೯ ॥**

**ಅನಾದಿರ್ಭೂರ್ಭುವೋ ಲಕ್ಷ್ಮೀಃ ಕಿರೀಟೀ ತ್ರಿದಶಾಧಿಪಃ ।**
**ವಿಶ್ವಗೋಪ್ತಾ ವಿಶ್ವಕರ್ತಾ ಸುವೀರೋ ರುಚಿರಾಂಗದಃ ॥ ೬೦ ॥**

**ಜನನೋ ಜನಜನ್ಮಾದಿಃ ಪ್ರೀತಿಮಾನ್ನೀತಿಮಾನ್ಧ್ರುವಃ ।**
**ವಶಿಷ್ಠಃ ಕಶ್ಯಪೋ ಭಾನುರ್ಭೀಮೋ ಭೀಮಪರಾಕ್ರಮಃ ॥ ೬೧ ॥**

---

೫೯. **ದೂರಶ್ರವಃ**—ದೂರದೇಶದಲ್ಲಿದ್ದರೂ ಕೇಳಬಲ್ಲನು, ದೂರಶ್ರವಣ ಶಕ್ತಿಯುಳ್ಳವನು. **ವಿಶ್ವಸಹಃ**—ಜಗದುದ್ಧಾರಕನು. **ಧ್ಯೇಯಃ**—ಧ್ಯಾನಗಮ್ಯನು, ಸಮಾಧಿಯಲ್ಲಿ ಧ್ಯಾನಕ್ಕೆ ವಿಷಯನಾದವನು. ಎಂದರೆ ಸಮಾಧಿಸ್ಥಿತಿಯಲ್ಲಿ ಯೋಗಿಗಳು ಇವನನ್ನು ಧ್ಯಾನಿಸುವರು. **ದುಃಸ್ವಪ್ನನಾಶನಃ**—ದುಃಸ್ವಪ್ನವನ್ನು ನಾಶಮಾಡುವವನು. **ಉತ್ತಾರಣಃ**—ಸಂಸಾರಸಾಗರವನ್ನು ದಾಟಿಸುವವನು. **ದುಷ್ಕೃತಿಹಾ**—ಪಾಪಿಗಳನ್ನು ಸಂಹಾರಮಾಡುವವನು. **ವಿಜ್ಞೇಯಃ**—ವಿಶೇಷವಾಗಿ ಜನರಿಂದ ತಿಳಿಯಲ್ಪಡಲು ಯೋಗ್ಯನು. **ದುಃಸಹಃ**—ಅಸುರಾದಿಗಳು ಇವನ ಪರಾಕ್ರಮವನ್ನು ಸಹಿಸಲಾರರು. **ಅಭವಃ**—ಜನ್ಮರಹಿತನು.

೬೦. **ಅನಾದಿಃ**—ಆದಿರಹಿತನು, ಸರ್ವಕ್ಕೂ ಕಾರಣನು. **ಭೂರ್ಭುವೋ ಲಕ್ಷ್ಮೀಃ**—ಭೂರ್ಭುವಗಳೆಂಬ ಲೋಕಗಳಿಗೆ ಶೋಭಾಯಮಾನನು. ಭೂರ್ಭುವ ಎಂಬ ವ್ಯಾಹೃತಿಸ್ವರೂಪನು. **ಕಿರಿಟೀ**—ಕಿರೀಟಧಾರಿಯು. **ತ್ರಿದಶಾಧಿಪಃ**—ದೇವತೆಗಳಿಗೆ ಸ್ವಾಮಿಯು. **ವಿಶ್ವಗೋಪ್ತಾ**—ಜಗದ್ರಕ್ಷಕನು. **ವಿಶ್ವಕರ್ತಾ**—ಜಗತ್ತನ್ನು ಉತ್ಪತ್ತಿಮಾಡಿದವನು. **ಸುವೀರಃ**—ಮಹಾಪರಾಕ್ರಮಶಾಲಿಯು. **ರುಚಿರಾಂಗದಃ**—ಸುಂದರಾವಯವಗಳನ್ನು ಅನುಗ್ರಹಿಸುವವನು.

೬೧. **ಜನನಃ**—ಪ್ರಾಣಿಗಳನ್ನು ಸೃಷ್ಟಿಸುವವನು. **ಜನಜನ್ಮಾದಿಃ**—ಪ್ರಾಣಿಗಳ ಜನ್ಮಕ್ಕೆ ಆದಿಕಾರಣನು. **ಪ್ರೀತಿಮಾನ್**—ಭಕ್ತವತ್ಸಲನು, ನಿತ್ಯಪ್ರೀತಿಯುಕ್ತನು. **ನೀತಿಮಾನ್**—ನಿತ್ಯನೀತಿಯುಕ್ತನು, ಧರ್ಮಸ್ವರೂಪನು. **ಧ್ರುವಃ**—ಸತ್ಯಸ್ವರೂಪನು. **ವಸಿಷ್ಠಃ**—ಪ್ರಳಯಕಾಲದಲ್ಲಿಯೂ ಇರುವವನು ಅಥವಾ ವಸಿಷ್ಠಋಷಿರೂಪನು. **ಕಶ್ಯಪಃ**—ಕಶ್ಯಪಋಷಿರೂಪನು. **ಭಾನುಃ**—ಪ್ರಕಾಶಮಾನನು.

**ಪ್ರಣವಸ್ಸತ್ಪಥಾಚಾರೋ ಮಹಾಕೋಶೋ ಮಹಾಧನಃ ।**
**ಜನ್ಮಾಧಿಪೋ ಮಹಾದೇವಸ್ಸಕಲಾಗಮಪಾರಗಃ ॥ ೬೨ ॥**

**ತತ್ತ್ವಂ ತತ್ತ್ವವಿದೇಕಾತ್ಮಾ ವಿಭುರ್ವಿಶ್ವವಿಭೂಷಣಃ ।**
**ಋಷಿರ್ಬ್ರಾಹ್ಮಣ ಐಶ್ವರ್ಯಂ ಜನ್ಮಮೃತ್ಯುಜರಾತಿಗಃ ॥ ೬೩ ॥**

---

"ತಮೇವ ಭಾಂತಮನುಭಾತಿ ಸರ್ವಮಿತಿ ಶ್ರುತೇಃ" **ಭೀಮಃ**—ದುಷ್ಟರಿಗೆ ಭಯಂಕರನು. **ಭೀಮಪರಾಕ್ರಮಃ**—ಅಸುರಾದಿಗಳಿಗೆ ಭಯವನ್ನುಂಟುಮಾಡುವ ಪರಾಕ್ರಮವುಳ್ಳವನು.

೬೨. **ಪ್ರಣವಃ**—ಓಂಕಾರರೂಪನು, ಪ್ರಣವಶಬ್ದವಾಚ್ಯನು. "ಅಥ ಕಸ್ಮಾದುಚ್ಯತೇ ಪ್ರಣವೋ ಯಸ್ಮಾದುಚ್ಚಾರ್ಯಮಾಣ ಏವರ್ಚೋ ಯಜೂಂಷಿ ಸಾಮಾನ್ಯಥರ್ವಾಂಗಿರಸಶ್ಚ ಯಜ್ಞೇ ಬ್ರಹ್ಮ ಬ್ರಾಹ್ಮಣೇಭ್ಯಃ ಪ್ರಣಮಯತಿ ತಸ್ಮಾದುಚ್ಯತೇ ಪ್ರಣವ ಇತಿ" ಎಂದು ಅಥರ್ವಶೀರ್ಷೋಪನಿಷದ್ವಾಕ್ಯವು, **ಸತ್ಪಥಾಚಾರಃ**—ಸನ್ಮಾರ್ಗಪ್ರವರ್ತಕನು ಅಥವಾ ಸನ್ಮಾರ್ಗದರ್ಶಕನು. **ಮಹಾಕೋಶಃ**—ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಮಯನು. **ಮಹಾಧನಃ**—ಅಪರಿಮಿತ ಐಶ್ವರ್ಯವುಳ್ಳವನು. **ಜನ್ಮಾಧಿಪಃ**—ಉತ್ಪತ್ತಿಗೆ ಸ್ವಾಮಿಯು ಎಂದರೆ ಪ್ರಾಣಿಗಳ ಜನ್ಮಾದಿಗಳಿಗೆ ನಿಯಾಮಕನು. **ಮಹಾದೇವಃ**—ದೇವತೆಗಳಲ್ಲೆಲ್ಲಾ ಅಧಿಕನೆನಿಸಿದವನು. ಅಷ್ಟಮೂರ್ತಿಗಳಲ್ಲಿ ಒಬ್ಬನು. **ಸಕಲಾಗಮಪಾರಗಃ**—ಸಮಸ್ತವೇದಗಳ ತತ್ತ್ವಾರ್ಥಗಳಲ್ಲಿ ಪಾರಂಗತನು.

೬೩. **ತತ್ತ್ವಂ**—ಬ್ರಹ್ಮಸ್ವರೂಪನು. **ತತ್ತ್ವವಿತ್**—ಬ್ರಹ್ಮಸ್ವರೂಪವನ್ನು ಯಥಾವತ್ತಾಗಿ ತಿಳಿದವನು. **ಏಕಾತ್ಮಾ**—ಆತ್ಮಶಬ್ದವಾಚ್ಯನು, ಪರಮಾತ್ಮನು, ಅದ್ವಿತೀಯನು, ಚೈತನ್ಯಸ್ವರೂಪನು. "ಆತ್ಮಾ ವಾ ಇದಮೇಕ ಏವಾಗ್ರ ಆಸೀದಿತಿ ಶ್ರುತೇಃ". **ವಿಭುಃ**—ಸರ್ವವ್ಯಾಪಕನು, ಸ್ವಾಮಿಯು. **ವಿಶ್ವಭೂಷಣಃ**—ಜಗತ್ತಿಗೆ ಭೂಷಣಪ್ರಾಯನು ಅಥವಾ ಇವನಿಂದ ಜಗತ್ತಿಗೆ ಭೂಷಣವುಂಟಾಗಿರುವುದು. **ಋಷಿಃ**—ಪರೋಕ್ಷ ಅಥವಾ ಇಂದ್ರಿಯಗಳಿಗೆ ಅಗೋಚರನು "ವಿಶ್ವಾಧಿಪೋ ರುದ್ರೋ ಮಹರ್ಷಿರಿತಿ ಶ್ರುತೇಃ", **ಬ್ರಾಹ್ಮಣಃ**—ಉತ್ತಮವರ್ಣರೂಪನು.

**ಪಂಚತತ್ತ್ವಸಮುತ್ಪತ್ತಿರ್ವಿಶ್ವೇಶೋ ವಿಮಲೋದಯಃ ।**
**ಅನಾದ್ಯಂತೋ ಹ್ಯಾತ್ಮಯೋನಿರ್ವತ್ಸಲೋ ಭೂತಲೋಕಧೃತ್** ॥ ೭೪ ॥

**ಗಾಯತ್ರೀವಲ್ಲಭಃ ಪಾಂಶುರ್ವಿಶ್ವಾವಾಸಃ ಪ್ರಭಾಕರಃ ।**
**ಶಿಶುರ್ಗಿರಿರತಸ್ಸಮ್ರಾಟ್ಸುಷೇಣಸ್ಸುರಶತ್ರುಹಾ** ॥ ೭೫ ॥

**ಅನೇಮಿರಿಷ್ಟನೇಮಿಶ್ಚ ಮುಕುಂದೋ ವಿಗತಜ್ವರಃ ।**
**ಸ್ವಯಂಜ್ಯೋತಿರ್ಮಹಾಜ್ಯೋತಿಸ್ತನುಜ್ಯೋತಿರಚಂಚಲಃ** ॥ ೭೬ ॥

---

**ಐಶ್ವರ್ಯಜನ್ಮಮೃತ್ಯುಜರಾತಿಗಃ**—ಐಶ್ವರ್ಯ, ಜನ್ಮ, ಮರಣ, ಮುಪ್ಪು ಇವುಗಳನ್ನು ಅತಿಕ್ರಮಿಸಿದವನು ಎಂದರೆ ಇವುಗಳ ವಿಕಾರವಿಲ್ಲದವನು.

೭೪. **ಪಂಚತತ್ತ್ವಸಮುತ್ಪತ್ತಿಃ**—ಪೃಥಿವ್ಯಾದಿಪಂಚಭೂತಗಳನ್ನು ಉತ್ಪತ್ತಿಮಾಡಿದವನು ಅಥವಾ ಪಂಚಜ್ಞಾನೇಂದ್ರಿಯಗಳ, ಅಥವಾ ಪಂಚಕರ್ಮೇಂದ್ರಿಯಗಳ ಸೃಷ್ಟಿಕರ್ತನು. **ವಿಶ್ವೇಶಃ**—ಸರ್ವಗಜದೊಡೆಯನು. **ವಿಮಲೋದಯಃ**—ಜಗತ್ತಿಗೆ ಮಂಗಲೋದಯಕಾರಕನು, ಕಲ್ಯಾಣದಾಯಕನು. **ಅನಾದ್ಯಂತಃ**—ಆದ್ಯಂತರಹಿರನು. **ಆತ್ಮಯೋನಿಃ**—ಸರ್ವಕ್ಕೂ ಕಾರಣರೂಪನು, ಸ್ವಯಂಭುವನು. **ವತ್ಸಲಃ**—ಸರ್ವರಿಗೂ ಪ್ರಿಯನು. **ಭೂತಲೋಕಧೃಕ್**—ಪ್ರಾಣಿಗಳನ್ನೂ ಲೋಕಗಳನ್ನೂ ಧರಿಸಿ ಪೋಷಿಸುವವನು.

೭೫. **ಗಾಯತ್ರೀವಲ್ಲಭಃ**—ರುದ್ರಗಾಯತ್ರಿಗೆ ದೇವತೆಯು, ಪ್ರಿಯನು. **ಪಾಂಶುಃ**—ಸುಷುಮ್ನಾದಿಕಿರಣಪ್ರಕೃಷ್ಟನು. **ಪ್ರಭಾಕರಃ**—ಅತ್ಯಂತ ದೀಪ್ತಿವಂತನು. **ಶಿಶುಃ**—ಪಾರ್ವತೀವಿವಾಹಕಾಲದಲ್ಲಿ ಬಾಲರೂಪವನ್ನು ಧರಿಸಿದವನು. **ಗಿರಿರತಃ**—ಕೈಲಾಸಪರ್ವತಪ್ರಿಯನು. **ಸಮ್ರಾಟ್**—ಸರ್ವಕ್ಕೂ ಅಧಿಪತಿಯು ಮತ್ತು ನಿಯಾಮಕನು. **ಸುಷೇಣಸ್ಸುರಶತ್ರುಹಾ**—ದೇವತೆಗಳಿಗೆ ಶತ್ರುಗಳಾದ ದೈತ್ಯರನ್ನು ಸಂಹಾರಮಾಡುವವನು.

೭೬. **ಅನೇಮಿರಿಷ್ಟನೇಮಿಶ್ಚ**—ಸ್ತೋತ್ರಮಾಡುವವರಿಗೆ ಶುಭಾಶುಭಫಲಗಳನ್ನು ಕೊಡುವ ಚಕ್ರದ ಮಧ್ಯದಲ್ಲಿರುವವನು. ಈ ಶಬ್ದದ ಅರ್ಥವು ಸ್ಪಷ್ಟವಾಗಿಲ್ಲ. **ಮುಕುಂದಃ**—ಮುಕುಂದಶಬ್ದವಾಚ್ಯನು, ಮುಕ್ತಿದಾಯಕನು. **ವಿಗತ-**

**ಪಿಂಗಲಃ ಕಪಿಲಶ್ಮಶ್ರುರ್ಭಾಲನೇತ್ರಸ್ತ್ರಯೀತನುಃ ।**
**ಜ್ಞಾನಸ್ಕಂಧೋ ಮಹಾನೀತಿರ್ವಿಶ್ವೋತ್ಪತ್ತಿರುಪಪ್ಲವಃ ॥ ೬೭ ॥**

**ಭಗೋ ವಿವಸ್ವಾನಾದಿತ್ಯೋ ಗತಪಾರೋ ಬೃಹಸ್ಪತಿಃ ।**
**ಕಲ್ಯಾಣಗುಣನಾಮಾ ಚ ಪಾಪಹಾ ಪುಣ್ಯದರ್ಶನಃ ॥ ೬೮ ॥**

---

**ಜ್ವರಃ**—ಸರ್ವಬಾಧಾರಹಿತನು, ತಾಪರಹಿತನು. ದುಃಖರಹಿತನು. **ಸ್ವಯಂಜ್ಯೋತಿಃ**—ಸ್ವಯಂಪ್ರಕಾಶಕನು. **ಮಹಾಜ್ಯೋತಿಸ್ತನುಜ್ಯೋತಿಃ**—ಸ್ವಪ್ರಕಾಶಾತ್ಮಕಸೂಕ್ಷ್ಮತೇಜಸ್ಸ್ವರೂಪನು. “ ನೀವಾರಶೂಕವತ್ತನ್ವೀ ಪೀತಾಭಾಸ್ವತ್ಯಣೂಪಮಾ ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತ ಇತಿಶ್ರುತೇಃ ॥ **ಅಚಂಚಲಃ** ಚಲನರಹಿತನು, ಸ್ಥಿರವಾಗಿರುವವನು “ ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತೀತ್ಯಾದಿ ಶ್ರುತೇಃ ”.

೬೭. **ಪಿಂಗಲಃ**—ವ್ಯಾಘ್ರಚರ್ಮಾದಿಗಳನ್ನು ಧರಿಸಿರುವುದರಿಂದ ಪಿಂಗಲ ವರ್ಣವುಳ್ಳವನಾಗಿ ಕಾಣಿಸುವನು. **ಕಪಿಲಶ್ಮಶ್ರುಃ**—ಪಿಂಗಲವರ್ಣಶ್ಮಶ್ರುವುಳ್ಳವನು. **ಭಾಲನೇತ್ರಃ**—ಹಣೆಯಲ್ಲಿ ಕಣ್ಣುಳ್ಳವನು. **ತ್ರಯೀತನುಃ**—(ಮೂರು) ವೇದಮಯಶರೀರವುಳ್ಳವನು. **ಜ್ಞಾನಸ್ಕಂಧೋ ಮಹಾನೀತಿಃ**—ಭಕ್ತರಿಗೆ ಜ್ಞಾನವನ್ನು ಕರುಣಿಸಿ ಸಂಸಾರಸಾಗರದಿಂದ ಉದ್ಧರಿಸಿ ಮೋಕ್ಷವನ್ನು ಕೊಡುವ ಮಹಾನೀತಿಯುಳ್ಳವನು. **ವಿಶ್ವೋತ್ಪತ್ತಿಃ**—ಅಖಿಲಾಂಡಕೋಟಿಬ್ರಹ್ಮಾಂಡಗಳನ್ನು ಸೃಷ್ಟಿಸಿದವನು. **ಉಪಪ್ಲವಃ**—ದುಷ್ಟರನ್ನು ಪೀಡಿಸುವವನು.

೬೮. **ಭಗೋವಿವಸ್ವಾನಾದಿತ್ಯಃ**—ಭಗ, ವಿವಸ್ವಾನ್, ಆದಿತ್ಯ ಎಂಬ ದೇವತಾರೂಪನು. ಈ ಮೂರು ನಾಮಗಳೂ ಒಂದೇ ಅರ್ಥವನ್ನು ಸೂಚಿಸುವವು. **ಯೋಗಪಾರಃ**—ಯೋಗಶಾಸ್ತ್ರಪಾರಂಗತನು. **ಬೃಹಸ್ಪತಿಃ**—ಬೃಹಸ್ಪತಿಸ್ವರೂಪನು. **ಕಲ್ಯಾಣಗುಣನಾಮಾ**—ಶಿವ, ಶಂಭು ಮೊದಲಾದ ಶುಭವಾದ ಹೆಸರುಗಳಿಂದ ಪ್ರಸಿದ್ಧನಾದವನು. **ಪಾಪಹಾ**—ಪಾಪನಾಶಕನು. **ಪುಣ್ಯದರ್ಶನಃ**—ಪವಿತ್ರವಾದ ಅಥವಾ ಶೋಭನಕರವಾದ ರೂಪವುಳ್ಳವನು.

**ಉದಾರಕೀರ್ತಿರುದ್ಯೋಗೀ ಸದ್ಯೋಗೀ ಸದಸನ್ಮಯಃ ।**
**ನಕ್ಷತ್ರಮಾಲೀ ನಾಕೇಶಃ ಸ್ವಾಧಿಷ್ಠಾನಃ ಷಡಾಶ್ರಯಃ ॥ ೬೯ ॥**

**ಪವಿತ್ರಃ ಪಾಪನಾಶಶ್ಚ ಮಣಿಪೂರೋ ನಭೋಗತಿಃ ।**
**ಹೃತ್ಪುಂಡರೀಕಮಾಸೀನಶ್ಶಕ್ರಶ್ಶಾಂತಿರ್ವೃಷಾಕಪಿಃ ॥ ೭೦ ॥**

**ಉಷ್ಣೋ ಗೃಹಪತಿಃ ಕೃಷ್ಣಸ್ಸಮರ್ಥೋಽನರ್ಥನಾಶನಃ ।**
**ಅಧರ್ಮಶತ್ರುರಜ್ಞೇಯಃ ಪುರುಹೂತಃ ಪುರುಶ್ರುತಃ ॥ ೭೧ ॥**

---

೬೯. **ಉದಾರಕೀರ್ತಿಃ**—ಪೂಜನೀಯನು, ಮಹಾಯಶೋವಂತನು. **ಉದ್ಯೋಗೀ**— ಸೃಷ್ಟಿಯೇ ಮೊದಲಾದ ಕಾರ್ಯಗಳಲ್ಲಿ ಉದ್ಯೋಗಶೀಲನಾದವನು. **ಸದ್ಯೋಗೀ**—ನಿತ್ಯಯೋಗಯುಕ್ತನು. **ಸದಸನ್ಮಯಃ**—ಸತ್, ಅಸತ್ ಎಂಬ ಪ್ರಧಾನವಸ್ತುಸ್ವರೂಪನು. "ಅಸದ್ವಾ ಇದಮೇಕ ಆಸೀತ್ । ತತೋ ವೈ ಸದ ಜಾಯತ" ಎಂದು ಶ್ರುತಿವಾಕ್ಯವು. ಸಗುಣ ಮತ್ತು ನಿರ್ಗುಣಸ್ವರೂಪನು. **ನಕ್ಷತ್ರಮಾಲೀ**-ನಕ್ಷತ್ರಮಾಲೆಯಿಂದ ಯುಕ್ತವಾದ ಆಕಾಶಸ್ವರೂಪನು. **ನಾಕೇಶಃ**—ಸ್ವರ್ಗಕ್ಕೆ ಅಧಿಪತಿಯು. **ಸ್ವಾಧಿಷ್ಠಾನಃ ಷಡಾಶ್ರಯಃ**—ಸ್ವಾಧಿಷ್ಠಾನವೇ ಮೊದಲಾದ ಷಟ್ಚಕ್ರಗಳಿಗೆ ಆಶ್ರಯಭೂತನು.

೭೦. **ಪವಿತ್ರಃ ಪಾಪಹಾರೀ**—ಪವಿತ್ರನಾದವನು ಮತ್ತು ಭಕ್ತರ ಪಾಪಗಳನ್ನು ನಾಶಮಾಡುವವನು. **ಮಣಿಪೂರಃ**—ಭಕ್ತಾದಿಗಳಿಗೆ ರತ್ನಾದಿಗಳನ್ನು ಕೊಟ್ಟು ಅವರ ಮನೋರಥಗಳನ್ನು ಪೂರಯಿಸುವವನು ಮಣಿಪೂರವೆಂಬ ಚಕ್ರಕ್ಕೆ ಅಧಿಷ್ಠಾತೃವು. **ನಭೋಗತಿಃ**—ಆಕಾಶಗಮನವುಳ್ಳವನು. **ಹೃತ್ಪುಂಡರೀಕಮಾಸೀನಃ**—ಯೋಗಿಗಳ ಹೃದಯಕಮಲದಲ್ಲಿ ವಾಸಿಸುವವನು. **ಶಕ್ರಃ**—ಇಂದ್ರಸ್ವರೂಪನು. **ಶಾಂತಃ**—ಸದಾ ಶಾಂತಿಯುಕ್ತನು, ಕ್ಷಮಾಗುಣಶೀಲನು. **ವೃಷಾಕಪಿಃ**—ಧರ್ಮವು ಸ್ಥಿರವಾಗಿರಲು ಕಾರಣಕರ್ತನು.

೭೧. **ಉಷ್ಣಃ**—ಹಾಲಾಹಲವೆಂಬ ವಿಷವನ್ನು ಪಾನಮಾಡಿರುವುದರಿಂದ ಉಷ್ಣತೆಯಿಂದ ಯುಕ್ತನಾದವನು. **ಗೃಹಪತಿಃ**—ಸರ್ವರಿಗೂ ಸ್ವಾಮಿಯು. **ಕೃಷ್ಣಃ**—ಕಂಠದಲ್ಲಿ ಕಪ್ಪುಳ್ಳವನು ಅಥವಾ ಕೃಷ್ಣನಿಗೆ ಗೋಚರನಾಗಿ ಅನುಗ್ರಹ ಮಾಡಿದವನು. **ಸಮರ್ಥಃ**—ಸರ್ವಕಾರ್ಯದಕ್ಷನು. **ಅನರ್ಥನಾಶನಃ**—ಸಂಸಾರ ರೂಪವಾದ ದುಃಖಗಳನ್ನು ನಾಶಮಾಡುವವನು. **ಅಧರ್ಮಶತ್ರುಃ**—ಪಾಪಾತ್ಮರಿಗೆ

ಓಂ ಶಾಬ್ದಾಯಪ್ರತಪತಾಂಪರಾಯನಮಃ
ಓಂ ಕಾಲಪಕ್ಷಾಯ ನಮಃ
ಓಂ ಕಾಲಕಾಲಾಯ ನಮಃ ೯೬೦
ಓಂ ಸುಕೃತೀಕೃತವಾಸುಕಯೇ ನಮಃ
ಓಂ ಮಹೇಷ್ವಾಸಾಯ ನಮಃ
ಓಂ ಮಹೀಭರ್ತ್ರೇ ನಮಃ
ಓಂ ನಿಷ್ಕಲಂಕಾಯ ನಮಃ
ಓಂ ವಿಶೃಂಖಲಾಯ ನಮಃ
ಓಂ ದ್ಯುಮಣಯೇ ತರಣಯೇ ನಮಃ
ಓಂ ಧನ್ಯಾಯ ನಮಃ
ಓಂ ಸಿದ್ಧಿದಾಯ ಸಿದ್ಧಿಸಾಧನಾಯ ನಮಃ
ಓಂ ವಿಶ್ವತಸ್ಸಂಪ್ರವೃತ್ತಾಯ ನಮಃ
ಓಂ ವ್ಯೂಢೋರಸ್ಕಾಯ ನಮಃ ೯೭೦
ಓಂ ಮಹಾಭುಜಾಯ ನಮಃ
ಓಂ ಸರ್ವಯೋನಯೇ ನಮಃ
ಓಂ ನಿರಾತಂಕಾಯ ನಮಃ
ಓಂ ನರನಾರಾಯಣಪ್ರಿಯಾಯ ನಮಃ
ಓಂ ನಿರ್ಲೇಪಾಯ ನಮಃ
ಓಂ ಯತಿಸಂಗಾತ್ಮನೇ ನಮಃ
ಓಂ ನಿರ್ವ್ಯಂಗಾಯ ನಮಃ
ಓಂ ವ್ಯಂಗನಾಶನಾಯ ನಮಃ
ಓಂ ಸ್ತವಾಯ ನಮಃ
ಓಂ ಸ್ತುತಿಪ್ರಿಯಾಯ ನಮಃ ೯೮೦
ಓಂ ಸ್ತೋತ್ರೇ ನಮಃ
ಓಂ ವ್ಯಾಪ್ತಮೂರ್ತಯೇ ನಮಃ
ಓಂ ನಿರಾಕುಲಾಯ ನಮಃ
ಓಂ ನಿರವದ್ಯಮಯೋಪಾಯಾಯ ನಮಃ
ಓಂ ವಿದ್ಯಾರಾಶಯೇ ನಮಃ
ಓಂ ಸತ್ಕೃತಾಯ ನಮಃ
ಓಂ ಪ್ರಶಾಂತಬುದ್ಧಯೇ ನಮಃ
ಓಂ ಅಕ್ಷುಣ್ಣಾಯ ನಮಃ
ಓಂ ಸಂಗ್ರಹಾಯ ನಮಃ
ಓಂ ನಿತ್ಯಸುಂದರಾಯ ನಮಃ ೯೯೦
ಓಂ ವೈಯಾಘ್ರಧುರ್ಯಾಯ ನಮಃ
ಓಂ ಧಾತ್ರೀಶಾಯ ನಮಃ
ಓಂ ಸಂಕಲ್ಪಾಯ ನಮಃ
ಓಂ ಶರ್ವರೀಪತಯೇ ನಮಃ
ಓಂ ಪರಮಾರ್ಥಗುರವೇ ನಮಃ
ಓಂ ದತ್ತಾಯ ನಮಃ
ಓಂ ಸೂರಯೇ ಆಶ್ರಿತವತ್ಸಲಾಯ ನಮಃ
ಓಂ ಸೋಮಾಯ ನಮಃ
ಓಂ ರಸಜ್ಞಾಯ ರಸದಾಯ ನಮಃ
ಓಂ ಸರ್ವಸತ್ತ್ವಾವಲಂಬನಾಯ ನಮಃ

**॥ ಇತಿ ಶ್ರೀ ಶಿವಸಹಸ್ರನಾಮಾವಳಿಃ ಸಮಾಪ್ತಾ ॥**



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ಷಟ್ತ್ರಿಂಶೋಽಧ್ಯಾಯಃ



|| ಸೂತ ಉವಾಚ ||

ಶ್ರುತ್ವಾ ವಿಷ್ಣುಕೃತಂ ದಿವ್ಯಂ ಪರನಾಮವಿಭೂಷಿತಂ ।
ಸಹಸ್ರನಾಮಸ್ವಸ್ತೋತ್ರಂ ಪ್ರಸನ್ನೋಽಭೂನ್ಮಹೇಶ್ವರಃ || ೧ ||

ಪರೀಕ್ಷಾರ್ಥಂ ಹರೇರೀಶಃ ಕಮಲೇಷು ಮಹೇಶ್ವರಃ ।
ಗೋಪಯಾಮಾಸ ಕಮಲಂ ತದೈಕಂ ಭುವನೇಶ್ವರಃ || ೨ ||

ಪಂಕಜೇಷು ತದಾ ತೇಷು ಸಹಸ್ರೇಷು ಬಭೂವ ಚ ।
ನ್ಯೂನಮೇಕಂ ತದಾ ವಿಷ್ಣುರ್ವಿಹ್ವಲಶ್ಶಿವಪೂಜನೇ || ೩ ||

---

## ಮೂವತ್ತಾರನೆಯ ಅಧ್ಯಾಯವು.

೧-೫. ಸೂತನು ಹೇಳಿದನು.—ಶ್ರೇಷ್ಠವಾದ ನಾಮಗಳಿಂದ ಅಲಂಕೃತವಾದ ಸಹಸ್ರನಾಮವೆಂಬ ತನ್ನ ಸ್ತೋತ್ರವನ್ನು ಕೇಳಿ, ಮಹೇಶ್ವರನು ಪ್ರಸನ್ನನಾದನು. ಹರಿಯ ಭಕ್ತಿಯನ್ನು ಪರೀಕ್ಷಿಸಬೇಕೆಂದು ಈಶ್ವರನು, ಪೂಜೆಗೆ ಇಟ್ಟಿದ್ದ ಕಮಲಗಳಲ್ಲಿ ಒಂದು ಕಮಲವನ್ನು ಮರೆಮಾಡಿದನು. ಸಾವಿರ ಕಮಲಗಳಲ್ಲಿ ಒಂದು ಕಮಲವು ಕಡಿಮೆಯಾಗಿರಲು ವಿಷ್ಣುವು ಪೂಜಾವಿಷಯದಲ್ಲಿ ಭ್ರಾಂತಿಯುಳ್ಳವನಾಗಿ ಮನಸ್ಸಿ

ಹೃದಾ ವಿಚಾರಿತಂ ತೇನ ಕುತೋ ವೈ ಕಮಲಂ ಗತಂ ।
ಯಾತಂ ಯಾತು ಸುಖೇನೈವ ಮನ್ನೇತ್ರಂ ಕಮಲಂ ನ ಕಿಂ ॥ ೪ ॥

ಜ್ಞಾತ್ವೇತಿ ನೇತ್ರಮುದ್ಧೃತ್ಯ ಸರ್ವಸತ್ತ್ವಾವಲಂಬನಾತ್ ।
ಪೂಜಯಾಮಾಸ ಭಾವೇನ ಸ್ತವಯಾಮಾಸ ತೇನ ಚ ॥ ೫ ॥

ತತಃ ಸ್ತುತಮಥೋ ದೃಷ್ಟ್ವಾ ತಥಾಭೂತಂ ಹರೋ ಹರಿಂ ।
ಮಾ ನೇತಿ ವ್ಯಾಹರನ್ನೇವ ಪ್ರಾದುರಾಸೀಜ್ಜಗದ್ಗುರುಃ ॥ ೬ ॥

ತಸ್ಮಾದವತತಾರಾಶು ಮಂಡಲಾತ್ಪಾರ್ಥಿವಸ್ಯ ಚ ।
ಪ್ರತಿಷ್ಠಿತಸ್ಯ ಹರಿಣಾ ಸ್ವಲಿಂಗಸ್ಯ ಮಹೇಶ್ವರಃ ॥ ೭ ॥

ಯಥೋಕ್ತರೂಪಿಣಂ ಶಂಭುಂ ತೇಜೋರಾಶಿಸಮುತ್ಥಿತಂ ।
ನಮಸ್ಕೃತ್ಯ ಪುರಃ ಸ್ಥಿತ್ವಾ ಸ ತುಷ್ಟಾವ ವಿಶೇಷತಃ ॥ ೮ ॥

ತದಾ ಪ್ರಾಹ ಮಹಾದೇವಃ ಪ್ರಸನ್ನಃ ಪ್ರಹಸನ್ನಿವ ।
ಸಂಪ್ರೇಕ್ಷ್ಯ ಕೃಪಯಾ ವಿಷ್ಣುಂ ಕೃತಾಂಜಲಿಪುಟಂ ಸ್ಥಿತಂ ॥ ೯ ॥

---

ನಲ್ಲಿ ವಿಚಾರಮಾಡಿದನು. ಒಂದು ಕಮಲವು ಮಾತ್ರ ಕಡಮೆಯಾಗಿರುವುದು. ಅದು ಎಲ್ಲಿಗೆ ಹೋಯಿತು? ಹೋದರೆ ಹೋಗಲಿ. ನನ್ನ ಕಣ್ಣು ಕಮಲವಲ್ಲವೇ? ಎಂದು ತಿಳಿದು ತನ್ನ ಕಣ್ಣನ್ನು ಕಿತ್ತು ಭಕ್ತಿಯಿಂದ ಪೂಜೆಮಾಡಿ ಸ್ತೋತ್ರ ಮಾಡಿದನು.

೬-೯. ಸ್ತೋತ್ರಮಾಡುತ್ತಿದ್ದ ಹರಿಯನ್ನು ನೋಡಿ ಲೋಕಕ್ಕೆ ಗುರುವಾದ ಹರನು ಸ್ತೋತ್ರವು ಸಾಕು. ಇನ್ನು ಮಾಡಬೇಡವೆಂದು ಹೇಳುತ್ತ ಹರಿಯು ಪ್ರತಿಷ್ಠೆಮಾಡಿ ಪೂಜೆಮಾಡುತ್ತಿದ್ದ ಪಾರ್ಥಿವಲಿಂಗದಲ್ಲಿ ತೇಜೋರೂಪನಾಗಿ ವ್ಯಕ್ತನಾದನು. ವಿಷ್ಣುವು ಆ ಶಿವನನ್ನು ಮತ್ತೆ ನಮಸ್ಕರಿಸಿ ವಿಶೇಷರೀತಿಯಿಂದ ಸ್ತೋತ್ರ ಮಾಡಿದನು. ಆಗ ಮಹಾದೇವನಾದ ಶಿವನು ತನ್ನೆದುರಿಗೆ ಕೈ ಮುಗಿದುಕೊಂಡು ನಿಂತಿದ್ದ ವಿಷ್ಣುವನ್ನು ನೋಡಿ ಮಂದಹಾಸದಿಂದ,

॥ ಶಂಕರ ಉವಾಚ ॥

ಜ್ಞಾತಂ ಮಯೇದಂ ಸಕಲಂ ತವ ಚಿತ್ತೇಪ್ಸಿತಂ ಹರೇ ।
ದೇವಕಾರ್ಯಂ ವಿಶೇಷೇಣ ದೇವಕಾರ್ಯರತಾತ್ಮನಃ ॥ ೧೦ ॥

ದೇವಕಾರ್ಯಸ್ಯ ಸಿದ್ಧ್ಯರ್ಥಂ ದೈತ್ಯನಾಶಾಯ ಚಾಶ್ರಮಂ ।
ಸುದರ್ಶನಾಖ್ಯಂ ಚಕ್ರಂ ಚ ದದಾಮಿ ತವ ಶೋಭನಂ ॥ ೧೧ ॥

ಯದ್ರೂಪಂ ಭವತಾ ದೃಷ್ಟಂ ಸರ್ವಲೋಕಸುಖಾವಹಂ ।
ಹಿತಾಯ ತವ ದೇವೇಶ ಧೃತಂ ಭಾವಯ ತದ್ಧ್ರುವಂ ॥ ೧೨ ॥

ರಣಾಜಿರೇ ಸ್ಮೃತಂ ತದ್ವೈ ದೇವಾನಾಂ ದುಃಖನಾಶನಂ ।
ಇದಂ ಚಕ್ರಮಿದಂ ರೂಪಮಿದಂ ನಾಮಸಹಸ್ರಕಂ ॥ ೧೩ ॥

ಯೇ ಶೃಣ್ವಂತಿ ಸದಾ ಭಕ್ತ್ಯಾ ಸಿದ್ಧಿಃ ಸ್ಯಾದನಪಾಯಿನೀ ।
ಕಾಮಾನಾಂ ಸಕಲಾನಾಂ ಚ ಪ್ರಸಾದಾನ್ಮಮ ಸುವ್ರತ ॥ ೧೪ ॥

---

೧೦-೧೪. ಎಲೈ ಹರಿಯೇ, ವಿಶೇಷವಾಗಿ ದೇವತೆಗಳ ಕಾರ್ಯಾಸಕ್ತನಾದ ನಿನಗೆ ಅವರ ಕಾರ್ಯಸಿದ್ಧಿಗೋಸ್ಕರವಾಗಿಯೂ, ದೈತ್ಯರ ನಾಶಕ್ಕಾಗಿಯೂ ನನ್ನ ಸಂಬಂಧವಾದ ಸಕಲ ಜ್ಞಾನವೂ ನಿನ್ನ ಇಷ್ಟದಂತೆ ಸಿದ್ಧಿಸಲಿ. ಮಂಗಳಕರವಾದ ಸುದರ್ಶನವೆಂಬ ಚಕ್ರವನ್ನು ಈಗ ನಿನಗೆ ನಾನು ಕೊಡುತ್ತೇನೆ. ನೀನು ನನ್ನನ್ನು ಸಮಸ್ತಲೋಕಕ್ಕೂ ಸುಖವನ್ನುಂಟುಮಾಡುವ ಯಾವ ರೂಪದಿಂದ ನೋಡಿದೆಯೋ ಅದೇ ರೂಪವನ್ನೇ ನಿನ್ನ ಹಿತಕ್ಕಾಗಿ ಧ್ಯಾನಮಾಡುತ್ತಿರು. ಆ ರೂಪವನ್ನು ಯುದ್ಧ ರಂಗದಲ್ಲಿ ನೀನು ಸ್ಮರಿಸಿದರೆ ಅದು ದೇವತೆಗಳ ದುಃಖವನ್ನು ನಾಶಮಾಡುವುದು. ಈ ಚಕ್ರ ವೃತ್ತಾಂತವನ್ನೂ, ಈ ರೂಪವನ್ನೂ, ಈ ಸಹಸ್ರ ನಾಮವನ್ನೂ ಯಾವಾಗಲೂ ಭಕ್ತಿಯಿಂದ ಯಾರು ಕೇಳುತ್ತಾರೆಯೋ ಅವರಿಗೆ ಸಂದೇಹವಿಲ್ಲದೆ ಕಾರ್ಯ ಸಿದ್ಧಿಯಾಗುವುದು. ನನ್ನ ಅನುಗ್ರಹದಿಂದ ಅವರ ಸಕಲೇಷ್ಟಾರ್ಥಗಳೂ ಸಿದ್ಧಿಸುವವು ಎಂದನು.

॥ ಸೂತ ಉವಾಚ ॥

ಏವಮುಕ್ತ್ವಾ ದದೌ ಚಕ್ರಂ ಸೂರ್ಯಾಯುತಸಮಪ್ರಭಂ ।
ಸುದರ್ಶನಂ ಸ್ವಪಾದೋತ್ಥಂ ಸರ್ವಶತ್ರುವಿನಾಶನಂ ॥ ೧೫ ॥

ವಿಷ್ಣುಶ್ಚಾಪಿ ಸುಸಂಸ್ಕೃತ್ಯ ಜಗ್ರಾಹೋದಙ್ಮುಖಸ್ತದಾ ।
ನಮಸ್ಕೃತ್ಯ ಮಹಾದೇವಂ ವಿಷ್ಣುರ್ವಚನಮಬ್ರವೀತ್ ॥ ೧೬ ॥

॥ ವಿಷ್ಣುರುವಾಚ ॥

ಶೃಣು ದೇವ ಮಯಾ ಧ್ಯೇಯಂ ಪಠನೀಯಂ ಚ ಕಿಂ ಪ್ರಭೋ ।
ದುಃಖಾನಾಂ ನಾಶನಾರ್ಥಂ ಹಿ ವದ ತ್ವಂ ಲೋಕಶಂಕರ ॥ ೧೭ ॥

॥ ಸೂತ ಉವಾಚ ॥

ಇತಿ ಪೃಷ್ಟಸ್ತದಾ ತೇನ ಸಂತುಷ್ಟಸ್ತು ಶಿವೋಽಬ್ರವೀತ್ ।
ಪ್ರಸನ್ನಮಾನಸೋ ಭೂತ್ವಾ ವಿಷ್ಣುಂ ದೇವಸಹಾಯಕಂ ॥ ೧೮ ॥

॥ ಶಿವ ಉವಾಚ ॥

ರೂಪಂ ಧ್ಯೇಯಂ ಹರೇ ಮೇ ಹಿ ಸರ್ವಾನರ್ಥಪ್ರಶಾಂತಯೇ ।
ಅನೇಕದುಃಖನಾಶಾರ್ಥಂ ಪಠ ನಾಮಸಹಸ್ರಕಂ ॥ ೧೯ ॥

---

೧೫-೧೬. ಶಿವನು ಹೀಗೆ ಹೇಳಿ ಹತ್ತುಸಾವಿರ ಸೂರ್ಯರ ತೇಜಸ್ಸಿಗೆ ಸಮಾನವಾಗಿ ಸಮಸ್ತ ಶತ್ರುಗಳನ್ನೂ ನಾಶಮಾಡುವ, ತನ್ನ ಪಾದದಲ್ಲಿ ಹುಟ್ಟಿದ ಸುದರ್ಶನವೆಂಬ ಚಕ್ರವನ್ನು ಕೊಟ್ಟನು. ವಿಷ್ಣುವು ಪರಿಶುದ್ಧಭಾವದಿಂದ ಉತ್ತರಾಭಿಮುಖನಾಗಿ ಶಿವನಿಗೆ ನಮಸ್ಕಾರವನ್ನು ಮಾಡಿ ಚಕ್ರವನ್ನು ತೆಗೆದುಕೊಂಡು ಇಂತೆಂದನು.

೧೭. ಎಲೈ ಸ್ವಾಮಿಯೇ, ನಾನು ದುಃಖನಾಶಾರ್ಥವಾಗಿ ಏನನ್ನು ಪಠನ ಮಾಡಬೇಕು? ಯಾವರೀತಿ ಧ್ಯಾನವನ್ನು ಮಾಡಬೇಕು? ಎಂಬುದನ್ನು ಲೋಕ ಕ್ಷೇಮಾರ್ಥವಾಗಿ ಹೇಳಬೇಕು ಎಂದನು.

೧೮. ಹೀಗೆ ಪ್ರಶ್ನೆ ಮಾಡುತ್ತಲು ಶಿವನು ಸಂತೋಷಗೊಂಡು ಪ್ರಸನ್ನನಾಗಿ ದೇವಸಹಾಯಕನಾದ ವಿಷ್ಣುವನ್ನು ಕುರಿತು,

೧೯-೨೩. ಎಲೈ ಹರಿಯೇ ನನ್ನ ರೂಪವನ್ನು ಧ್ಯಾನಮಾಡುವುದರಿಂದ ಸಮಸ್ತ ಅನರ್ಥಗಳೂ ನಾಶವಾಗುವುವು. ಸಹಸ್ರ ನಾಮ ಪಾರಾಯಣದಿಂದ ದುಃಖ

ಧಾರ್ಯಂ ಚಕ್ರಂ ಸದಾ ಮೇ ಹಿ ಸರ್ವಾಭೀಷ್ಟಸ್ಯ ಸಿದ್ಧಯೇ ।
ತ್ವಯಾ ವಿಷ್ಣೋ ಪ್ರಯತ್ನೇನ ಸರ್ವಚಕ್ರವರಂ ತ್ವಿದಂ ॥ ೨೦ ॥

ಅನ್ಯೇ ಚ ಯೇ ಪಠಿಷ್ಯಂತಿ ಪಾಠಯಿಷ್ಯಂತಿ ನಿತ್ಯಶಃ ।
ತೇಷಾಂ ದುಃಖಂ ನ ಸ್ವಪ್ನೇಽಪಿ ಜಾಯತೇ ನಾತ್ರ ಸಂಶಯಃ ॥ ೨೧ ॥

ರಾಜ್ಞಾಂ ಚ ಸಂಕಟೇ ಪ್ರಾಪ್ತೇ ಶತಾವೃತ್ತಿಂ ಚರೇದ್ಯದಾ ।
ಸಾಂಗಂ ಚ ವಿಧಿಸಂಯುಕ್ತಂ ಕಲ್ಯಾಣಂ ಲಭತೇ ನರಃ ॥ ೨೨ ॥

ರೋಗನಾಶಕರಂ ಹ್ಯೇತದ್ವಿದ್ಯಾವಿತ್ತದಮುತ್ತಮಂ ।
ಸರ್ವಕಾಮಪ್ರದಂ ಪುಣ್ಯಂ ಶಿವಭಕ್ತಿಪ್ರದಂ ಸದಾ ॥ ೨೩ ॥

ಯದುದ್ದಿಶ್ಯ ಫಲಂ ಶ್ರೇಷ್ಠಂ ಪಠಿಷ್ಯಂತಿ ನರಾಸ್ತ್ವಿಹ ।
ಲಪ್ಸ್ಯಂತೇ ನಾತ್ರ ಸಂದೇಹಃ ಫಲಂ ತತ್ಸತ್ಯಮುತ್ತಮಂ ॥ ೨೪ ॥

ಯಶ್ಚ ಪ್ರಾತಸ್ಸಮುತ್ಥಾಯ ಪೂಜಾಂ ಕೃತ್ವಾ ಮದೀಯಿಕಾಂ ।
ಪಠತೇ ಮತ್ಸಮಕ್ಷಂ ವೈ ನಿತ್ಯಂ ಸಿದ್ಧಿರ್ನ ದೂರತಃ ॥ ೨೫ ॥

---

ನಾಶವಾಗುವುದು ಸಕಲಾಭೀಷ್ಟಸಿದ್ಧಿಗಾಗಿ ನನ್ನ ಚಕ್ರವನ್ನು ನೀನು ಯಾವಾಗಲೂ ಧರಿಸಿರು. ಇದು ಸಮಸ್ತ ಚಕ್ರಗಳಿಗಿಂತ ಶ್ರೇಷ್ಠವಾದುದು. ಈ ಸಹಸ್ರ ನಾಮ ವನ್ನು ಇತರರು ಯಾರು ಪ್ರತಿದಿನವೂ ಪಠನಮಾಡಿದರೂ, ಮತ್ತೊಬ್ಬರಿಗೆ ಹೇಳಿ ಕೊಟ್ಟರೂ ಅವರಿಗೆ ಸ್ವಪ್ನದಲ್ಲಿಯೂ ಸಹ ದುಃಖವುಂಟಾಗುವುದಿಲ್ಲ. ರಾಜರಿಗೆ ದುಃಖವಾಗಲಿ ತೊಂದರೆಯಾಗಲಿ ಪ್ರಾಪ್ತವಾದಲ್ಲಿ ಒಂದು ನೂರು ಬಾರಿ ವಿಧಿಗನು ಸಾರವಾಗಿ ಸಹಸ್ರ ನಾಮವನ್ನು ಪಠನಮಾಡಿದರೆ ಮಂಗಳವುಂಟಾಗುವುದು. ಇದು ರೋಗನಾಶವನ್ನುಂಟುಮಾಡಿ ವಿದ್ಯೆಯನ್ನೂ ಧನವನ್ನೂ ಸಕಲವಾದ ಇಷ್ಟಾರ್ಥ ಗಳನ್ನೂ, ಪುಣ್ಯವನ್ನೂ ಶಿವಭಕ್ತಿಯನ್ನೂ ಕೊಡುವುದು.

೨೪-೨೬. ಮನುಜರು ಶ್ರೇಷ್ಠವಾದ ಯಾವ ಫಲವನ್ನುದ್ದೇಶಿಸಿ ಈ ಸಹಸ್ರ ನಾಮವನ್ನು ಪಾರಾಯಣಮಾಡಿದರೂ ಆ ಫಲವನ್ನು ಸಂದೇಹವಿಲ್ಲದೆ ಹೊಂದುವರು. ಇದು ಸತ್ಯವಾದ ಮಾತು. ಯಾವ ಮನುಷ್ಯನಾದರೂ ಪ್ರಾತಃಕಾಲದಲ್ಲಿ ಎದ್ದು ನನ್ನ ಪೂಜೆಯನ್ನು ಮಾಡಿ ಪ್ರತಿದಿನವೂ ನನ್ನೆದುರಿಗೆ ಇದನ್ನು ಪಾರಾಯಣಮಾಡಿ ದರೆ ಅವನಿಗೆ ಶೀಘ್ರವಾಗಿ ಸಿದ್ಧಿಯುಂಟಾಗುವುದು. ಇದರ ಪಾರಾಯಣದಿಂದ

ಐಹಿಕೀಂ ಸಿದ್ಧಿಮಾಪ್ನೋತಿ ನಿಖಿಲಾಂ ಸರ್ವಕಾಮಿಕಾಂ ।
ಅಂತೇ ಸಾಯುಜ್ಯಮುಕ್ತಿಂ ವೈ ಪ್ರಾಪ್ನೋತ್ಯತ್ರ ನ ಸಂಶಯಃ ॥ ೨೬ ॥

॥ ಸೂತ ಉವಾಚ ॥
ಏವಮುಕ್ತ್ವಾ ತದಾ ವಿಷ್ಣುಂ ಶಂಕರಃ ಪ್ರೀತಮಾನಸಃ ।
ಉಪಸ್ಪೃಶ್ಯ ಕರಾಭ್ಯಾಂ ತಮುವಾಚ ಗಿರಿಶಃ ಪುನಃ ॥ ೨೭ ॥

॥ ಶಿವ ಉವಾಚ ॥
ವರದೋಽಸ್ಮಿ ಸುರಶ್ರೇಷ್ಠ ವರಾನ್ವೃಣು ಯಥೇಪ್ಸಿತಾನ್ ।
ಭಕ್ತ್ಯಾ ವಶೀಕೃತೋ ನೂನಂ ಸ್ತವೇನಾನೇನ ಸುವ್ರತ ॥ ೨೮ ॥

॥ ಸೂತ ಉವಾಚ ॥
ಇತ್ಯುಕ್ತೋ ದೇವದೇವೇನ ದೇವದೇವಂ ಪ್ರಣಮ್ಯ ತಂ ।
ಸುಪ್ರಸನ್ನತರೋ ವಿಷ್ಣುಸ್ಸಾಂಜಲಿರ್ವಾಕ್ಯಮಬ್ರವೀತ್ ॥ ೨೯ ॥

॥ ವಿಷ್ಣುರುವಾಚ ॥
ಯಥೇದಾನೀಂ ಕೃಪಾ ನಾಥ ಕ್ರಿಯತೇ ಚಾನ್ಯತಃ ಪರಾ ।
ಕಾರ್ಯಾ ಚೈವ ವಿಶೇಷೇಣ ಕೃಪಾಲುತ್ವಾತ್ತ್ವಯಾ ಪ್ರಭೋ ॥ ೩೦ ॥

---

ಲೋಕದಲ್ಲಿ ಸಮಸ್ತ ಇಷ್ಟಾರ್ಥಗಳನ್ನೂ ಕೊನೆಯಲ್ಲಿ ಸಾಯುಜ್ಯ ಮುಕ್ತಿಯನ್ನೂ ಹೊಂದುವ ವಿಷಯದಲ್ಲಿ ಸಂದೇಹವೇ ಇಲ್ಲ ಎಂದನು.

೨೭. ಶಿವನು ಹೀಗೆಂದು ಹೇಳಿ ಸಂತೋಷದಿಂದ ತನ್ನೆರಡು ಕೈಗಳಿಂದ ವಿಷ್ಣುವನ್ನು ಮುಟ್ಟಿ ಮತ್ತೆ ಹೇಳಿದನು.

೨೮. ದೇವಶ್ರೇಷ್ಠನಾದ ಎಲೈ ವಿಷ್ಣುವೇ, ನಿನ್ನ ಭಕ್ತಿಯಿಂದಲೂ ಈ ಸ್ತೋತ್ರದಿಂದಲೂ ನಿನ್ನ ವಶನಾಗಿರುತ್ತೇನೆ. ನಿನಗೆ ಬೇಕಾದ ವರವನ್ನು ಕೇಳು ಕೊಡುವೆನು ಎಂದನು.

೨೯. ದೇವದೇವನಾದ ಶಿವನು ಹೀಗೆಂದು ಹೇಳಲು ವಿಷ್ಣುವು ಸಂತೋಷ ದಿಂದ ಆ ದೇವನಿಗೆ ನಮಸ್ಕಾರಮಾಡಿ ಕೈಮುಗಿದುಕೊಂಡು,

೩೦–೩೧. ಎಲೈ ಸ್ವಾಮಿಯೇ, ನೀನು ದಯಾಳುವಾದುದರಿಂದ ಇತರರಿ ಗಿಂತಲೂ ನನ್ನಲ್ಲಿ ವಿಶೇಷವಾದ ದಯೆಯನ್ನು ತೋರಿಸಬೇಕು. ನೀನು ಪ್ರಸನ್ನನಾಗಿ ನಿನ್ನಲ್ಲಿ ನನಗೆ ಉತ್ತಮವಾದ ಭಕ್ತಿಯು ಉಂಟಾಗುವಂತೆ ಅನುಗ್ರಹಿಸಬೇಕು. ನಿನ್ನ

ತ್ವಯಿ ಭಕ್ತಿರ್ಮಹಾದೇವ ಪ್ರಸೀದ ವರಮುತ್ತಮಂ ।
ನಾನ್ಯಮಿಚ್ಛಾಮಿ ಭಕ್ತಾನಾಮಾರ್ತಯೋ ನೈವ ಯತ್ಪ್ರಭೋ ॥ ೩೧ ॥

॥ ಸೂತ ಉವಾಚ ॥
ತಚ್ಛ್ರುತ್ವಾ ವಚನಂ ತಸ್ಯ ದಯಾವಾನ್ಸುತರಾಂ ಭವಃ ।
ಪಸ್ಪರ್ಶ ಚ ತದಂಗಂ ವೈ ಪ್ರಾಹ ಶೀತಾಂಶುಶೇಖರಃ ॥ ೩೨ ॥

॥ ಶಿವ ಉವಾಚ ॥
ಮಯಿಭಕ್ತಿಸ್ಸದಾ ತೇ ತು ಹರೇ ಸ್ಯಾದನಪಾಯಿನೀ ।
ಸದಾ ವಂದ್ಯಶ್ಚ ಪೂಜ್ಯಶ್ಚ ಲೋಕೇ ಭವ ಸುರೈರಪಿ ॥ ೩೩ ॥

ವಿಶ್ವಂಭರೇತಿ ತೇ ನಾಮ ಸರ್ವಪಾಪಹರಂ ಪರಂ ।
ಭವಿಷ್ಯತಿ ನ ಸಂದೇಹೋ ಮತ್ಪ್ರಸಾದಾತ್ಸುರೋತ್ತಮ ॥ ೩೪ ॥

॥ ಸೂತ ಉವಾಚ ॥
ಇತ್ಯುಕ್ತ್ವಾಂತರ್ದಧೇ ರುದ್ರಸ್ಸರ್ವದೇವೇಶ್ವರಃ ಪ್ರಭುಃ ।
ಪಶ್ಯತಸ್ತಸ್ಯ ವಿಷ್ಣೋಸ್ತು ತತ್ರೈವ ಚ ಮುನೀಶ್ವರಾಃ ॥ ೩೫ ॥

---

ಭಕ್ತರಿಗೆ ದುಃಖಗಳು ಇರುವುದೇ ಇಲ್ಲ. ಆದುದರಿಂದ ಭಕ್ತಿಯನ್ನು ಬಿಟ್ಟು ಮತ್ತೊಂದನ್ನು ನಾನು ಅಪೇಕ್ಷಿಸುವುದಿಲ್ಲ ಎಂದನು.

೩೨. ಸೂತನು ಹೇಳಿದನು :—ವಿಷ್ಣುವಿನ ಮಾತನ್ನು ಕೇಳಿ ಅತ್ಯಂತ ದಯಾಶಾಲಿಯಾದ ಶಿವನು ಆ ಹರಿಯ ಶರೀರವನ್ನು ತನ್ನ ಕೈಗಳಿಂದ ಸ್ಪರ್ಶಮಾಡಿ,

೩೩-೩೪. ಎಲೈ ಹರಿಯೇ, ನಿನಗೆ ನನ್ನಲ್ಲಿ ಯಾವಾಗಲೂ ಅಚಲವಾದ ಭಕ್ತಿಯುಂಟಾಗಲಿ. ಲೋಕದಲ್ಲಿ ನೀನು ದೇವತೆಗಳಿಗೆಲ್ಲಾ ಪೂಜ್ಯನಾಗಿಯೂ, ನಮಸ್ಕಾರಯೋಗ್ಯನಾಗಿಯೂ ಆಗುವೆ. ನಿನಗೆ ನನ್ನ ಅನುಗ್ರಹದಿಂದ ಸಮಸ್ತ ಪಾಪಪರಿಹಾರಕವೂ ಅತ್ಯುತ್ತಮವೂ ಆದ ವಿಶ್ವಂಭರನೆಂಬ ಹೆಸರು ಉಂಟಾಗುವುದು. ಇದರಿಂದ ನೀನು ದೇವೋತ್ತಮನಾಗುವೆ ಎಂದನು.

೩೫-೩೬. ಸಮಸ್ತ ದೇವತೆಗಳಿಗೂ ಸ್ವಾಮಿಯಾದ ರುದ್ರನು ಹೀಗೆ ಹೇಳಿ ವಿಷ್ಣುವು ನೋಡುತ್ತಿದ್ದ ಹಾಗೆಯೇ ಅಂತರ್ಧಾನನಾದನು. ಮಹಾಮಹಿಮನಾದ

ಜನಾರ್ದನೋಽಪಿ ಭಗವಾನ್ವಚನಾಚ್ಛಂಕರಸ್ಯ ಚ ।
ಸ್ನಾಪ್ಯ ಚಕ್ರಂ ಶುಭಂ ತದ್ವೈ ಜಹರ್ಷಾತಿ ಸ್ವಚೇತಸಿ ॥ ೩೬ ॥

ಕೃತ್ವಾ ಧ್ಯಾನಂ ತತಶ್ಶಂಭೋಃ ಸ್ತೋತ್ರಮೇತನ್ನಿರಂತರಂ ।
ಪಪಾಠಾಧ್ಯಾಪಯಾಮಾಸ ಭಕ್ತೇಭ್ಯಸ್ತದುಪಾದಿಶತ್ ॥ ೩೭ ॥

ಇತಿ ಪೃಷ್ಟಂ ಮಯಾಖ್ಯಾತಂ ಶೃಣ್ವತಾಂ ಪಾಪಹಾರಕಂ ।
ಅತಃ ಪರಂ ಚ ಕಿಂ ಶ್ರೇಷ್ಠಾಃ ಪ್ರಷ್ಟುಮಿಚ್ಛಥ ವೈ ಪುನಃ ॥ ೩೮ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಶಿವಸಹಸ್ರನಾಮಸ್ತೋತ್ರಫಲವರ್ಣನಂ ನಾಮ
ಷಟ್ತ್ರಿಂಶೋಽಧ್ಯಾಯಃ

---

ಜನಾರ್ದನನಾದರೋ ಶಂಕರನಿಂದ ಸುದರ್ಶನ ಚಕ್ರವನ್ನು ಪಡೆದು ಅತ್ಯಂತ ತೇಜಸಿನಿಂದ ಕೂಡಿ ತನ್ನ ಮನಸ್ಸಿನಲ್ಲಿ ಸಂತೋಷಪಟ್ಟನು.

೩೭. ಬಳಿಕ ಹರಿಯು ಶಿವಧ್ಯಾನವನ್ನು ಮಾಡಿ ಸಹಸ್ರನಾಮ ಸ್ತೋತ್ರವನ್ನು ಪಾರಾಯಣಮಾಡಿ ಭಕ್ತರಾದ ಇತರರಿಗೂ ಉಪದೇಶಮಾಡಿದನು.

೩೮. ಎಲೈ ಋಷಿಗಳೇ, ನೀವು ಪ್ರಶ್ನೆಮಾಡಿದುದನ್ನು, ಎಂದರೆ ಕೇಳಿದವರ ಪಾಪಗಳನ್ನು ನಾಶಮಾಡುವ ಈ ಸಹಸ್ರನಾಮ ಸ್ತೋತ್ರವನ್ನು ಹೇಳಿದೆನು. ಇನ್ನು ಮುಂದೆ ಮತ್ತೇನನ್ನು ಕೇಳಬಯಸುವಿರಿ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಶಿವಸಹಸ್ರನಾಮಸ್ತೋತ್ರಫಲ ವರ್ಣನೆಯೆಂಬ ಮೂವತ್ತಾರನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಸಪ್ತತ್ರಿಂಶೋಽಧ್ಯಾಯಃ

|| ಋಷಯ ಊಚುಃ ||

ಸೂತಸೂತ ಮಹಾಭಾಗ ಜ್ಞಾನವಾಸಿ ಸುವ್ರತ ।
ಪುನರೇವ ಶಿವಸ್ಯೈವ ಚರಿತಂ ಬ್ರೂಹಿ ವಿಸ್ತರಾತ್ ॥ ೧ ॥

ಪುರಾತನಾಶ್ಚ ರಾಜಾನ ಋಷಯೋ ದೇವತಾಸ್ತಥಾ ।
ಆರಾಧನಂ ಚ ತಸ್ಯೈವ ಚಕ್ರುರ್ದೇವವರಸ್ಯ ಹಿ ॥ ೨ ॥

---

## ಮೂವತ್ತೇಳನೆಯ ಅಧ್ಯಾಯವು

೧-೨. ಋಷಿಗಳಿಂತೆಂದರು—ಎಲೈ ಸೂತನೇ ನೀನು ಮಹಾತಪಸ್ವಿಯು. ಮಹಾಮಹಿಮನು, ಇದಲ್ಲದೆ, ಶ್ರೇಷ್ಠವಾದ ಜ್ಞಾನವುಳ್ಳವನೂ ಆಗಿರುವೆ. ಹಿಂದಿನ ರಾಜರುಗಳೂ, ಋಷಿಗಳೂ, ದೇವತೆಗಳೂ ಆ ದೇವಶ್ರೇಷ್ಠನ ಪೂಜೆಯನ್ನು ಹೇಗೆ ಮಾಡಿದರು? ಆ ವಿಷಯಕವಾದ ಶಿವನ ಚರಿತ್ರೆಯಲ್ಲವನ್ನು ಹೇಳಬೇಕು ಎನ್ನಲು,

॥ ಸೂತ ಉವಾಚ ॥

ಸಾಧು ಪೃಷ್ಟಮೃಷಿಶ್ರೇಷ್ಠಾಃ ಶ್ರೂಯತಾಂ ಕಥಯಾಮಿ ವಃ ।
ಚರಿತ್ರಂ ಶಾಂಕರಂ ರಮ್ಯಂ ಶೃಣ್ವತಾಂ ಭುಕ್ತಿಮುಕ್ತಿದಂ ॥ ೧ ॥

ಏತದೇವ ಪುರಾ ಪೃಷ್ಟೋ ನಾರದೇನ ಪಿತಾಮಹಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ನಾರದಂ ಮುನಿಸತ್ತಮಂ ॥ ೪ ॥

॥ ಬ್ರಹ್ಮೋವಾಚ ॥

ಶೃಣು ನಾರದ ಸುಪ್ರೀತ್ಯಾ ಶಾಂಕರಂ ಚರಿತಂ ವರಂ ।
ಪ್ರವಕ್ಷ್ಯಾಮಿ ಭವತ್ಸ್ನೇಹಾನ್ಮಹಾಪಾತಕನಾಶನಂ ॥ ೫ ॥

ರಮಯಾ ಸಹಿತೋ ವಿಷ್ಣುಶ್ಶಿವಪೂಜಾಂ ಚಕಾರ ಹ ।
ಕೃಪಯಾ ಪರಮೇಶಸ್ಯ ಸರ್ವಾನ್ಕಾಮಾನವಾಪ ಹಿ ॥ ೬ ॥

ಅಹಂ ಪಿತಾಮಹಶ್ಚಾಪಿ ಶಿವಪೂಜನಕಾರಕಃ ।
ತಸ್ಯೈವ ಕೃಪಯಾ ತಾತ ವಿಶ್ವಸೃಷ್ಟಿಕರಸ್ಸದಾ ॥ ೭ ॥

---

೩-೪. ಸೂತನು ಹೇಳಿದನು.—ಎಲೈ ಋಷಿಶ್ರೇಷ್ಠರೇ ನೀವು ಒಳ್ಳೆಯ ಪ್ರಶ್ನೆಯನ್ನು ಮಾಡದಿರಿ. ಕೇಳಿದವರಿಗೆ ಭುಕ್ತಿ ಮುಕ್ತಿಗಳನ್ನು ಕೊಡುವ ಮನೋಹರವಾದ ಶಿವನ ಚರಿತ್ರೆಯನ್ನು ನಿಮಗೆ ಹೇಳುವೆನು. ಇದನ್ನೇ ಹಿಂದೆ ನಾರದನು ಬ್ರಹ್ಮನನ್ನು ಕುರಿತು ಪ್ರಶ್ನೆಮಾಡಿದನು. ಆ ಮುನಿಶ್ರೇಷ್ಠನಾದ ನಾರದನಿಗೆ ಪ್ರಸನ್ನನಾಗಿ ಬ್ರಹ್ಮನು ಹೇಳಿದನು. ಅದನ್ನೇ ನಿಮಗೆ ಹೇಳುವೆನು.

೫-೯. ಬ್ರಹ್ಮನು ಹೇಳಿದನು.—ಎಲೈ ನಾರದನೇ, ಶ್ರೇಷ್ಠವಾದ ಶಿವನ ಚರಿತ್ರೆಯನ್ನು ನಿನ್ನಲ್ಲಿ ಪ್ರೀತಿಯಿಂದ ಹೇಳುವೆನು. ಲಕ್ಷ್ಮೀಸಮೇತನಾದ ವಿಷ್ಣುವು ಶಿವನ ಪೂಜೆಯನ್ನು ಮಾಡಿ ಆ ಶಿವನ ದಯೆಯಿಂದ ಸಮಸ್ತ ಇಷ್ಟಾರ್ಥಗಳನ್ನೂ ಹೊಂದಿದನು. ನಾನೂ ಶಿವನ ಪೂಜೆಯನ್ನು ಮಾಡಿದೆನು. ಅವನ ದಯೆಯಿಂದಲೇ

ಶಿವಪೂಜಾಕರಾ ನಿತ್ಯಂ ಮತ್ಪುತ್ರಾಃ ಪರಮರ್ಷಯಃ ।
ಅನ್ಯೇ ಚ ಋಷಯೋ ಯೇ ತೇ ಶಿವಪೂಜನಕಾರಕಾಃ ॥ ೮ ॥

ನಾರದ ತ್ವಂ ವಿಶೇಷೇಣ ಶಿವಪೂಜನಕಾರಕಃ ।
ಸಪ್ತರ್ಷಯೋ ವಸಿಷ್ಠಾದ್ಯಾಶ್ಶಿವಪೂಜನಕಾರಕಾಃ ॥ ೯ ॥

ಅರುಂಧತೀ ಮಹಾಸಾಧ್ವೀ ಲೋಪಾಮುದ್ರಾ ತಥೈವ ಚ ।
ಅಹಲ್ಯಾ ಗೌತಮಸ್ತ್ರೀ ಚ ಶಿವಪೂಜನಕಾರಕಾಃ ॥ ೧೦ ॥

ದುರ್ವಾಸಾಃ ಕೌಶಿಕಶ್ಶಕ್ತಿರ್ದಧೀಚೋ ಗೌತಮಸ್ತಥಾ ।
ಕಣಾದೋ ಭಾರ್ಗವೋ ಜೀವೋ ವೈಶಂಪಾಯನ ಏವ ಚ ॥ ೧೧ ॥

ಏತೇ ಚ ಮುನಯಸ್ಸರ್ವೇ ಶಿವಪೂಜಾಕರಾ ಮತಾಃ ।
ತಥಾ ಪರಾಶರೋ ವ್ಯಾಸಶ್ಶಿವಪೂಜಾರತಸ್ಸದಾ ॥ ೧೨ ॥

ಉಪಮನ್ಯುರ್ಮಹಾಭಕ್ತಶ್ಶಿವಸ್ಯ ಪರಮಾತ್ಮನಃ ।
ಯಾಜ್ಞವಲ್ಕ್ಯೋ ಮಹಾಶೈವೋ ಜೈಮಿನಿರ್ಗರ್ಗ ಏವ ಚ ॥ ೧೩ ॥

---

ಯಾವಾಗಲೂ ಪ್ರಪಂಚವನ್ನು ಸೃಷ್ಟಿಮಾಡುತ್ತಿರುವೆನು. ಶ್ರೇಷ್ಠರಾದ ನನ್ನ ಮಾನಸಪುತ್ರರೆಲ್ಲರೂ ಪ್ರತಿದಿನವೂ ಶಿವಪೂಜೆಯನ್ನು ಮಾಡುವರು. ಇತರ ಋಷಿಗಳೂ ಶಿವನನ್ನು ಪೂಜಿಸುವರು. ನಾರದನಾದ ನೀನೂ ವಿಶೇಷರೀತಿಯಿಂದ ಶಿವನನ್ನು ಪೂಜಿಸುವೆ. ವಸಿಷ್ಠನೇ ಮೊದಲಾದ ಸಪ್ತರ್ಷಿಗಳೂ ಶಿವನನ್ನು ಪೂಜಿಸುವರು.

೧೦-೧೬. ಮಹಾಪತಿವ್ರತೆಯರಾದ ಅರುಂಧತಿ, ಲೋಪಾಮುದ್ರೆ, ಅಹಲ್ಯೆ, ಇವರೂ ದುರ್ವಾಸ, ಕೌಶಿಕ, ದಧೀಚ, ಗೌತಮ, ಕಣಾದ, ಭಾರ್ಗವ, ಗುರು, ವೈಶಂಪಾಯನ ಈ ಮುನಿಗಳೂ ಸಹ ಶಿವಪೂಜೆಯನ್ನು ಮಾಡುವವರೆಂದು ಪ್ರಸಿದ್ಧರಾದವರು. ಪರಾಶರರೂ, ವ್ಯಾಸರೂ ಯಾವಾಗಲು ಶಿವಪೂಜೆಯನ್ನು ಮಾಡುವರು. ಶಿವನ ಮಹಾಭಕ್ತನಾದ ಉಪಮನ್ಯುವೂ, ಮಹಾಶೈವನಾದ ಯಾಜ್ಞವಲ್ಕ್ಯನೂ, ಜೈಮಿನಿಯೂ, ಗರ್ಗ, ಶುಕ, ಶೌನಕಾದಿ ಆಚಾರ್ಯರೂ ಇನ್ನೂ ಅನೇಕರು ಶಿವಪೂಜೆ

ಶುಕಶ್ಚ ಶೌನಕಾದ್ಯಾಶ್ಚ ಶಂಕರಸ್ಯ ಪ್ರಪೂಜಕಾಃ ।
ಅನ್ಯೇಽಪಿ ಬಹವಸ್ಸಂತಿ ಮುನಯೋ ಮುನಿಸತ್ತಮಾಃ ॥ ೧೪ ॥

ಅದಿತಿರ್ದೇವಮಾತಾ ಚ ನಿತ್ಯಂ ಪ್ರೀತ್ಯಾ ಚಕಾರ ಹ ।
ಪಾರ್ಥಿವೀಂ ಶೈವಪೂಜಾಂ ವೈ ಸವಧೂಃ ಪ್ರೇಮತತ್ಪರಾ ॥ ೧೫ ॥

ಶಕ್ರಾದಯೋ ಲೋಕಪಾಲಾ ವಸವಶ್ಚ ಸುರಾಸ್ತಥಾ ।
ಮಹಾರಾಜಿಕದೇವಾಶ್ಚ ಸಾಧ್ಯಾಶ್ಚ ಶಿವಪೂಜಕಾಃ ॥ ೧೬ ॥

ಗಂಧರ್ವಾಃ ಕಿನ್ನರಾದ್ಯಾಶ್ಚೋಪಸುರಾಶ್ಶಿವಪೂಜಕಾಃ ।
ತಥಾಽಸುರಾ ಮಹಾತ್ಮಾನಶ್ಶಿವಪೂಜಾಕರಾ ಮತಾಃ ॥ ೧೭ ॥

ಹಿರಣ್ಯಕಶಿಪುರ್ದೈತ್ಯಸ್ಸಾನುಜಸ್ಸಸುತೋ ಮುನೇ ।
ಶಿವಪೂಜಾಕರೋ ನಿತ್ಯಂ ವಿರೋಚನಬಲೀ ತಥಾ ॥ ೧೮ ॥

ಮಹಾಶೈವಃ ಸ್ಮೃತೋ ಬಾಣೋ ಹಿರಣ್ಯಾಕ್ಷಸುತಾಸ್ತಥಾ ।
ವೃಷಪರ್ವಾ ದನುಸ್ತಾತ ದಾನವಾಃ ಶಿವಪೂಜಕಾಃ ॥ ೧೯ ॥

ಶೇಷಶ್ಚ ವಾಸುಕಿಶ್ಚೈವ ತಕ್ಷಕಶ್ಚ ತಥಾಪರೇ ।
ಶಿವಭಕ್ತಾ ಮಹಾನಾಗಾ ಗರುಡಾದ್ಯಾಶ್ಚ ಪಕ್ಷಿಣಃ ॥ ೨೦ ॥

---

ಯನ್ನು ಮಾಡುವರಿರುವರು. ದೇವತೆಗಳ ತಾಯಿಯಾದ ಅದಿತಿಯು ಪ್ರತಿದಿನವೂ ಪ್ರೀತಿಯಿಂದ ಪ್ರಾರ್ಥಿವ ಲಿಂಗವನ್ನು ಪೂಜೆಮಾಡಿದಳು. ಇಂದ್ರನೇ ಮೊದಲಾದ ಲೋಕಪಾಲಕರೂ, ಅಷ್ಟವಸುಗಳೂ ಮಹಾರಾಜಿಕರೆಂಬ ದೇವತೆಗಳೂ, ದೇವತೆಗಳೂ, ಸಾಧ್ಯರೂ ಶಿವನನ್ನು ಪೂಜಿಸುವರು.

೧೭-೨೧. ಗಂಧರ್ವರೂ, ಕಿನ್ನರರೇ ಮುಂತಾದ ಉಪದೇವತೆಗಳು, ಮಹಾತ್ಮರಾದ ಅಸುರರು, ದೈತ್ಯನಾದ ಹಿರಣ್ಯಕಶಿಪು ಅವನ ಮಗ ಮತ್ತು ತಮ್ಮನು ವಿರೋಚನ, ಬಲಿ, ಬಾಣ, ಹಿರಣ್ಯಾಕ್ಷನ ಮಕ್ಕಳು, ವೃಷಪರ್ವನೆಂಬ ದಾನವನು, ಶೇಷ ವಾಸುಕಿ ತಕ್ಷಕರೆಂಬ ನಾಗರೂ, ಗರುಡನೇ ಮುಂತಾದ ಪಕ್ಷಿಗಳು ಭೂಮಿ

ಸೂರ್ಯಚಂದ್ರಪ್ರಭೌ ದೇವೌ ಪೃಥ್ವ್ಯಾಂ ವಂಶಪ್ರವರ್ತಕೌ ।
ಶಿವಸೇವಾರತೌ ನಿತ್ಯಂ ಸವಂಶ್ಯೌ ತೌ ಮುನೀಶ್ವರ ॥ ೨೧ ॥

ಮನವಶ್ಚ ತಥಾ ಚಕ್ರುಸ್ಸ್ವಾಯಂಭುವಪುರಸ್ಸರಾಃ ।
ಶಿವಪೂಜಾಂ ವಿಶೇಷೇಣ ಶಿವವೇಷಧರಾ ಮುನೇ ॥ ೨೨ ॥

ಪ್ರಿಯವ್ರತಶ್ಚ ತತ್ಪುತ್ರಾಸ್ತಥಾ ಚೋತ್ತಾನಪಾತ್ಸುತಃ ।
ತದ್ವಂಶಾಶ್ಚೈವ ರಾಜಾನಶ್ಶಿವಪೂಜನಕಾರಕಾಃ ॥ ೨೩ ॥

ಧ್ರುವಶ್ಚ ಋಷಭಶ್ಚೈವ ಭರತೋ ನವ ಯೋಗಿನಃ ।
ತದ್ಭ್ರಾತರಃ ಪರೇ ಚಾಪಿ ಶಿವಪೂಜನಕಾರಕಾಃ ॥ ೨೪ ॥

ವೈವಸ್ವತಸುತಾಸ್ತಾರ್ಕ್ಷ್ಯ ಇಕ್ಷ್ವಾಕುಪ್ರಮುಖಾ ನೃಪಾಃ ।
ಶಿವಪೂಜಾರತಾತ್ಮಾನಃ ಸರ್ವದಾ ಸುಖಭೋಗಿನಃ ॥ ೨೫ ॥

ಕಕುತ್ಸ್ಥಶ್ಚಾಪಿ ಮಾಂಧಾತಾ ಸಗರಶ್ಚೈವಸತ್ತಮಃ ।
ಮುಚುಕುಂದೋ ಹರಿಶ್ಚಂದ್ರಃ ಕಲ್ಮಾಷಾಂಘ್ರಿಸ್ತಥೈವ ಚ ॥ ೨೬ ॥

ಭಗೀರಥಾದಯೋ ಭೂಪಾ ಬಹವೋ ನೃಪಸತ್ತಮಾಃ ।
ಶಿವಪೂಜಾಕರಾ ಜ್ಞೇಯಾಃ ಶಿವವೇಷವಿಧಾಯಿನಃ ॥ ೨೭ ॥

---

ಯಲ್ಲಿ ರಾಜವಂಶಪ್ರವರ್ತಕರಾದ ಸೂರ್ಯ, ಚಂದ್ರರು ಇವರೆಲ್ಲರೂ ಪ್ರತಿದಿನವೂ ಶಿವಪೂಜಾಸಕ್ತರಾಗಿರುವರು.

೨೨-೨೭. ಸ್ವಾಯಂಭುವನೇ ಮುಂತಾದ ಮನುಗಳು, ಪ್ರಿಯವ್ರತನು, ಅವನ ಮಕ್ಕಳು, ಉತ್ತಾನಪಾದ, ಅವನ ಮಕ್ಕಳು, ಅವರ ವಂಶದಲ್ಲಿ ಹುಟ್ಟಿದ ರಾಜರುಗಳು, ಧ್ರುವ, ಋಷಭ, ಭರತ ಮುಂತಾದವರೂ, ಕಕುತ್ಸ್ಥ ಮಾಂಧಾತ, ಸಗರ ಮುಚುಕುಂದ, ಹರಿಶ್ಚಂದ್ರ ಕಲ್ಮಾಷಪಾದ, ಭಗೀರಥ ಮುಂತಾದ ಅನೇಕ ರಾಜಶ್ರೇಷ್ಠರೂ, ಇವರೆಲ್ಲರೂ ಶಿವದೀಕ್ಷಾಬದ್ಧರಾಗಿ ಶಿವಪೂಜೆಯನ್ನು ಮಾಡಿದವರು.

ಖಟ್ವಾಂಗಶ್ಚ ಮಹಾರಾಜೋ ದೇವಸಾಹಾಯ್ಯಕಾರಕಃ ।
ವಿಧಿತಃ ಪಾರ್ಥಿವೀಂ ಮೂರ್ತಿಂ ಶಿವಸ್ಯಾಪೂಜಯತ್ಸದಾ ॥ ೨೮ ॥

ತತ್ಪುತ್ರೋ ಹಿ ದಿಲೀಪಶ್ಚ ಶಿವಪೂಜನಕೃತ್ಸದಾ ।
ರಘುಸ್ತತ್ತನಯಃ ಶೈವಃ ಸುಪ್ರೀತ್ಯಾ ಶಿವಪೂಜಕಃ ॥ ೨೯ ॥

ಅಜಶ್ಶಿವಾರ್ಚಕಸ್ತಸ್ಯ ತನಯೋ ಧರ್ಮಯುದ್ಧಕೃತ್ ।
ಜಾತೋ ದಶರಥೋ ಭೂಯೋ ಮಹಾರಾಜೋ ವಿಶೇಷತಃ ॥ ೩೦ ॥

ಪುತ್ರಾರ್ಥೀ ಪಾರ್ಥಿವೀಂ ಮೂರ್ತಿಂ ಶೈವೀಂ ದಶರಥೋ ಹಿ ಸಃ ।
ಸಮಾನರ್ಚ ವಿಶೇಷೇಣ ವಸಿಷ್ಠಸ್ಯಾಜ್ಞಯಾ ಮುನೇಃ ॥ ೩೧ ॥

ಪುತ್ರೇಷ್ಟಿಂ ಚ ಚಕಾರಾಸೌ ಪಾರ್ಥಿವೋ ಭವಭಕ್ತಿಮಾನ್ ।
ಋಷ್ಯಶೃಂಗಮುನೇರಾಜ್ಞಾಂ ಸಂಪ್ರಾಪ್ಯ ನೃಪಸತ್ತಮಃ ॥ ೩೨ ॥

ಕೌಸಲ್ಯಾ ತತ್ಪ್ರಿಯಾ ಮೂರ್ತಿಂ ಪಾರ್ಥಿವೀಂ ಶಾಂಕರೀಂ ಮುದಾ ।
ಋಷ್ಯಶೃಂಗಸಮಾದಿಷ್ಟಾ ಸಮಾನರ್ಚ ಸುತಾಪ್ತಯೇ ॥ ೩೩ ॥

ಸುಮಿತ್ರಾ ಚ ಶಿವಂ ಪ್ರೀತ್ಯಾ ಕೈಕೇಯೀ ನೃಪವಲ್ಲಭಾ ।
ಪೂಜಯಾಮಾಸ ಸತ್ಪುತ್ರಪ್ರಾಪ್ತಯೇ ಮುನಿಸತ್ತಮ ॥ ೩೪ ॥

ಶಿವಪ್ರಸಾದತಸ್ತಾ ವೈ ಪುತ್ರಾನ್ಪ್ರಾಪುಶ್ಶುಭಂಕರಾನ್ ।
ಮಹಾಪ್ರತಾಪಿನೋ ವೀರಾನ್ಸನ್ಮಾರ್ಗನಿರತಾನ್ಮುನೇ ॥ ೩೫ ॥

---

೨೮–೩೭. ದೇವತೆಗಳಿಗೆ ಸಹಾಯಮಾಡಿದ ಖಟ್ವಾಂಗನೆಂಬ ಮಹಾರಾಜನು ವಿಧಿಗನುಸಾರವಾಗಿ ಪಾರ್ಥಿವಲಿಂಗ ಪೂಜೆಯನ್ನು ಯಾವಾಗಲೂ ಮಾಡುತ್ತಿದ್ದನು. ಅವನ ಮಗನಾದ ದಿಲೀಪ, ಅನಂತರ ಅದೇ ವಂಶನ ರಘು, ಅಜ, ದಶರಥ ಇವರೆಲ್ಲರೂ ವಸಿಷ್ಠನ ಆಜ್ಞೆಯಿಂದ ಪಾರ್ಥಿವಲಿಂಗ ಪೂಜೆಯನ್ನು ಮಾಡಿದರು. ಋಷ್ಯಶೃಂಗನ ಆಜ್ಞೆಯಿಂದ ದಶರಥನು ಪುತ್ರಕಾಮೇಷ್ಟಿಯನ್ನು ಮಾಡಿದನು. ಆ ಋಷ್ಯಶೃಂಗನ ಅಪ್ಪಣೆಯಿಂದಲೇ ಪುತ್ರಪ್ರಾಪ್ತಿಗಾಗಿ ಕೌಸಲ್ಯಾ, ಸುಮಿತ್ರೆ, ಕೈಕಯೀ ಎಂಬ ದಶರಥ ಪತ್ನಿಯರೂ ಶಿವನ ಪೂಜೆಯನ್ನು ಮಾಡಿ ಅವನ ಅನುಗ್ರಹದಿಂದ ಪುತ್ರರನ್ನು

ತತಃ ಶಿವಾಜ್ಞಯಾ ತಸ್ಯಾತ್ತಾಸು ರಾಜ್ಞಸ್ಸ್ವಯಂ ಹರಿಃ ।
ಚತುರ್ಭಿಶ್ಚೈವ ರೂಪೈಶ್ಚಾವಿರ್ಬಭೂವ ನೃಪಾತ್ಮಜಃ ॥ ೩೬ ॥

ಕೌಸಲ್ಯಾಯಾಃ ಸುತೋ ರಾಮಃ ಸುಮಿತ್ರಾಯಾಶ್ಚ ಲಕ್ಷ್ಮಣಃ ।
ಶತ್ರುಘ್ನಶ್ಚೈವ ಕೈಕೇಯ್ಯಾ ಭರತಶ್ಚೇತಿ ಸುವ್ರತಾಃ ॥ ೩೭ ॥

ರಾಮಸ್ಸಸಹಜೋ ನಿತ್ಯಂ ಪಾರ್ಥಿವಂ ಸಮಪೂಜಯತ್ ।
ಭಸ್ಮರುದ್ರಾಕ್ಷಧಾರೀ ಚ ವಿರಜಾಗಮಮಾಸ್ಥಿತಃ ॥ ೩೮ ॥

ತದ್ವಂಶೇ ಯೇ ಸಮುತ್ಪನ್ನಾ ರಾಜಾನಃ ಸಾನುಗಾ ಮುನೇ ।
ತೇ ಸರ್ವೇ ಪಾರ್ಥಿವಂ ಲಿಂಗಂ ಶಿವಸ್ಯ ಸಮಪೂಜಯನ್ ॥ ೩೯ ॥

ಸುದ್ಯುಮ್ನಶ್ಚ ಮಹಾರಾಜಶ್ಚೈವೋ ಮುನಿಸುತೋ ಮುನೇ ।
ಶಿವಶಾಪಾತ್ಪ್ರಿಯಾಹೇತೋರಭೂನ್ನಾರೀ ಸಸೇವಕಃ ॥ ೪೦ ॥

ಪಾರ್ಥಿವೇಶಸಮರ್ಚಾತಃ ಪುನಸ್ಸೋಽಭೂತ್ಪುಮಾನ್ವರಃ ।
ಮಾಸಂ ಸ್ತ್ರೀ ಪುರುಷೋ ಮಾಸಮೇವಂ ಸ್ತ್ರೀತ್ವಂ ನ್ಯವರ್ತತ ॥ ೪೧ ॥

---

ಪಡೆದರು. ಶಿವನ ಆಜ್ಞೆಯಿಂದಲೇ ಹರಿಯು ಆ ರಾಣಿಯಲ್ಲಿ ನಾಲ್ವರು ಪುತ್ರರ ರೂಪದಿಂದ ಆವಿರ್ಭವಿಸಿದನು. ಕೌಸಲ್ಯೆಗೆ ರಾಮನೂ, ಸುಮಿತ್ರೆಯಲ್ಲಿ ಲಕ್ಷ್ಮಣ, ಶತ್ರುಘ್ನರೂ, ಕೈಕಯಿಯಲ್ಲಿ ಭರತನೂ ಜನಿಸಿದರು.

೩೮-೩೯. ರಾಮನು ಪ್ರತಿದಿನವೂ ಸ್ವಾಭಾವಿಕವಾಗಿ ಪಾರ್ಥಿವಲಿಂಗಪೂಜೆಯನ್ನು ಮಾಡಿ ವಿರಜಾಗಮ ಮಾರ್ಗದಿಂದ ಭಸ್ಮರುದ್ರಾಕ್ಷಧಾರಿಯಾಗಿದ್ದನು. ಅವನ ವಂಶದಲ್ಲಿ ಹುಟ್ಟಿದ ಸಮಸ್ತ ರಾಜರೂ ಶಿವನ ಪಾರ್ಥಿವ ಲಿಂಗಪೂಜೆಯನ್ನು ಮಾಡಿದರು.

೪೦-೪೧. ಋಷಿಪುತ್ರನಾದ ಸುದ್ಯುಮ್ನನೆಂಬ ರಾಜನು ಶಿವನ ಶಾಪದಿಂದ ತನ್ನ ಸೇವಕರೊಡನೆ ಸ್ತ್ರೀಯಾದನು. ಅವನು ಪಾರ್ಥಿವ ಲಿಂಗಪೂಜೆಯನ್ನು ಮಾಡಿದ ಬಳಿಕ ಒಂದು ತಿಂಗಳು ಪುರುಷನಾಗಿಯೂ, ಒಂದು ತಿಂಗಳು ಸ್ತ್ರೀಯಾಗಿ

ತತೋ ರಾಜ್ಯಂ ಪರಿತ್ಯಜ್ಯ ಶಿವಧರ್ಮಪರಾಯಣಃ ।
ಶಿವವೇಷಧರೋ ಭಕ್ತ್ಯಾ ದುರ್ಲಭಂ ಮೋಕ್ಷಮಾಪ್ತವಾನ್ ॥ ೪೨ ॥

ಪುರೂರವಾಶ್ಚ ತತ್ಪುತ್ರೋ ಮಹಾರಾಜಸ್ಸುಪೂಜಕಃ ।
ಶಿವಸ್ಯ ದೇವದೇವಸ್ಯ ತತ್ಸುತಃ ಶಿವಪೂಜಕಃ ॥ ೪೩ ॥

ಭರತಸ್ತು ಮಹಾಪೂಜಾಂ ಶಿವಸ್ಯೈವ ಸದಾಕರೋತ್ ।
ನಹುಷಶ್ಚ ಮಹಾಶೈವಃ ಶಿವಪೂಜಾರತೋ ಹ್ಯಭೂತ್ ॥ ೪೪ ॥

ಯಯಾತಿಃ ಶಿವಪೂಜಾತಃ ಸರ್ವಾನ್ಕಾಮಾನವಾಪ್ತವಾನ್ ।
ಅಜೀಜನತ್ಸುತಾನ್ಪಂಚ ಶಿವಧರ್ಮಪರಾಯಣಾನ್ ॥ ೪೫ ॥

ತತ್ಸುತಾ ಯದುಮುಖ್ಯಾಶ್ಚ ಪಂಚಾಪಿ ಶಿವಪೂಜಕಾಃ ।
ಶಿವಪೂಜಾಪ್ರಭಾವೇಣ ಸರ್ವಾನ್ಕಾಮಾಂಶ್ಚ ಲೇಭಿರೇ ॥ ೪೬ ॥

ಅನ್ಯೇऽಪಿ ಯೇ ಮಹಾಭಾಗಾಃ ಸಮಾನರ್ಚುಶ್ಶಿವಂ ಹಿ ತೇ ।
ತದ್ವಂಶ್ಯಾ ಅನ್ಯವಂಶ್ಯಾಶ್ಚ ಭುಕ್ತಿಮುಕ್ತಿಪ್ರದಂ ಮುನೇ ॥ ೪೭ ॥

ಕೃಷ್ಣೇನ ಚ ಕೃತಂ ನಿತ್ಯಂ ಬದರೀಪರ್ವತೋತ್ತಮೇ ।
ಪೂಜನಂ ತು ಶಿವಸ್ಯೈವ ಸಪ್ತಮಾಸಾವಧಿ ಸ್ವಯಂ ॥ ೪೮ ॥

---

ಯೂ ಆಗುತ್ತಿದ್ದನು. ಆಮೇಲೆ ಅವನು ರಾಜ್ಯವನ್ನು ಬಿಟ್ಟು ಭಕ್ತಿಯಿಂದ ಶಿವಧರ್ಮಾಸಕ್ತನಾಗಿ ದುರ್ಲಭವಾದ ಮೋಕ್ಷವನ್ನು ಹೊಂದಿದನು.

೪೩–೪೭. ಆ ಸುದ್ಯುಮ್ನನ ಪುತ್ರನಾದ ಪುರೂರವನೂ, ಅವನ ಮಗನಾದ ಭರತನೂ ಯಾವಾಗಲೂ ಶಿವನ ಮಹಾಪೂಜೆಯನ್ನು ಮಾಡುತ್ತಿದ್ದರು. ನಹುಷನೂ, ಯಯಾತಿಯೂ ಶಿವಪೂಜೆಯಿಂದ ಸಮಸ್ತವಾದ ಇಷ್ಟಾರ್ಥಗಳನ್ನೂ ಪಡೆದರು. ಯಯಾತಿಯ ಪುತ್ರರಾದ ಯದುವೇ ಮುಂತಾದ ಐದುಜನ ಮಕ್ಕಳೂ ಶಿವಪೂಜೆ ಮಹಿಮೆಯಿಂದ ಸಮಸ್ತ ಇಷ್ಟಾರ್ಥಗಳನ್ನೂ ಪಡೆದರು. ಅವನ ವಂಶದ ಮತ್ತು ಬೇರೆ ರಾಜರ ವಂಶದ ಮಹಾರಾಜರು ಭುಕ್ತಿಮುಕ್ತಿಗಳನ್ನು ಕೊಡತಕ್ಕ ಶಿವಪೂಜೆಯನ್ನು ಮಾಡಿದರು.

೪೮-೫೦. ಕೃಷ್ಣನು ಬದರಿಕಾಶ್ರಮದ ಶ್ರೇಷ್ಠವಾದ ಒಂದು ಪರ್ವತದಲ್ಲಿ ಏಳು ತಿಂಗಳವರಿಗೆ ಶಿವಪೂಜೆಯನ್ನು ಮಾಡಿದನು. ಪ್ರಸನ್ನನಾದ ಆ ಶಿವನ ಅನುಗ್ರಹ

ಪ್ರಸನ್ನಾದ್ಭಗವಾಂಸ್ತಸ್ಮಾದ್ವರಾನ್ದಿವ್ಯಾನನೇಕಶಃ ।
ಸಂಪ್ರಾಪ್ಯ ಚ ಜಗತ್ಸರ್ವಂ ವಶೇಽನಯತ ಶಂಕರಾತ್ ॥ ೪೯ ॥

ಪ್ರದ್ಯುಮ್ನಸ್ತತ್ಸುತಸ್ತಾತ ಶಿವಪೂಜಾಕರಸ್ಸದಾ ।
ಅನ್ಯೇ ಚ ಕಾರ್ಷ್ಣಿಪ್ರವರಾಸ್ಸಾಂಬಾದ್ಯಾಶ್ಶಿವಪೂಜಕಾಃ ॥ ೫೦ ॥

ಜರಾಸಂಧೋ ಮಹಾಶೈವಸ್ತದ್ವಂಶ್ಯಾಶ್ಚ ನೃಪಾಸ್ತಥಾ ।
ನಿಮಿಶ್ಶೈವಶ್ಚ ಜನಕಸ್ತತ್ಪುತ್ರಾಶ್ಶಿವಪೂಜಕಾಃ ॥ ೫೧ ॥

ನಲೇನ ಚ ಕೃತಾ ಪೂಜಾ ವೀರಸೇನಸುತೇನ ವೈ ।
ಪೂರ್ವಜನ್ಮನಿ ಯೋ ಭಿಲ್ಲೋ ವನೇ ಪಾನ್ಥಸುರಕ್ಷಕಃ ॥ ೫೨ ॥

ಯತಿಶ್ಚ ರಕ್ಷಿತಸ್ತೇನ ಪುರಾ ಹರಸಮೀಪತಃ ।
ಸ್ವಯಂ ವ್ಯಾಘ್ರಾದಿಭೀ ರಾತ್ರೌ ಭಕ್ಷಿತಶ್ಚ ಮೃತೋ ವೃಷಾತ್ ॥ ೫೩ ॥

ತೇನ ಪುಣ್ಯಪ್ರಭಾವೇಣ ಸ ಭಿಲ್ಲೋ ಹಿ ನಲೋಽಭವತ್ ।
ಚಕ್ರವರ್ತೀ ಮಹಾರಾಜೋ ದಮಯಂತೀಪ್ರಿಯೋಽಭವತ್ ॥ ೫೪ ॥

---

ದಿಂದ ದಿವ್ಯವಾದ ಅನೇಕ ವರಗಳನ್ನು ಪಡೆದು, ಪ್ರಪಂಚವನ್ನೆಲ್ಲಾ ತನ್ನ ವಶಮಾಡಿಕೊಂಡನು. ಅವನ ಮಗನಾದ ಪ್ರದ್ಯುಮ್ನನೂ, ಕಾರ್ಷ್ಣಿ, ಸಾಂಬ ಮುಂತಾದ ಮಕ್ಕಳೂ ಶಿವಪೂಜಾಸಕ್ತರಾಗಿದ್ದರು.

೫೧-೫೪. ಜರಾಸಂಧನೂ ಅವನ ವಂಶದ ರಾಜರೂ ಮಹಾ ಶಿವಭಕ್ತರು. ನಿಮಿಯೂ, ಜನಕನೂ, ಅವನ ಮಕ್ಕಳೂ ಶಿವನನ್ನು ಪೂಜಿಸಿದರು. ವೀರಸೇನನ ಮಗನಾದ ನಳನು ಪೂರ್ವಜನ್ಮದಲ್ಲಿ ಬೇಡನಾಗಿದ್ದನು. ಶಿವನ ಅನುಗ್ರಹದಿಂದ ರಾಜನಾಗಿ ಶಿವಭಕ್ತನಾದನು. ಹಿಂದಿನ ಜನ್ಮದಲ್ಲಿ ಬೇಡನಾಗಿದ್ದಾಗ ಅತಿಥಿಯಾಗಿ ಬಂದ ಓರ್ವ ಯತಿಯನ್ನು ಸಂರಕ್ಷಿಸುವುದಕ್ಕಾಗಿ ತಾನು ರಾತ್ರಿಯಲ್ಲಿ ಹುಲಿಯ ಬಾಯಿಗೆ ಸಿಕ್ಕಿ ಮೃತನಾದನು ಆ ಪುಣ್ಯದ ಮಹಿಮೆಯಿಂದ ನಳಚಕ್ರವರ್ತಿಯಾಗಿ ದಮಯಂತಿಗೆ ಪತಿಯಾದನು.

**ಇತಿ ತೇ ಕಥಿತಂ ತಾತ ಯತ್ಪೃಷ್ಟಂ ಭವತಾನಘ ।**
**ಶಾಂಕರಂ ಚರಿತಂ ದಿವ್ಯಂ ಕಿಮನ್ಯತ್ಪ್ರಷ್ಟುಮಿಚ್ಛಸಿ ॥ ೫೫ ॥**

**ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ**
**ದೇವರ್ಷಿನೃಪಶೈವತ್ವವರ್ಣನಂ ನಾಮ**
**ಸಪ್ತತ್ರಿಂಶೋಽಧ್ಯಾಯಃ**



---

೫೫. ಎಲೈ ನಾರದನೇ, ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ದಿವ್ಯವಾದ ಶಂಕರನ ಚರಿತ್ರೆಯನ್ನು ಹೇಳಿರುವೆನು. ಮತ್ತೇನನ್ನು ಕೇಳಬೇಕೆಂದಿರುವೆ, ಕೇಳು, ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಶಿವಭಕ್ತರಾದ ದೇವತೆಗಳು, ಋಷಿಗಳು ಮತ್ತು ರಾಜರ ವರ್ಣನೆಯೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ಅಷ್ಟತ್ರಿಂಶೋಽಧ್ಯಾಯಃ

|| ಋಷಯ ಊಚುಃ ||

ಧನ್ಯೋಽಸಿ ಕೃತಕೃತ್ಯೋಽಸಿ ಜೀವಿತಂ ಸಫಲಂ ತವ ।
ಯಚ್ಛ್ರಾವಯಸಿ ನಸ್ತಾತ ಮಹೇಶ್ವರಕಥಾಂ ಶುಭಾಂ || ೧ ||

ಬಹುಭಿಶ್ಚರ್ಷಿಭಿಸ್ಸೂತ ಶ್ರುತಂ ಯದ್ಯಪಿ ವಸ್ತು ಸತ್ ।
ಸಂದೇಹೋ ನ ಗತೋಽಸ್ಮಾಕಂ ತದೇತತ್ಕಥಯಾಮಿ ತೇ || ೨ ||

---

## ಮೂವತ್ತೆಂಟನೆಯ ಅಧ್ಯಾಯವು

೧-೪. ಋಷಿಗಳಿಂತೆಂದರು :—ಎಲೈ ಸೂತನೇ! ಶುಭಕರವಾದ ಶಿವನ ಕಥೆಯನ್ನು ನಮಗೆ ಹೇಳುವ ನೀನೇ ಪುಣ್ಯವಂತನೂ, ಕೃತಾರ್ಥನೂ ಆಗಿರುವೆ. ಅನೇಕ ಋಷಿಗಳು ಈ ವಿಷಯವನ್ನು ಕೇಳಿದ್ದರೂ ನಮ್ಮ ಸಂದೇಹವು ಇನ್ನೂ ಹೋಗಿಲ್ಲ. ಆದುದರಿಂದ ನಿನ್ನನ್ನು ಮತ್ತೆ ಪ್ರಶ್ನೆ ಮಾಡುತ್ತೇವೆ. ಶಿವನು ಯಾವ ವ್ರತದಿಂದ ತೃಪ್ತಿಹೊಂದಿ ಉತ್ತಮವಾದ ಫಲವನ್ನು ಕೊಡುವನು? ಶಿವಸಂಬಂಧವಾದ ಕರ್ಮ

ಕೇನ ವ್ರತೇನ ಸಂತುಷ್ಟಃ ಶಿವೋ ಯಚ್ಛತಿ ಸತ್ಸುಖಂ ।
ಕುಶಲಶ್ಶಿವಕೃತ್ಯೇ ತ್ವಂ ತಸ್ಮಾತ್ಪೃಚ್ಛಾಮಹೇ ವಯಂ ॥ ೩ ॥

ಭುಕ್ತಿರ್ಮುಕ್ತಿಶ್ಚ ಲಭ್ಯೇತ ಭಕ್ತೈರ್ಯೇನ ವ್ರತೇನ ವೈ ।
ತದ್ವದ ತ್ವಂ ವಿಶೇಷೇಣ ವ್ಯಾಸಶಿಷ್ಯ ನಮೋಽಸ್ತು ತೇ ॥ ೪ ॥

॥ ಸೂತ ಉವಾಚ ॥

ಸಮ್ಯಕ್ಪೃಷ್ಟಮೃಷಿಶ್ರೇಷ್ಠಾ ಭವದ್ಭಿಃ ಕರುಣಾತ್ಮಭಿಃ ।
ಸ್ಮೃತ್ವಾ ಶಿವಪದಾಂಭೋಜಂ ಕಥಯಾಮಿ ಯಥಾಶ್ರುತಂ ॥ ೫ ॥

ಯಥಾ ಭವದ್ಭಿಃ ಪೃಚ್ಛ್ಯೇತ ತಥಾ ಪೃಷ್ಟಂ ಹಿ ವೇಧಸಾ ।
ಹರಿಣಾ ಶಿವಯಾ ಚೈವ ಶಥಾ ವೈ ಶಂಕರಂ ಪ್ರತಿ ॥ ೬ ॥

ಕಸ್ಮಿಂಶ್ಚಿತ್ಸಮಯೇ ತೈಸ್ತು ಪೃಷ್ಟಂ ಚ ಪರಮಾತ್ಮನೇ ।
ಕೇನ ವ್ರತೇನ ಸಂತುಷ್ಟೋ ಭುಕ್ತಿಂ ಮುಕ್ತಿಂ ಚ ಯಚ್ಛಸಿ ॥ ೭ ॥

ಇತಿ ಪೃಷ್ಟಸ್ತದಾ ತೈಸ್ತು ಹರಿಣಾ ತೇನ ವೈ ತದಾ ।
ತದಹಂ ಕಥಯಾಮ್ಯದ್ಯ ಶೃಣ್ವತಾಂ ಪಾಪಹಾರಕಂ ॥ ೮ ॥

---

ಗಳಲ್ಲಿ ನೀನು ಕುಶಲನಾದುದರಿಂದ ನಿನ್ನನ್ನು ನಾವು ಪ್ರಶ್ನೆ ಮಾಡಿರುವೆವು. ಯಾವ ವ್ರತದಿಂದ ಭಕ್ತರಿಗೆ ಭುಕ್ತಿ ಮುಕ್ತಿಗಳು ಪ್ರಾಪ್ತವಾಗುವುವು? ವ್ಯಾಸರ ಶಿಷ್ಯನಾದ ನೀನು ಶಿವಸಂಬಂಧವಾದ ಕರ್ಮಗಳಲ್ಲಿ ಕುಶಲನು. ಆದುದರಿಂದ ಆ ವ್ರತಗಳನ್ನು ವಿಸ್ತಾರವಾಗಿ ನಮಗೆ ಹೇಳು. ನಿನಗೆ ನಮಸ್ಕಾರವನ್ನು ಮಾಡುವೆವು ಎಂದರು.

೫-೮. ಸೂತನು ಹೇಳಿದನು :—ಎಲೈ, ಋಷಿಶ್ರೇಷ್ಠರೇ ಕರುಣಾಶಾಲಿಗಳಾದ ನೀವು ಒಳ್ಳೆಯ ಪ್ರಶ್ನೆಯನ್ನೇ ಮಾಡಿದಿರಿ. ಶಿವನ ಪಾದಕಮಲವನ್ನು ಧ್ಯಾನಮಾಡಿ ನನಗೆ ತಿಳಿದಮಟ್ಟಿಗೆ ಹೇಳುವೆನು. ನೀವು ಕೇಳಿದಂತೆಯೇ ಬ್ರಹ್ಮನೂ, ಹರಿಯೂ, ಪಾರ್ವತಿಯೂ ಶಿವನನ್ನು ಪ್ರಶ್ನೆ ಮಾಡಿದರು. ಯಾವ ವ್ರತದಿಂದ ನೀನು ತೃಪ್ತನಾಗಿ ಜನರಿಗೆ ಭುಕ್ತಿ ಮುಕ್ತಿಗಳನ್ನು ಕೊಡುವೆ? ಯಾವ ವ್ರತದಿಂದ ಕೇಳಿದವರ ಪಾಪಗಳು ನಾಶವಾಗುವವು? ಎಂದು ಹರಿಯು ಕೇಳಲು, ಅವನಿಗೆ ಶಿವನು ಹೇಳಿದ ಉತ್ತರವನ್ನೇ ನಿಮಗೆ ಹೇಳುವೆನು.

॥ ಶಿವ ಉವಾಚ ॥

ಭೂರಿ ವ್ರತಾನಿ ಮೇ ಸಂತಿ ಭುಕ್ತಿಮುಕ್ತಿಪ್ರದಾನಿ ಚ ।
ಮುಖ್ಯಾನಿ ತತ್ರ ಜ್ಞೇಯಾನಿ ದಶಸಂಖ್ಯಾನಿ ತಾನಿ ವೈ ॥ ೯ ॥

ದಶ ಶೈವವ್ರತಾನ್ಯಾಹುರ್ಜಾಬಾಲಶ್ರುತಿಪಾರಗಾಃ ।
ತಾನಿ ವ್ರತಾನಿ ಯತ್ನೇನ ಕಾರ್ಯಾಣ್ಯೇವ ದ್ವಿಜೈಸ್ಸದಾ ॥ ೧೦ ॥

ಪ್ರತ್ಯಷ್ಟಮ್ಯಾಂ ಪ್ರಯತ್ನೇನ ಕರ್ತವ್ಯಂ ನಕ್ತಭೋಜನಂ ।
ಕಾಲಾಷ್ಟಮ್ಯಾಂ ವಿಶೇಷೇಣ ಹರೇ ತ್ಯಾಜ್ಯಂ ಹಿ ಭೋಜನಂ ॥ ೧೧ ॥

ಏಕಾದಶ್ಯಾಂ ಸಿತಾಯಾಂ ತು ತ್ಯಾಜ್ಯಂ ವಿಷ್ಣೋ ಹಿ ಭೋಜನಂ ।
ಅಸಿತಾಯಾಂ ತು ಭೋಕ್ತವ್ಯಂ ನಕ್ತಮಭ್ಯರ್ಚ್ಯ ಮಾಂ ಹರೇ ॥ ೧೨ ॥

ತ್ರಯೋದಶ್ಯಾಂ ಸಿತಾಯಾಂ ತು ಕರ್ತವ್ಯಂ ನಿಶಿ ಭೋಜನಂ ।
ಅಸಿತಾಯಾಂ ತು ಭೂತಾಯಾಂ ತನ್ನ ಕಾರ್ಯಂ ಶಿವವ್ರತೈಃ ॥ ೧೩ ॥

ನಿಶಿ ಯತ್ನೇನ ಕರ್ತವ್ಯಂ ಭೋಜನಂ ಸೋಮವಾಸರೇ ।
ಉಭಯೋಃ ಪಕ್ಷಯೋರ್ವಿಷ್ಣೋ ಸರ್ವಸ್ಮಿಂಚ್ಛಿವತತ್ಪರೈಃ ॥ ೧೪ ॥

---

೯–೧೦. ಶಿವನು ಹೇಳಿದನು :—ಭುಕ್ತಿ ಮುಕ್ತಿಗಳನ್ನು ಕೊಡುವ ನನ್ನ ವ್ರತಗಳು ಅನೇಕವಾಗಿರುವುವು. ಅವುಗಳಲ್ಲಿ ಹತ್ತು ವ್ರತಗಳು ಮುಖ್ಯವಾದುವು. ಜಾಬಾಲ ಶ್ರುತಿಯಲ್ಲಿ ಹತ್ತು ಶೈವವ್ರತಗಳನ್ನು ಹೇಳಿರುವರು. ಆ ವ್ರತಗಳನ್ನು ದ್ವಿಜರಾದವರು ಪ್ರಯತ್ನಪೂರ್ವಕವಾಗಿ ಮಾಡಬೇಕು.

೧೧–೧೪. ಎಲೈ, ಹರಿಯೇ! ಶಿವಪೂಜೆಯನ್ನು ಮಾಡುವವರು ಪ್ರತಿ ಅಷ್ಟಮಿಯಲ್ಲಿಯೂ ನಕ್ತಭೋಜನವನ್ನು ಎಂದರೆ ರಾತ್ರಿಕಾಲದಲ್ಲಿ ಭೋಜನವನ್ನು ಮಾಡಬೇಕು. ಕಾಲಾಷ್ಟಮಿಯ ದಿನ ಉಪವಾಸವನ್ನು ಮಾಡಬೇಕು. ಶುಕ್ಲಪಕ್ಷದ ಏಕಾದಶಿಯಲ್ಲಿ ಉಪವಾಸವೂ, ಕೃಷ್ಣಪಕ್ಷದ ಏಕಾದಶಿಯಲ್ಲಿ ನಕ್ತಭೋಜನವೂ, ಶುಕ್ಲಪಕ್ಷದ ತ್ರಯೋದಶಿಯ ದಿನ ನಕ್ತಭೋಜನವೂ, ಕೃಷ್ಣತ್ರಯೋದಶಿಯಲ್ಲಿ ಉಪವಾಸವೂ, ಎರಡು ಪಕ್ಷಗಳಲ್ಲೂ ಪ್ರತಿಸೋಮವಾರವೂ ನಕ್ತಭೋಜನವೂ ಶಿವ

ವ್ರತೇಷ್ವೇತೇಷು ಸರ್ವೇಷು ಶೈವಾ ಭೋಜ್ಯಾಃ ಪ್ರಯತ್ನತಃ ।
ಯಥಾಶಕ್ತಿ ದ್ವಿಜಶ್ರೇಷ್ಠಾ ವ್ರತಸಂಪೂರ್ತಿಹೇತವೇ ॥ ೧೫ ॥

ವ್ರತಾನ್ಯೇತಾನಿ ನಿಯಮಾತ್ಕರ್ತವ್ಯಾನಿ ದ್ವಿಜನ್ಮಭಿಃ ।
ವ್ರತಾನ್ಯೇತಾನಿ ತು ತ್ಯಕ್ತ್ವಾ ಜಾಯಂತೇ ತಸ್ಕರಾ ದ್ವಿಜಾಃ ॥ ೧೬ ॥

ಮುಕ್ತಿಮಾರ್ಗಪ್ರವೀಣೈಶ್ಚ ಕರ್ತವ್ಯಂ ನಿಯಮಾದಿತಿ ।
ಮುಕ್ತೇಸ್ತು ಪ್ರಾಪಕಂ ಚೈವ ಚತುಷ್ಟಯಮುದಾಹೃತಂ ॥ ೧೭ ॥

ಶಿವಾರ್ಚನಂ ರುದ್ರಜಪ ಉಪವಾಸಶ್ಶಿವಾಲಯೇ ।
ವಾರಾಣಸ್ಯಾಂ ಚ ಮರಣಂ ಮುಕ್ತಿರೇಷಾ ಸನಾತನೀ ॥ ೧೮ ॥

ಅಷ್ಟಮೀ ಸೋಮವಾರೇ ಚ ಕೃಷ್ಣಪಕ್ಷೇ ಚತುರ್ದಶೀ ।
ಶಿವತುಷ್ಟಿಕರಂ ಚೈತನ್ನಾತ್ರ ಕಾರ್ಯಾ ವಿಚಾರಣಾ ॥ ೧೯ ॥

ಚತುರ್ಷ್ವಪಿ ಬಲಿಷ್ಠಂ ಹಿ ಶಿವರಾತ್ರಿವ್ರತಂ ಹರೇ ।
ತಸ್ಮಾತ್ತದೇವ ಕರ್ತವ್ಯಂ ಭುಕ್ತಿಮುಕ್ತಿಫಲೇಪ್ಸುಭಿಃ ॥ ೨೦ ॥

---

ವ್ರತಗಳಲ್ಲಿ ಮುಖ್ಯವಾದುವು. ಈ ಎಲ್ಲ ವ್ರತಗಳಲ್ಲಿಯೂ ವ್ರತಸಂಪೂರ್ತಿಗಾಗಿ ಶಕ್ತ್ಯಾನುಸಾರವಾಗಿ ಶಿವಭಕ್ತರಿಗೆ ಭೋಜನವನ್ನು ಮಾಡಿಸಬೇಕು.

೧೬-೨೦. ದ್ವಿಜರಾದವರು ಈ ವ್ರತವನ್ನು ನಿಯಮದಿಂದ ಮಾಡಬೇಕು. ಇವುಗಳನ್ನು ಮಾಡದೆ ಬಿಟ್ಟರೆ ಆ ದ್ವಿಜರು ತಸ್ಕರರೆನಿಸುವರು. ಮೋಕ್ಷಮಾರ್ಗವಲ್ಲಿ ಪ್ರವೇಶಮಾಡಿದವರೂ ಸಹ ನಿಯಮದಿಂದ ಈ ವ್ರತಗಳನ್ನು ಮಾಡಬೇಕು. ( ಶಿವಾರ್ಚನೆ, ರುದ್ರಮಂತ್ರ ಜಪ, ಶಿವಾಲಯ ಕ್ಷೇತ್ರದಲ್ಲಿ ಉಪವಾಸ, ಕಾಶಿಯಲ್ಲಿ ಮರಣ, ಈ ನಾಲ್ಕೂ ಮುಕ್ತಿಯನ್ನು ಕೊಡತಕ್ಕವುಗಳು.) ಅಷ್ಟಮಿ, ಸೋಮವಾರ, ಕೃಷ್ಣ ಪಕ್ಷದ ಚತುರ್ದಶಿ, ಈ ಮೂರುಕಾಲಗಳು ಶಿವನಿಗೆ ಸಂತೋಷವನ್ನುಂಟುಮಾಡುವುವು. ಈ ವಿಷಯದಲ್ಲಿ ಸಂದೇಹವಿರುವುದಿಲ್ಲ. ಎಲೈ ಹರಿಯೇ! ಈ ನಾಲ್ಕು ಕಾಲಗಳಲ್ಲಿ ಶಿವರಾತ್ರಿವ್ರತವು ಅತ್ಯಂತ ಶ್ರೇಷ್ಠವಾದುದು. ಆದುದರಿಂದ ಭುಕ್ತಿ ಮುಕ್ತಿರೂಪವಾದ ಫಲಗಳನ್ನು ಅಪೇಕ್ಷಿಸುವವರು ಶಿವರಾತ್ರಿ ವ್ರತವನ್ನೇ ಅವಶ್ಯಕವಾಗಿ ಮಾಡಬೇಕು.

ಏತಸ್ಮಾಚ್ಚ ವ್ರತಾದನ್ಯನ್ನಾಸ್ತಿ ನೃಣಾಂ ಹಿತಾವಹಂ ।
ಏತದ್ವ್ರತಂ ತು ಸರ್ವೇಷಾಂ ಧರ್ಮಸಾಧನಮುತ್ತಮಂ ॥ ೨೧ ॥

ನಿಷ್ಕಾಮಾನಾಂ ಸಕಾಮಾನಾಂ ಸರ್ವೇಷಾಂ ಚ ನೃಣಾಂ ತಥಾ ।
ವರ್ಣಾನಾಮಾಶ್ರಮಾಣಾಂ ಚ ಸ್ತ್ರೀಬಾಲಾನಾಂ ತಥಾ ಹರೇ ॥ ೨೨ ॥

ದಾಸಾನಾಂ ದಾಸಿಕಾನಾಂ ಚ ದೇವಾದೀನಾಂ ತಥೈವ ಚ ।
ಶರೀರಿಣಾಂ ಚ ಸರ್ವೇಷಾಂ ಹಿತಮೇತದ್ವ್ರತಂ ವರಂ ॥ ೨೩ ॥

ಮಾಘಸ್ಯ ಹ್ಯಸಿತೇ ಪಕ್ಷೇ ವಿಶಿಷ್ಟಾ ಸಾತಿ ಕೀರ್ತಿತಾ ।
ನಿಶೀಥವ್ಯಾಪಿನೀ ಗ್ರಾಹ್ಯಾ ಹತ್ಯಾಕೋಟಿವಿನಾಶಿನೀ ॥ ೨೪ ॥

ತದ್ದಿನೇ ಚೈವ ಯತ್ಕಾರ್ಯಂ ಪ್ರಾತರಾರಭ್ಯ ಕೇಶವ ।
ಶ್ರೂಯತಾಂ ತನ್ಮನೋ ದತ್ವಾ ಸುಪ್ರೀತ್ಯಾ ಕಥಯಾಮಿ ತೇ ॥ ೨೫ ॥

ಪ್ರಾತರುತ್ಥಾಯ ಮೇಧಾವೀ ಪರಮಾನಂದಸಂಯುತಃ ।
ಸಮಾಚರೇನ್ನಿತ್ಯಕೃತ್ಯಂ ಸ್ನಾನಾದಿಕಮತಂದ್ರಿತಃ ॥ ೨೬ ॥

---

೨೧–೨೫. ಮನುಷ್ಯರಿಗೆ ಹಿತವನ್ನುಂಟುಮಾಡುವ ವ್ರತಗಳಲ್ಲಿ ಈ ವ್ರತಕ್ಕಿಂತ ಉತ್ತಮವಾದುದು ಬೇರೊಂದಿರುವುದಿಲ್ಲ. ಈ ವ್ರತವು ಎಲ್ಲರಿಗೂ ಧರ್ಮವನ್ನು ಸಾಧಿಸಲು ಸುಲಭವಾದುದಾಗಿರುವುದು. ನಿಷ್ಕಾಮರಾಗಲೀ, ಸಕಾಮರಾಗಲೀ ಸಮಸ್ತ ವರ್ಣಾಶ್ರಮದವರೂ, ಸ್ತ್ರೀಯರೂ, ಬಾಲಕರೂ, ದಾಸ ದಾಸೀ ಜನರು, ದೇವತೆಗಳು, ಶರೀರವನ್ನು ಧರಿಸಿದ ಸಮಸ್ತ ಪ್ರಾಣಿಗಳು ಇವರೆಲ್ಲರಿಗೂ ಈ ವ್ರತವು ಹಿತಕರವಾದುದು. ಮಾಘಮಾಸದ ಕೃಷ್ಣಪಕ್ಷದಲ್ಲಿ ಅರ್ಧರಾತ್ರಿ ಸಂಬಂಧವಾದ ಚತುರ್ದಶಿಯ ತಿಥಿಯು ಈ ವ್ರತಕ್ಕೆ ಸರಿಯಾದ ಕಾಲವು. ಈ ಕಾಲವು ಕೋಟಿ ಬ್ರಹ್ಮಹತ್ಯೆಗಳನ್ನು ನಿವಾರಣೆಮಾಡುವುದು. ಆ ದಿನದಲ್ಲಿ ಪ್ರಾತಃಕಾಲ ಮೊದಲುಗೊಂಡು ಯಾವ ಯಾವ ಕಾರ್ಯಗಳನ್ನು ಮಾಡಬೇಕೋ ಅವುಗಳನ್ನು ಹೇಳುವೆನು. ಎಲೈ ಕೇಶವನೇ, ಅದನ್ನು ಮನಸ್ಸಿಟ್ಟು ಕೇಳು.

೨೬-೩೦. ಬುದ್ಧಿವಂತನಾದ ಮನುಷ್ಯನು ಶಿವರಾತ್ರಿಯ ದಿನ ಪ್ರಾತಃಕಾಲದಲ್ಲಿ ಎದ್ದು ಸಂತೋಷದಿಂದ ಸ್ನಾನಾದಿ ನಿತ್ಯಕರ್ಮಗಳನ್ನು ಮಾಡಬೇಕು. ಆಮೇಲೆ

ಶಿವಾಲಯೇ ತತೋ ಗತ್ವಾ ಪೂಜಯಿತ್ವಾ ಯಥಾವಿಧಿ ।
ನಮಸ್ಕೃತ್ಯ ಶಿವಂ ಪಶ್ಚಾತ್ಸಂಕಲ್ಪಂ ಸಮ್ಯಗಾಚರೇತ್ ॥ ೨೭ ॥

ದೇವದೇವ ಮಹಾದೇವ ನೀಲಕಂಠ ನಮೋऽಸ್ತು ತೇ ।
ಕರ್ತುಮಿಚ್ಛಾಮ್ಯಹಂ ದೇವ ಶಿವರಾತ್ರಿವ್ರತಂ ತವ ॥ ೨೮ ॥

ತವ ಪ್ರಭಾವಾದ್ದೇವೇಶ ನಿರ್ವಿಘ್ನೇನ ಭವೇದಿತಿ ।
ಕಾಮಾದ್ಯಾಃ ಶತ್ರವೋ ಮಾಂ ವೈ ಪೀಡಾಂ ಕುರ್ವಂತು ನೈವ ಹಿ ॥ ೨೯ ॥

ಏವಂ ಸಂಕಲ್ಪಮಾಸ್ಥಾಯ ಪೂಜಾದ್ರವ್ಯಂ ಸಮಾಹರೇತ್ ।
ಸುಸ್ಥಲೇ ಚೈವ ಯಲ್ಲಿಂಗಂ ಪ್ರಸಿದ್ಧಂ ಚಾಗಮೇಷು ವೈ ॥ ೩೦ ॥

ರಾತ್ರೌ ತತ್ರ ಸ್ವಯಂ ಗತ್ವಾ ಸಂಪಾದ್ಯ ವಿಧಿಮುತ್ತಮಂ ।
ಶಿವಸ್ಯ ದಕ್ಷಿಣೇ ಭಾಗೇ ಪಶ್ಚಿಮೇ ವಾ ಸ್ಥಲೇ ಶುಭೇ ॥ ೩೧ ॥

ನಿಧಾಯ ಚೈವ ತದ್ದ್ರವ್ಯಂ ಪೂಜಾರ್ಥಂ ಶಿವಸನ್ನಿಧೌ ।
ಪುನಃ ಸ್ನಾಯಾತ್ತದಾ ತತ್ರ ವಿಧಿಪೂರ್ವಂ ನರೋತ್ತಮಃ ॥ ೩೨ ॥

---

ಶಿವಾಲಯಕ್ಕೆ ಹೋಗಿ ವಿಧಿಗನುಸಾರವಾಗಿ ಪೂಜೆಯನ್ನು ಮಾಡಿ, ನಮಸ್ಕರಿಸಿ ಆ ಬಳಿಕ ಸಂಕಲ್ಪವನ್ನು ಮಾಡಬೇಕು. ದೇವ ದೇವನೂ ನೀಲಕಂಠನೂ ಆದ ಎಲೈ, ಸ್ವಾಮಿಯೆ! ನಿನಗೆ ನಮಸ್ಕಾರವನ್ನು ಮಾಡುವೆನು. ನಿನ್ನ ಪ್ರೀತ್ಯರ್ಥವಾಗಿ ಶಿವರಾತ್ರಿವ್ರತವನ್ನು ಮಾಡಬೇಕೆಂದಿರುವೆನು. ನಿನ್ನ ಮಹಿಮೆಯಿಂದ ಅದು ನಿರ್ವಿಘ್ನವಾಗಿ ನೆರವೇರಬೇಕು. ಕಾಮಾದಿ ಶತ್ರುಗಳು ನನ್ನನ್ನು ಬಾಧೆಪಡಿಸದೆ ಇರಲಿ. ಹೀಗೆಂದು ಸಂಕಲ್ಪವನ್ನು ಮಾಡಿ ಪೂಜಾದ್ರವ್ಯಗಳನ್ನು ಸಿದ್ಧಪಡಿಸಿಕೊಂಡು ಶುದ್ಧವಾದ ಸ್ಥಳದಲ್ಲಿ ಪ್ರತಿಷ್ಠಿಸಿರುವ ಮಹಾಪ್ರಸಿದ್ಧವಾದ ಲಿಂಗದ ಸಮೀಪಕ್ಕೆ ಹೋಗಬೇಕು.

೩೧–೩೫. ಶಿವರಾತ್ರಿಯದಿನ ರಾತ್ರಿಯ ಸಮಯದಲ್ಲಿ ಲಿಂಗದ ಸಮೀಪಕ್ಕೆ ಹೋಗಿ ವಿಧಿಗನುಸಾರವಾಗಿ ತಾನು ತಂದ ಪೂಜಾದ್ರವ್ಯಗಳನ್ನು ಶಿವಲಿಂಗದ ದಕ್ಷಿಣ ಅಥವಾ ಪಶ್ಚಿಮಭಾಗದಲ್ಲಿ ಶುದ್ಧಸ್ಥಳದಲ್ಲಿಟ್ಟು ವಿಧಿಪೂರ್ವಕವಾಗಿ ಮತ್ತೆ ಸ್ನಾನವನ್ನು

ಪರಿಧಾಯ ಶುಭಂ ವಸ್ತ್ರಮಂತರ್ವಾಸಶ್ಶುಭಂ ತಥಾ ।
ಆಚಮ್ಯ ಚ ತ್ರಿವಾರಂ ಹಿ ಪೂಜಾರಂಭಂ ಸಮಾಚರೇತ್ ॥ ೩೩ ॥

ಯಸ್ಯ ಮಂತ್ರಸ್ಯ ಯದ್ದ್ರವ್ಯಂ ತೇನ ಪೂಜಾಂ ಸಮಾಚರೇತ್ ।
ಅಮಂತ್ರಕಂ ನ ಕರ್ತವ್ಯಂ ಪೂಜನಂ ತು ಹರಸ್ಯ ಚ ॥ ೩೪ ॥

ಗೀತೈರ್ವಾದ್ಯೈಸ್ತಥಾ ನೃತ್ಯೈರ್ಭಕ್ತಿಭಾವಸಮನ್ವಿತಃ ।
ಪೂಜನಂ ಪ್ರಥಮೇ ಯಾಮೇ ಕೃತ್ವಾ ಮಂತ್ರಂ ಜಪೇದ್ಬುಧಃ ॥ ೩೫ ॥

ಪಾರ್ಥಿವಂ ಚ ತದಾ ಶ್ರೇಷ್ಠಂ ವಿಧಧ್ಯಾನ್ಮಂತವಾನ್ಯದಿ ।
ಕೃತನಿತ್ಯಕ್ರಿಯಃ ಪಶ್ಚಾತ್ಪಾರ್ಥಿವಂ ಚ ಸಮರ್ಚಯೇತ್ ॥ ೩೬ ॥

ಪ್ರಥಮಂ ಪಾರ್ಥಿವಂ ಕೃತ್ವಾ ಪಶ್ಚಾತ್ಸ್ಥಾಪನಮಾಚರೇತ್ ।
ಸ್ತೋತ್ರೈರ್ನಾನಾವಿಧೈರ್ದೇವಂ ತೋಷಯೇದ್ವೃಷಭಧ್ವಜಂ ॥ ೩೭ ॥

ಮಾಹಾತ್ಮ್ಯಂ ವ್ರತಸಂಭೂತಂ ಪಠಿತವ್ಯಂ ಸುಧೀಮತಾ ।
ಶ್ರೋತವ್ಯಂ ಭಕ್ತವರ್ಯೇಣ ವ್ರತಸಂಪೂರ್ತಿಕಾಮ್ಯಯಾ ॥ ೩೮ ॥

---

ಮಾಡಿ ಪರಿಶುದ್ಧವಾದ ವಸ್ತ್ರವನ್ನುಟ್ಟು ಮೂರಾವೃತ್ತಿ ಆಚಮನವನ್ನು ಮಾಡಿ ಪೂಜೆಯನ್ನು ಆರಂಭಿಸಬೇಕು. ಯಾವ ಮಂತ್ರಕ್ಕೆ ಯಾವದ್ರವ್ಯವೋ ಆ ದ್ರವ್ಯ ದಿಂದ ಪೂಜಿಸಬೇಕು. ಶಿವಪೂಜೆಯನ್ನು ಮಂತ್ರವಿಲ್ಲದೆ ಮಾಡಬಾರದು. ಭಕ್ತಿ ಯಿಂದ ನೃತ್ಯ ಗೀತ ವಾದ್ಯಗಳೊಡನೆ ಮೊದಲನೆಯ ಯಾಮದ ಪೂಜೆಯನ್ನು ಮಾಡಿ ತರುವಾಯ ಶಿವಮಂತ್ರಜಪವನ್ನು ಮಾಡಬೇಕು.

೩೬-೪೦. ಮಂತ್ರಜ್ಞನಾದವನು ನಿತ್ಯಕರ್ಮಗಳನ್ನು ಮಾಡಿದ ಮೇಲೆ ಪಾರ್ಥಿವಲಿಂಗವನ್ನು ಮಾಡಿ ಪೂಜಿಸಬೇಕು. ಮೊದಲು ಪಾರ್ಥಿವಲಿಂಗವನ್ನು ಮಾಡಿ ತರುವಾಯ ಅದನ್ನು ಸ್ಥಾಪಿಸಿ ಬಗೆಬಗೆಯ ಸ್ತೋತ್ರಗಳಿಂದ ದೇವದೇವನಾದ ಶಿವನ ಸ್ತೋತ್ರಗಳನ್ನು ಮಾಡಿ ಶಿವರಾತ್ರಿವ್ರತದ ಮಹಿಮೆಯನ್ನು ಪಾರಾಯಣ ಮಾಡಬೇಕು. ಭಕ್ತರು ಇದನ್ನು ಕೇಳಬೇಕು. ಇದರಿಂದ ವ್ರತವು ಪೂರ್ಣವಾಗು ವುದು. ನಾಲ್ಕು ಯಾಮಗಳಲ್ಲಿಯೂ ನಾಲ್ಕು ಲಿಂಗಗಳನ್ನು ಮಾಡಿ ಆವಾಹನಾದಿ

ಚತುರ್ಷ್ವಪಿ ಚ ಯಾಮೇಷು ಮೂರ್ತೀನಾಂ ಚ ಚತುಷ್ಟಯಂ ।
ಕೃತ್ವಾವಾಹನಪೂರ್ವಂ ಹಿ ವಿಸರ್ಗಾವಧಿ ನೈ ಕ್ರಮಾತ್ ॥ ೩೯ ॥

ಕಾರ್ಯಂ ಜಾಗರಣಂ ಪ್ರೀತ್ಯಾ ಮಹೋತ್ಸವಸಮನ್ವಿತಂ ।
ಪ್ರಾತಃ ಸ್ನಾತ್ವಾ ಪುನಸ್ತತ್ರ ಸ್ಥಾಪಯೇತ್ಪೂಜಯೇಚ್ಛಿವಂ ॥ ೪೦ ॥

ತತಃ ಸಂಪ್ರಾರ್ಥಯೇಚ್ಛಂಭುಂ ನತಸ್ಕಂಧಃ ಕೃತಾಂಜಲಿಃ ।
ಕೃತಸಂಪೂರ್ಣವ್ರತಕೋ ನತ್ವಾ ತಂ ಚ ಪುನಃ ಪುನಃ ॥ ೪೧ ॥

ನಿಯಮೋ ಯೋ ಮಹಾದೇವ ಕೃತಶ್ಚೈವ ತ್ವದಾಜ್ಞಯಾ ।
ವಿಸೃಜ್ಯತೇ ಮಯಾ ಸ್ವಾಮಿನ್ವ್ರತಂ ಜಾತಮನುತ್ತಮಂ ॥ ೪೨ ॥

ವ್ರತೇನಾನೇನ ದೇವೇಶ ಯಥಾಶಕ್ತಿಕೃತೇನ ಚ ।
ಸಂತುಷ್ಟೋ ಭವ ಶರ್ವಾದ್ಯ ಕೃಪಾಂ ಕುರು ಮಮೋಪರಿ ॥ ೪೩ ॥

ಪುಷ್ಪಾಂಜಲಿಂ ಶಿವೇ ದತ್ವಾ ದದ್ಯಾದ್ದಾನಂ ಯಥಾವಿಧಿ ।
ನಮಸ್ಕೃತ್ಯ ಶಿವಾಯೈವ ನಿಯಮಂ ತಂ ವಿಸರ್ಜಯೇತ್ ॥ ೪೪ ॥

---

ವಿಸರ್ಜನಾಂತವಾಗಿ ಪೂಜಿಸಬೇಕು. ಮಹಾಉತ್ಸವಗಳೊಡನೆ ಆ ದಿನ ರಾತ್ರಿ ಜಾಗರಣೆಯನ್ನು ಮಾಡಬೇಕು. ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ಪುನಃ ಪಾರ್ಥಿವಲಿಂಗವನ್ನು ಸ್ಥಾಪಿಸಿ ಪೂಜಿಸಬೇಕು.

೪೧-೪೫. ಆಮೇಲೆ ನಮಸ್ಕಾರವನ್ನು ಮಾಡಿ ಕೈ ಜೋಡಿಸಿ ನಿಂತು ಶಿರಸ್ಸನ್ನು ಬಗ್ಗಿಸಿಕೊಂಡು ಪ್ರಾರ್ಥನೆಮಾಡಬೇಕು. ವ್ರತವು ಪೂರ್ಣವಾದಮೇಲೆ ಪುನಃ ಪುನಃ ನಮಸ್ಕಾರವನ್ನು ಮಾಡಬೇಕು. ಎಲೈ, ಮಹಾದೇವನೇ ನಿನ್ನ ಆಜ್ಞೆಯಿಂದ ವ್ರತನಿಯಮವನ್ನು ಆಚರಿಸಿದೆನು. ನನ್ನ ಶಕ್ತ್ಯಾನುಸಾರವಾಗಿ ಮಾಡಿದ ಈ ವ್ರತದಿಂದ ನೀನು ಸಂತೋಷವನ್ನು ಹೊಂದಿ ನನ್ನಲ್ಲಿ ದಯೆಯನ್ನು ತೋರಿಸು. ಹೀಗೆಂದು ಪ್ರಾರ್ಥನೆಯನ್ನು ಮಾಡಿ ಶಿವನಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ ವಿಧಿಗನುಸಾರವಾಗಿ ದಾನಗಳನ್ನು ಮಾಡಿ ಶಿವನಿಗೆ ನಮಸ್ಕರಿಸಿ ವ್ರತವಿಸರ್ಜನೆಯನ್ನು

ಯಥಾಶಕ್ತಿದ್ವಿಜಾಞ್ಭೃವಾನ್ಯತಿನಶ್ಚ ವಿಶೇಷತಃ ।
ಭೋಜಯಿತ್ವಾ ಸುಸಂತೋಷ್ಯ ಸ್ವಯಂ ಭೋಜನಮಾಚರೇತ್ ॥ ೪೫ ॥

ಯಾಮೇಯಾಮೇ ಯಥಾ ಪೂಜಾ ಕಾರ್ಯಾ ಭಕ್ತವರ್ಯೈರ್ಹರೇ ।
ಶಿವರಾತ್ರೌ ವಿಶೇಷೇಣ ತಾಮುಹಂ ಕಥಯಾಮಿ ತೇ ॥ ೪೬ ॥

ಪ್ರಥಮೇ ಚೈವ ಯಾಮೇ ಚ ಸ್ಥಾಪಿತಂ ಪಾರ್ಥಿವಂ ಹರೇ ।
ಪೂಜಯೇತ್ಪರಯಾ ಭಕ್ತ್ಯಾ ಸೂಪಚಾರೈರನೇಕಶಃ ॥ ೪೭ ॥

ಪಂಚದ್ರವ್ಯೈಶ್ಚ ಪ್ರಥಮಂ ಪೂಜನೀಯೋ ಹರಸ್ಸದಾ ।
ತಸ್ಯ ತಸ್ಯ ಚ ಮಂತ್ರೇಣ ಪೃಥಗ್ದ್ರವ್ಯಂ ಸಮರ್ಪಯೇತ್ ॥ ೪೮ ॥

ದತಚ್ಚ ದ್ರವ್ಯಂ ಸಮರ್ಪ್ಯೈವ ಜಲಧಾರಾಂ ದದೇತ ವೈ ।
ಪಶ್ಚಾಚ್ಚ ಜಲಧಾರಾಭಿರ್ದ್ರವ್ಯಾಣ್ಯುತ್ತಾರಯೇದ್ಬುಧಃ ॥ ೪೯ ॥

ಶತಮಷ್ಟೋತ್ತರಂ ಮಂತ್ರಂ ಪಠಿತ್ವಾ ಜಲಧಾರಯಾ ।
ಪೂಜಯೇಚ್ಚ ಶಿವಂ ತತ್ರ ನಿರ್ಗುಣಂ ಗುಣರೂಪಿಣಂ ॥ ೫೦ ॥

---

ಮಾಡಬೇಕು. ತನ್ನ ಶಕ್ತ್ಯಾನುಸಾರವಾಗಿ ಬ್ರಾಹ್ಮಣರಿಗೂ, ಯತಿಗಳಿಗೂ, ಶಿವ ಭಕ್ತರಿಗೂ ಭೋಜನವನ್ನು ಮಾಡಿಸಬೇಕು. ತರುವಾಯ ತಾನು ಭೋಜನವನ್ನು ಮಾಡಬೇಕು.

೪೬. ಎಲೈ ಹರಿಯೇ! ಶಿವರಾತ್ರಿಯ ದಿನ ಪ್ರತಿ ಯಾಮದಲ್ಲಿಯೂ ಭಕ್ತರು ಹೇಗೆ ಪೂಜೆಯನ್ನು ಮಾಡಬೇಕೆಂಬುದನ್ನು ವಿಶೇಷರೀತಿಯಿಂದ ಹೇಳುವೆನು ಕೇಳು.

೪೭-೫೦. ಮೊದಲನೆಯ ಯಾಮದಲ್ಲಿ ಪಾರ್ಥಿವಲಿಂಗವನ್ನು ಸ್ಥಾಪಿಸಿ ಅನೇಕ ಉತ್ತಮವಾದ ಉಪಚಾರಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು. ಮೊದಲು ಶಿವನನ್ನು ಹಾಲು ಮುಂತಾದ ಐದು ಪದಾರ್ಥಗಳಿಂದ ಎಂದರೆ ಪಂಚಾಮೃತದ್ರವ್ಯಗಳಿಂದ ಆಯಾ ಮಂತ್ರಗಳಿಂದ ಬೇರೆ ಬೇರೆಯಾಗಿ ದ್ರವ್ಯಗಳನ್ನು ಸಮರ್ಪಿಸಿ ಪೂಜಿಸಬೇಕು. ಆಮೇಲೆ ಜಲಧಾರೆಯಿಂದ ಅಭಿಷೇಕಮಾಡಿ ಆ ಪಂಚಾಮೃತದ್ರವ್ಯಗಳನ್ನು ವಿಸರ್ಜಿಸಬೇಕು. ನಿರ್ಗುಣನೂ, ಸಗುಣನೂ ಆದ ಶಿವನನ್ನು, ನೂರೆಂಟು ರುದ್ರಮಂತ್ರಗಳನ್ನು ಹೇಳಿ ಜಲಧಾರೆಯಿಂದ ಅಭಿಷೇಕ ಮಾಡಬೇಕು.

ಗುರುದತ್ತೇನ ಮಂತ್ರೇಣ ಪೂಜಯೇದ್ವೃಷಭಧ್ವಜಂ ।
ಅನ್ಯಥಾ ನಾಮಮಂತ್ರೇಣ ಪೂಜಯೇದ್ವೈ ಸದಾಶಿವಂ ॥ ೫೧ ॥

ಚಂದನೇನ ವಿಚಿತ್ರೇಣ ತಂಡುಲೈಶ್ಚಾಪ್ಯಖಂಡಿತೈಃ ।
ಕೃಷ್ಣೈಶ್ಚೈವ ತಿಲೈಃ ಪೂಜಾ ಕಾರ್ಯಾ ಶಂಭೋಃ ಪರಾತ್ಮನಃ ॥ ೫೨ ॥

ಪುಷ್ಪೈಶ್ಚ ಶತಪತ್ರೈಶ್ಚ ಕರವೀರೈಸ್ತಥಾ ಪುನಃ ।
ಅಷ್ಟಭಿರ್ನಾಮಮಂತ್ರೈಶ್ಚಾರ್ಪಯೇತ್ಪುಷ್ಪಾಣಿ ಶಂಕರೇ ॥ ೫೩ ॥

ಭವಃ ಶರ್ವಸ್ತಥಾ ರುದ್ರಃ ಪುನಃ ಪಶುಪತಿಸ್ತಥಾ ।
ಉಗ್ರೋ ಮಹಾಂಸ್ತಥಾ ಭೀಮ ಈಶಾನ ಇತಿ ತಾನಿ ವೈ ॥ ೫೪ ॥

ಶ್ರೀಪೂರ್ವೈಶ್ಚ ಚತುರ್ಥ್ಯಂತೈರ್ನಾಮಭಿಃ ಪೂಜಯೇಚ್ಛಿವಂ ।
ಪಶ್ಚಾದ್ಧೂಪಂ ಚ ದೀಪಂ ಚ ನೈವೇದ್ಯಂ ಚ ತತಃ ಪರಂ ॥ ೫೫ ॥

ಆದ್ಯೇ ಯಾಮೇ ಚ ನೈವೇದ್ಯಂ ಪಕ್ವಾನ್ನಂ ಕಾರಯೇದ್ಬುಧಃ ।
ಅರ್ಘ್ಯಂ ಚ ಶ್ರೀಫಲಂ ದತ್ವಾ ತಾಂಬೂಲಂ ಚ ನಿವೇದಯೇತ್ ॥ ೫೬ ॥

ನಮಸ್ಕಾರಂ ತತೋ ಧ್ಯಾನಂ ಜಪಃ ಪ್ರೋಕ್ತೋ ಗುರೋರ್ಮನೋಃ ।
ಅನ್ಯಥಾ ಪಂಚವರ್ಣೇನ ತೋಷಯೇತ್ತೇನ ಶಂಕರಂ ॥ ೫೭ ॥

---

೫೧-೫೯. ಗುರುವು ಉಪದೇಶಮಾಡಿದ ಮೂಲಮಂತ್ರದಿಂದಾಗಲೀ, ವೇದ ಮಂತ್ರಗಳಿಂದಲಾಗಲೀ, ನಾಮಮಂತ್ರಗಳಿಂದಲಾಗಲೀ ಶಿವನನ್ನು ಪೂಜಿಸಬೇಕು. ಬಗೆಬಗೆಯ ಸುಗಂಧಗಳು, ಒಡೆಯದಿರುವ ಅಕ್ಕಿ ಕಾಳುಗಳು, ಕರಿಯ ಎಳ್ಳು, ಹೂಗಳು, ಕಮಲಗಳು, ಕಣಿಗಲ ಹೂ ಇವುಗಳಿಂದ ಪೂಜಿಸಬೇಕು. ಭವ, ಶರ್ವ, ರುದ್ರ, ಪಶುಪತಿ, ಉಗ್ರ, ಮಹಾನ್, ಭೀಮ, ಈಶಾನ ಎಂಬ ಎಂಟು ನಾಮಗಳಿಂದ ಪುಷ್ಪಪೂಜೆಯನ್ನು ಮಾಡಬೇಕು. ಈ ನಾಮಮಂತ್ರಗಳನ್ನು ಶ್ರೀ ಶಬ್ದಪೂರ್ವಕವಾಗಿ ಚತುರ್ಥೀವಿಭಕ್ತ್ಯಂತವಾಗಿ ಉಪಯೋಗಿಸಬೇಕು. ಹೇಗೆಂದರೆ; ಶ್ರೀಭವಾಯ ದೇವಾಯನಮಃ, ಶ್ರೀ ಶರ್ವಾಯದೇವಾಯನಮಃ, ಇತ್ಯಾದಿ. ಆಮೇಲೆ ಧೂಪ ದೀಪ ನೈವೇದ್ಯಗಳನ್ನು ಸಮರ್ಪಿಸಬೇಕು. ಮೊದಲನೆಯ ಯಾಮದಲ್ಲಿ ಪಕ್ವಾನ್ನ ನೈವೇದ್ಯವನ್ನು ಮಾಡಬೇಕು. ಅರ್ಘ್ಯವನ್ನೂ, ಬಿಲ್ವಪತ್ರೆಯ ಹಣ್ಣನ್ನೂ ಸಮರ್ಪಿಸಿ ತಾಂಬೂಲ ನಿವೇದನವನ್ನು ಮಾಡಬೇಕು. ಆಮೇಲೆ ನಮಸ್ಕಾರ, ಧ್ಯಾನ,

ಧೇನುಮುದ್ರಾಂ ಪ್ರದರ್ಶ್ಯಾಥ ಸುಜಲೈಸ್ತರ್ಪಣಂ ಚರೇತ್ ।
ಪಂಚಬ್ರಾಹ್ಮಣಭೋಜಂ ಚ ಕಲ್ಪಯೇದ್ವೈ ಯಥಾಬಲಂ ॥ ೫೮ ॥

ಮಹೋತ್ಸವಶ್ಚ ಕರ್ತವ್ಯೋ ಯಾವದ್ಯಾಮೋ ಭವೇದಿಹ ।
ತತಃ ಪೂಜಾಫಲಂ ತಸ್ಮೈ ನಿವೇದ್ಯ ಚ ವಿಸರ್ಜಯೇತ್ ॥ ೫೯ ॥

ಪುನರ್ದ್ವಿತೀಯೇ ಯಾಮೇ ಚ ಸಂಕಲ್ಪಂ ಸುಸಮಾಚರೇತ್ ।
ಅಥ ವೈಕದೈವ ಸಂಕಲ್ಪ್ಯ ಕುರ್ಯಾತ್ಪೂಜಾಂ ತಥಾವಿಧಾಂ ॥ ೬೦ ॥

ದ್ರವ್ಯೈಃ ಪೂರ್ವೈಸ್ತಥಾ ಪೂಜಾಂ ಕೃತ್ವಾ ಧಾರಾಂ ಸಮರ್ಪಯೇತ್ ।
ಪೂರ್ವತೋ ದ್ವಿಗುಣಂ ಮಂತ್ರಂ ಸಮುಚ್ಚಾರ್ಯಾರ್ಚಯೇಚ್ಛಿವಂ ॥ ೬೧ ॥

ಪೂರ್ವೈಸ್ತಿಲಯವೈಶ್ಚಾಥ ಕಮಲೈಃ ಪೂಜಯೇಚ್ಛಿವಂ ।
ಬಿಲ್ವಪತ್ರೈರ್ವಿಶೇಷೇಣ ಪೂಜಯೇತ್ಪರಮೇಶ್ವರಂ ॥ ೬೨ ॥

ಅರ್ಘ್ಯಂ ಚ ಬೀಜಪೂರೇಣ ನೈವೇದ್ಯಂ ಪಾಯಸಂ ತಥಾ ।
ಮಂತ್ರಾವೃತ್ತಿಸ್ತು ದ್ವಿಗುಣಾ ಪೂರ್ವತೋಽಪಿ ಜನಾರ್ದನ ॥ ೬೩ ॥

---

ಗುರುವು ಉಪದೇಶಿಸಿದ ಮಂತ್ರಜಪ ಇವುಗಳನ್ನು ಮಾಡಬೇಕು. ಅಥವಾ ಪಂಚಾಕ್ಷರಮಂತ್ರಜಪದಿಂದ ಶಿವನನ್ನು ಸಂತೋಷಪಡಿಸಬೇಕು. ಧೇನು ಮುದ್ರೆಯನ್ನು ತೋರಿಸಿ ಒಳ್ಳೆಯ ನೀರಿನಿಂದ ತರ್ಪಣವನ್ನು ಮಾಡಿ ತನ್ನ ಶಕ್ತ್ಯಾನುಸಾರವಾಗಿ ಐದು ಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಯಾಮವು ಪೂರ್ತಿಯಾಗುವವರಿಗೆ ಶಿವನಿಗೆ ಮಹೋತ್ಸವವನ್ನು ಮಾಡಿ ಬಳಿಕ ಪೂಜಾಫಲವನ್ನು ಸಮರ್ಪಿಸಿ ವಿಸರ್ಜಿಸಬೇಕು.

೬೦-೬೪. ಎರಡನೆಯ ಯಾಮದಲ್ಲಿ ಮತ್ತೆ ಸಂಕಲ್ಪವನ್ನು ಮಾಡಬೇಕು. ಅಥವಾ ಒಂದೇ ಆವೃತ್ತಿ ಸಂಕಲ್ಪವನ್ನು ಮಾಡಿ, ಮೊದಲನೆಯ ಯಾಮದಂತೆ ಪೂಜೆಯನ್ನು ಮಾಡಬೇಕು. ಹಿಂದೆ ಪೂಜೆಮಾಡಿದಂತೆ ಪಂಚಾಮೃತದ್ರವ್ಯಗಳಿಂದ ಅಭಿಷೇಕಮಾಡಿ ಬಳಿಕ ಜಲಧಾರೆಯಿಂದ ಅಭಿಷೇಕಮಾಡಬೇಕು. ಮೊದಲನೆಯ ಯಾಮಕ್ಕಿಂತ ಎರಡರಷ್ಟು ಮಂತ್ರವನ್ನು ಉಚ್ಚರಿಸಬೇಕು. ಹಿಂದೆ ಮಾಡಿದಂತೆ ತಿಲಾಕ್ಷತೆಯವಾಕ್ಷತೆಗಳನ್ನೂ, ಕಮಲಗಳನ್ನೂ, ಬಿಲ್ವಪತ್ರೆಗಳನ್ನೂ ಪರಮೇಶ್ವರನ ಪೂಜೆಗೆ ಉಪಯೋಗಿಸಬೇಕು. ಮಾದಳದಹಣ್ಣಿನೊಡನೆ ಅರ್ಘ್ಯವನ್ನು ಕೊಟ್ಟು

ತತಶ್ಚ ಬ್ರಾಹ್ಮಣಾನಾಂ ಹಿ ಭೋಜ್ಯಸಂಕಲ್ಪಮಾಚರೇತ್ ।
ಅನ್ಯತ್ಸರ್ವಂ ತಥಾ ಕುರ್ಯಾದ್ಯಾವಚ್ಚ ದ್ವಿತಯಾವಧಿ ॥ ೬೪ ॥

ಯಾಮೇ ಪ್ರಾಪ್ತೇ ತೃತೀಯೇ ಚ ಪೂರ್ವವತ್ಪೂಜನಂ ಚರೇತ್ ।
ಯವಸ್ಥಾನೇ ಚ ಗೋಧೂಮಾಃ ಪುಷ್ಪಾಣ್ಯರ್ಕಭವಾನಿ ಚ ॥ ೬೫ ॥

ಧೂಪೈಶ್ಚ ವಿವಿಧೈಸ್ತತ್ರ ದೀಪೈರ್ನಾನಾವಿಧೈರಪಿ ।
ನೈವೇದ್ಯಾಪೂಪಕೈರ್ವಿಷ್ಣೋ ಶಾಕೈರ್ನಾನಾವಿಧೈರಪಿ ॥ ೬೬ ॥

ಕೃತ್ವೈವಂ ಚಾಥ ಕರ್ಪೂರೈರಾರಾರ್ತಿಕವಿಧಿಂ ಚರೇತ್ ।
ಅರ್ಘ್ಯಂ ಚ ದಾಡಿಮಂ ದದ್ಯಾದ್ದ್ವಿಗುಣಂ ಜಪಮಾಚರೇತ್ ॥ ೬೭ ॥

ತತಶ್ಚ ಬ್ರಹ್ಮಭೋಜಸ್ಯ ಸಂಕಲ್ಪಂ ಚ ಸದಕ್ಷಿಣಂ ।
ಉತ್ಸವಂ ಪೂರ್ವವತ್ಕುರ್ಯಾದ್ಯಾವದ್ಯಾಮಾವಧಿರ್ಭವೇತ್ ॥ ೬೮ ॥

---

ಪಾಯಸವನ್ನು ನಿವೇದನಮಾಡಬೇಕು. ಮಂತ್ರಗಳನ್ನು ಮಾತ್ರ ಎರಡರಷ್ಟು ಉಚ್ಚರಿಸಬೇಕು. ಆಮೇಲೆ ಬ್ರಾಹ್ಮಣಭೋಜನಸಂಕಲ್ಪಮಾಡಿ ಎರಡನೆಯ ಯಾಮವು ಕಳೆಯುವವರೆಗೆ ಮಿಕ್ಕ ಕೆಲಸಗಳನ್ನು ಹಿಂದಿನ ಯಾಮದಂತೆ ನಡೆಸಬೇಕು.

೬೫-೬೮. ಮೂರನೆಯ ಯಾಮದಲ್ಲಿಯೂ ಹಿಂದಿನ ಯಾಮದಂತೆ ಪೂಜೆಯನ್ನು ಮಾಡಬೇಕು. ಅಕ್ಕಿಗೆ ಬದಲಾಗಿ ಗೋಧಿಯ ಮಂತ್ರಾಕ್ಷತೆಯನ್ನೂ, ಎಕ್ಕದ ಹೂವನ್ನೂ ಪೂಜೆಗೆ ಉಪಯೋಗಿಸಬೇಕು. ಧೂಪ ದೀಪಗಳನ್ನು ಸಮರ್ಪಿಸಿ ನಾನಾವಿಧ ಶಾಕಗಳನ್ನೂ, ಅಪೂಪಗಳನ್ನೂ ನೈವೇದ್ಯಮಾಡಬೇಕು. ಆಮೇಲೆ ಕರ್ಪೂರದ ಆರತಿಯನ್ನು ಮಾಡಿ ದಾಳಿಂಬದ ಹಣ್ಣಿನೊಡನೆ ಅರ್ಘ್ಯವನ್ನು ಕೊಟ್ಟು ಹಿಂದಿನ ಯಾಮದ ಎರಡರಷ್ಟು ಮಂತ್ರಜಪವನ್ನು ಮಾಡಬೇಕು. ದಕ್ಷಿಣೆಸಹಿತವಾಗಿ ಬ್ರಾಹ್ಮಣಭೋಜನ ಸಂಕಲ್ಪವನ್ನು ಮಾಡಿ ಹಿಂದಿನಂತೆ ಉತ್ಸವವನ್ನು ಮಾಡಿ ನಾಲ್ಕನೆಯ ಯಾಮವು ಬರುವುದರೊಳಗೆ, ಲಿಂಗವಿಸರ್ಜನೆಯನ್ನು ಮಾಡಬೇಕು.

ಯಾಮೇ ಚತುರ್ಥೇ ಸಂಪ್ರಾಪ್ತೇ ಕುರ್ಯಾತ್ತಸ್ಯ ವಿಸರ್ಜನಂ ।
ಪ್ರಯೋಗಾದಿ ಪುನಃ ಕೃತ್ವಾ ಪೂಜಾಂ ವಿಧಿವದಾಚರೇತ್ ॥ ೭೯ ॥

ಮಾಷೈಃ ಪ್ರಿಯಂಗುಭಿರ್ಮುದ್ಗೈಸ್ಸಪ್ತಧಾನ್ಯೈಸ್ತಥಾಥವಾ ।
ಶಂಖೀಪುಷ್ಪೈರ್ಬಿಲ್ವಪತ್ರೈಃ ಪೂಜಯೇತ್ಪರಮೇಶ್ವರಂ ॥ ೮೦ ॥

ನೈವೇದ್ಯಂ ತತ್ರ ದದ್ಯಾದ್ವೈ ಮಧುರೈರ್ವಿವಿಧೈರಪಿ ।
ಅಥವಾ ಚೈವ ಮಾಷಾನ್ನೈಸ್ತೋಷಯೇಚ್ಚ ಸದಾಶಿವಂ ॥ ೮೧ ॥

ಅರ್ಘಂ ದದ್ಯಾತ್ಕದಲ್ಯಾಶ್ಚ ಫಲೇನೈವಾಥ ವಾ ಹರೇ ।
ವಿವಿಧೈಶ್ಚ ಫಲೈಶ್ಚೈವ ದದ್ಯಾದರ್ಘ್ಯಂ ಶಿವಾಯ ಚ ॥ ೮೨ ॥

ಪೂರ್ವತೋ ದ್ವಿಗುಣಂ ಕುರ್ಯಾನ್ಮಂತ್ರಜಾಪಂ ನರೋತ್ತಮಃ ।
ಸಂಕಲ್ಪಂ ಬ್ರಹ್ಮಭೋಜಸ್ಯ ಯಥಾಶಕ್ತಿ ಚರೇದ್ಬುಧಃ ॥ ೮೩ ॥

ಗೀತೈರ್ವಾದ್ಯೈಸ್ತಥಾ ನೃತ್ಯೈರ್ನಯೇತ್ಕಾಲಂ ಚ ಭಕ್ತಿತಃ ।
ಮಹೋತ್ಸವೈರ್ಭಕ್ತಜನೈರ್ಯಾವತ್ಸ್ಯಾದರುಣೋದಯಃ ॥ ೮೪ ॥

---

೭೯–೮೪. ನಾಲ್ಕನೆಯ ಯಾಮದಲ್ಲಿ ಪುನಃ ಹಿಂದಿನ ಯಾಮದಂತೆ ಪೂಜಾದಿಗಳನ್ನು ವಿಧಿಗನುಸಾರವಾಗಿ ಮಾಡಿ ಉದ್ದು, ನವಣೆ, ಹೆಸರು ಅಥವಾ ಏಳು ಬಗೆಯ ಧಾನ್ಯಗಳು, ಶಂಖಪುಷ್ಪ, ಬಿಲ್ವಪತ್ರೆ ಇವುಗಳಿಂದ ಪರಮೇಶ್ವರನ ಪೂಜೆಯನ್ನು ಮಾಡಬೇಕು. ಸಿಹಿಯಾದ ಬಗೆಬಗೆಯ ಭಕ್ಷ್ಯಗಳನ್ನೂ ನೈವೇದ್ಯಕ್ಕಾಗಿ ಸಮರ್ಪಿಸಬೇಕು ಅಥವಾ ಉದ್ದಿನ ಅನ್ನವನ್ನು ನಿವೇದನ ಮಾಡಿ ಬಾಳೆಯ ಹಣ್ಣಿನೊಡನೆ ಅರ್ಘ್ಯವನ್ನು ಕೊಡಬೇಕು. ಅಥವಾ ಅರ್ಘ್ಯಕ್ಕೆ ಯಾವ ಹಣ್ಣುಗಳನ್ನಾದರೂ ಉಪಯೋಗಿಸಬಹುದು. ಹಿಂದಿನ ಯಾಮಕ್ಕೆ ಎರಡರಷ್ಟು ಮಂತ್ರ ಜಪವನ್ನು ಮಾಡಬೇಕು. ಯಥಾಶಕ್ತಿ ಬ್ರಾಹ್ಮಣಭೋಜನ ಸಂಕಲ್ಪವನ್ನು ಮಾಡಬೇಕು. ಗೀತ, ನೃತ್ತ, ವಾದ್ಯಗಳಿಂದ ಅತ್ಯಂತ ಭಕ್ತಿಯಿಂದ ಕಾಲವನ್ನು ಕಳೆಯಬೇಕು. ಅರುಣೋದಯಪರ್ಯಂತವಾಗಿ ಭಕ್ತ ಜನರೊಡನೆ ಶಿವನ ಮಹೋತ್ಸವವನ್ನು ನಡೆಸಬೇಕು.

ಉದಯೇ ಚ ತಥಾ ಜಾತೇ ಪುನಸ್ಸ್ನಾತ್ವಾರ್ಚಯೇಚ್ಛಿವಂ ।
ನಾನಾಪೂಜೋಪಹಾರೈಶ್ಚ ಸ್ವಾಭಿಷೇಕಮಥಾಚರೇತ್ ॥ ೭೫ ॥

ನಾನಾವಿಧಾನಿ ದಾನಾನಿ ಭೋಜ್ಯಂ ಚ ವಿವಿಧಂ ತಥಾ ।
ಬ್ರಾಹ್ಮಣಾನಾಂ ಯತೀನಾಂ ಚ ಕರ್ತವ್ಯಂ ಯಾಮಸಂಖ್ಯಯಾ ॥ ೭೬ ॥

ಶಂಕರಾಯ ನಮಸ್ಕೃತ್ಯ ಪುಷ್ಪಾಂಜಲಿಮಥಾಚರೇತ್ ।
ಪ್ರಾರ್ಥಯೇತ್ಸುಸ್ತುತಿಂ ಕೃತ್ವಾ ಮಂತ್ರೈರೇತೈರ್ವಿಚಕ್ಷಣಃ ॥ ೭೭ ॥

ತಾವಕಸ್ತ್ವದ್ಗತಪ್ರಾಣಸ್ತ್ವಚ್ಚಿತ್ತೋಽಹಂ ಸದಾಶಿವ ।
ಕೃಪಾನಿಧೇ ಇತಿ ಜ್ಞಾತ್ವಾ ಯಥಾ ಯೋಗ್ಯಂ ತಥಾ ಕುರು ॥ ೭೮ ॥

ಅಜ್ಞಾನಾದ್ಯದಿ ವಾ ಜ್ಞಾನಾಜ್ಜಪಪೂಜಾದಿಕಂ ಮಯಾ ।
ಕೃಪಾನಿಧಿತ್ವಾಜ್ಜ್ಞಾತ್ವೈವ ಭೂತನಾಥ ಪ್ರಸೀದ ಮೇ ॥ ೭೯ ॥

ಅನೇನೈವೋಪವಾಸೇನ ಯಜ್ಜಾತಂ ಫಲಮೇವ ಚ ।
ತೇನೈವ ಪ್ರೀಯತಾಂ ದೇವಃ ಶಂಕರಃ ಸುಖದಾಯಕಃ ॥ ೮೦ ॥

---

೭೫–೭೬. ಸೂರ್ಯನು ಉದಯಿಸಿದಮೇಲೆ ಪುನಃ ಸ್ನಾನಮಾಡಿ, ಬಗೆ ಬಗೆಯ ಪೂಜಾದ್ರವ್ಯಗಳಿಂದ ಅಭಿಷೇಕವನ್ನೂ, ಪೂಜೆಯನ್ನೂ ಮಾಡಿ, ಯಾಮ ಸಂಖ್ಯೆಯನ್ನನುಸರಿಸಿ ನಾನಾವಿಧ ದಾನಗಳನ್ನೂ ಯತಿಗಳ ಮತ್ತು ಬ್ರಾಹ್ಮಣರ ಭೋಜನವನ್ನೂ ಮಾಡಿಸಬೇಕು.

೭೭–೮೨. ಶಿವನಿಗೆ ನಮಸ್ಕರಿಸಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಬಳಿಕ ಮುಂದೆ ಹೇಳುವ ಮಂತ್ರಗಳಿಂದ ಒಳ್ಳೆಯ ಸ್ತೋತ್ರಗಳನ್ನು ಮಾಡಿ ಪ್ರಾರ್ಥನೆಯನ್ನು ಮಾಡಿಕೊಳ್ಳಬೇಕು. ಎಲೈ ಶಿವನೇ! ನಾನು ಯಾವಾಗಲೂ ನಿನ್ನವನಾಗಿರುವೆನು. ನಿನ್ನಲ್ಲೇ ನನ್ನ ಮನಸ್ಸೂ, ಪ್ರಾಣವೂ ಇರುವುದು. ದಯಾ ನಿಧಿಯಾದ ನೀನು ಇದನ್ನು ತಿಳಿದು ನಿನಗೆ ಇಷ್ಟಬಂದಂತೆ ಮಾಡು. ಅಜ್ಞಾನದಿಂದಲಾಗಲೀ, ಜ್ಞಾನದಿಂದಲಾಗಲೀ ನಾನು ಮಾಡಿದ ಪೂಜಾದಿಗಳಲ್ಲಿ ಲೋಪವಿದ್ದರೆ ದಯಾನಿಧಿಯಾದ ನೀನು ಕ್ಷಮಿಸಿ ಪ್ರಸನ್ನನಾಗಬೇಕು. ಈಗ ನಾನು ಮಾಡಿದ ಉಪವಾಸವ್ರತದಿಂದ ಸುಖದಾಯಕನಾದ ನೀನು ಸಂತೋಷವನ್ನು ಹೊಂದಬೇಕು. ನನ್ನ ವಂಶದವರೆಲ್ಲರೂ ಯಾವಾಗಲೂ ನಿನ್ನ ಭಜನೆಯನ್ನು ಮಾಡುವವರಾಗಲಿ.

ಕುಲೇ ಮಮ ಮಹಾದೇವ ಭಜನಂ ತೇಽಸ್ತು ಸರ್ವದಾ ।
ಮಾ ಭೂತ್ತಸ್ಯ ಕುಲೇ ಜನ್ಮ ಯತ್ರ ತ್ವಂ ನ ಹಿ ದೇವತಾ ॥ ೮೧ ॥

ಪುಷ್ಪಾಂಜಲಿಂ ಸಮರ್ಪ್ಯೈವಂ ತಿಲಕಾಶಿಷ ಏವ ಚ ।
ಗೃಹ್ಣೀಯಾದ್ಬ್ರಾಹ್ಮಣೇಭ್ಯಶ್ಚ ತತಶ್ಶಂಭುಂ ವಿಸರ್ಜಯೇತ್ ॥ ೮೨ ॥

ಏವಂ ವ್ರತಂ ಕೃತಂ ಯೇನ ತಸ್ಮಾದ್ದೂರೋ ಹರೋ ನ ಹಿ ।
ನ ಶಕ್ಯತೇ ಫಲಂ ವಕ್ತುಂ ನಾದೇಯಂ ವಿದ್ಯತೇ ಮಮ ॥ ೮೩ ॥

ಅನಾಯಾಸತಯಾ ಚೇದ್ವೈ ಕೃತಂ ವ್ರತಮಿದಂ ಪರಂ ।
ತಸ್ಯ ವೈ ಮುಕ್ತಿಬೀಜಂ ಚ ಜಾತಂ ನಾತ್ರ ವಿಚಾರಣಾ ॥ ೮೪ ॥

ಪ್ರತಿಮಾಸಂ ವ್ರತಂ ಚೈವ ಕರ್ತವ್ಯಂ ಭಕ್ತಿತೋ ನರೈಃ ।
ಉದ್ಯಾಪನವಿಧಿಂ ಪಶ್ಚಾತ್ಕೃತ್ವಾ ಸಾಂಗಫಲಂ ಲಭೇತ್ ॥ ೮೫ ॥

ವ್ರತಸ್ಯ ಕರಣಾನ್ನೂನಂ ಶಿವೋಽಹಂ ಸರ್ವದುಃಖಹಾ ।
ದದ್ಮಿ ಮುಕ್ತಿಂ ಚ ಭುಕ್ತಿಂ ಚ ಸರ್ವಂ ವೈ ವಾಂಛಿತಂ ಫಲಂ ॥ ೮೬ ॥

---

ಯಾರ ವಂಶದಲ್ಲಿ ನೀನು ಕುಲದೇವತೆಯಾಗಿರುವುದಿಲ್ಲವೋ ಅವರ ವಂಶದಲ್ಲಿ ನನ್ನ ಜನನವಾಗಬಾರದು. ಹೀಗೆಂದು ಹೇಳಿ ಪುಷ್ಪಾಂಜಲಿಯನ್ನು ಸಮರ್ಪಿಸಿ ಬ್ರಾಹ್ಮಣರ ಆಶೀರ್ವಾದವನ್ನು ತೆಗೆದುಕೊಂಡು ಶಿವನನ್ನು ವಿಸರ್ಜನೆಯನ್ನು ಮಾಡಬೇಕು.

೮೩-೮೬. ಹೀಗೆ ವ್ರತವನ್ನು ಮಾಡಿದ ಮನುಷ್ಯನಿಗೆ ಶಿವನು ದೂರವಾಗಿರುವುದಿಲ್ಲ. ಇದರ ಫಲವನ್ನು ಹೇಳಲು ನನಗೆ ಸಾಧ್ಯವಾಗದು. ಅನಾಯಾಸದಿಂದ ಈ ವ್ರತವನ್ನು ಮಾಡಿದವರಿಗೆ ಮೋಕ್ಷದ ಬೀಜವು ಹುಟ್ಟಿತೆಂದು ತಿಳಿಯಬೇಕು. ಪ್ರತಿ ತಿಂಗಳಲ್ಲಿಯೂ ಭಕ್ತಿಯಿಂದ ಮನುಜರು ಈ ಶಿವರಾತ್ರಿವ್ರತವನ್ನು ಎಂದರೆ ಮಾಸಶಿವರಾತ್ರಿವ್ರತವನ್ನು ಮಾಡಬೇಕು. ಆಮೇಲೆ ಉದ್ಯಾಪನೆಯನ್ನು ಮಾಡಿ ಪೂರ್ಣಫಲವನ್ನು ಹೊಂದಬೇಕು. ಈ ವ್ರತವನ್ನು ಮಾಡಿದವರಿಗೆ ನಾನು ಸಮಸ್ತ ದುಃಖಗಳನ್ನೂ ನಾಶಮಾಡಿ ಭುಕ್ತಿ ಮುಕ್ತಿಗಳನ್ನೂ, ಸಮಸ್ತ ಇಷ್ಟಾರ್ಥಗಳನ್ನೂ ಕೊಡುವೆನು ಎಂದನು.

॥ ಸೂತ ಉವಾಚ ॥

ಇತಿ ಶಿವವಚನಂ ನಿಶಮ್ಯ ವಿಷ್ಣು-
ರ್ಹಿತತರಮದ್ಭುತಮಾಜಗಾಮ ಧಾಮ ।
ತದನು ವ್ರತಮುತ್ತಮಂ ಜನೇಷು
ಸಮಚರದಾತ್ಮಹಿತೇಷು ಚೈತದೇವ ॥ ೮೭ ॥

ಕದಾಚಿನ್ನಾರದಾಯಾಥ ಶಿವರಾತ್ರಿವ್ರತಂ ತ್ವಿದಂ ।
ಭುಕ್ತಿಮುಕ್ತಿಪ್ರದಂ ದಿವ್ಯಂ ಕಥಯಾಮಾಸ ಕೇಶವಃ ॥ ೮೮ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ ವ್ಯಾಧೇಶ್ವರಮಾಹಾತ್ಮ್ಯೇ ಶಿವರಾತ್ರಿಮಹಿಮಾವರ್ಣನಂ ನಾಮ ಅಷ್ಟತ್ರಿಂಶೋಽಧ್ಯಾಯಃ

---

೮೭–೮೮. ಸೂತನು ಹೇಳಿದನು :—ಹೀಗೆಂದು ಶಿವನು ಹೇಳಲು ಹಿತಕರವೂ, ಆಶ್ಚರ್ಯಕರವೂ ಆದ ಶಿವನ ಆ ಮಾತನ್ನು ಕೇಳಿ ವಿಷ್ಣುವು ತನ್ನ ಸ್ಥಳಕ್ಕೆ ಬಂದನು. ಆಮೇಲೆ ಈ ಉತ್ತಮವಾದ ವ್ರತವು ಜನರಲ್ಲಿ ಆಚರಣೆಗೆ ಬಂದಿತು. ಒಂದಾನೊಂದು ಕಾಲದಲ್ಲಿ ವಿಷ್ಣುವು ನಾರದನಿಗೆ ಭುಕ್ತಿ ಮುಕ್ತಿಗಳನ್ನು ಕೊಡತಕ್ಕ ದಿವ್ಯವಾದ ಈ ಶಿವರಾತ್ರಿವ್ರತವನ್ನು ಹೇಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ ವ್ಯಾಧೇಶ್ವರ ಮಾಹಾತ್ಮ್ಯೆಯಲ್ಲಿ ಶಿವರಾತ್ರಿವ್ರತಮಹಿಮೆಯೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



## ॥ ಶ್ರೀಃ ॥

---

॥ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ಏಕೋನಚತ್ವಾರಿಂಶೋಽಧ್ಯಾಯಃ



॥ ಋಷಯ ಊಚುಃ ॥

ಉದ್ಯಾಪನವಿಧಿಂ ಬ್ರೂಹಿ ಶಿವರಾತ್ರಿವ್ರತಸ್ಯ ಚ ।
ಯತ್ಕೃತ್ವಾ ಶಂಕರಸ್ಸಾಕ್ಷಾತ್ಪ್ರಸನ್ನೋ ಭವತಿ ಧ್ರುವಂ ॥ ೧ ॥

॥ ಸೂತ ಉವಾಚ ॥

ಶ್ರೂಯತಾಮೃಷಯೋ ಭಕ್ತ್ಯಾ ತದುದ್ಯಾಪನಮಾದರಾತ್ ।
ಯಸ್ಯಾನುಷ್ಠಾನತಃ ಪೂರ್ಣಂ ವ್ರತಂ ಭವತಿ ತದ್ಧ್ರುವಂ ॥ ೨ ॥

---

## ಮೂವತ್ತೊಂಭತ್ತನೆಯ ಅಧ್ಯಾಯವು

೧. ಋಷಿಗಳು ಕೇಳಿದರು :—ಎಲೈ ಸೂತನೇ! ಯಾವ ಕಾರ್ಯವನ್ನು ಮಾಡಿದರೆ ಸಾಕ್ಷಾತ್ ಶಿವನು ನಿಯತನಾಗಿ ಪ್ರಸನ್ನನಾಗುವನೋ, ಅಂತಹ ಶಿವ ರಾತ್ರಿ ವ್ರತದ ಉದ್ಯಾಪನೆಯ ವಿಧಿಯನ್ನು ನಮಗೆ ಹೇಳಬೇಕು ಎನ್ನಲು

೨–೬. ಸೂತನು ಹೇಳಿದನು :—ಎಲೈ ಋಷಿಗಳೇ! ಶಿವರಾತ್ರಿವ್ರತದ ಉದ್ಯಾಪನೆಯ ವಿಧಿಯನ್ನು ಹೇಳುವೆನು. ಭಕ್ತಿಯಿಂದ ಕೇಳಿರಿ. ಆ ಉದ್ಯಾಪನೆ

ಚತುರ್ದಶಾಬ್ದಂ ಕರ್ತವ್ಯಂ ಶಿವರಾತ್ರಿವ್ರತಂ ಶುಭಂ ।
ಏಕಭುಕ್ತಂ ತ್ರಯೋದಶ್ಯಾಂ ಚತುರ್ದಶ್ಯಾಮುಪೋಷಣಂ ॥ ೩ ॥

ಶಿವರಾತ್ರಿದಿನೇ ಪ್ರಾಪ್ತೇ ನಿತ್ಯಂ ಸಂಪಾದ್ಯ ವೈ ವಿಧಿಂ ।
ಶಿವಾಲಯಂ ತತೋ ಗತ್ವಾ ಪೂಜಾಂ ಕೃತ್ವಾ ಯಥಾವಿಧಿ ॥ ೪ ॥

ತತಶ್ಚ ಕಾರಯೇದ್ದಿವ್ಯಂ ಮಂಡಲಂ ತತ್ರ ಯತ್ನತಃ ।
ಗೌರೀತಿಲಕನಾಮ್ನಾ ವೈ ಪ್ರಸಿದ್ಧಂ ಭುವನತ್ರಯೇ ॥ ೫ ॥

ತನ್ಮಧ್ಯೇ ಲೇಖಯೇದ್ದಿವ್ಯಂ ಲಿಂಗತೋಭದ್ರಮಂಡಲಂ ।
ಅಥವಾ ಸರ್ವತೋಭದ್ರಂ ಮಂಡಪಾಂತಃ ಪ್ರಕಲ್ಪಯೇತ್ ॥ ೬ ॥

ಕುಂಭಾಸ್ತತ್ರ ಪ್ರಕರ್ತವ್ಯಾಃ ಪ್ರಾಜಾಪತ್ಯವಿಸಂಜ್ಞಯಾ ।
ಸವಸ್ತ್ರಾಸ್ಸಫಲಾಸ್ತತ್ರ ದಕ್ಷಿಣಾಸಹಿತಾಃ ಶುಭಾಃ ॥ ೭ ॥

ಮಂಡಲಸ್ಯ ಚ ಪಾರ್ಶ್ವೇ ವೈ ಸ್ಥಾಪನೀಯಾಃ ಪ್ರಯತ್ನತಃ ।
ಮಧ್ಯೇ ಚೈಕಶ್ಚ ಸಂಸ್ಥಾಪ್ಯಃ ಸೌವರ್ಣೋ ವಾಪರೋ ಘಟಃ ॥ ೮ ॥

---

ಯನ್ನು ಮಾಡಿದರೆ ವ್ರತದ ಪೂರ್ಣಫಲವು ಪ್ರಾಪ್ತವಾಗುವುದು. ಈ ಶುಭಕರವಾದ ಶಿವರಾತ್ರಿಯ ವ್ರತವನ್ನು ಹದಿನಾಲ್ಕು ವರ್ಷಗಳವರಿಗೆ ಮಾಡಬೇಕು. ತ್ರಯೋದಶಿಯ ದಿನ ಉಪವಾಸವನ್ನು ಮಾಡಬೇಕು. ಶಿವರಾತ್ರಿಯ ದಿನವು ಬಂದರೆ ನಿತ್ಯಕರ್ಮವನ್ನು ಮಾಡಿಕೊಂಡು ಶಿವಾಲಯಕ್ಕೆ ಹೋಗಿ ವಿಧಿಗನುಸಾರವಾಗಿ ಪೂಜೆಯನ್ನು ಮಾಡಿ ಅಲ್ಲಿ ಗೌರೀತಿಲಕವೆಂದು ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿರುವ ದಿವ್ಯವಾದ ಒಂದು ಮಂಡಲವನ್ನು ಮಾಡಿ ಅದರ ನಡುವೆ ಶ್ರೇಷ್ಠವಾದ ಲಿಂಗತೋಭದ್ರವೆಂಬ ಮಂಡಲವನ್ನಾಗಲೀ, ಸರ್ವತೋಭದ್ರ ಮಂಡಲವನ್ನಾಗಲೀ, ಬರೆಯಬೇಕು.

೭–೧೦. ಆ ಮಂಡಲದ ನಡುವೆ ಪ್ರಜಾಪತಿಸಂಜ್ಞೆಯ ಕಲಶವನ್ನಿಟ್ಟು ವಸ್ತ್ರ, ಫಲ, ದಕ್ಷಿಣೆಗಳನ್ನಿರಿಸಿ ಆ ಮಂಡಲದ ಪಾರ್ಶ್ವಗಳಲ್ಲಿ ಎರಡು ಕಲಶಗಳನ್ನು

ತತ್ರೋಮಾಸಹಿತಾಂ ಶಂಭುಮೂರ್ತಿಂ ನಿರ್ಮಾಯ ಹಾಟಕೀಂ ।
ಫಲೇನ ವಾ ತದರ್ಧೇನ ಯಥಾಶಕ್ತ್ಯಾಥವಾ ವ್ರತೀ ॥ ೯ ॥

ನಿಧಾಯ ವಾಮಭಾಗೇ ತು ಶಿವಾಮೂರ್ತಿಮತಂದ್ರಿತಃ ।
ಮದೀಯಾಂ ದಕ್ಷಿಣೇ ಭಾಗೇ ಕೃತ್ವಾ ರಾತ್ರೌ ಪ್ರಪೂಜಯೇತ್ ॥ ೧೦ ॥

ಆಚಾರ್ಯಂ ವರಯೇತ್ತತ್ರ ಋತ್ವಿಗ್ಭಿಸ್ಸಹಿತಂ ಶುಚಿಂ ।
ಅನುಜ್ಞಾತಶ್ಚ ತೈರ್ಭಕ್ತ್ಯಾ ಶಿವಪೂಜಾಂ ಸಮಾಚರೇತ್ ॥ ೧೧ ॥

ರಾತ್ರೌ ಜಾಗರಣಂ ಕುರ್ಯಾತ್ಪೂಜಾಂ ಯಾಮೋದ್ಭವಾಂ ಚರನ್ ।
ರಾತ್ರಿಮಾಕ್ರಮಯೇತ್ಸರ್ವಾಂ ಗೀತನೃತ್ಯಾದಿನಾ ವ್ರತೀ ॥ ೧೨ ॥

ಏವ ಸಂಪೂಜ್ಯ ವಿಧಿವತ್ಸಂತೋಷ್ಯ ಪ್ರಾತರೇವ ಚ ।
ಪುನಃ ಪೂಜಾಂ ತತಃ ಕೃತ್ವಾ ಹೋಮಂ ಕುರ್ಯಾದ್ಯಥಾವಿಧಿ ॥ ೧೩ ॥

ಯಥಾಶಕ್ತಿ ವಿಧಾನಂ ಚ ಪ್ರಾಜಾಪತ್ಯಂ ಸಮಾಚರೇತ್ ।
ಬ್ರಾಹ್ಮಣಾನ್ಭೋಜಯೇತ್ಪ್ರೀತ್ಯಾ ದದ್ಯಾದ್ದಾನಾನಿ ಭಕ್ತಿತಃ ॥ ೧೪ ॥

---

ಸ್ಥಾಪಿಸಬೇಕು. ನಡುವೆ ಇರುವ ಕಲಶಕ್ಕೆ ಚಿನ್ನದ ಉಮಾಮಹೇಶ್ವರ ಪ್ರತಿಮೆಯನ್ನು ಹಾಕಿ, ಎಡಭಾಗದಲ್ಲಿ ಗೌರಿಯನ್ನೂ, ಬಲಭಾಗದಲ್ಲಿ ಪಾರ್ಥಿವಲಿಂಗವನ್ನೂ ಮಾಡಿಟ್ಟು ರಾತ್ರಿಯಲ್ಲಿ ಪೂಜಿಸಬೇಕು.

೧೧–೧೪. ಈ ಸಂದರ್ಭದಲ್ಲಿ ಋತ್ವಿಕ್ಕುಗಳನ್ನೂ, ಆಚಾರ್ಯರನ್ನೂ ವರಣ ಮಾಡಿ ಅವರ ಅಪ್ಪಣೆಯಿಂದ ಭಕ್ತಿಯಿಂದ ಶಿವಪೂಜೆಯನ್ನು ಮಾಡಬೇಕು. ಈ ರೀತಿಯಲ್ಲಿ ವಿಧಿಗನುಸಾರವಾಗಿ ಪೂಜೆಯನ್ನು ಮಾಡಿ ರಾತ್ರಿಯಲ್ಲಿ ಗೀತ, ನೃತ್ಯಾದಿಗಳಿಂದ ಜಾಗರಣೆಯನ್ನು ಮಾಡಬೇಕು. ಈ ರೀತಿಯಲ್ಲಿ ವಿಧಿಗನುಸಾರವಾಗಿ ಪೂಜೆಯನ್ನು ಮಾಡಿ ಪ್ರಾತಃಕಾಲದಲ್ಲಿ ಪುನಃಪೂಜೆಯನ್ನು ಮಾಡಿ ವಿಧಿಗನುಸಾರವಾಗಿ ಹೋಮವನ್ನು ಮಾಡಬೇಕು. ತನ್ನ ಶಕ್ತ್ಯಾನುಸಾರವಾಗಿ ಪ್ರಜಾಪತ್ಯಹೋಮವನ್ನೂ, ಬ್ರಾಹ್ಮಣಭೋಜನವನ್ನೂ, ದಾನಗಳನ್ನೂ ಮಾಡಬೇಕು.

ಋತ್ವಿಜಶ್ಚ ಸಪತ್ನೀಕಾನ್ವಸ್ತ್ರಾಲಂಕಾರಭೂಷಣೈಃ ।
ಅಲಂಕೃತ್ಯ ವಿಧಾನೇನ ದದ್ಯಾದ್ದಾನಂ ಪೃಥಕ್ಪೃಥಕ್ ॥ ೧೫ ॥

ಗಾಂ ಸವತ್ಸಾಂ ವಿಧಾನೇನ ಯಥೋಪಸ್ಕರಸಂಯುತಾಂ ।
ಉಕ್ತ್ವಾ ಚಾರ್ಯಾಯ ವೈ ದದ್ಯಾಚ್ಛಿವೋ ಮೇ ಪ್ರೀಯತಾಮಿತಿ ॥ ೧೬ ॥

ತತಸ್ಸಕುಂಭಾಂ ತನ್ಮೂರ್ತಿಂ ಸವಸ್ತ್ರಾಂ ವೃಷಭೇ ಸ್ಥಿತಾಂ ।
ಸರ್ವಾಲಂಕಾರಸಹಿತಾಮಾಚಾರ್ಯಾಯ ನಿವೇದಯೇತ್ ॥ ೧೭ ॥

ತತಃ ಸಂಪ್ರಾರ್ಥಯೇದ್ದೇವಂ ಮಹೇಶಾನಂ ಮಹಾಪ್ರಭುಂ ।
ಕೃತಾಂಜಲಿರ್ನತಸ್ಕಂಧಸ್ಸುಪ್ರೀತ್ಯಾ ಗದ್ಗದಾಕ್ಷರಃ ॥ ೧೮ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ವ್ರತೇನಾನೇನ ದೇವೇಶ ಕೃಪಾಂ ಕುರು ಮಮೋಪರಿ ॥ ೧೯ ॥

ಮಯಾ ಭಕ್ತ್ಯನುಸಾರೇಣ ವ್ರತಮೇತತ್ಕೃತಂ ಶಿವ ।
ನ್ಯೂನಂ ಸಂಪೂರ್ಣತಾಂ ಯಾತು ಪ್ರಸಾದಾತ್ತವ ಶಂಕರ ॥ ೨೦ ॥

---

೧೫. ಪತ್ನೀಸಹಿತರಾದ ಋತ್ವಿಕ್ಕುಗಳಿಗೆ ವಸ್ತ್ರ, ಅಲಂಕಾರ, ಆಭರಣ ಮುಂತಾದುವುಗಳನ್ನು ವಿಧಿಗನುಸಾರವಾಗಿ ಕೊಟ್ಟು ಬೇರೆ ಬೇರೆಯಾದ ದಾನಗಳನ್ನೂ ಅವರಿಗೆ ಕೊಡಬೇಕು.

೧೬–೧೮. ಆಚಾರ್ಯರಿಗೆ ವಿಧಿಗನುಸಾರವಾದ ಉಪಕರಣಗಳಿಂದ ಕೂಡಿದ ಕರುವಿನೊಡನೆ ಕೂಡಿದ ಹಸುವನ್ನು ಶಿವನು ಸಂತುಷ್ಟನಾಗಲೆಂದು ಹೇಳಿ ದಾನ ಮಾಡಬೇಕು. ಆಮೇಲೆ ಕಲಶಸಹಿತವಾದ ಶಿವಮೂರ್ತಿಯನ್ನು ವಸ್ತ್ರ ಮತ್ತು ಸರ್ವಾಲಂಕಾರ ಸಹಿತವಾಗಿ ಆಚಾರ್ಯರಿಗೆ ಕೊಡಬೇಕು. ಆಮೇಲೆ ಕೈ ಜೋಡಿಸಿ ಶಿರಸ್ಸನ್ನು ಬಗ್ಗಿಸಿ ಸಂತೋಷದಿಂದ ದೇವದೇವನಾದ ಮಹೇಶ್ವರನನ್ನು ಪ್ರಾರ್ಥಿಸಬೇಕು.

೧೯–೨೨. ಎಲೈ ದೇವನಾದ ಮಹೇಶ್ವರನೇ! ನೀನು ಮರೆಹೊಕ್ಕವರನ್ನು ಕಾಪಾಡುವವನು. ಈ ವ್ರತವನ್ನು ಮಾಡಿದ ನನ್ನಮೇಲೆ ದಯೆಯನ್ನು ತೋರಿಸು.

ಅಜ್ಞಾನಾದ್ಯದಿ ವಾ ಜ್ಞಾನಾಜ್ಜಪಪೂಜಾದಿಕಂ ಮಯಾ ।
ಕೃತಂ ತದಸ್ತು ಕೃಪಯಾ ಸಫಲಂ ತವ ಶಂಕರ ॥ ೨೧ ॥

ಏವಂ ಪುಷ್ಪಾಂಜಲಿಂ ದತ್ವಾ ಶಿವಾಯ ಪರಮಾತ್ಮನೇ ।
ನಮಸ್ಕಾರಂ ತತಃ ಕುರ್ಯಾತ್ಪ್ರಾರ್ಥನಾಂ ಪುನರೇವ ಚ ॥ ೨೨ ॥

ಏವಂ ವ್ರತಂ ಕೃತಂ ಯೇನ ನ್ಯೂನಂ ತಸ್ಯ ನ ವಿದ್ಯತೇ ।
ಮನೋಽಭೀಷ್ಟಾಂ ತತಃ ಸಿದ್ಧಿಂ ಲಭತೇ ನಾತ್ರ ಸಂಶಯಃ ॥ ೨೩ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಶಿವರಾತ್ರಿವ್ರತೋದ್ಯಾಪನವರ್ಣನಂ ನಾಮ
ಏಕೋನಚತ್ವಾರಿಂಶೋಽಧ್ಯಾಯಃ



---

ಎಲೈ ಶಿವನೇ! ಭಕ್ತಿಗೆ ಅನುಸಾರವಾಗಿ ನಾನು ಈ ವ್ರತವನ್ನು ಮಾಡಿದೆನು. ವ್ರತಾನುಷ್ಠಾನದಲ್ಲಿ ಯಾವ ನ್ಯೂನತೆಯಿದ್ದರೂ ನಿನ್ನ ಅನುಗ್ರಹದಿಂದ ಅದು ಸಂಪೂರ್ಣವನ್ನು ಹೊಂದಲಿ. ಅಜ್ಞಾನದಿಂದಲಾಗಲೀ, ಜ್ಞಾನದಿಂದಲಾಗಲೀ ಜಪ ಪೂಜಾದಿಗಳನ್ನು ಮಾಡಿದುದು ನಿನ್ನ ದಯೆಯಿಂದ ಸಫಲವಾಗಲಿ. ಹೀಗೆಂದು ಹೇಳಿ ಪರಮಾತ್ಮನಾದ ಶಿವನಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ ನಮಸ್ಕಾರವನ್ನು ಮಾಡಿ ಪುನಃ ಪ್ರಾರ್ಥನೆಯನ್ನು ಮಾಡಿಕೊಳ್ಳಬೇಕು.

೨೩. ಈರೀತಿಯಲ್ಲಿ ವ್ರತವನ್ನು ಮಾಡಿದ ಮನುಷ್ಯನಿಗೆ ಯಾವ ವಿಷಯದಲ್ಲಾಗಲಿ ಏನೂ ಕೊರತೆಯುಂಟಾಗುವುದಿಲ್ಲ. ಅವನ ಮನೋಭೀಷ್ಟವು ಸಿದ್ಧಿಸುವುದು. ಇದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ವ್ರತೋದ್ಯಾಪನವಿಧಿಕಥನವೆಂಬ ಮೂವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.

## ॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೋಟಿರುದ್ರಸಂಹಿತಾಯಾಂ

## ಚತ್ವಾರಿಂಶೋಽಧ್ಯಾಯಃ



॥ ಋಷಯ ಊಚುಃ

ಸೂತ ತೇ ವಚನಂ ಶ್ರುತ್ವಾ ಪರಾನಂದಂ ವಯಂ ಗತಾಃ ।
ವಿಸ್ತರಾತ್ಕಥಯ ಪ್ರೀತ್ಯಾ ತದೇವ ವ್ರತಮುತ್ತಮಂ ॥ ೧ ॥

ಕೃತಂ ಪುರಾ ಚ ಕೇನೇಹ ಸೂತ್ರೈತದ್ವ್ರತಮುತ್ತಮಂ ।
ಕೃತ್ವಾಪ್ಯಜ್ಞಾನತಶ್ಚೈವ ಪ್ರಾಪ್ತಂ ಕಿಂ ಫಲಮುತ್ತಮಂ ॥ ೨ ॥

---

### ನಲವತ್ತನೆಯ ಅಧ್ಯಾಯವು

೧–೨. ಋಷಿಗಳಿಂತೆಂದರು :—ಎಲೈ ಸೂತನೇ! ನಿನ್ನ ಮಾತನ್ನು ಕೇಳಿ ನಮಗೆ ಪರಮಾನಂದವುಂಟಾಯಿತು. ಈಗ ನೀನು ಹೇಳಿದ ಆ ಶಿವರಾತ್ರಿಯ ವ್ರತವನ್ನೇ ನಮಗೆ ಇನ್ನೂ ವಿಸ್ತಾರವಾಗಿ ಹೇಳಬೇಕು. ಹಿಂದೆ ಯಾರು ಈ ಉತ್ತಮವಾದ ವ್ರತವನ್ನು ಮಾಡಿದರು? ಅಜ್ಞಾನದಿಂದಲಾದರೂ ಇದನ್ನು ಮಾಡಿದವರು ಯಾವ ಫಲವನ್ನು ಪಡೆದರು? ಇದನ್ನೆಲ್ಲಾ ಹೇಳಬೇಕು ಎಂದರು.

॥ ಸೂತ ಉವಾಚ ॥

ಶ್ರೂಯತಾಮೃಷಯಸ್ಸರ್ವೇ ಕಥಯಾಮಿ ಪುರಾತನಂ ।
ಇತಿಹಾಸಂ ನಿಷಾದಸ್ಯ ಸರ್ವಪಾಪಪ್ರಣಾಶನಂ ॥ ೩ ॥

ಪುರಾ ಕಶ್ಚಿದ್ವನೇ ಭಿಲ್ಲೋ ನಾಮ್ನಾ ಹ್ಯಾಸೀದ್ಗುರುದ್ರುಹಃ ।
ಕುಟುಂಬೀ ಬಲವಾನ್ಕ್ರೂರಃ ಕ್ರೂರಕರ್ಮಪರಾಯಣಃ ॥ ೪ ॥

ನಿರಂತರಂ ವನೇ ಗತ್ವಾ ಮೃಗಾನ್ಹಂತಿ ಸ್ಮ ನಿತ್ಯಶಃ ।
ಚೌರ್ಯಂ ಚ ವಿವಿಧಂ ತತ್ರ ಕರೋತಿ ಸ್ಮ ವನೇ ವಸನ್ ॥ ೫ ॥

ಬಾಲ್ಯಾದಾರಭ್ಯ ತೇನೇಹ ಕೃತಂ ಕಿಂಚಿಚ್ಛುಭಂ ನ ಹಿ ।
ಮಹಾನ್ಕಾಲೋ ವ್ಯತೀಯಾಯ ವನೇ ತಸ್ಯ ದುರಾತ್ಮನಃ ॥ ೬ ॥

ಕದಾಚಿಚ್ಛಿವರಾತ್ರಿಶ್ಚ ಪ್ರಾಪ್ತಾಸೀತ್ತತ್ರ ಶೋಭನಾ ।
ನ ದುರಾತ್ಮಾ ಸ್ಮ ಜಾನಾತಿ ಮಹದ್ವನನಿವಾಸಕೃತ್ ॥ ೭ ॥

ಏತಸ್ಮಿನ್ಸಮಯೇ ಭಿಲ್ಲೋ ಮಾತ್ರಾ ಪಿತ್ರಾ ಸ್ತ್ರಿಯಾ ತಥಾ ।
ಪ್ರಾರ್ಥಿತಶ್ಚ ಕ್ಷುಧಾವಿಷ್ಟೈರ್ಭಕ್ಷ್ಯಂ ದೇಹಿ ವನೇಚರ ॥ ೮ ॥

---

೩. ಸೂತನು ಹೇಳಿದನು :—ಎಲೈ ಋಷಿಗಳಿರಾ, ಕೇಳಿರಿ. ಪುರಾತನವಾದ ಓರ್ವ ಬೇಡನ ಕಥೆಯನ್ನು ಹೇಳುವೆನು. ಅದು ಸಮಸ್ತ ಪಾಪಗಳನ್ನು ನಾಶಮಾಡುವುದು.

೪-೧೦. ಪೂರ್ವಕಾಲದಲ್ಲಿ ಒಂದು ಕಾಡಿನಲ್ಲಿ ಬಲಶಾಲಿಯೂ, ಕ್ರೂರಿಯಾದ ಗುರುದ್ರುಹನೆಂಬ ಓರ್ವ ಬೇಡನಿದ್ದನು. ಅವನಿಗೆ ಅನೇಕ ಮಕ್ಕಳಿದ್ದರು. ಜೀವನಾರ್ಥವಾಗಿ ಅವನು ಪ್ರತಿದಿನವೂ ಕಾಡಿನಲ್ಲಿ ಮೃಗಗಳನ್ನು ಕೊಂದು, ಕಳ್ಳತನವನ್ನೂ ಮಾಡುತ್ತ ಆ ಕಾಡಿನಲ್ಲಿ ವಾಸವಾಗಿದ್ದನು. ಚಿಕ್ಕಂದಿನಿಂದಲೂ ಅವನು ಒಂದು ಶುಭಕಾರ್ಯವನ್ನೂ ಮಾಡಿದವನಲ್ಲ. ದುಷ್ಟನಾದ ಅವನು ಕಾಡಿನಲ್ಲಿ ವಾಸಮಾಡುತ್ತಿರುವಲ್ಲಿ ಅನೇಕ ವರ್ಷಗಳು ಕಳೆದವು. ಒಂದಾನೊಂದು ದಿನ ಶಿವರಾತ್ರಿಯು ಪ್ರಾಪ್ತವಾಯಿತು. ಆ ಮಹಾವನದಲ್ಲಿದ್ದ ದುಷ್ಟನಾದ ಅವನಿಗೆ ಆ ದಿನ ಶಿವರಾತ್ರಿಯೆಂಬುದು ತಿಳಿಯಲಿಲ್ಲ. ಈ ಸಮಯದಲ್ಲಿ ಅವನ ತಂದೆ, ತಾಯಿ, ಹೆಂಡತಿ,

ಇತಿ ಸಂಪ್ರಾರ್ಥಿತಸ್ಸೋಽಪಿ ಧನುರಾದಾಯ ಸತ್ವರಂ ।
ಜಗಾಮ ಮೃಗಹಿಂಸಾರ್ಥಂ ಬಭ್ರಾಮ ಸಕಲಂ ವನಂ　　॥ ೯ ॥

ದೈವಯೋಗಾತ್ತದಾ ತೇನ ನ ಪ್ರಾಪ್ತಂ ಕಿಂಚಿದೇವ ಹಿ ।
ಅಸ್ತಂ ಪ್ರಾಪ್ತಸ್ತದಾ ಸೂರ್ಯಸ್ಸ ವೈ ದುಃಖಮುಪಾಗತಃ　　॥ ೧೦ ॥

ಕಿಂ ಕರ್ತವ್ಯಂ ಕ್ವ ಗಂತವ್ಯಂ ನ ಪ್ರಾಪ್ತಂ ಮೇಽದ್ಯ ಕಿಂಚನ ।
ಬಾಲಾಶ್ಚ ಯೇ ಗೃಹೇ ತೇಷಾಂ ಕಿಂ ಪಿತ್ರೋಶ್ಚ ಭವಿಷ್ಯತಿ　　॥ ೧೧ ॥

ಮದೀಯಂ ವೈ ಕಲತ್ರಂ ಚ ತಸ್ಯಾಃ ಕಿಂಚಿದ್ಭವಿಷ್ಯತಿ ।
ಕಿಂಚಿದ್ಗೃಹೀತ್ವಾ ಹಿ ಮಯಾ ಗಂತವ್ಯಂ ನಾನ್ಯಥಾ ಭವೇತ್　　॥ ೧೨ ॥

ಇತ್ಥಂ ವಿಚಾರ್ಯ ಸ ವ್ಯಾಧೋ ಜಲಾಶಯಸಮೀಪಗಃ ।
ಜಲಾವತರಣಂ ಯತ್ರ ತತ್ರ ಗತ್ವಾ ಸ್ವಯಂ ಸ್ಥಿತಃ　　॥ ೧೩ ॥

ಅವಶ್ಯಮತ್ರ ಕಶ್ಚಿದ್ವೈ ಜೀವಶ್ಚೈವಾಗಮಿಷ್ಯತಿ ।
ತಂ ಹತ್ವಾ ಸ್ವಗೃಹಂ ನೀತ್ವಾ ಯಾಸ್ಯಾಮಿ ಕೃತಕಾರ್ಯಕಃ　　॥ ೧೪ ॥

---

ಮಕ್ಕಳು :ಎಲ್ಲರೂ ಹಸಿವಿನಿಂದಕೂಡಿ ಆಹಾರವನ್ನು ತಂದುಕೊಡೆಂದು ಪೀಡಿಸಲು ಆ ಬೇಡನು ಧನುಸ್ಸನ್ನು ತೆಗೆದುಕೊಂಡು ಆತುರವಾಗಿ ಕಾಡಿಗೆ ಹೋಗಿ ಕಾಡನ್ನೆಲ್ಲಾ ಸುತ್ತಿದನು. ಒಂದು ಮೃಗವಾದರೂ ಸಿಕ್ಕಲಿಲ್ಲ. ಸೂರ್ಯನು ಮುಳಗಿದನು. ಆಹಾರವು ಸಿಕ್ಕದ್ದರಿಂದ ಅವನು ದುಃಖಪಡುತ್ತಾ,

೧೧-೧೬. ಏನು ಮಾಡಲಿ? ಎಲ್ಲಿಗೆ ಹೋಗಲಿ? ನನಗೆ ಒಂದು ಮೃಗವಾದರೂ ಸಿಕ್ಕಲಿಲ್ಲವಲ್ಲಾ. ಮನೆಯಲ್ಲಿ ಮಕ್ಕಳು, ತಂದೆ, ತಾಯಿಗಳು, ಹೆಂಡತಿ ಇವರಿಗೆ ಈದಿನ ಆಹಾರವೇ ಇಲ್ಲ. ಸ್ವಲ್ಪ ಆಹಾರವನ್ನಾದರೂ ತೆಗೆದುಕೊಂಡು ಹೋಗಲೇ ಬೇಕು. ಎಂದು ಮನಸ್ಸಿನಲ್ಲ ಯೋಚಿಸಿ ಆ ಬೇಡನು ಒಂದು ಸರೋವರದ ಸಮೀಪದಲ್ಲಿ ಮೃಗಗಳು ನೀರುಕುಡಿಯುವುದಕ್ಕಾಗಿ ಇಳಿಯುವ ಸ್ಥಳದಲ್ಲಿ ಮರೆಯಾಗಿ ನಿಂತುಕೊಂಡನು. ಇಲ್ಲಿಗೆ ಯಾವುದಾದರೂ ಪ್ರಾಣಿಯು ಬರುವುದು. ಅದನ್ನು ಕೊಂದು ಮನೆಗೆ ತೆಗೆದುಕೊಂಡು ಹೋಗುವೆನು. ಹೀಗೆಂದು ಯೋಚಿಸಿ

ಇತಿ ಮತ್ವಾ ಸ ವೈ ವೃಕ್ಷಮೇಕಂ ಬಿಲ್ವೇತಿಸಂಜ್ಞಕಂ ।
ಸಮಾರುಹ್ಯ ಸ್ಥಿತಸ್ತತ್ರ ಜಲಮಾದಾಯ ಭಿಲ್ಲಕಃ ॥ ೧೫ ॥

ಕದಾಯಾಸ್ಯತಿ ಕಶ್ಚಿದ್ವೈ ಕದಾ ಹನ್ಯಾಮಹಂ ಪುನಃ ।
ಇತಿ ಬುದ್ಧಿಂ ಸಮಾಸ್ಥಾಯ ಸ್ಥಿತೋಽಸೌ ಕ್ಷುತ್ತೃಷಾನ್ವಿತಃ ॥ ೧೬ ॥

ತದ್ರಾತ್ರೌ ಪ್ರಥಮೇ ಯಾಮೇ ಮೃಗೀ ತ್ವೇಕಾ ಸಮಾಗತಾ ।
ತೃಷಾರ್ತಾ ಚಕಿತಾ ಸಾ ಚ ಪ್ರೋತ್ಫಾಲಂ ಕುರ್ವತೀ ತದಾ ॥ ೧೭ ॥

ತಾಂ ದೃಷ್ಟ್ವಾ ಚ ತದಾ ತೇನ ತದ್ವಧಾರ್ಥಮಥೋ ಶರಃ ।
ಸಂಹೃಷ್ಟೇನ ದ್ರುತಂ ವಿಪ್ರೋ ಧನುಷಿ ಸ್ವೇ ಹಿ ಸಂದಧೇ ॥ ೧೮ ॥

ಇತ್ಯೇವಂ ಕುರ್ವತಸ್ತಸ್ಯ ಜಲಂ ಬಿಲ್ವದಲಾನಿ ಚ ।
ಪತಿತಾನಿ ಹ್ಯಧಸ್ತತ್ರ ಶಿವಲಿಂಗಮಭೂತ್ತತಃ ॥ ೧೯ ॥

ಯಾಮಸ್ಯ ಪ್ರಥಮಸ್ಯೈವ ಪೂಜಾ ಜಾತಾ ಶಿವಸ್ಯ ಚ ।
ತನ್ಮಹಿಮ್ನಾ ಹಿ ತಸ್ಯೈವ ಪಾತಕಂ ಗಲಿತಂ ತದಾ ॥ ೨೦ ॥

---

ಅವನು ಒಂದು ಬಿಲ್ವಪತ್ರೆಯ ಮರವನ್ನು ಹತ್ತಿ ತನ್ನಲ್ಲಿದ್ದ ಸೋರೆಬುರುಡೆಯಲ್ಲಿ ನೀರನ್ನು ತುಂಬಿಕೊಂಡು ಹೋಗಿ ಕುಳಿತನು. ಇಲ್ಲಿಗೆ ಯಾವುದಾದರೂ ಪ್ರಾಣಿಯು ಯಾವಾಗ ಬಂದೀತು, ಅದನ್ನು ನಾನು ಯಾವಾಗ ಕೊಂದೇನು ಎಂದು ಯೋಚಿಸುತ್ತ ಹಸಿವು, ಬಾಯಾರಿಕೆಗಳಿಂದ ಕೂಡಿದ್ದನು.

೧೭-೨೦. ಆ ರಾತ್ರಿಯ ಮೊದಲನೆಯ ಯಾಮದಲ್ಲಿ ಒಂದು ಹೆಣ್ಣು ಜಿಂಕೆಯು ಬಾಯಾರಿಕೆಯಿಂದ ಕೂಡಿ ನೀರು ಕುಡಿಯಲು ಅಲ್ಲಿಗೆ ಬಂದು ಮುಖವನ್ನು ಮೇಲಕ್ಕೆತ್ತಿ ಸುತ್ತಲೂ ನೋಡಿತು. ಆ ಜಿಂಕೆಯನ್ನು ನೋಡಿ ಆ ಬೇಡನು ಅದನ್ನು ಕೊಲ್ಲಬೇಕೆಂದು ತನ್ನ ಬಿಲ್ಲಿಗೆ ಬಾಣವನ್ನು ಹೂಡಿದನು. ಹೀಗೆ ಮಾಡುತ್ತಿರುವಾಗ ಅವನ ಸೋರೆಬುರುಡೆಯಲ್ಲಿದ್ದ ನೀರೂ, ಬಿಲ್ವಪತ್ರೆಯ ದಳಗಳೂ ನೆಲದ ಮೇಲಕ್ಕೆ ಬಿದ್ದು ಅಲ್ಲಿ ಶಿವಲಿಂಗ ಉಂಟಾಯಿತು. ಹೀಗಾಗುತ್ತಲು ಶಿವನಿಗೆ ಮೊದಲನೆಯ ಯಾಮದ ಪೂಜೆಯಾದಂತೆ ಆಯಿತು. ಆ ಮಹಿಮೆಯಿಂದ ಆ ಬೇಡನ ಪಾಪಗಳೆಲ್ಲವೂ ಆಗಲೇ ನಾಶವಾದವು.

ತತ್ರತ್ಯಂ ಚೈವ ತಚ್ಛಬ್ದಂ ಶ್ರುತ್ವಾ ಸಾ ಹರಿಣೀ ಭಿಯಾ ।
ವ್ಯಾಧಂ ದೃಷ್ಟ್ವಾ ವ್ಯಾಕುಲಾ ಹಿ ವಚನಂ ಚೇದಮಬ್ರವೀತ್ ॥ ೨೧ ॥

॥ ಮೃಗ್ಯುವಾಚ ॥

ಕಿಂ ಕರ್ತುಮಿಚ್ಛಸಿ ವ್ಯಾಧ ಸತ್ಯಂ ವದ ಮಮಾಗ್ರತಃ ।
ತಚ್ಛ್ರುತ್ವಾ ಹರಿಣೀವಾಕ್ಯಂ ವ್ಯಾಧೋ ವಚನಮಬ್ರವೀತ್ ॥ ೨೨ ॥

॥ ವ್ಯಾಧ ಉವಾಚ ॥

ಕುಟುಂಬಂ ಕ್ಷುಧಿತಂ ಮೇಽದ್ಯ ಹತ್ವಾ ತಾಂ ತರ್ಪಯಾಮ್ಯಹಂ ।
ದಾರುಣಂ ತದ್ವಚಶ್ಶ್ರುತ್ವಾ ದೃಷ್ಟ್ವಾ ತಂ ದುರ್ಧರಂ ಖಲಂ ॥ ೨೩ ॥

ಕಿಂ ಕರೋಮಿ ಕ್ವ ಗಚ್ಛಾಮಿ ಹ್ಯುಪಾಯಂ ರಚಯಾಮ್ಯಹಂ ।
ಇತ್ಥಂ ವಿಚಾರ್ಯ ಸಾ ತತ್ರ ವಚನಂ ಚೇದಮಬ್ರವೀತ್ ॥ ೨೪ ॥

॥ ಮೃಗ್ಯುವಾಚ ॥

ಮನ್ಮಾಂಸೇನ ಸುಖಂ ತೇ ಸ್ಯಾದ್ದೇಹಸ್ಯಾನರ್ಥಕಾರಿಣಃ ।
ಅಧಿಕಂ ಕಿಂ ಮಹತ್ಪುಣ್ಯಂ ಧನ್ಯಾಹಂ ನಾತ್ರ ಸಂಶಯಃ ॥ ೨೫ ॥

---

೨೧. ಅಲ್ಲಿ ಉಂಟಾದ ಸೋರೆಬುರುಡೆಯು ಬಿದ್ದ ಶಬ್ದವನ್ನು ಕೇಳಿ ಆ ಹೆಣ್ಣು ಜಿಂಕೆಯು ಭಯದಿಂದ ಬೇಡನನ್ನು ನೋಡಿ ದುಃಖದಿಂದ ಮಾತನಾಡಿತು.

೨೨. ಎಲೈ ಬೇಡನೇ! ನೀನು ಏನುಮಾಡಬೇಕೆಂದಿರುವೆ? ನನ್ನೊಡನೆ ನಿಜವನ್ನು ಹೇಳು ಎನ್ನಲು ಜಿಂಕೆಯ ಮಾತನ್ನು ಕೇಳಿ ಬೇಡನಿಂತೆಂದನು.

೨೩-೨೪. ನನ್ನ ಮನೆಯಲ್ಲಿ ಹೆಂಡತಿ ಮಕ್ಕಳು ಎಲ್ಲರೂ ಹಸಿವಿನಿಂದಿರುವರು. ನಿನ್ನನ್ನು ಕೊಂದು ಅವರನ್ನು ತೃಪ್ತಿಪಡಿಸುವೆನು ಎಂದನು. ಕರ್ಣಕಠೋರವಾದ ಅವನ ಈ ಮಾತನ್ನು ಕೇಳಿ ಆ ಜಿಂಕೆಯು ಏನುಮಾಡಲೂ ತೋರದೆ, ಈ ದುಷ್ಟನು ನನ್ನನ್ನು ಖಂಡಿತವಾಗಿಯೂ ಕೊಲ್ಲುವನು. ಏನಾದರೊಂದು ಉಪಾಯಮಾಡಿ ಇಲ್ಲಿಂದ ಪಾರಾಗಬೇಕು ಎಂದು ಯೋಚಿಸಿ ಇಂತೆಂದಿತು.

೨೫-೨೯. ನನ್ನ ಮಾಂಸದಿಂದ ನಿನಗೆ ಸುಖವಾಗುವ ಹಾಗಿದ್ದರೆ ಅನರ್ಥ ಕಾರಣವಾದ ಈ ಶರೀರಕ್ಕೆ ಹೆಚ್ಚಾದ ಪುಣ್ಯವುಂಟಾಗುವುದು. ಅದರಿಂದ ನಾನು ಕೃತಾರ್ಥಳಾಗುವೆನು. ಪರೋಪಕಾರ ಮಾಡಿದವರಿಗೆ ಉಂಟಾಗುವ ಪುಣ್ಯವನ್ನು

ಉಪಕಾರಕರಸ್ಯೈವ ಯತ್ಪುಣ್ಯಂ ಜಾಯತೇ ತ್ವಿಹ ।
ತತ್ಪುಣ್ಯಂ ಶಕ್ಯತೇ ನೈವ ವಕ್ತುಂ ವರ್ಷಶತೈರಪಿ ॥ ೨೬ ॥

ಪರಂ ತು ಶಿಶವೋ ಮೇಽದ್ಯ ವರ್ತಂತೇ ಸ್ವಾಶ್ರಮೇಽಖಿಲಾಃ ।
ಭಗಿನ್ಯೈ ತಾನ್ಸಮರ್ಪ್ಯೈವ ಪ್ರಾಯಾಸ್ಯೇ ಸ್ವಾಮಿನೇಽಥ ವಾ ॥ ೨೭ ॥

ನ ಮೇ ಮಿಥ್ಯಾವಚಸ್ತ್ವಂ ಹಿ ವಿಜಾನೀಹಿ ವನೇಚರ ।
ಆಯಾಸ್ಯೇಹ ಪುನಶ್ಚಾಹಂ ಸಮೀಪಂ ತೇ ನ ಸಂಶಯಃ ॥ ೨೮ ॥

ಸ್ಥಿತಾ ಸತ್ಯೇನ ಧರಣೀ ಸತ್ಯೇನೈವ ಚ ವಾರಿಧಿಃ ।
ಸತ್ಯೇನ ಜಲಧಾರಾಶ್ಚ ಸತ್ಯೇ ಸರ್ವಂಪ್ರತಿಷ್ಠಿತಂ ॥ ೨೯ ॥

॥ ಸೂತ ಉವಾಚ ॥

ಇತ್ಯುಕ್ತೋಽಪಿ ತಯಾ ವ್ಯಾಧೋ ನ ಮೇನೇ ತದ್ವಚೋ ಯದಾ ।
ತದಾ ಸುವಿಸ್ಮಿತಾ ಭೀತಾ ವಚನಂ ಸಾಬ್ರವೀತ್ಪುನಃ ॥ ೩೦ ॥

॥ ಮೃಗ್ಯುವಾಚ ॥

ಶೃಣು ವ್ಯಾಧ ಪ್ರವಕ್ಷ್ಯಾಮಿ ಶಪಥಂ ಹಿ ಕರೋಮ್ಯಹಂ ।
ಆಗಚ್ಛೇಯಂ ಯಥಾ ತೇ ನ ಸಮೀಪಂ ಸ್ವಗೃಹಾದ್ಗತಾ ॥ ೩೧ ॥

---

ನೂರು ವರ್ಷದವರಿಗೆ ಹೇಳಿದರೂ ಮುಗಿಯುವುದಿಲ್ಲ. ಆದರೆ ನನ್ನ ಮರಿಗಳೆಲ್ಲವೂ ಆಶ್ರಮದಲ್ಲಿವೆ. ಅವುಗಳನ್ನು ನನ್ನ ಗಂಡನ ಅಥವಾ ತಂಗಿಯ ವಶಕ್ಕೆ ಕೊಟ್ಟು ಬರುತ್ತೇನೆ. ನನ್ನ ಮಾತು ಸುಳ್ಳೆಂದು ನೀನು ತಿಳಿಯಬೇಡ. ಪುನಃ ನಿನ್ನಸಮೀಪಕ್ಕೆ ನಾನು ಬಂದೇ ಬರುವೆನು. ಸಂದೇಹಪಡಬೇಡ ಇದು ಸತ್ಯವು. ಸತ್ಯದಿಂದಲೇ ಭೂಮಿಯೂ, ಸಮುದ್ರವೂ ಸ್ಥಿರವಾಗಿರುವುವು. ಸತ್ಯದಿಂದಲೇ ಕಾಲಕಾಲಕ್ಕೆ ಮಳೆಯಾಗುವುದು. ಸತ್ಯದ ಮಹಿಮೆಯಿಂದಲೇ ಸಮಸ್ತ ಪ್ರಪಂಚವೂ ವ್ಯವಹಾರ ಗೋಚರವಾಗಿರುವುದು ಎಂದಿತು.

೩೦. ಹೀಗೆ ಹೇಳಿದರೂ ಬೇಡನು ಜಿಂಕೆಯ ಮಾತನ್ನು ನಂಬದಿರಲು ಆಗ ಜಿಂಕೆಯು ಆಶ್ಚರ್ಯಪಡುತ್ತ ಭಯದಿಂದ ಮತ್ತೆ ಹೇಳಿತು.

೩೧-೩೪. ಎಲೈ ವ್ಯಾಧನೇ! ಕೇಳು. ನಿನಗೆ ನಂಬಿಕೆಯುಂಟಾಗುವುದಕ್ಕಾಗಿ ನಾನು ಪ್ರತಿಜ್ಞೆಯನ್ನು ಮಾಡುವೆನು. ಮನೆಗೆ ಹೋಗಿ ನಾನು ನಿನ್ನ ಸಮೀಪಕ್ಕೆ

ಬ್ರಾಹ್ಮಣೋ ವೇದವಿಕ್ರೇತಾ ಸಂಧ್ಯಾಹೀನಸ್ತ್ರಿಕಾಲಕಂ ।
ಸ್ತ್ರಿಯಸ್ಸ್ವಸ್ವಾಮಿನೋ ಹ್ಯಾಜ್ಞಾಂ ಸಮುಲ್ಲಂಘ್ಯ ಕ್ರಿಯಾನ್ವಿತಾಃ ॥ ೩೨ ॥

ಕೃತಘ್ನೇ ಚೈವ ಯತ್ಪಾಪಂ ತತ್ಪಾಪಂ ವಿಮುಖೇ ಹರೇ ।
ದ್ರೋಹಿಣಶ್ಚೈವ ಯತ್ಪಾಪಂ ತತ್ಪಾಪಂ ಧರ್ಮಲಂಘನೇ ॥ ೩೩ ॥

ವಿಶ್ವಾಸಘಾತಕೇ ತಚ್ಚ ತಥಾ ವೈ ಛಲಕರ್ತರಿ ।
ತೇನ ಪಾಪೇನ ಲಿಂಪಾಮಿ ಯದ್ಯಹಂ ನಾಗಮೋ ಪುನಃ ॥ ೩೪ ॥

ಇತ್ಯಾದ್ಯನೇಕಶಪಥಾನ್ಮೃಗೀ ಕೃತ್ವಾ ಸ್ಥಿತಾ ಯದಾ ।
ತದಾ ವ್ಯಾಧಸ್ಸ ವಿಶ್ವಸ್ಯ ಗಚ್ಛೇತಿ ಗೃಹಮಬ್ರವೀತ್ ॥ ೩೫ ॥

ಮೃಗೀ ಹೃಷ್ಟಾ ಜಲಂ ಪೀತ್ವಾ ಗತಾ ಸ್ವಾಶ್ರಮಮಂಡಲಂ ।
ತಾವಚ್ಚ ಪ್ರಥಮೋ ಯಾಮಸ್ತಸ್ಯ ನಿದ್ರಾಂ ವಿನಾಂ ಗತಃ ॥ ೩೬ ॥

ತದೀಯಾ ಭಗಿನೀ ಯಾ ವೈ ಮೃಗೀ ಚ ಪರಿಭಾವಿತಾ ।
ತಸ್ಯಾ ಮಾರ್ಗಂ ವಿಚಿನ್ವಂತೀ ಹ್ಯಾಜಗಾಮ ಜಲಾರ್ಥಿನೀ ॥ ೩೭ ॥

---

ಬರದಿದ್ದರೆ, ಬ್ರಾಹ್ಮಣನಾದವನು ವೇದವನ್ನು ವಿಕ್ರಯಮಾಡಿದರೂ, ತ್ರಿಕಾಲದಲ್ಲಿ ಸಂಧ್ಯಾವಂದನೆಯನ್ನು ಮಾಡದಿದ್ದರೂ ಅವನಿಗೆ ಯಾವ ಪಾಪವು ಬರುವುದೋ, ಅಂತಹ ಪಾಪವು ನನಗೆ ಬರಲಿ. ತನ್ನ ಪತಿಯ ಆಜ್ಞೆಯನ್ನು ಮೀರಿ ಕೆಲಸಮಾಡುವ ಹೆಂಗಸಿಗೂ, ಉಪಕಾರಮಾಡಿದವರಿಗೆ ಅಪಕಾರಮಾಡುವ ಕೃತಘ್ನನಿಗೂ, ಮೋಸಗಾರನಿಗೂ, ಧರ್ಮವನ್ನು ಮೀರಿದವನಿಗೂ, ವಿಶ್ವಾಸಘಾತಕನಿಗೂ, ಸುಳ್ಳು ನೆಪಗಳನ್ನು ಹೇಳುವವನಿಗೂ ಯಾವ ಪಾಪವು ಬರುವುದೋ ಅಂತಹ ಪಾಪಗಳು ನನಗೆ ಬರಲಿ ಎಂದಿತು.

೩೫-೩೬. ಹೀಗೆಂದು ಅನೇಕ ಶಪಥಗಳನ್ನು ಮಾಡಿ ಜಿಂಕೆಯು ನಿಂತಿರಲು, ಬೇಡನಿಗೆ ನಂಬಿಕೆಹುಟ್ಟಿ, ಮನೆಗೆ ಹೋಗೆಂದು ಹೇಳಿದನು. ಜಿಂಕೆಯು ಸಂತೋಷದಿಂದ ನೀರನ್ನು ಕುಡಿದು ತನ್ನ ಆಶ್ರಮಕ್ಕೆ ಹೋಯಿತು. ಅಷ್ಟುಹೊತ್ತಿಗೆ ಆ ಬೇಡನಿಗೆ ಮೊದಲನೆಯ ಯಾಮವು ನಿದ್ರೆಯಿಲ್ಲದೆ ಕಳೆದುಹೋಯಿತು.

೩೭-೪೦. ಇತ್ತ ಜಿಂಕೆಯ ಸಹೋದರಿಯು ತನ್ನಕ್ಕನು ಹೋದ ದಾರಿಯನ್ನು ಹಿಡಿದು ತಾನೂ ನೀರಿಗಾಗಿ ಬಂದಿತು. ಅದನ್ನು ನೋಡಿ ಬೇಡನು ಬಿಲ್ಲಿಗೆ

ತಾಂ ದೃಷ್ಟ್ವಾ ಚ ಸ್ವಯಂ ಭಿಲ್ಲೋಽಕಾರ್ಷೀದ್ಬಾಣಸ್ಯ ಕರ್ಷಣಂ ।
ಪೂರ್ವವಜ್ಜಲಪತ್ರಾಣಿ ಪತಿತಾನಿ ಶಿವೋಪರಿ ॥ ೩೮ ॥

ಯಾಮಸ್ಯ ಚ ದ್ವಿತೀಯಸ್ಯ ತೇನ ಶಂಭೋರ್ಮಹಾತ್ಮನಃ ।
ಪೂಜಾ ತಾತಾ ಪ್ರಸಂಗೇನ ವ್ಯಾಧಸ್ಯ ಸುಖದಾಯಿನೀ ॥ ೩೯ ॥

ಮೃಗೀ ಸಾ ಪ್ರಾಹ ತಂ ದೃಷ್ಟ್ವಾ ಕಿಂ ಕರೋಷಿ ವನೇಚರ ।
ಪೂರ್ವವತ್ಕಥಿತಂ ತೇನ ತಚ್ಛ್ರುತ್ವಾಹ ಮೃಗೀ ಪುನಃ ॥ ೪೦ ॥

॥ ಮೃಗ್ಯುವಾಚ ॥

ಧನ್ಯಾಹಂ ಶ್ರೂಯತಾಂ ವ್ಯಾಧ ಸಫಲಂ ದೇಹಧಾರಣಂ ।
ಅನಿತ್ಯೇನ ಶರೀರೇಣ ಹ್ಯುಪಕಾರೋ ಭವಿಷ್ಯತಿ ॥ ೪೧ ॥

ಪರಂತು ಮಮ ಬಾಲಾಶ್ಚ ಗೃಹೇ ತಿಷ್ಠಂತಿ ಚಾರ್ಭಕಾಃ ।
ಭರ್ತ್ರೇ ತಾಂಶ್ಚ ಸಮರ್ಪ್ಯೈವ ಹ್ಯಾಗಮಿಷ್ಯಾಮ್ಯಹಂ ಪುನಃ ॥ ೪೨ ॥

॥ ವ್ಯಾಧ ಉವಾಚ ॥

ತ್ವಯಾ ಚೋಕ್ತಂ ನ ಮನ್ಯೇಽಹಂ ಹನ್ಮಿ ತ್ವಾಂ ನಾತ್ರ ಸಂಶಯಃ ।
ತಚ್ಛ್ರುತ್ವಾ ಹರಿಣೀ ಪ್ರಾಹ ಶಪಥಂ ಕುರ್ವತೀ ಹರೇ ॥ ೪೩ ॥

---

ಬಾಣವನ್ನು ಜೋಡಿಸಿ ಎಳೆದನು. ಹಿಂದಿನಂತೆಯೇ ನೀರೂ, ಪತ್ರೆಯೂ ಶಿವಲಿಂಗದ ಮೇಲೆ ಬಿದ್ದಿತು. ಇದರಿಂದ ಬೇಡನು ಮಹಾಮಹಿಮನಾದ ಶಿವನ ಎರಡನೆಯ ಯಾಮದ ಪೂಜೆಮಾಡಿದಂತೆ ಆಯಿತು. ಆ ಜಿಂಕೆಯು ಅವನನ್ನು ನೋಡಿ, ಎಲೈ ಬೇಡನೇ! ಏನು ಮಾಡುತ್ತೀ ಎಂದು ಕೇಳಿತು. ಅವನು ಹಿಂದಿನಂತೆಯೇ ಉತ್ತರ ವನ್ನು ಹೇಳಿದನು. ಅದನ್ನು ಕೇಳಿ ಜಿಂಕೆಯು,

೪೧–೪೨. ಎಲೈ ಬೇಡನೇ! ಕೇಳು. ನಾನೇ ಕೃತಾರ್ಥಳು. ನನ್ನ ಶರೀರಧಾರಣೆಯು ಸಫಲವಾಯಿತು. ಅನಿತ್ಯವಾದ ಈ ಶರೀರದಿಂದ ಪರೋಪಕಾರ ವಾಗುವುದು. ಆದರೆ ನನ್ನ ಮರಿಗಳು ಮನೆಯಲ್ಲಿವೆ. ಅವನ್ನು ನನ್ನ ಪತಿಯ ವಶಕ್ಕೆ ಒಪ್ಪಿಸಿ ನಾನು ಪುನಃ ಇಲ್ಲಿಗೆ ಬರುವೆನು ಎನ್ನಲು,

೪೩. ಬೇಡನು ಹೇಳಿದನು :—ನೀನು ಹೇಳಿದುದನ್ನು ನಾನು ಒಪ್ಪುವುದಿಲ್ಲ. ನಿನ್ನನ್ನು ನಾನು ಕೊಲ್ಲುವೆನು. ಈ ವಿಷಯದಲ್ಲಿ ಸಂದೇಹವಿಲ್ಲ ಎಂದನು. ಈ ಮಾತನ್ನು ಕೇಳಿ ಜಿಂಕೆಯು ಪ್ರತಿಜ್ಞೆಮಾಡುತ್ತ ಹೇಳಿತು.

॥ ಮೃಗ್ಯುವಾಚ ॥

ಶೃಣು ವ್ಯಾಧ ಪ್ರವಕ್ಷ್ಯಾಮಿ ನಾಗಚ್ಛೇಯಂ ಪುನರ್ಯದಿ ।
ವಾಚಾ ವಿಚಲಿತೋ ಯಸ್ತು ಸುಕೃತಂ ತೇನ ಹಾರಿತಂ ॥ ೪೪ ॥

ಪರಿಣೀತಾಂ ಸ್ತ್ರಿಯಂ ಹಿತ್ವಾ ಗಚ್ಛತ್ಯನ್ಯಾಂ ಚ ಯಃ ಪುಮಾನ್ ।
ವೇದಧರ್ಮಂ ಸಮುಲ್ಲಂಘ್ಯ ಕಲ್ಪಿತೇನ ಚ ಯೋ ವ್ರಜೇತ್ ॥ ೪೫ ॥

ವಿಷ್ಣುಭಕ್ತಿಸಮಾಯುಕ್ತಃ ಶಿವನಿಂದಾಂ ಕರೋತಿ ಯಃ ।
ಪಿತ್ರೋಃ ಕ್ಷಯಾಹಮಾಸಾದ್ಯ ಶೂನ್ಯಂ ಚೈವಾಕ್ರಮೇದಿಹ ॥ ೪೬ ॥

ಕೃತ್ವಾ ಚ ಪರಿತಾಪಂ ಹಿ ಕರೋತಿ ವಚನಂ ಪುನಃ ।
ತೇನ ಪಾಪೇನ ಲಿಂಪಾಮಿ ನಾಗಚ್ಛೇಯಂ ಪುನರ್ಯದಿ ॥ ೪೭ ॥

॥ ಸೂತ ಉವಾಚ ॥

ಇತ್ಯುಕ್ತಶ್ಚ ತಯಾ ವ್ಯಾಧೋ ಗಚ್ಛೇತ್ಯಾಹ ಮೃಗೀಂ ಚ ಸಃ ।
ಸಾ ಮೃಗೀ ಚ ಜಲಂ ಪೀತ್ವಾ ಹೃಷ್ಟಾಽಗಚ್ಛತ್ಸ್ವಮಾಶ್ರಮಂ ॥ ೪೮ ॥

---

೪೪-೪೭. ಎಲೈ ಬೇಡನೇ! ನಾನು ಹೇಳುವುದನ್ನು ಕೇಳು. ನಾನು ಪುನಃ ಬರದಿದ್ದರೆ ಮಾತಿಗೆ ತಪ್ಪಿದವರ ಪಾಪಕ್ಕೂ, ಮದುವೆಯಾದ ಸ್ತ್ರೀಯನ್ನು ಬಿಟ್ಟು, ಮತ್ತೊಬ್ಬಳ ಸಂಗವನ್ನು ಮಾಡಿದವನ ಪಾಪಕ್ಕೂ, ವೇದಧರ್ಮವನ್ನು ಬಿಟ್ಟು ಅನ್ಯಧರ್ಮವನ್ನು ಆಚರಿಸಿದವನ ಪಾಪಕ್ಕೂ, ವಿಷ್ಣುಭಕ್ತನಾಗಿ ಶಿವನಿಂದೆಯನ್ನು ಮಾಡಿದವನ ಪಾಪಕ್ಕೂ, ತಂದೆ, ತಾಯಿಗಳ ಶ್ರಾದ್ಧವನ್ನು ಬಿಟ್ಟವನ ಪಾಪಕ್ಕೂ, ಪರರಿಗೆ ದುಃಖವನ್ನುಂಟುಮಾಡಿದವನ ಪಾಪಕ್ಕೂ ಗುರಿಯಾಗುವೆನು ಎಂದಿತು.

೪೮-೫೦. ಹೀಗೆ ಹೇಳದ ಮಾತನ್ನು ಕೇಳಿ ಬೇಡನು ಆ ಜಿಂಕೆಗೆ ಮನೆಗೆ ಹೋಗೆಂದನು. ಆ ಜಿಂಕೆಯು ನೀರನ್ನು ಕುಡಿದು ಸಂತೋಷದಿಂದ ತನ್ನಾಶ್ರಮಕ್ಕೆ

ತಾವದ್ವಿತೀಯೋ ಯಾಮೋ ವೈ ತಸ್ಯ ನಿದ್ರಾಂ ವಿನಾ ಗತಃ ।
ಏತಸ್ಮಿನ್ಸಮಯೇ ತತ್ರ ಪ್ರಾಪ್ತೇ ಯಾಮೇ ತೃತೀಯಕೇ ॥ ೪೯ ॥

ಜ್ಞಾತ್ವಾ ವಿಲಂಬಂ ಚಕಿತಸ್ತದನ್ವೇಷಣತತ್ಪರಃ ।
ತದ್ಯಾಮೇ ಮೃಗಮುದ್ರಾಕ್ಷೀಜ್ಜಲಮಾರ್ಗಗತಂ ತತಃ ॥ ೫೦ ॥

ಪುಷ್ಟಂ ಮೃಗಂ ಚ ತಂ ದೃಷ್ಟ್ವಾ ಹೃಷ್ಟೋ ವನಚರಸ್ಸ ವೈ ।
ಶರಂ ಧನುಷಿ ಸಂಧಾಯ ಹಂತುಂ ತಂ ಹಿ ಪ್ರಚಕ್ರಮೇ ॥ ೫೧ ॥

ತದ್ವೈವಂ ಕುರ್ವತಸ್ತಸ್ಯ ಬಿಲ್ವಪತ್ರಾಣಿ ಕಾನಿಚಿತ್ ।
ತತ್ಪ್ರಾರಬ್ಧವಶಾದ್ವಿಷ್ಣೋ ಪತಿತಾನಿ ಶಿವೋಪರಿ ॥ ೫೨ ॥

ತೇನ ತೃತೀಯಯಾಮಸ್ಯ ತದ್ರಾತ್ರೌ ತಸ್ಯ ಭಾಗ್ಯತಃ ।
ಪೂಜಾ ಜಾತಾ ಶಿವಸ್ಯೈವ ಕೃಪಾಲುತ್ವಂ ಪ್ರದರ್ಶಿತಂ ॥ ೫೩ ॥

ಶ್ರುತ್ವಾ ತತ್ರ ಚ ತಂ ಶಬ್ದಂ ಕಿಂ ಕರೋಷೀತಿ ಪ್ರಾಹ ಸಃ ।
ಕುಟುಂಬಾರ್ಥಮಹಂ ಹನ್ಮಿ ತ್ವಾಂ ವ್ಯಾಧಶ್ಚೇತಿ ಸೋಽಬ್ರವೀತ್ ॥ ೫೪ ॥

---

ಹೋಯಿತು. ಅಷ್ಟುಹೊತ್ತಿಗೆ ಬೇಡನಿಗೆ ನಿದ್ರೆಯಿಲ್ಲದೆ ಎರಡನೆಯ ಯಾಮವು ಕಳೆಯಿತು. ಮೂರನೆಯ ಯಾಮವು ಬರುತ್ತಲು ಜಿಂಕೆಗಳು ಬರುವುದು ಸಾವಕಾಶವಾದುದನ್ನು ತಿಳಿದು ಬೇಡನು ಆಶ್ಚರ್ಯದಿಂದ ಅವುಗಳನ್ನು ಹುಡುಕುವುದರಲ್ಲಿ ಆಸಕ್ತನಾಗಿರಲು ಅಷ್ಟುಹೊತ್ತಿಗೆ ಆ ಯಾಮದಲ್ಲಿ ನೀರುಕುಡಿಯಲು ಒಂದು ಗಂಡು ಜಿಂಕೆಯು ಬಂದಿತು.

೫೧-೫೫. ಚನ್ನಾಗಿ ಕೊಬ್ಬಿದ ಆ ಜಿಂಕೆಯನ್ನು ಕಂಡು ಆ ಬೇಡನು ಸಂತೋಷದಿಂದ ಅದನ್ನು ಕೊಲ್ಲಲು ಯತ್ನಮಾಡಿದನು. ಎಲೈ ವಿಷ್ಣುವೇ! ಅವನ ಪ್ರಾರಬ್ಧಕರ್ಮಫಲದಿಂದ ಕೆಲವು ಬಿಲ್ವಪತ್ರೆಗಳು ಅವನ ಬಾಣಕ್ಕೆ ತಗುಲಿ ಮರದಿಂದ ಕೆಳಗೆ ಶಿವಲಿಂಗದಮೇಲೆ ಬಿದ್ದವು. ಈ ಕಾರಣದಿಂದ ಅವನ ಪುಣ್ಯದಿಂದ ಮೂರನೆಯ ಯಾಮದ ಪೂಜೆಯು ಆದಂತಾಯಿತು. ಆಗ ನಾನು ನನ್ನ ದಯೆಯ ಪ್ರಭಾವವನ್ನು ತೋರಿಸಿದೆನು. ಆ ಶಬ್ದವನ್ನು ಕೇಳಿ ಜಿಂಕೆಯು ಏನು ಮಾಡುತ್ತಿರುವೆಯೆಂದು ಬೇಡನನ್ನು ಕೇಳಿತು. ನನ್ನ ಕುಟುಂಬದ ಆಹಾರಕ್ಕಾಗಿ ನಿನ್ನನ್ನು

ತಚ್ಛ್ರುತ್ವಾ ವ್ಯಾಧವಚನಂ ಹರಿಣೋ ಹೃಷ್ಟಮಾನಸಃ ।
ದ್ರುತಮೇವ ಚ ತಂ ವ್ಯಾಧಂ ವಚನಂ ಚೇದಮಬ್ರವೀತ್ ॥ ೫೫ ॥

॥ ಹರಿಣ ಉವಾಚ ॥

ಧನ್ಯೋಽಹಂ ಪುಷ್ಟಿಮಾನದ್ಯ ಭವತ್ತೃಪ್ತಿರ್ಭವಿಷ್ಯತಿ ।
ಯಸ್ಯಾಂಗಂ ನೋಪಕಾರಾರ್ಥಂ ತಸ್ಯ ಸರ್ವಂ ವೃಥಾ ಗತಂ ॥ ೫೬ ॥

ಯೋ ವೈ ಸಾಮರ್ಥ್ಯಯುಕ್ತಶ್ಚ ನೋಪಕಾರಂ ಕರೋತಿ ವೈ ।
ತತ್ಸಾಮರ್ಥ್ಯಂ ಭವೇದ್ವ್ಯರ್ಥಂ ಪರತ್ರ ನರಕಂ ವ್ರಜೇತ್ ॥ ೫೭ ॥

ಪರಂತು ಬಾಲಕಾನ್ಸ್ವಾಂಶ್ಚ ಸಮರ್ಪ್ಯ ಜನನೀಂ ಶಿಶೂನ್ ।
ಆಶ್ವಾಸ್ಯಾಪ್ಯಥ ತಾನ್ಸರ್ವಾನಾಗಮಿಷ್ಯಾಮ್ಯಹಂ ಪುನಃ ॥ ೫೮ ॥

ಇತ್ಯುಕ್ತಸ್ತೇನ ಸ ವ್ಯಾಧೋ ವಿಸ್ಮಿತೋಽತೀವ ಚೇತಸೆ ।
ಮನಾಕ್ಶುದ್ಧಮನಾ ನಷ್ಟಪಾಪಪುಂಜೋ ವಚೋಽಬ್ರವೀತ್ ॥ ೫೯ ॥

---

ಕೊಲ್ಲುವೆನೆಂದು ಉತ್ತರವನ್ನು ಹೇಳಿದನು. ಆ ಬೇಡನ ಮಾತನ್ನು ಕೇಳಿ ಜಿಂಕೆಯು ಸಂತೋಷದಿಂದ ಆ ಬೇಡನನ್ನು ಕುರಿತು,

೫೬-೫೯. ಜಿಂಕೆಯು ಹೇಳಿತು :—ಕೊಬ್ಬಿದ ಮೈಯುಳ್ಳ ನಾನೇ ಪುಣ್ಯವಂತನು. ಏಕಂದರೆ ಈ ಶರೀರದಿಂದ ನಿನಗೆ ತೃಪ್ತಿಯುಂಟಾಗುವುದು. ಯಾರ ಶರೀರವು ಪರೋಪಕಾರಕ್ಕೆ ಉಪಯೋಗವಾಗುವುದಿಲ್ಲವೋ, ಅದು ವ್ಯರ್ಥವಾದುದೇ ಆಗುವುದು. ಉಪಕಾರಮಾಡಲು ಶಕ್ತನಾಗಿದ್ದರೂ ಉಪಕಾರವನ್ನು ಮಾಡದಿದ್ದರೆ, ಅವನ ಶಕ್ತಿಯು ವ್ಯರ್ಥವಾಗಿ ಅವನಿಗೆ ಪರಲೋಕದಲ್ಲಿ ನರಕಪ್ರಾಪ್ತಿಯಾಗುವುದು. ಆದರೆ ನನ್ನ ಮರಿಗಳನ್ನು ತಾಯಿಗೆ ಒಪ್ಪಿಸಿ ಅವುಗಳನ್ನು ಸಮಾಧಾನಪಡಿಸಿ ಮತ್ತೆ ಬರುವೆನು ಎಂದು ಜಿಂಕೆಯು ಹೇಳುತ್ತಲು ಆ ಬೇಡನು ಮನಸ್ಸಿನಲ್ಲಿ ಆಶ್ಚರ್ಯಪಡುತ್ತ ಅವನ ಪಾಪಗಳ ಸಮೂಹವೆಲ್ಲ ನಾಶವಾಗುತ್ತಲು ಶುದ್ಧಮನಸ್ಸಿನಿಂದ ಇಂತೆಂದನು.

॥ ವ್ಯಾಧ ಉವಾಚ ॥

ಯೇ ಯೇ ಸಮಾಗತಾಶ್ಚಾತ್ರ ತೇ ತೇ ಸರ್ವೇ ತ್ವಯಾ ಯಥಾ ।
ಕಥಯಿತ್ವಾ ಗತಾ ಹ್ಯತ್ರ ನಾಯಾಂತ್ಯದ್ಯಾಪಿ ವಂಚಕಾಃ ॥ ೬೦ ॥

ತಂ ಚಾಪಿ ಸಂಕಟೇ ಪ್ರಾಪ್ತೋ ವ್ಯಲೀಕಂ ಚ ಗಮಿಷ್ಯಸಿ ।
ಮಮ ಸಂಜೀವನಂ ಚಾದ್ಯ ಭವಿಷ್ಯತಿ ಕಥಂ ಮೃಗ ॥ ೬೧ ॥

॥ ಮೃಗ ಉವಾಚ ॥

ಶೃಣು ವ್ಯಾಧ ಪ್ರವಕ್ಷ್ಯಾಮಿ ನಾನೃತಂ ವಿದ್ಯತೇ ಮಯಿ ।
ಸತ್ಯೇನ ಸರ್ವಂ ಬ್ರಹ್ಮಾಂಡಂ ತಿಷ್ಠತ್ಯೇವ ಚರಾಚರಂ ॥ ೬೨ ॥

ಯಸ್ಯ ವಾಣೀ ವ್ಯಲೀಕಾ ಹಿ ತತ್ಪುಣ್ಯಂ ಗಲಿತಂ ಕ್ಷಣಾತ್ ।
ತಥಾಪಿ ಶೃಣು ವೈ ಸತ್ಯಾಂ ಪ್ರತಿಜ್ಞಾಂ ಮಮ ಭಿಲ್ಲಕ ॥ ೬೩ ॥

ಸಂಧ್ಯಾಯಾಂ ಮೈಥುನೇ ಘಸ್ರೇ ಶಿವರಾತ್ರ್ಯಾಂ ಚ ಭೋಜನೇ ।
ಕೂಟಸಾಕ್ಷ್ಯೇ ನ್ಯಾಸಹಾರೇ ಸಂಧ್ಯಾಹೀನೇ ದ್ವಿಜೇ ತಥಾ ॥ ೬೪ ॥

---

೬೦-೬೧. ಇಲ್ಲಿಗೆ ಬಂದ ಮೃಗಗಳೆಲ್ಲ ಮೋಸಮಾಡಿ ನಿನ್ನ ಹಾಗೆ ಹೇಳಿ ಹೋದುವು. ಇನ್ನೂ ಬರಲಿಲ್ಲ. ನೀನೂ ಈ ದುಃಖಕಾಲದಲ್ಲಿ ಸುಳ್ಳನ್ನು ಹೇಳಿ ಹೋಗುವೆ, ಎಲೈ ಮೃಗವೇ! ನನ್ನ ಜೀವನವು ಈ ದಿವಸ ಹೇಗೆ ಆಗಬೇಕು? ಎನ್ನಲು,

೬೨-೬೬. ಮೃಗವು ಹೇಳಿತು:—ಎಲೈ ಬೇಡನೇ! ಕೇಳು. ನಾನು ಸುಳ್ಳನ್ನು ಹೇಳುವುದಿಲ್ಲ. ಸತ್ಯದಿಂದಲೇ ಬ್ರಹ್ಮಾಂಡವಿರುವುದು. ಯಾರು ಸುಳ್ಳನ್ನಾಡುವರೋ, ಅವರ ಪುಣ್ಯವು ಒಂದು ಕ್ಷಣದಲ್ಲಿ ನಾಶವಾಗುವುದು. ಹಾಗಾದರೂ ನಾನು ಸತ್ಯಪ್ರತಿಜ್ಞೆಯನ್ನು ಮಾಡುವೆನು, ಕೇಳು. ಸಂಧ್ಯಾಕಾಲದಲ್ಲಿಯೂ, ಹಗಲಿನಲ್ಲಿಯೂ ಸ್ತ್ರೀಸಂಗವನ್ನು ಮಾಡುವವರಿಗೂ, ಶಿವರಾತ್ರಿಯದಿನ ಭೋಜನ ಮಾಡುವವರಿಗೂ, ಸುಳ್ಳು ಸಾಕ್ಷಿಯನ್ನು ಹೇಳುವವರಿಗೂ, ತಮ್ಮಲ್ಲಿಟ್ಟ ಪದಾರ್ಥವನ್ನು ಅಪಹರಿಸುವವರಿಗೂ, ಸಂಧ್ಯಾವಂದನೆಯನ್ನು ಮಾಡದ ದ್ವಿಜನಿಗೂ, ಅಮಂಗಳವಾದ ಮುಖವುಳ್ಳವನಿಗೂ, ಶಕ್ತಿಯಿದ್ದರೂ ಉಪಕಾರಮಾಡದವನಿಗೂ, ಪರ್ವಕಾಲಗಳಲ್ಲಿ

ಶಿವಹೀನಂ ಮುಖಂ ಯಸ್ಯ ನೋಪಕರ್ತಾ ಕ್ಷಮೋಽಪಿ ಸನ್ ।
ಪರ್ವಣಿ ಶ್ರೀಫಲಸ್ಯೈವ ತ್ರೋಟನೇಽಭಕ್ಷ್ಯಭಕ್ಷಣೇ ॥ ೬೫ ॥

ಅಸಂಪೂಜ್ಯ ಶಿವಂ ಭಸ್ಮರಹಿತಶ್ಚಾನ್ನಭುಕ್ಚ ಯಃ ।
ಏತೇಷಾಂ ಪಾತಕಂ ಮೇ ಸ್ಯಾನ್ನಾಗಚ್ಛೇಯಂ ಪುನರ್ಯದಿ ॥ ೬೬ ॥

॥ ಶಿವ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಗಚ್ಛ ಶೀಘ್ರಂ ಸಮಾವ್ರಜ ।
ಸ ವ್ಯಾಧೇನೈವಮುಕ್ತಸ್ತು ಜಲಂ ಪೀತ್ವಾ ಗತೋ ಮೃಗಃ ॥ ೬೭ ॥

ತೇ ಸರ್ವೇ ಮಿಲಿತಾಸ್ತತ್ರ ಸ್ವಾಶ್ರಮೇ ಕೃತಸುಪ್ರಣಾಃ ।
ವೃತ್ತಾಂತಂ ಚೈವ ತಂ ಸರ್ವಂ ಶ್ರುತ್ವಾ ಸಮ್ಯಕ್ಪರಸ್ಪರಂ ॥ ೬೮ ॥

ಗಂತವ್ಯಂ ನಿಶ್ಚಯೇನೇತಿ ಸತ್ಯಪಾಶೇನ ಯಂತ್ರಿತಾಃ ।
ಆಶ್ವಾಸ್ಯ ಬಾಲಕಾಂಸ್ತತ್ರ ಗಂತುಮುತ್ಕಂಠಿತಾಸ್ತದಾ ॥ ೬೯ ॥

ಮೃಗೀ ಜ್ಯೇಷ್ಠಾ ಚ ಯಾ ತತ್ರ ಸ್ವಾಮಿನಂ ವಾಕ್ಯಮಬ್ರವೀತ್ ।
ತ್ವಾಂ ವಿನಾ ಬಾಲಕಾ ಹ್ಯತ್ರ ಕಥಂ ಸ್ಥಾಸ್ಯಂತಿ ವೈ ಮೃಗ ॥ ೭೦ ॥

---

ಬಿಲ್ವಪತ್ರೆಯ ಹಣ್ಣನ್ನು ಕೊಯ್ಯುವವನಿಗೂ, ಅಭಕ್ಷ್ಯವನ್ನು ಭಕ್ಷಿಸುವವನಿಗೂ, ಶಿವಪೂಜೆಯನ್ನು ಮಾಡದೆಯೂ ಭಸ್ಮವನ್ನು ಧರಿಸದೆಯೂ ಊಟಮಾಡುವವನಿಗೂ, ಯಾವ ಪಾಪವು ಬರುವುದೋ ಅಂತಹ ಪಾಪವು ನಾನು ಪುನಃ ಬರದಿದ್ದರೆ ನನಗೆ ಬರಲಿ ಎಂದಿತು.

೬೭-೭೧. ಮೃಗವು ಹೀಗೆ ಹೇಳಲು ಆ ಮಾತನ್ನು ಕೇಳಿ ಬೇಡನು, ಒಳ್ಳೆದು, ಹೋಗಿ ಬೇಗ ಬಾ ಎಂದನು. ಆ ಜಿಂಕೆಯು ನೀರನ್ನು ಕುಡಿದು ಹೊರಟು ಹೋಯಿತು. ಆ ಮೃಗಗಳೆಲ್ಲವೂ ಆಶ್ರಮದಲ್ಲಿ ಒಟ್ಟಿಗೆ ಸೇರಿ ತಂತಮ್ಮ ವೃತ್ತಾಂತಗಳನ್ನು ಹೇಳಿಕೊಂಡು ಸತ್ಯಕ್ಕೆ ಕಟ್ಟುಬಿದ್ದು ತಾವೆಲ್ಲರೂ ಬೇಡನ ಸಮೀಪಕ್ಕೆ ಹೋಗಬೇಕೆಂದು ನಿಶ್ಚಯಿಸಿ ಮರಿಗಳನ್ನು ಸಮಾಧಾನಪಡಿಸಿ ಹೊರಡಲು, ಸಿದ್ಧವಾದವು. ಮೊದಲು ಬಂದಿದ್ದ ಹೆಣ್ಣು ಜಿಂಕೆಯು ಗಂಡು ಜಿಂಕೆಯನ್ನು ಕುರಿತು–

ಪ್ರಥಮಂ ತು ಮಯಾ ತತ್ರ ಪ್ರತಿಜ್ಞಾ ಚ ಕೃತಾ ಪ್ರಭೋ ।
ತಸ್ಮಾನ್ಮಯಾ ಚ ಗಂತವ್ಯಂ ಭವದ್ಭ್ಯಾಂ ಸ್ಥೀಯತಾಮಿಹ ॥ ೭೧ ॥

ಇತಿ ತದ್ವಚನಂ ಶ್ರುತ್ವಾ ಕನಿಷ್ಠಾ ವಾಕ್ಯಮಬ್ರವೀತ್ ।
ಅಹಂ ತ್ವತ್ಸೇವಿಕಾ ಚಾದ್ಯ ಗಚ್ಛಾಮಿ ಸ್ಥೀಯತಾಂ ತ್ವಯಾ ॥ ೭೨ ॥

ತಚ್ಛ್ರುತ್ವಾ ಚ ಮೃಗಃ ಪ್ರಾಹ ಗಮ್ಯತೇ ತತ್ರ ವೈ ಮಯಾ ।
ಭವತ್ಯೌ ತಿಷ್ಠತಾಂ ಚಾತ್ರ ಮಾತೃತಃ ಶಿಶುರಕ್ಷಣಂ ॥ ೭೩ ॥

ತತ್ಸ್ವಾಮಿವಚನಂ ಶ್ರುತ್ವಾ ನೋನಾತೇ ತನ್ನ ಧರ್ಮತಃ ।
ಪ್ರೋಚುಃ ಪ್ರೀತ್ಯಾ ಸ್ವಭರ್ತಾರಂ ವೈಧವ್ಯೇ ಜೀವಿತಂ ಚ ಧಿಕ್ ॥ ೭೪ ॥

ಬಾಲಾನಾಶ್ವಾಸ್ಯ ತಾಂಸ್ತತ್ರ ಸಮರ್ಪ್ಯ ಸಹವಾಸಿನಃ ।
ಗತಾಸ್ತೇ ಸರ್ವ ಏವಾಶು ಯತ್ರಾಸ್ತೇ ವ್ಯಾಧಸತ್ತಮಃ ॥ ೭೫ ॥

ತೇ ಬಾಲಾ ಅಪಿ ಸರ್ವೇ ವೈ ವಿಲೋಕ್ಯಾನುಸಮಾಗತಾಃ ।
ಏತೇಷಾಂ ಯಾ ಗತಿಃ ಸ್ಯಾದ್ವೈ ಹ್ಯಸ್ಮಾಕಂ ಸಾ ಭವತ್ವಿತಿ ॥ ೭೬ ॥

---

ನೀನಿಲ್ಲದೆ ಈ ಮರಿಗಳು ಜೀವಿಸಲಾರವು. ನಾನು ಮೊದಲು ಪ್ರತಿಜ್ಞೆಯನ್ನು ಮಾಡಿರುವುದರಿಂದ ನಾನು ಹೋಗುತ್ತೇನೆ. ನೀವಿಬ್ಬರೂ ಇಲ್ಲಿಯೇ ಇರಬೇಕು ಎಂದಿತು.

೭೨-೭೫. ಈ ಮಾತನ್ನು ಕೇಳಿ ಎರಡನೆಯ ಹೆಣ್ಣು ಜಿಂಕೆಯು,—ನಾನು ನಿಮ್ಮ ಸೇವಕಿಯಾದುದರಿಂದ ನಾನೇ ಹೋಗುವೆನು ನೀನು ಇಲ್ಲಿಯೇ ಇರು, ಎಂದಿತು. ಈ ಮಾತನ್ನು ಕೇಳಿ ಗಂಡು ಜಿಂಕೆಯು ನಾನೇ ಅಲ್ಲಿಗೆ ಹೋಗುವೆನು. ನೀವಿಬ್ಬರೂ ಇಲ್ಲಿಯೇ ಇರಿ. ತಾಯಿಯರೇ ಮಕ್ಕಳನ್ನು ಕಾಪಾಡಬೇಕು ಎನ್ನಲು, ಆ ಮಾತು ಧರ್ಮವಿರುದ್ಧವಾದುದೆಂದು, ಇಬ್ಬರೂ ಒಪ್ಪದೆ ವೈಧವ್ಯ ದುಃಖವನ್ನು ಸಹಿಸಲಾರದೆ, ಮರಿಗಳನ್ನು ಸಮಾಧಾನಪಡಿಸಿ, ತಮ್ಮ ಜತೆಯ ಜಿಂಕೆಗಳಿಗೊಪ್ಪಿಸಿ ಮೂರು ಜಿಂಕೆಗಳೂ ಬೇಡನಿದ್ದಲ್ಲಿಗೆ ಹೋದುವು.

೭೬-೭೯. ಇದನ್ನು ನೋಡಿ ಮರಿಗಳೆಲ್ಲವೂ ಇವರ ಗತಿಯೇ ನಮಗೂ ಆಗಲಿ, ಎಂದು ಅವುಗಳ ಹಿಂದೆಯೇ ಬಂದವು. ಇವುಗಳನ್ನೆಲ್ಲಾ ನೋಡಿ ಬೇಡನು ಸಂತೋಷಪಟ್ಟು ಬಾಣವನ್ನು ಬಿಲ್ಲಿಗೆ ಜೋಡಿಸಿದನು. ಮತ್ತೆ ನೀರು, ಬಿಲ್ವಪತ್ರೆ

ತಾನ್ದೃಷ್ಟ್ವಾ ಹರ್ಷಿತೋ ವ್ಯಾಧೋ ಬಾಣಂ ಧನುಷಿ ಸಂದಧೇ ।
ಪುನಶ್ಚ ಜಲಪತ್ರಾಣಿ ಪತಿತಾನಿ ಶಿವೋಪರಿ ॥ ೭೭ ॥

ತೇನ ಜಾತಾ ಚತುರ್ಥ್ಯಸ್ಯ ಪೂಜಾ ಯಾಮಸ್ಯ ವೈ ಶುಭಾ ।
ತಸ್ಯ ಪಾಪಂ ತದಾ ಸರ್ವಂ ಭಸ್ಮಸಾದಭವತ್ಕ್ಷಣಾತ್ ॥ ೭೮ ॥

ಮೃಗೀ ಮೃಗೀ ಮೃಗಶ್ಚೋಚುಶ್ಚೇಷ್ಟಂ ವೈ ವ್ಯಾಧಸತ್ತಮ ।
ಅಸ್ಮಾಕಂ ಸಾರ್ಥಕಂ ದೇಹಂ ಕುರು ತ್ವಂ ಹಿ ಕೃಪಾಂ ಕುರು ॥ ೭೯ ॥

॥ ಶಿವ ಉವಾಚ ॥

ಇತಿ ತೇಷಾಂ ವಚಶ್ಶ್ರುತ್ವಾ ವ್ಯಾಧೋ ವಿಸ್ಮಯಮಾಗತಃ ।
ಶಿವಪೂಜಾಪ್ರಭಾವೇಣ ಜ್ಞಾನಂ ದುರ್ಲಭಮಾಪ್ತವಾನ್ ॥ ೮೦ ॥

ಏತೇ ಧನ್ಯಾ ಮೃಗಾಶ್ಚೈವ ಜ್ಞಾನಹೀನಾಸ್ಸುಸಂಮತಾಃ ।
ಸ್ವೀಯೇನೈವ ಶರೀರೇಣ ಪರೋಪಕರಣೇ ರತಾಃ ॥ ೮೧ ॥

ಮಾನುಷ್ಯಂ ಜನ್ಮ ಸಂಪ್ರಾಪ್ಯ ಸಾಧಿತಂ ಕಿಂ ಮಯಾಧುನಾ ।
ಪರಕಾಯಂ ಚ ಸಂಪೀಡ್ಯ ಶರೀರಂ ಪೋಷಿತಂ ಮಯಾ ॥ ೮೨ ॥

---

ಗಳು ಶಿವಲಿಂಗದಮೇಲೆ ಬಿದ್ದವು. ಅದರಿಂದ ಶುಭಕರವಾದ ನಾಲ್ಕನೆಯ ಯಾಮದ ಪೂಜೆಯು ಆಯಿತು. ಅವನ ಪಾಪಗಳೆಲ್ಲವೂ ಆ ಕ್ಷಣದಲ್ಲಿಯೇ ಭಸ್ಮವಾದವು. ಆ ಮೂರು ಜಿಂಕೆಗಳೂ ಬೇಡನನ್ನು ಕುರಿತು—ಎಲೈ ಬೇಡನೇ! ನೀನು ದಯವಿಟ್ಟು ನಮ್ಮನ್ನು ಕೊಂದು ನಮ್ಮ ಮಾಂಸವನ್ನು ನಿನ್ನ ಮಕ್ಕಳು ಮರಿಗಳಿಗೆ ಕೊಟ್ಟು ಅವರನ್ನು ತೃಪ್ತಿಪಡಿಸು. ಅದರಿಂದ ನಮ್ಮ ಶರೀರವು ಸಾರ್ಥಕವಾಗುವುದು ಎಂದವು.

೮೦-೮೫. ಬೇಡನು ಅವುಗಳ ಮಾತನ್ನು ಕೇಳಿ, ಆಶ್ಚರ್ಯಪಟ್ಟನು. ಶಿವ ಪೂಜಾ ಮಹಿಮೆಯಿಂದ ಅವನಿಗೆ ದುರ್ಲಭವಾದ ಜ್ಞಾನೋದಯವಾಯಿತು. ಈ ಜ್ಞಾನವಿಲ್ಲದ ಮೃಗಗಳೇ ಕೃತಾರ್ಥವಾದುವುಗಳು. ತಮ್ಮ ಶರೀರದಿಂದಲೇ ಪರೋಪಕಾರ ಮಾಡುವುದರಲ್ಲಿ ಆಸಕ್ತವಾಗಿವೆ. ಮನುಷ್ಯಜನ್ಮವನ್ನು ಪಡೆದು ನಾನು ಏನು ಸಾಧಿಸಿದೆನು? ಇತರರ ಶರೀರವನ್ನು ಹಿಂಸಿಸಿ ನನ್ನ ಶರೀರವನ್ನು ಬೆಳೆಸಿದೆನು. ಪ್ರತಿದಿನವೂ ಅನೇಕ ಪಾಪಗಳನ್ನು ಮಾಡಿ ಹೆಂಡತಿ ಮಕ್ಕಳನ್ನು ಪೋಷಿಸಿದೆನು.

ಕುಟುಂಬಂ ಪೋಷಿತಂ ನಿತ್ಯಂ ಕೃತ್ವಾ ಪಾಪಾನ್ಯನೇಕಶಃ ।
ಏವಂ ಪಾಪಾನಿ ಹಾ ಕೃತ್ವಾ ಕಾ ಗತಿರ್ಮೇ ಭವಿಷ್ಯತಿ ॥ ೮೩ ॥

ಕಾಂ ವಾ ಗತಿಂ ಗಮಿಷ್ಯಾಮಿ ಪಾತಕಂ ಜನ್ಮತಃ ಕೃತಂ ।
ಇದಾನೀಂ ಚಿಂತಯಾಮ್ಯೇವಂ ಧಿಗ್ಧಿಕ್ಚ ಜೀವನಂ ಮಮ ॥ ೮೪ ॥

ಇತಿ ಜ್ಞಾನಂ ಸಮಾಪನ್ನೋ ಬಾಣಂ ಸಂವಾರಯಂಸ್ತದಾ ।
ಗಮ್ಯತಾಂ ಚ ಮೃಗಶ್ರೇಷ್ಠಾ ಧನ್ಯಾಃ ಸ್ಥ ಇತಿ ಚಾಬ್ರವೀತ್ ॥ ೮೫ ॥

॥ ಶಿವ ಉವಾಚ ॥

ಇತ್ಯುಕ್ತೇ ಚ ತದಾ ತೇನ ಪ್ರಸನ್ನಶ್ಶಂಕರಸ್ತದಾ ।
ಪೂಜಿತಂ ಚ ಸ್ವರೂಪಂ ಹಿ ದರ್ಶಯಾಮಾಸ ಸಂಮತಂ ॥ ೮೬ ॥

ಸಂಸ್ಪೃಶ್ಯ ಕೃಪಯಾ ಶಂಭುಸ್ತಂ ವ್ಯಾಧಂ ಪ್ರೀತಿತೋಽಬ್ರವೀತ್ ।
ವರಂ ಬ್ರೂಹಿ ಪ್ರಸನ್ನೋಽಸ್ಮಿ ವ್ರತೇನಾನೇನ ಭಿಲ್ಲಕ ॥ ೮೭ ॥

ವ್ಯಾಧೋಽಪಿ ಶಿವರೂಪಂ ಚ ದೃಷ್ಟ್ವಾ ಮುಕ್ತೋಽಭವತ್ಕ್ಷಣಾತ್ ।
ಪಪಾತ ಶಿವಪಾದಾಗ್ರೇ ಸರ್ವಂ ಪ್ರಾಪ್ತಮಿತಿ ಬ್ರುವನ್ ॥ ೮೮ ॥

---

ಇಷ್ಟು ಪಾಪಗಳನ್ನು ಮಾಡಿದ ನನಗೆ ಏನು ಗತಿಯಾಗುವುದೋ ? ಹುಟ್ಟಿದಂದಿನಿಂದ ಪಾಪವನ್ನೇ ಮಾಡಿದೆನು. ಈಗ ಚಿಂತಿಸುತ್ತೇನೆ. ನನ್ನ ಬದುಕನ್ನು ನಿಂದಿಸಬೇಕು. ಹೀಗೆಂದು ಯೋಚಿಸಿ ಜ್ಞಾನವನ್ನು ಪಡೆದು ಬಾಣವನ್ನು ಧನುಸ್ಸಿನಿಂದ ಇಳಿಸಿ, ಎಲೈ ಮೃಗಗಳೇ, ನೀವೇ ಕೃತಾರ್ಥರು. ನಿಮ್ಮನ್ನು ನಾನು ಕೊಲ್ಲುವುದಿಲ್ಲ. ನೀವು ಹೋಗಬಹುದು ಎಂದನು.

೮೬–೮೯. ಬೇಡನು ಹೀಗೆ ಹೇಳುತ್ತಲು ಶಿವನು ಪೂಜಾಯೋಗ್ಯವಾದ ತನ್ನ ನಿಜರೂಪದಿಂದ ಅವನಿಗೆ ಗೋಚರಿಸಿದನು. ಆ ಬೇಡನನ್ನು ಕೈಯ್ಯಿನಿಂದ ಮುಟ್ಟಿ, ಪ್ರೀತಿಯಿಂದ ಎಲೈ ಬೇಡನೆ, ನೀನು ಮಾಡಿದ ವ್ರತದಿಂದ ನಾನು ಪ್ರಸನ್ನನಾದೆನು. ವರವನ್ನು ಕೇಳು ಕೊಡುವೆನು ಎಂದನು. ಆ ಬೇಡನು ಶಿವನನ್ನು ದರ್ಶನಮಾಡಿದ ಕ್ಷಣದಲ್ಲಿಯೇ ಮುಕ್ತನಾದನು. ಅವನು ಶಿವನ ಪಾದದಮೇಲೆ ಬಿದ್ದು ನಿನ್ನ ದರ್ಶನ

ಶಿವೋऽಪಿ ಸುಪ್ರಸನ್ನಾತ್ಮಾ ನಾಮ ದತ್ವಾ ಗುಹೇತಿ ಚ ।
ವಿಲೋಕ್ಯ ತಂ ಕೃಪಾದೃಷ್ಟ್ಯಾ ತಸ್ಮೈ ದಿವ್ಯಾನ್ವರಾನದಾತ್ ॥ ೪೯ ॥

॥ ಶಿವ ಉವಾಚ ॥

ಶೃಣು ವ್ಯಾಧಾದ್ಯ ಭೋಗಾಂಸ್ತ್ವಂ ಭುಂಕ್ಷ್ವ ದಿವ್ಯಾನ್ಯಥೇಪ್ಸಿತಾನ್ ।
ರಾಜಧಾನೀಂ ಸಮಾಶ್ರಿತ್ಯ ಶೃಂಗವೇರಪುರೇ ಪರಾಂ ॥ ೯೦ ॥

ಅನಪಾಯಾ ವಂಶವೃದ್ಧಿಶ್ಲಾಘನೀಯಃ ಸುರೈರಪಿ ।
ಗೃಹೇ ರಾಮಸ್ತವ ವ್ಯಾಧ ಸಮಾಯಾಸ್ಯತಿ ನಿಶ್ಚಿತಂ ॥ ೯೧ ॥

ಕರಿಷ್ಯತಿ ತ್ವಯಾ ಮೈತ್ರೀಂ ಮದ್ಭಕ್ತಸ್ನೇಹಕಾರಕಃ ।
ಮತ್ಸೇವಾಸಕ್ತಚೇತಾಸ್ತ್ವಂ ಮುಕ್ತಿಂ ಯಾಸ್ಯಸಿ ದುರ್ಲಭಾಂ ॥ ೯೨ ॥

ಏತಸ್ಮಿನ್ನಂತರೇ ತೇ ತು ಕೃತ್ವಾ ಶಂಕರದರ್ಶನಂ ।
ಸರ್ವೇ ಪ್ರಣಮ್ಯ ಸನ್ಮುಕ್ತಿಂ ಮೃಗಯೋನೇಃ ಪ್ರಪೇದಿರೇ ॥ ೯೩ ॥

ವಿಮಾನಂ ಚ ಸಮಾರುಹ್ಯ ದಿವ್ಯದೇಹಾ ಗತಾಸ್ತದಾ ।
ಶಿವದರ್ಶನಮಾತ್ರೇಣ ಶಾಪಾನ್ಮುಕ್ತಾ ದಿವಂ ಗತಾಃ ॥ ೯೪ ॥

---

ದಿಂದ ನನಗೆ ಎಲ್ಲವೂ ಪ್ರಾಪ್ತವಾಯಿತೆಂದು ಹೇಳಿದನು. ಶಿವನೂ ಸಂತೋಷದಿಂದ ಅವನಿಗೆ ಗುಹನೆಂದು ಹೆಸರನ್ನು ಕೊಟ್ಟು ದಯಾದೃಷ್ಟಿಯಿಂದ ನೋಡಿ ಅವನಿಗೆ ದಿವ್ಯವಾದ ವರಗಳನ್ನು ಕೊಟ್ಟನು.

೯೦-೯೨. ಶಿವನು ಹೇಳಿದನು :—ಎಲೈ ಬೇಡನೇ! ಕೇಳು. ಶೃಂಗಿಬೇರ ಪುರವೆಂಬ ಉತ್ತಮವಾದ ರಾಜಧಾನಿಯನ್ನು ಪಡೆದು ಅಲ್ಲಿ ನಿನಗಿಷ್ಟವಾದ ದಿವ್ಯ ಭೋಗಗಳನ್ನು ಅನುಭವಿಸು. ನಿನ್ನ ವಂಶವು ವೃದ್ಧಿಯಾಗಲಿ. ದೇವತೆಗಳೂ ನಿನ್ನನ್ನು ಹೊಗಳುವರು. ನನ್ನ ಭಕ್ತನಾದ ಶ್ರೀರಾಮನು ನಿನ್ನ ಮನೆಗೆ ಬಂದು ನಿನ್ನೊಡನೆ ಸ್ನೇಹವನ್ನು ಮಾಡುವನು. ನನ್ನ ಸೇವೆಯನ್ನು ಮಾಡುತ್ತಾ ನೀನು ದುರ್ಲಭವಾದ ಮುಕ್ತಿಯನ್ನು ಹೊಂದುವೆ ಎಂದು ಅನುಗ್ರಹಿಸಿದನು.

೯೩-೯೪. ಈ ಸಮಯದಲ್ಲಿ ಆ ಮೃಗಗಳೂ ಶಿವನ ದರ್ಶನವನ್ನು ಮಾಡಿ, ನಮಸ್ಕರಿಸಿ ತಮ್ಮ ಶಾಪವನ್ನು ಕಳೆದುಕೊಂಡು ಮೃಗಜನ್ಮವನ್ನು ಬಿಟ್ಟು ವಿಮಾನ

ವ್ಯಾಧೇಶ್ವರಃ ಶಿವೋ ಜಾತಃ ಪರ್ವತೇ ಹ್ಯರ್ಬುದಾಚಲೇ ।
ದರ್ಶನಾತ್ಪೂಜನಾತ್ಸದ್ಯೋ ಭುಕ್ತಿಮುಕ್ತಿಪ್ರದಾಯಕಃ ॥ ೯೫ ॥

ವ್ಯಾಧೋಽಪಿ ತದ್ದಿನಾನ್ನೂನಂ ಭೋಗಾನ್ಸ ಸುರಸತ್ತಮ ।
ಭುಕ್ತ್ವಾ ರಾಮಕೃಪಾಂ ಪ್ರಾಪ್ಯ ಶಿವಸಾಯುಜ್ಯಮಾಪ್ತವಾನ್ ॥ ೯೬ ॥

ಅಜ್ಞಾನಾತ್ಸ ವ್ರತಂ ಚೈತತ್ಕೃತ್ವಾ ಸಾಯುಜ್ಯಮಾಪ್ತವಾನ್ ।
ಕಿಂ ಪುನರ್ಭಕ್ತಿಸಂಪನ್ನಾ ಯಾಂತಿ ತನ್ಮಯತಾಂ ಶುಭಾಂ ॥ ೯೭ ॥

ವಿಚಾರ್ಯ ಸರ್ವಶಾಸ್ತ್ರಾಣಿ ಧರ್ಮಾಂಶ್ಚೈವಾಪ್ಯನೇಕಶಃ ।
ಶಿವರಾತ್ರಿವ್ರತಮಿದಂ ಸರ್ವೋತ್ಕೃಷ್ಟಂ ಪ್ರಕೀರ್ತಿತಂ ॥ ೯೮ ॥

ವ್ರತಾನಿ ವಿವಿಧಾನ್ಯತ್ರ ತೀರ್ಥಾನಿ ವಿವಿಧಾನಿ ಚ ।
ದಾನಾನಿ ಚ ವಿಚಿತ್ರಾಣಿ ಮಖಾಶ್ಚ ವಿವಿಧಾಸ್ತಥಾ ॥ ೯೯ ॥

ತಪಾಂಸಿ ವಿವಿಧಾನ್ಯೇವ ಜಪಾಶ್ಚೈವಾಪ್ಯನೇಕಶಃ ।
ನೈತೇನ ಸಮತಾಂ ಯಾಂತಿ ಶಿವರಾತ್ರಿವ್ರತೇನ ಚ ॥ ೧೦೦ ॥

---

ವನ್ನೇರಿ ದಿವ್ಯದೇಹದಿಂದ ಸ್ವರ್ಗಕ್ಕೆ ಹೋದವು. ಆ ಅರ್ಬುದಾಚಲದಲ್ಲಿ ಶಿವನು ವ್ಯಾಧೇಶ್ವರನೆಂಬ ಹೆಸರನ್ನು ಹೊಂದಿ, ದರ್ಶನ ಮಾಡಿದವರಿಗೂ, ಪೂಜಿಸಿದವರಿಗೂ ಮುಕ್ತಿಯನ್ನು ಕೊಡುತ್ತ ಪ್ರಸಿದ್ಧನಾಗಿರುವನು.

೯೬-೯೭. ಆ ಬೇಡನೂ ಆದಿನ ಮೊದಲುಗೊಂಡು ಅನೇಕ ಸುಖಗಳನ್ನನ್ನುಭವಿಸಿ ರಾಮನ ಅನುಗ್ರಹದಿಂದ ಶಿವಸಾಯುಜ್ಯವನ್ನು ಪಡೆದನು. ಅಜ್ಞಾನದಿಂದ ವ್ರತವನ್ನು ಮಾಡಿದ ಬೇಡನೇ ಸಾಯುಜ್ಯಮುಕ್ತಿಯನ್ನು ಪಡೆದಮೇಲೆ ಭಕ್ತಿಯಿಂದ ಕೂಡಿ ವ್ರತವನ್ನು ಮಾಡುವವರು, ಶಿವಸ್ವರೂಪರಾಗುವರೆಂಬುದನ್ನು ಹೇಳಬೇಕಾದುದೇ ಇಲ್ಲ.

೯೮-೧೦೦. ಸಮಸ್ತ ಶಾಸ್ತ್ರಗಳನ್ನೂ, ಧರ್ಮಗಳನ್ನೂ ವಿಚಾರಮಾಡಿ ಈ ಶಿವರಾತ್ರಿವ್ರತವು ಸರ್ವೋತ್ತಮವಾದುದೆಂದು ನಿರ್ಣಯಿಸಲ್ಪಟ್ಟಿರುವುದು. ಅನೇಕ ವ್ರತಗಳೂ, ಬಗೆಬಗೆಯ ತೀರ್ಥಕ್ಷೇತ್ರಗಳೂ, ವಿಚಿತ್ರವಾದ ದಾನಗಳೂ, ಅನೇಕ ಬಗೆಯ ಯಜ್ಞಗಳೂ, ತಪಸ್ಸುಗಳೂ, ಜಪಗಳೂ ಈ ಶಿವರಾತ್ರಿಯ ವ್ರತಕ್ಕೆ ಸಮಾನವಾಗಲಾರವು.

ತಸ್ಮಾಚ್ಛುಭತರಂ ಚೈತತ್ಕರ್ತವ್ಯಂ ಹಿತಮೀಪ್ಸುಭಿಃ ।
ಶಿವರಾತ್ರಿವ್ರತಂ ದಿವ್ಯಂ ಭುಕ್ತಿಮುಕ್ತಿಪ್ರದಂ ಸದಾ ॥ ೧೦೧ ॥

ಏತತ್ಸರ್ವಂ ಸಮಾಖ್ಯಾತಂ ಶಿವರಾತ್ರಿವ್ರತಂ ಶುಭಂ ।
ವ್ರತರಾಜೇತಿ ವಿಖ್ಯಾತಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೧೦೨ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ ವ್ಯಾಧೇಶ್ವರಮಾಹಾತ್ಮ್ಯೇ ಶಿವರಾತ್ರಿವ್ರತಮಾಹಾತ್ಮ್ಯವರ್ಣನಂ ನಾಮ ಚತ್ವಾರಿಂಶೋಽಧ್ಯಾಯಃ

---

೧೦೧-೧೦೨. ಒಳ್ಳೆಯದಾಗಬೇಕೆಂದು ಅಪೇಕ್ಷಿಸುವವರು ಅತ್ಯಂತ ಮಂಗಳಕರವಾದ ಈ ವ್ರತವನ್ನು ಮಾಡಬೇಕು. ಈ ವ್ರತವು ಭುಕ್ತಿಮುಕ್ತಿಗಳನ್ನು ಕೊಡುವ ಶ್ರೇಷ್ಠವಾದ ವ್ರತವಾಗಿರುವುದು. ಈರೀತಿಯಾಗಿ ಶುಭಕರವಾದ ಶಿವರಾತ್ರಿ ವ್ರತದ ಮಹಿಮೆಯನ್ನೆಲ್ಲಾ ಹೇಳಿದೆನು. ಇದಕ್ಕೆ ವ್ರತರಾಜನೆಂದು ಹೆಸರಿರುವುದು. ಈಗ ಮತ್ತೇನನ್ನು ಕೇಳಲಪೇಕ್ಷಿಸುವೆ? ಎಂದನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ ವ್ಯಾಧೇಶ್ವರಮಹಾತ್ಮೆಯಲ್ಲಿ ಶಿವರಾತ್ರಿಮಹಿಮೆಯ ವರ್ಣನೆಯೆಂಬ ನಲವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾಪುರಾಣೇ

## ಕೋಟಿರುದ್ರಸಂಹಿತಾಯಾಂ

## ಏಕಚತ್ವಾರಿಂಶೋಽಧ್ಯಾಯಃ

|| ಋಷಯ ಊಚುಃ ||

ಮುಕ್ತಿರ್ನಾಮ ತ್ವಯಾ ಪ್ರೋಕ್ತಾ ತಸ್ಯಾಂ ಕಿಂ ನು ಭವೇದಿಹ ।
ಅವಸ್ಥಾ ಕೀದೃಶೀ ತತ್ರ ಭವೇದಿತಿ ವದಸ್ವ ನಃ || ೧ ||

|| ಸೂತ ಉವಾಚ ||

ಮುಕ್ತಿಶ್ಚತುರ್ವಿಧಾ ಪ್ರೋಕ್ತಾ ಶ್ರೂಯತಾಂ ಕಥಯಾಮಿ ವಃ ।
ಸಂಸಾರಕ್ಲೇಶಸಂಹರ್ತ್ರೀ ಪರಮಾನಂದದಾಯಿನೀ || ೨ ||

ಸಾರೂಪ್ಯಾ ಚೈವ ಸಾಲೋಕ್ಯಾ ಸಾನ್ನಿಧ್ಯಾ ಚ ತಥಾ ಪರಾ ।
ಸಾಯುಜ್ಯಾ ಚ ಚತುರ್ಥೀ ಸಾ ವ್ರತೇನಾನೇನ ಯಾ ಭವೇತ್ || ೩ ||

---

## ನಲವತ್ತೊಂದನೆಯ ಅಧ್ಯಾಯವು

೧. ಋಷಿಗಳು ಕೇಳಿದರು :—ಎಲೈ ಸೂತನೇ! ನೀನು ಹೇಳಿದ ಮುಕ್ತಿಯೆಂಬುದಾವುದು? ಅದರಲ್ಲಿ ಎಷ್ಟು ಬಗೆಗಳಿರುವುವು. ಅವುಗಳನ್ನು ನಮಗೆ ಹೇಳಬೇಕೆನ್ನಲು,

೨-೫. ಸೂತನಿಂತೆಂದನು :—ಮುಕ್ತಿಯು ನಾಲ್ಕು ವಿಧವಾಗಿರುವುದು. ಅದರ ಸ್ವರೂಪವನ್ನು ಹೇಳುವೆನು ಕೇಳಿರಿ. ಸಂಸಾರಕ್ಲೇಶಗಳನ್ನು ನಾಶಮಾಡಿ ಪರಮಾನಂದವನ್ನುಂಟುಮಾಡುವುದೇ ಮುಕ್ತಿಯ ಸ್ವರೂಪವು. ಸಾರೂಪ್ಯ,

ಮುಕ್ತೇರ್ದಾತಾ ಮುನಿಶ್ರೇಷ್ಠಾಃ ಕೇವಲಂ ಶಿವ ಉಚ್ಯತೇ ।
ಬ್ರಹ್ಮಾದ್ಯಾ ನ ಹಿ ತೇ ಜ್ಞೇಯಾಃ ಕೇವಲಂ ಚ ತ್ರಿವರ್ಗದಾಃ　　॥ ೪ ॥

ಬ್ರಹ್ಮಾದ್ಯಾಸ್ತ್ರಿಗುಣಾಧೀಶಾಶ್ಶಿವಸ್ತ್ರಿಗುಣತಃ ಪರಃ ।
ನಿರ್ವಿಕಾರೀ ಪರಬ್ರಹ್ಮ ತುರ್ಯಃ ಪ್ರಕೃತಿತಃ ಪರಃ　　॥ ೫ ॥

ಜ್ಞಾನರೂಪೋಽವ್ಯಯಃ ಸಾಕ್ಷೀ ಜ್ಞಾನಗಮ್ಯೋಽದ್ವಯಸ್ಸ್ವಯಂ ।
ಕೈವಲ್ಯಮುಕ್ತಿದಸ್ಸೋಽತ್ರ ತ್ರಿವರ್ಗಸ್ಯ ಪ್ರದೋಽಪಿ ಹಿ　　॥ ೬ ॥

ಕೈವಲ್ಯಾಖ್ಯಾ ಪಂಚಮೀ ಚ ದುರ್ಲಭಾ ಸರ್ವಥಾ ನೃಣಾಂ ।
ತಲ್ಲಕ್ಷಣಂ ಪ್ರವಕ್ಷ್ಯಾಮಿ ಶ್ರೂಯತಾಮೃಷಿಸತ್ತಮಾಃ　　॥ ೭ ॥

ಉತ್ಪದ್ಯತೇ ಯತಃ ಸರ್ವಂ ಯೇನೈತತ್ಪಾಲ್ಯತೇ ಜಗತ್ ।
ಯಸ್ಮಿಂಶ್ಚ ಲೀಯತೇ ತದ್ಧಿ ಯೇನ ಸರ್ವಮಿದಂ ತತಂ　　॥ ೮ ॥

---

ಸಾಲೋಕ್ಯ, ಸಾನ್ನಿಧ್ಯ, ಸಾಯುಜ್ಯ ಎಂಬ ನಾಲ್ಕು ವಿಧವಾದ ಮುಕ್ತಿಗಳೂ ಈ ವ್ರತದಿಂದ ಉಂಟಾಗುವುವು. ಎಲೈ ಮುನಿಶ್ರೇಷ್ಠರೇ ಕೇಳಿರಿ. ಬ್ರಹ್ಮ, ವಿಷ್ಣು, ರುದ್ರರು ತ್ರಿವರ್ಗವಾದ ಧರ್ಮ, ಕಾಮ, ಅರ್ಥಗಳೆಂಬ ಫಲಗಳನ್ನು ಮಾತ್ರ ಕೊಡುವರು. ಮುಕ್ತಿಯನ್ನು ಕೊಡಲು ಶಿವನೊಬ್ಬನೇ ಸಮರ್ಥನು. ಬ್ರಹ್ಮಾದಿಗಳು ತ್ರಿಗುಣದಿಂದ ಕೂಡಿರುವರು. ಶಿವನು ತ್ರಿಗುಣವನ್ನು ಮೀರಿದವನು. ಅವನು ವಿಕಾರವಿಲ್ಲದವನು. ಅವಸ್ಥಾತ್ರಯಗಳನ್ನು ಮೀರಿ, ಪ್ರಕೃತಿಗಿಂತ ಶ್ರೇಷ್ಠನಾಗಿ ಪರಬ್ರಹ್ಮಸ್ವರೂಪನಾಗಿರುವನು.

೬-೭. ಆ ಶಿವನು ನಾಶರಹಿತನೂ, ಸಾಕ್ಷಿಸ್ವರೂಪನೂ, ಅದ್ವಿತೀಯನೂ, ಜ್ಞಾನಸ್ವರೂಪನೂ, ಆಗಿರುವನು. ಅವನು ಕೈವಲ್ಯಮುಕ್ತಿಯನ್ನೂ, ಧರ್ಮಾರ್ಥಕಾಮರೂಪವಾದ ತ್ರಿವರ್ಗ ಫಲಗಳನ್ನೂ ಕೊಡುವನು. ಕೈವಲ್ಯವೆಂಬ ಐದನೆಯ ಮುಕ್ತಿಯು ಮನುಷ್ಯರಿಗೆ ದುರ್ಲಭವಾದುದು. ಆ ಕೈವಲ್ಯಮುಕ್ತಿಯ ಸ್ವರೂಪವನ್ನು ಹೇಳುವೆನು, ಕೇಳಿರಿ.

೮-೧೧. ಯಾವ ವಸ್ತುವಿನಿಂದ ಈ ಸಮಸ್ತ ಪ್ರಪಂಚವೂ ಉತ್ಪತ್ತಿಯಾಗುವುದೋ, ಯಾವ ವಸ್ತುವು ಈ ಪ್ರಪಂಚಗಳನ್ನು ರಕ್ಷಿಸುವುದೋ, ಯಾವುದರಲ್ಲಿ ಎಲ್ಲ

ತದೇವ ಶಿವರೂಪಂ ಹಿ ಪಠ್ಯತೇ ಚ ಮುನೀಶ್ವರಾಃ ।
ಸಕಲಂ ನಿಷ್ಕಲಂ ಚೇತಿ ದ್ವಿವಿಧಂ ವೇದವರ್ಣಿತಂ ॥ ೯ ॥

ವಿಷ್ಣುನಾ ತಚ್ಚ ನ ಜ್ಞಾತಂ ಬ್ರಹ್ಮಣಾ ನ ಚ ತತ್ತಥಾ ।
ಕುಮಾರಾದ್ಯೈಶ್ಚ ನ ಜ್ಞಾತಂ ನ ಜ್ಞಾತಂ ನಾರದೇನ ವೈ ॥ ೧೦ ॥

ಶುಕೇನ ವ್ಯಾಸಪುತ್ರೇಣ ವ್ಯಾಸೇನ ಚ ಮುನೀಶ್ವರೈಃ ।
ತತ್ಪೂರ್ವೈಶ್ಚಾಖಿಲೈರ್ದೇವೈರ್ವೇದೈಃ ಶಾಸ್ತ್ರೈಸ್ತಥಾ ನ ಹಿ ॥ ೧೧ ॥

ಸತ್ಯಂ ಜ್ಞಾನಮನಂತಂ ಚ ಸಚ್ಚಿದಾನಂದಸಂಜ್ಞಿತಂ ।
ನಿರ್ಗುಣೋ ನಿರುಪಾಧಿಶ್ಚಾವ್ಯಯಃ ಶುದ್ಧೋ ನಿರಂಜನಃ ॥ ೧೨ ॥

ನ ರಕ್ತೋ ನೈವ ಪೀತಶ್ಚ ನ ಶ್ವೇತೋ ನೀಲ ಏವ ಚ ।
ನ ಹ್ರಸ್ವೋ ನ ಚ ದೀರ್ಘಶ್ಚ ನ ಸ್ಥೂಲಃ ಸೂಕ್ಷ್ಮ ಏವ ಚ ॥ ೧೩ ॥

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ತದೇವಂ ಪರಮಂ ಪ್ರೋಕ್ತಂ ಬ್ರಹ್ಮೈವ ಶಿವಸಂಜ್ಞಕಂ ॥ ೧೪ ॥

---

ಪ್ರಪಂಚವು ಲೀನವಾಗುವುವೋ, ಯಾವ ವಸ್ತುವಿನಿಂದ ಎಲ್ಲ ಪ್ರಪಂಚವೂ ವ್ಯಾಪಿಸಿರುವುದೋ, ಅದೇ ಶಿವಸ್ವರೂಪವು. ಆ ಶಿವಸ್ವರೂಪವು ಸಕಲವೆಂದೂ ನಿಷ್ಕಲ ಎರಡು ಬಗೆಯಾಗಿರುವುದೆಂದು ವೇದದಲ್ಲಿ ಹೇಳಿರುವುದು. ಅದನ್ನು ವಿಷ್ಣುವೂ, ಬ್ರಹ್ಮನೂ, ಕುಮಾರಸ್ವಾಮಿಯೂ, ನಾರದನೂ, ವ್ಯಾಸಪುತ್ರನಾದ ಶುಕನೂ, ವ್ಯಾಸನೂ, ಅವನ ಹಿಂದಿನ ಋಷಿಶ್ರೇಷ್ಠರೂ. ದೇವತೆಗಳೂ, ವೇದಶಾಸ್ತ್ರಗಳೂ ಸಹ ತಿಳಿದಿಲ್ಲ.

೧೨-೧೩. ಆ ಪರಬ್ರಹ್ಮವಸ್ತುವು ಸತ್ಯಜ್ಞಾನಾಂತರೂಪವಾಗಿ ಸತ್, ಚಿತ್, ಆನಂದ ಎಂಬ ಹೆಸರಿನಿಂದ ನಿರ್ಗುಣವಾಗಿ ಯಾವ ಉಪಾಧಿಯೂ ಇಲ್ಲದೆ ನಾಶರಹಿತವಾಗಿ ಕಲ್ಮಷವಿಲ್ಲದೆ ಶುದ್ಧವಾದುದಾಗಿರುವುದು. ಅದು ಕೆಂಪು, ಹಳದಿ, ಬಿಳುಪು, ನೀಲಿ ಮುಂತಾದ ಬಣ್ಣಗಳಿಂದ ಕೂಡಿದುದಲ್ಲ. ಹ್ರಸ್ವ, ದೀರ್ಘ, ಸ್ಥೂಲ, ಸೂಕ್ಷ್ಮ ಎಂಬ ವ್ಯವಹಾರವು ಆ ವಸ್ತುವಿನಲ್ಲಿಲ್ಲ.

೧೪-೧೬. ಆ ಬ್ರಹ್ಮವಸ್ತುವು ಮಾತಿಗೂ, ಮನಸ್ಸಿಗೂ ಸಿಕ್ಕತಕ್ಕುದಲ್ಲ. ಅದೇ ಶಿವನೆಂಬ ಪರಬ್ರಹ್ಮವಸ್ತುವು. ಆಕಾಶವು ಹೇಗೆ ಸರ್ವವ್ಯಾಪಕವೋ ಹಾಗೆ

ಆಕಾಶಂ ವ್ಯಾಪಕಂ ಯದ್ವತ್ತಥೈವ ವ್ಯಾಪಕಂ ತ್ವಿದಂ ।
ಮಾಯಾತೀತಂ ಪರಾತ್ಮಾನಂ ದ್ವಂದ್ವಾತೀತಂ ವಿಮತ್ಸರಂ ॥ ೧೫ ॥

ತತ್ಪ್ರಾಪ್ತಿಶ್ಚ ಭವೇದತ್ರ ಶಿವಜ್ಞಾನೋದಯಾದ್ಧ್ರುವಂ ।
ಭಜನಾದ್ವಾ ಶಿವಸ್ಯೈವ ಸೂಕ್ಷ್ಮಮತ್ಯಾ ಸತಾಂ ದ್ವಿಜಾಃ ॥ ೧೬ ॥

ಜ್ಞಾನಂ ತು ದುಷ್ಕರಂ ಲೋಕೇ ಭಜನಂ ಸುಕರಂ ಮತಂ ।
ತಸ್ಮಾಚ್ಛಿವಂ ಚ ಭಜತ ಮುಕ್ತ್ಯರ್ಥಮಪಿ ಸತ್ತಮಾಃ ॥ ೧೭ ॥

ಶಿವೋ ಹಿ ಭಜನಾಧೀನೋ ಜ್ಞಾನಾತ್ಮಾ ಮೋಕ್ಷದಃ ಪರಃ ।
ಭಕ್ತ್ಯೈವ ಬಹವಃ ಸಿದ್ಧಾ ಮುಕ್ತಿಂ ಪ್ರಾಪುಃ ಪರಾಂ ಮುದಾ ॥ ೧೮ ॥

ಜ್ಞಾನಮಾತಾ ಶಂಭುಭಕ್ತಿರ್ಮುಕ್ತಿಭುಕ್ತಿಪ್ರದಾ ಸದಾ ।
ಸುಲಭಾ ಯತ್ಪ್ರಸಾದಾದ್ಧಿ ಸತ್ಪ್ರೇಮಾಂಕುರಲಕ್ಷಣಾ ॥ ೧೯ ॥

ಸಾ ಭಕ್ತಿರ್ದ್ವಿವಿಧಾ ಜ್ಞೇಯಾ ಸಗುಣಾ ನಿರ್ಗುಣಾ ದ್ವಿಜಾಃ ।
ವೈಧೀ ಸ್ವಾಭಾವಿಕೀ ಯಾ ಯಾ ವರಾ ಸಾ ಸಾ ಸ್ಮೃತಾ ಪರಾ ॥ ೨೦ ॥

---

ಈ ಪರಬ್ರಹ್ಮವಸ್ತುವೂ ಸರ್ವವ್ಯಾಪಕವಾಗಿ ಸುಖದುಃಖಗಳಿಲ್ಲದೆ ಮಾಯೆಯನ್ನು ಅತಿಕ್ರಮಿಸಿ ಅದ್ವಿತೀಯವಾಗಿರುವುದು. ಶಿವಜ್ಞಾನವು ಉತ್ಪತ್ತಿಯಾದರೆ ಬ್ರಹ್ಮ ಪ್ರಾಪ್ತಿಯಾಗುವುದು. ಸಜ್ಜನರು ಸೂಕ್ಷ್ಮಬುದ್ಧಿಯಿಂದ ಶಿವನನ್ನು ಧ್ಯಾನಿಸುವುದ ರಿಂದಲಾದರೂ ಬ್ರಹ್ಮಪ್ರಾಪ್ತಿಯಾಗುವುದು.

೧೭-೨೦. ಲೋಕದಲ್ಲಿ ಜ್ಞಾನಪ್ರಾಪ್ತಿಯು ಕಷ್ಟಸಾಧ್ಯವಾದುದು. ಆದುದ ರಿಂದ ಎಲೈ ಮುನಿಗಳೇ! ಮೋಕ್ಷಾರ್ಥವಾಗಿ ಶಿವನನ್ನು ಧ್ಯಾನಿಸಿರಿ. ಜ್ಞಾನಸ್ವರೂಪ ನಾದ ಶಿವನು, ಧ್ಯಾನಾಧೀನನಾಗಿ ಮೋಕ್ಷವನ್ನು ಕೊಡುವನು. ಅನೇಕ ಸಿದ್ಧರು ಶಿವಭಕ್ತಿಯಿಂದಲೇ ಶ್ರೇಷ್ಠವಾದ ಮುಕ್ತಿಯನ್ನು ಸಂತೋಷದಿಂದ ಪಡೆದಿರುವರು. ಜ್ಞಾನಕ್ಕೆ ತಾಯಿಯೆನಿಸಿದ ಶಿವಭಕ್ತಿಯೇ ಭುಕ್ತಿ ಮುಕ್ತಿಗಳನ್ನು ಕೊಡುವುದು. ಶಿವನ ಪ್ರೀತಿಸ್ವರೂಪವಾದ ಅನುಗ್ರಹದಿಂದ ಶಿವಭಕ್ತಿಯು ಅತ್ಯಂತ ಸುಲಭವಾಗಿ ಲಭಿಸುವುದು. ಆ ಭಕ್ತಿಯು ಸಗುಣರೂಪ ನಿರ್ಗುಣರೂಪ ಎಂದು ಎರಡು ಬಗೆ ಯಾಗಿರುವುದು. ಒಂದು ವಿಧಿಗನುಸಾರವಾದುದು. ಮತ್ತೊಂದು ಸ್ವಾಭಾವಿಕವಾಗಿ ಹುಟ್ಟತಕ್ಕುದಾಗಿರುವುದು.

ನೈಷ್ಠಿಕ್ಯನೈಷ್ಠಿಕೀಭೇದಾದ್ದ್ವಿವಿಧೈವ ಹಿ ಕೀರ್ತಿತಾ ।
ಷಡ್ವಿಧಾ ನೈಷ್ಠಿಕೀ ಜ್ಞೇಯಾ ದ್ವಿತೀಯೈಕವಿಧಾ ಸ್ಮೃತಾ ॥ ೨೧ ॥

ವಿಹಿತಾವಿಹಿತಾ ಭೇದಾತ್ತಾಮನೇಕಾಂ ವಿದುರ್ಬುಧಾಃ ।
ತಯೋರ್ಬಹುವಿಧತ್ವಾಚ್ಚ ವಿಸ್ತಾರೋ ನ ಹಿ ವರ್ಣ್ಯತೇ ॥ ೨೨ ॥

ತೇ ನವಾಂಗೇ ಉಭೇ ಜ್ಞೇಯೇ ಶ್ರವಣಾದಿಕಭೇದತಃ ।
ಸುದುಷ್ಕರೇ ತತ್ಪ್ರಸಾದಂ ವಿನಾ ಚ ಸುಕರೇ ತತಃ ॥ ೨೩ ॥

ಭಕ್ತಿಜ್ಞಾನೇ ನ ಭಿನ್ನೇ ಹಿ ಶಂಭುನಾ ವರ್ಣಿತೇ ದ್ವಿಜಾಃ ।
ತಸ್ಮಾದ್ಭೇದೋ ನ ಕರ್ತವ್ಯಸ್ತತ್ಕರ್ತುಸ್ಸರ್ವದಾ ಸುಖಂ ॥ ೨೪ ॥

ವಿಜ್ಞಾನಂ ನ ಭವತ್ಯೇವ ದ್ವಿಜಾ ಭಕ್ತಿವಿರೋಧಿನಃ ।
ಶಂಭುಭಕ್ತಿಕರಸ್ಯೈವ ಭವೇಜ್ಜ್ಞಾನೋದಯೋ ದ್ರುತಂ ॥ ೨೫ ॥

---

೨೧–೨೩. ಭಕ್ತಿಯು ನೈಷ್ಠಿಕ ಭಕ್ತಿ, ಅನೈಷ್ಠಿಕ ಭಕ್ತಿ ಎಂದು ಎರಡು ಬಗೆಯಾಗಿರುವುದು. ನೈಷ್ಠಿಕ ಭಕ್ತಿಯು ಆರು ಬಗೆಯಾಗಿರುವುದು. ಅನೈಷ್ಠಿಕ ಭಕ್ತಿಯು ಒಂದೇ ಬಗೆಯಾಗಿರುವುದು. ಮತ್ತೆ ಇದು ವಿಹಿತ ಭಕ್ತಿ, ಅವಿಹಿತ ಭಕ್ತಿ ಎಂಬ ಭೇದದಿಂದ ಅನೇಕ ಬಗೆಯಾಗುವುದು. ಅದರ ವಿಸ್ತಾರವನ್ನು ವರ್ಣನೆ ಮಾಡುವುದಿಲ್ಲ. ಅವುಗಳೆಲ್ಲವೂ ಶ್ರವಣ ಮುಂತಾದ ಒಂಭತ್ತು ವಿಧವಾದ ಭಕ್ತಿಯಲ್ಲಿ ಸೇರಿ ಹೋಗುವುವು. ಭಕ್ತಿಯು ಶಿವನ ಅನುಗ್ರಹವಿಲ್ಲದೆ ಹುಟ್ಟುವುದಿಲ್ಲ. ಅವನ ಅನುಗ್ರಹವಿದ್ದರೆ ಮಾತ್ರ ಅತ್ಯಂತ ಸುಲಭವಾದುದಾಗುವುದು.

೨೪-೨೫. ಎಲೈ ಋಷಿಗಳೇ! ಕೇಳಿರಿ. ಭಕ್ತಿಜ್ಞಾನಗಳು ಬೇರೆ ಬೇರೆಯಾದುವುಗಳಲ್ಲವೆಂದು ಶಿವನೇ ಹೇಳಿರುವನು. ಆದುದರಿಂದ ಅವುಗಳಿಗೆ ಭೇದವನ್ನು ಕಲ್ಪಿಸಬಾರದು. ಅವೆರಡನ್ನೂ ಒಂದಾಗಿ ಭಾವಿಸಿದವರಿಗೆ ಸುಖವುಂಟಾಗುವುದು. ಭಕ್ತಿಯಿಲ್ಲದವನಿಗೆ ಜ್ಞಾನವು ಉಂಟಾಗುವುದೇ ಇಲ್ಲ. ಶಿವಭಕ್ತಿಯುಳ್ಳವನಿಗೇ ಖಂಡಿತವಾಗಿ ಜ್ಞಾನೋದಯವುಂಟಾಗುವುದು.

ತಸ್ಮಾದ್ಭಕ್ತಿರ್ಮಹೇಶಸ್ಯ ಸಾಧನೀಯಾ ಮುನೀಶ್ವರಾಃ ।
ತಯೈವ ನಿಖಿಲಂ ಸಿದ್ಧಂ ಭವಿಷ್ಯತಿ ನ ಸಂಶಯಃ ॥ ೨೬ ॥

ಇತಿ ಪೃಷ್ಟಂ ಭವದ್ಭಿರ್ಯತ್ತದೇವ ಕಥಿತಂ ಮಯಾ ।
ತಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೨೭ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಮುಕ್ತಿನಿರೂಪಣಂ ನಾಮೈಕಚತ್ವಾರಿಂಶೋಽಧ್ಯಾಯಃ



---

೨೬. ಆದುದರಿಂದ ಮಹೇಶ್ವರನಲ್ಲಿ ಭಕ್ತಿಯನ್ನು ಸಾಧಿಸಬೇಕು. ಅದರಿಂದಲೇ ಸಮಸ್ತ ಸಿದ್ಧಿಯುಂಟಾಗುವುದರಲ್ಲಿ ಸಂದೇಹವಿಲ್ಲ.

೨೭. ಎಲೈ ಋಷಿಶ್ರೇಷ್ಠರೇ, ನೀವು ಕೇಳಿದ ಪ್ರಶ್ನೆಗೆ ತಕ್ಕ ಉತ್ತರಗಳನ್ನು ಹೇಳಿರುವೆನು. ಈ ಉತ್ತರಗಳನ್ನು ಕೇಳಿದವರ ಸಮಸ್ತ ಪಾಪಗಳೂ ಬಿಡುಗಡೆಯಾಗುವುದರಲ್ಲಿ ಸಂದೇಹವಿಲ್ಲ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಮುಕ್ತಿನಿರೂಪಣೆಯೆಂಬ ನಲವತ್ತೊಂದನೆಯ
ಅಧ್ಯಾಯವು ಮುಗಿದುದು.



## ॥ ಶ್ರೀಃ ॥

---

॥ ನಮಃ ಶಿವಾಯ ॥

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ದ್ವಿಚತ್ವಾರಿಂಶೋಽಧ್ಯಾಯಃ



**॥ ಋಷಯ ಊಚುಃ ॥**

**ಶಿವಃ ಕೋ ವಾ ಹರಿಃ ಕೋ ವಾ ರುದ್ರಃ ಕೋ ವಾ ವಿಧಿಶ್ಚ ಕಃ ।**
**ಏತೇಷು ನಿರ್ಗುಣಃ ಕೋ ವಾ ಹ್ಯೇತಂ ನಶ್ಛಿಂಧಿ ಸಂಶಯಂ ॥ ೧ ॥**

**॥ ಸೂತ ಉವಾಚ ॥**

**ಯಚ್ಚಾದೌ ಹಿ ಸಮುತ್ಪನ್ನಂ ನಿರ್ಗುಣಾತ್ಪರಮಾತ್ಮನಃ ।**
**ತದೇವ ಶಿವಸಂಜ್ಞಂ ಹಿ ವೇದವೇದಾಂತಿನೋ ವಿದುಃ ॥ ೨ ॥**

**ತಸ್ಮಾತ್ಪ್ರಕೃತಿರುತ್ಪನ್ನಾ ಪುರುಷೇಣ ಸಮನ್ವಿತಾ ।**
**ತಾಭ್ಯಾಂ ತಪಃ ಕೃತಂ ತತ್ರ ಮೂಲಸ್ಥೇ ಚ ಜಲೇ ಸುಧೀಃ ॥ ೩ ॥**

---

### ನಲವತ್ತೆರಡನೆಯ ಅಧ್ಯಾಯವು

೧. ಋಷಿಗಳು ಮತ್ತೆ ಕೇಳಿದರು :—ಎಲೈ ಸೂತಮುನಿಯೇ, ಶಿವನಾರು? ಹರಿಯಾರು? ರುದ್ರನಾರು? ವಿಧಿಯಾರು? ಇವರಲ್ಲಿ ನಿರ್ಗುಣನಾರು? ನಮ್ಮ ಈ ಸಂದೇಹವನ್ನು ದಯವಿಟ್ಟು ನಿವಾರಣೆ ಮಾಡು ಎಂದರು.

೨-೫. ಸೂತನು ಹೇಳಿದನು :—ನಿರ್ಗುಣವಾದ ಪರಬ್ರಹ್ಮ ತತ್ವದಿಂದ ಮೊದಲು ಉತ್ಪತ್ತಿಯಾದ ತತ್ವವೇ ಶಿವತತ್ವವೆಂದು ವೇದಾಂತಿಗಳು ತಿಳಿದಿರುವರು.

ಪಂಚಕ್ರೋಶೀತಿ ವಿಖ್ಯಾತಾ ಕಾಶೀ ಸರ್ವಾತಿವಲ್ಲಭಾ ।
ವ್ಯಾಪ್ತಂ ಚ ಸಕಲಂ ದ್ಯೇತತ್ತಜ್ಜಲಂ ವಿಶ್ವತೋ ಗತಂ ॥ ೪ ॥

ಸಂಭಾವ್ಯ ಮಾಯಯಾ ಯುಕ್ತಸ್ತತ್ರ ಸುಪ್ತೋ ಹರಿಸ್ಸ ವೈ ।
ನಾರಾಯಣೇತಿ ವಿಖ್ಯಾತಃ ಪ್ರಕೃತಿರ್ನಾರಾಯಣೀ ಮತಾ ॥ ೫ ॥

ತನ್ನಾಭಿಕಮಲೇ ಯೋ ವೈ ಜಾತಸ್ಸ ಚ ಪಿತಾಮಹಃ ।
ತೇನೈವ ತಪಸಾ ದೃಷ್ಟಸ್ಸ ವೈ ವಿಷ್ಣುರುದಾಹೃತಃ ॥ ೬ ॥

ಉಭಯೋರ್ವಾದಶಮನೇ ಯದ್ರೂಪಂ ದರ್ಶಿತಂ ಬುಧಾಃ ।
ಮಹಾದೇವೇತಿ ವಿಖ್ಯಾತಂ ನಿರ್ಗುಣೇನ ಶಿವೇನ ಹಿ ॥ ೭ ॥

ತೇನ ಪ್ರೋಕ್ತಮಹಂ ಶಂಭುರ್ಭವಿಷ್ಯಾಮಿ ಕಪಾಲತಃ ।
ರುದ್ರೋ ನಾಮ ಸ ವಿಖ್ಯಾತೋ ಲೋಕಾನುಗ್ರಹಕಾರಕಃ ॥ ೮ ॥

---

ಆ ಶಿವತತ್ವದಿಂದ ಪ್ರಕೃತಿಪುರುಷರು ಉತ್ಪನ್ನರಾದರು. ಆ ಪ್ರಕೃತಿಪುರುಷರು ಮೂಲ ಜಲದಲ್ಲಿ ತಪಸ್ಸನ್ನು ಮಾಡಿದರು. ಆ ಪ್ರದೇಶವು ಪಂಚಕ್ರೋಶವೆಂಬ ಪ್ರಸಿದ್ಧವಾದ ಹೆಸರಿನಿಂದ ಎಲ್ಲರಿಗೂ ಪ್ರೀತಿಪಾತ್ರವಾದ ಕಾಶೀಕ್ಷೇತ್ರವಾಯಿತು. ಆ ನೀರೇ ಪ್ರಪಂಚದಲ್ಲೆಲ್ಲಾ ವ್ಯಾಪಿಸಿಕೊಂಡಿತು. ಹರಿಯು ಮಾಯೆಯಿಂದ ಕೂಡಿ ಆ ನೀರಿನಲ್ಲಿ ಮಲಗಿಕೊಂಡನು. ಆದುದರಿಂದ ಅವನಿಗೆ ನಾರಾಯಣನೆಂದೂ, ಮಾಯಿಗೆ ನಾರಾಯಣಿಯೆಂದೂ ಹೆಸರಾಯಿತು.

೬-೮. ಆ ನಾರಾಯಣನ ನಾಭಿಕಮಲದಲ್ಲಿ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನು ತಪಸ್ಸನ್ನು ಮಾಡಿ ವಿಷ್ಣುವನ್ನು ಕಂಡನು. ಬ್ರಹ್ಮ, ವಿಷ್ಣುಗಳ ಇಬ್ಬರ ವಾದವನ್ನು ಪರಿಹರಿಸುವುದಕ್ಕಾಗಿ ನಿರ್ಗುಣನಾದ ಶಿವನು ಯಾವ ಸ್ವರೂಪವನ್ನು ಅವರಿಗೆ ದರ್ಶನ ಮಾಡಿಸಿದನೋ, ಆ ಸ್ವರೂಪವೇ ಮಹೇಶ್ವರನೆಂಬ (ಮಹಾದೇವ) ಹೆಸರನ್ನು ಪಡೆಯಿತು. ಆ ಮಹಾದೇವನು ಇಂತು ಹೇಳಿದನು :—ನಾನು ಬ್ರಹ್ಮನ ಹಣೆಯಿಂದ ಹುಟ್ಟಿ ರುದ್ರನೆಂಬ ಹೆಸರಿನಿಂದ ಲೋಕಾನುಗ್ರಹವನ್ನು ಮಾಡುವೆನು

ಧ್ಯಾನಾರ್ಥಂ ಚೈವ ಸರ್ವೇಷಾಮರೂಪೋ ರೂಪವಾನಭೂತ್ ।
ಸ ಏವ ಚ ಶಿವಸ್ಸಾಕ್ಷಾದ್ಭಕ್ತವಾತ್ಸಲ್ಯಕಾರಕಃ ॥ ೯ ॥

ಶಿವೇ ತ್ರಿಗುಣಸಂಭಿನ್ನೇ ರುದ್ರೇ ತು ಗುಣಧಾಮನಿ ।
ವಸ್ತುತೋ ನ ಹಿ ಭೇದೋಽಸ್ತಿ ಸ್ವರ್ಣೇ ತದ್ಭೂಷಣೇ ಯಥಾ ॥ ೧೦ ॥

ಸಮಾನರೂಪಕರ್ಮಾಣೌ ಸಮಭಕ್ತಗತಿಪ್ರದೌ ।
ಸಮಾನಾಖಿಲಸಂಸೇವ್ಯೌ ನಾನಾಲೀಲಾವಿಹಾರಿಣೌ ॥ ೧೧ ॥

ಸರ್ವಥಾ ಶಿವರೂಪೋ ಹಿ ರುದ್ರೋ ರೌದ್ರಪರಾಕ್ರಮಃ ।
ಉತ್ಪನ್ನೋ ಭಕ್ತಕಾರ್ಯಾರ್ಥಂ ಹರಿಬ್ರಹ್ಮಸಹಾಯಕೃತ್ ॥ ೧೨ ॥

ಅನ್ಯೇ ಚ ಯೇ ಸಮುತ್ಪನ್ನಾ ಯಥಾನುಕ್ರಮತೋ ಲಯಂ ।
ಯಾಂತಿ ನೈವ ತಥಾ ರುದ್ರಃ ಶಿವೇ ರುದ್ರೋ ವಿಲೀಯತೇ ॥ ೧೩ ॥

---

ಎಂದು. ತಾನು ರೂಪವಿಲ್ಲದವನಾದರೂ ಸಮಸ್ತ ಜೀವರ ಧಾರಣಾರ್ಥವಾಗಿ ರೂಪವನ್ನು ಧರಿಸಿದನು. ಅವನೇ ಭಕ್ತರಲ್ಲಿ ವಿಶೇಷ ಪ್ರೀತಿಯನ್ನು ತೋರಿಸುವ ಶಿವನು.

೧೦-೧೨. ಶಿವನು ತ್ರಿಗುಣಗಳಿಗೆ ಮೀರಿದವನು. ರುದ್ರನು ತ್ರಿಗುಣಗಳಿಗೆ ಆಶ್ರಯನು. ಚಿನ್ನಕ್ಕೂ ಅದರಿಂದ ಮಾಡಿದ ಆಭರಣಕ್ಕೂ ಹೇಗೆ ಭೇದವಿಲ್ಲವೋ ಹಾಗೆ ಶಿವನಿಗೂ, ರುದ್ರನಿಗೂ ಭೇದವಿಲ್ಲ. ಅವರಿಬ್ಬರೂ ಸಮಾನವಾದ ರೂಪ ಮತ್ತು ಕಾರ್ಯಗಳುಳ್ಳವರು. ಸಮನಾಗಿಯೇ ಭಕ್ತರಿಗೆ ಸದ್ಗತಿಯನ್ನು ಕೊಡತಕ್ಕವರು. ನಾನಾ ಬಗೆಯ ಲೀಲೆಯಿಂದ ವಿನೋದಪಡುತ್ತಿರುವ ಅವರನ್ನು ಎಲ್ಲರೂ ಸಮವಾಗಿಯೇ ತಿಳಿದು ಸೇವಿಸುವರು. ರುದ್ರನು ಎಲ್ಲ ವಿಧಗಳಲ್ಲಿಯೂ ಮಂಗಳ ಸ್ವರೂಪನಾದ ಶಿವನ ರೂಪದಿಂದಿದ್ದರೂ ಭಯಂಕರವಾದ ಪರಾಕ್ರಮವುಳ್ಳವನು. ಅವನು ಭಕ್ತರ ಕಾರ್ಯಕ್ಕಾಗಿ ಹರಿಬ್ರಹ್ಮರಿಗೆ ಸಹಾಯಕನಾಗಿ ಹುಟ್ಟಿರುವನು.

೧೩-೧೬. ಹುಟ್ಟಿದ ಇತರ ದೇವತೆಗಳು ಕ್ರಮವಾಗಿ ನಾಶವನ್ನು ಹೊಂದುವರು. ರುದ್ರನು ಹಾಗಲ್ಲ, ಎಂದರೆ ನಾಶಹೊಂದುವುದಿಲ್ಲ. ಶಿವನಲ್ಲಿ ಲೀನನಾಗುವನು. ಪ್ರಪಂಚದಲ್ಲಿ ಹುಟ್ಟಿದ ಪ್ರಕೃತಿಸಂಬಂಧವಾದ ಈ ಪ್ರಾಣಿಗಳೆಲ್ಲರೂ ರುದ್ರನಲ್ಲಿ

ತೇ ವೈ ರುದ್ರಂ ಮಿಲಿತ್ವಾ ತು ಪ್ರಯಾಂತಿ ಪ್ರಕೃತಾ ಇಮೇ ।
ಇಮಾನ್ರುದ್ರೋ ಮಿಲಿತ್ವಾ ತು ನ ಯಾತಿ ಶ್ರುತಿಸಶಾನಂ ॥ ೧೪ ॥

ಸರ್ವೇ ರುದ್ರಂ ಭಜಂತ್ಯೇವ ರುದ್ರಃ ಕಂಚಿದ್ಭಜೇನ್ನ ಹಿ ।
ಸ್ವಾತ್ಮನಾ ಭಕ್ತವಾತ್ಸಲ್ಯಾದ್ಭಜತ್ಯೇವ ಕದಾಚನ ॥ ೧೫ ॥

ಅನ್ಯಂ ಭಜಂತಿ ಯೇ ನಿತ್ಯಂ ತಸ್ಮಿಂಸ್ತೇ ಲೀನತಾಂ ಗತಾಃ ।
ತೇನೈವ ರುದ್ರಂ ತೇ ಪ್ರಾಪ್ತಾಃ ಕಾಲೇನ ಮಹತಾ ಬುಧಾಃ ॥ ೧೬ ॥

ರುದ್ರಭಕ್ತಾಸ್ತು ಯೇ ಕೇಚಿತ್ತತ್ಕ್ಷಣಂ ಶಿವತಾಂ ಗತಾಃ ।
ಅನ್ಯಾಪೇಕ್ಷಾ ನ ವೈ ತೇಷಾಂ ಶ್ರುತಿರೇಷಾ ಸನಾತನೀ ॥ ೧೭ ॥

ಅಜ್ಞಾನಂ ವಿವಿಧಂ ಹ್ಯೇತದ್ವಿಜ್ಞಾನಂ ವಿವಿಧಂ ನ ಹಿ ।
ತತ್ಪ್ರಕಾರಮಹಂ ವಕ್ಷ್ಯೇ ಶೃಣುತಾದರತೋ ದ್ವಿಜಾಃ ॥ ೧೮ ॥

ಬ್ರಹ್ಮಾದಿತೃಣಪರ್ಯಂತಂ ಯತ್ಕಿಂಚಿದ್ದೃಶ್ಯತೇ ತ್ವಿಹ ।
ತತ್ಸರ್ವಂ ಶಿವ ಏವಾಸ್ತಿ ಮಿಥ್ಯಾ ನಾನಾತ್ವಕಲ್ಪನಾ ॥ ೧೯ ॥

---

ಸೇರಿಹೋಗುವರು. ಇದು ವೇದವಿಧಿಯು. ಎಲ್ಲರೂ ರುದ್ರನನ್ನು ಭಜಿಸುವರು ರುದ್ರನು ಮಾತ್ರ ಯಾರನ್ನೂ ಭಜಿಸುವುದಿಲ್ಲ. ಒಂದಾನೊಂದು ಕಾಲದಲ್ಲಿ ಭಕ್ತರಲ್ಲಿ ಪ್ರೀತಿಯಿಂದ ತಾನೇ ಅವರನ್ನು ಸೇರುವನು. ಯಾರು ಪ್ರತಿದಿನವೂ ಇತರ ದೇವತೆಯನ್ನು ಪೂಜಿಸುವರೋ ಅವರು ಆ ದೇವತೆಯಲ್ಲೇ ಲೀನರಾಗುವರು. ಬಹಳಕಾಲದ ಮೇಲೆ ಆ ದೇವತಾಮಾರ್ಗದಿಂದಲೇ ರುದ್ರನನ್ನು ಸೇರುವರು.

೧೭–೨೦. ರುದ್ರನಲ್ಲಿ ಭಕ್ತಿಯುಳ್ಳವರು ಆ ಕ್ಷಣದಲ್ಲಿಯೇ ಶಿವಸ್ವರೂಪರಾಗುವರು. ಅವರಿಗೆ ಇತರ ದೇವತಾ ಸಹಾಯವು ಬೇಕಾಗುವುದಿಲ್ಲವೆಂದು ಸನಾತನವಾದ ವೇದವು ಹೇಳುವುದು. ಆ ಜ್ಞಾನವು ಬಗೆಬಗೆಯಾಗಿರುವುದು. ವಿಜ್ಞಾನದಲ್ಲಿ ಬೇರೆ ಬೇರೆ ಭೇದಗಳಿಲ್ಲ. ಎಲೈ ಬ್ರಾಹ್ಮಣರೇ! ಆ ವಿಜ್ಞಾನದ ಸ್ವರೂಪವನ್ನು ನಾನು ಹೇಳುವೆನು. ಆದರದಿಂದ ಕೇಳಿರಿ. ಬ್ರಹ್ಮನೇ ಮೊದಲಾಗಿ ಒಂದು ಹುಲ್ಲುಕಡ್ಡಿಯವರಿಗೆ ಏನು ಕಾಣುವುದೋ ಅವೆಲ್ಲವೂ ಶಿವಸ್ವರೂಪವೇ. ಬೇರೆ ಬೇರೆ ಎಂಬುದು ಕಲ್ಪನೆಯಾದ ಭ್ರಾಂತಿಯ ಮಾತು. ಸೃಷ್ಟಿಯಾಗುವುದಕ್ಕೆ ಮೊದಲೂ,

ಸೃಷ್ಟೇಃ ಪೂರ್ವಂ ಶಿವಃ ಪ್ರೋಕ್ತಃ ಸೃಷ್ಟೇರ್ಮಧ್ಯೇ ಶಿವಸ್ತಥಾ ।
ಸೃಷ್ಟೇರಂತೇ ಶಿವಃ ಪ್ರೋಕ್ತಸ್ಸರ್ವಶೂನ್ಯೇ ತದಾ ಶಿವಃ ॥ ೨೦ ॥

ತಸ್ಮಾಚ್ಚತುರ್ಗುಣಃ ಪ್ರೋಕ್ತಃ ಶಿವ ಏವ ಮುನೀಶ್ವರಾಃ ।
ಸ ಏವ ಸಗುಣೋ ಜ್ಞೇಯಃ ಶಕ್ತಿಮತ್ತ್ವಾದ್ದ್ವಿಧಾಪಿ ಸಃ ॥ ೨೧ ॥

ಯೇನೈವ ವಿಷ್ಣವೇ ದತ್ತಾಸ್ಸರ್ವೇ ವೇದಾಸ್ಸನಾತನಾಃ ।
ವರ್ಣಾ ಮಾತ್ರಾ ಹ್ಯನೇಕಾಶ್ಚ ಧ್ಯಾನಂ ಸ್ವಸ್ಯ ಚ ಪೂಜನಂ ॥ ೨೨ ॥

ಈಶಾನಃ ಸರ್ವವಿದ್ಯಾನಾಂ ಶ್ರುತಿರೇಷಾ ಸನಾತನೀ ।
ವೇದಕರ್ತಾ ವೇದಪತಿಸ್ತಸ್ಮಾಚ್ಛಂಭುರುದಾಹೃತಃ ॥ ೨೩ ॥

ಸ ಏವ ಶಂಕರಃ ಸಾಕ್ಷಾತ್ಸರ್ವಾನುಗ್ರಹಕಾರಕಃ ।
ಕರ್ತಾ ಭರ್ತಾ ಚ ಹರ್ತಾ ಚ ಸಾಕ್ಷೀ ನಿರ್ಗುಣ ಏವ ಸಃ ॥ ೨೪ ॥

---

ಸೃಷ್ಟಿಯ ಮಧ್ಯದಲ್ಲಿಯೂ ಸೃಷ್ಟಿಯ ಕೊನೆಯಲ್ಲಿಯೂ ಶಿವನೇ ಇರುವನು. ಯಾವ ಕಾರ್ಯವು ನಡೆಯದಿದ್ದರೂ ಆಗಲೂ ಶಿವನೇ ಇರುವನು.

೨೧-೨೩. ಎಲೈ ಋಷಿಶ್ರೇಷ್ಠರೇ! ಕೇಳಿ. ಸೃಷ್ಟಿ, ಸ್ಥಿತಿ, ಪ್ರಳಯ ತಿರೋಧಾನಕಾಲಗಳಲ್ಲಿರುವುದರಿಂದ ಶಿವನು ಚತುರ್ಗುಣನೆನಿಸುವನು. ಅವನೇ ಶಕ್ತಿಯುಕ್ತನಾಗಿ ಸಗುಣನೆನಿಸುವನು. ನಿರ್ಗುಣನೂ ಆಗಿ ಎರಡು ಬಗೆಯಾಗಿರುವನು. ಅವನೇ ವಿಷ್ಣುವಿಗೆ ಸನಾತನವಾದ ಸಕಲ ವೇದಗಳನ್ನೂ ಕೊಟ್ಟನು. ಅನೇಕವಾದ ವರ್ಣಗಳು, ಮಾತ್ರೆಗಳು, ಧ್ಯಾನ, ಇವೆಲ್ಲವೂ ಈಶ್ವರನ ಪೂಜೆಯಾಗಿರುವುದು. "ಈಶಾನಃ ಸರ್ವವಿದ್ಯಾನಾಂ" ಎಂಬ ವೇದಮಂತ್ರವು ಆ ಸದಾಶಿವನನ್ನೇ ಹೇಳುವುದು. ಅವನೇ ವೇದವನ್ನು ಮಾಡಿದವನು. ಅವನೇ ಅದಕ್ಕೆ ಅಧಿಪತಿಯು. ಆ ಕಾರಣದಿಂದಲೇ ಅವನಿಗೆ ಶಂಭುವೆಂದು ಹೆಸರು ಬಂದಿರುವುದು.

೨೪-೨೫. ಆ ಸಾಕ್ಷಾತ್ ಶಂಕರನೇ ಸಕಲರಿಗೂ ಅನುಗ್ರಹವನ್ನು ಮಾಡುವನು. ಅವನೇ ಸೃಷ್ಟಿಸಿ, ಕಾಪಾಡಿ, ನಾಶವನ್ನೂ ಮಾಡುವನು. ಸರ್ವಸಾಕ್ಷಿಸ್ವರೂಪನಾಗಿ ನಿರ್ಗುಣನಾಗಿರುವನು. ಇತರರಿಗೆಲ್ಲ ಕಾಲದ ಅಳತೆಯುಂಟು. ಕಾಲ

ಅನ್ಯೇಷಾಂ ಕಾಲಮಾನಂ ಚ ಕಾಲಸ್ಯ ಕಲನಾ ನ ಹಿ ।
ಮಹಾಕಾಲಸ್ಸ್ವಯಂ ಸಾಕ್ಷಾನ್ಮಹಾಕಾಲೀಸಮಾಶ್ರಿತಃ ॥ ೨೫ ॥

ತಥಾ ಚ ಬ್ರಾಹ್ಮಣಾ ರುದ್ರಂ ತಥಾ ಕಾಲೀಂ ಪ್ರಚಕ್ಷತೇ ।
ಸರ್ವಂ ತಾಭ್ಯಾಂ ತತಃ ಪ್ರಾಪ್ತಮಿಚ್ಛಯಾ ಸತ್ಯಲೀಲಯಾ ॥ ೨೬ ॥

ನ ತಸ್ಯೋತ್ಪಾದಕಃ ಕಶ್ಚಿದ್ಭರ್ತಾ ಹರ್ತಾ ನ ತಸ್ಯ ಹಿ ।
ಸ್ವಯಂ ಸರ್ವಸ್ಯ ಹೇತುಸ್ತೇ ಕಾರ್ಯಭೂತಾಚ್ಯುತಾದಯಃ ॥ ೨೭ ॥

ಸ್ವಯಂ ಚ ಕಾರಣಂ ಕಾರ್ಯಂ ಸ್ವಸ್ಯ ನೈವ ಕದಾಚನ ।
ಏಕೋಽಪ್ಯನೇಕತಾಂ ಯಾತೋಽಪ್ಯನೇಕೋಽಪ್ಯೇಕತಾಂ ವ್ರಜೇತ್ ॥

ಏಕಂ ಬೀಜಂ ಬಹಿರ್ಭೂತ್ವಾ ಪುನರ್ಬೀಜಂ ಚ ಜಾಯತೇ ।
ಬಹುತ್ವೇ ಚ ಸ್ವಯಂ ಸರ್ವಂ ಶಿವರೂಪೀ ಮಹೇಶ್ವರಃ ॥ ೨೯ ॥

ಏತತ್ಪರಂ ಶಿವಜ್ಞಾನಂ ತತ್ತ್ವತಸ್ತದುದಾಹೃತಂ ।
ಜಾನಾತಿ ಜ್ಞಾನವಾನೇವ ನಾನ್ಯಃ ಕಶ್ಚಿದೃಷೀಶ್ವರಾಃ ॥ ೩೦ ॥

---

ಸ್ವರೂಪನಾದ ಇವನಿಗೆ ಅಳತೆಯಿಲ್ಲ. ಆದುದರಿಂದ ಇವನನ್ನು ಮಹಾಕಾಲನೆಂದು ಹೇಳುವರು. ಮಹಾಕಾಲಿಯೇ ಇವನ ಶಕ್ತಿಯು.

೨೬-೨೮. ಬ್ರಾಹ್ಮಣರು ರುದ್ರನನ್ನೂ, ಕಾಲಿಯನ್ನೂ ಸರ್ವಕಾರಣರೆಂದು ಹೇಳುವರು. ಈ ಪ್ರಪಂಚವೆಲ್ಲವೂ ಅವರ ಇಚ್ಛಾರೂಪವಾದ ಲೀಲೆಯಿಂದ ಉಂಟಾಗಿರುವುದು. ಆ ಶಿವನ ಉತ್ಪತ್ತಿ, ರಕ್ಷಣೆ, ನಾಶಕ್ಕೆ ಕಾರಣರಾದವರು ಯಾರೂ ಇರುವುದಿಲ್ಲ. ಸಮಸ್ತಕ್ಕೂ ಅವನೇ ಕಾರಣನಾಗಿರುವನು. ವಿಷ್ಣುವೇ ಮೊದಲಾದ ಸಕಲ ದೇವತೆಗಳೂ ಕಾರ್ಯಸ್ವರೂಪರಾದವರು. ಶಿವನೇ ಕಾರಣನು. ಅವನು ಕಾರ್ಯಸ್ವರೂಪನಲ್ಲ. ತಾನೊಬ್ಬನೇ ಅನೇಕ ಸ್ವರೂಪವಾಗಿಯೂ, ಏಕಸ್ವರೂಪನಾಗಿಯೂ ಆಗುವನು.

೨೯-೩೦. ಒಂದು ಬೀಜವು ಮರವಾಗಿ ಪ್ರಕಟವಾಗಿ ಮತ್ತೆ ಬೀಜವಾಗುವುದು. ಆ ಬೀಜವು ಕಾರಣವಾದ ಬೀಜಸ್ವರೂಪವಾದುದೇ ಹೇಗೆ ಆಗಿರುವುದೋ, ಹಾಗೆ ಶಿವನು ಸಮಸ್ತ ವಸ್ತುರೂಪನಾಗಿ ವ್ಯಕ್ತವಾದರೂ ಆ ವಸ್ತುವೆಲ್ಲವೂ ಮಹೇಶ್ವರ ಸ್ವರೂಪವಾದುದೇ ಆಗಿರುವುದು. ಇದೇ ಶ್ರೇಷ್ಠವಾದ ಶಿವಜ್ಞಾನವು. ಎಲೈ ಋಷಿಶ್ರೇಷ್ಠರೇ ಇದನ್ನು ಜ್ಞಾನಿಯೇ ತಿಳಿಯುವನು. ಇತರರು ತಿಳಿಯಲಾರರು.

॥ ಮುನಯ ಊಚುಃ ॥

ಜ್ಞಾನಂ ಸಲಕ್ಷಣಂ ಬ್ರೂಹಿ ಯಜ್ಜ್ಞಾತ್ವಾ ಶಿವತಾಂ ವ್ರಜೇತ್ ।
ಕಥಂ ಶಿವಶ್ಚ ತತ್ಸರ್ವಂ ಸರ್ವಂ ವಾ ಶಿವ ಏವ ಚ ॥ ೩೧ ॥

॥ ವ್ಯಾಸ ಉವಾಚ ॥

ಏತದಾಕರ್ಣ್ಯ ವಚನಂ ಸೂತಃ ಪೌರಾಣಿಕೋತ್ತಮಃ ।
ಸ್ಮೃತ್ವಾ ಶಿವಪದಾಂಭೋಜೇ ಮುನೀಂಸ್ತಾನಬ್ರವೀದ್ವಚಃ ॥ ೩೨ ॥

ಇತಿ ಶ್ರೀ ಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಸಗುಣನಿರ್ಗುಣಭೇದವರ್ಣನಂ ನಾಮ
ದ್ವಿಚತ್ವಾರಿಂಶೋಽಧ್ಯಾಯಃ



---

೩೧. ಮುನಿಗಳು ಕೇಳಿದರು :—ಎಲೈ ಸೂತಮುನಿಯೇ! ಶಿವನು ಸರ್ವಸ್ವರೂಪವಾಗಿಯೂ- ಸರ್ವವೂ ಶಿವಸ್ವರೂಪವಾಗಿಯೂ ಹೇಗೆ ಆಗುವುದು? ಯಾವ ಜ್ಞಾನವನ್ನು ತಿಳಿದರೆ ಶಿವತತ್ವವು ಪ್ರಾಪ್ತವಾಗುವುದೋ, ಆ ಜ್ಞಾನವನ್ನು ಲಕ್ಷಣ ಸಹಿತವಾಗಿ ನಮಗೆ ಹೇಳಬೇಕು ಎಂದರು.

೩೨. ಪುರಾಣವನ್ನು ಹೇಳುವುದರಲ್ಲಿ ಶ್ರೇಷ್ಠನಾದ ಸೂತಮುನಿಯು ಋಷಿಗಳ ಈ ಮಾತನ್ನು ಕೇಳಿ, ಶಿವನ ಪಾದಕಮಲವನ್ನು ಧ್ಯಾನಿಸಿ ಆ ಋಷಿಗಳಿಗೆ ಹೇಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಸಗುಣ, ನಿರ್ಗುಣಭೇದವರ್ಣನೆಯೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೋಟಿರುದ್ರಸಂಹಿತಾಯಾಂ

## ತ್ರಿಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

**ಶ್ರೂಯತಾಮೃಷಯಸ್ಸರ್ವೇ ಶಿವಜ್ಞಾನಂ ಯಥಾ ಶ್ರುತಂ ।**
**ಕಥಯಾಮಿ ಮಹಾಗುಹ್ಯಂ ಪರಮುಕ್ತಿಸ್ವರೂಪಕಂ ॥ ೧ ॥**

**ಕನಾರದಕುಮಾರಾಣಾಂ ವ್ಯಾಸಸ್ಯ ಕಪಿಲಸ್ಯ ಚ ।**
**ಏತೇಷಾಂ ಚ ಸಮಾಜೇ ತೈರ್ನಿಶ್ಚಿತ್ಯ ಸಮುದಾಹೃತಂ ॥ ೨ ॥**

**ಇತಿ ಜ್ಞಾನಂ ಸದಾ ಜ್ಞೇಯಂ ಸರ್ವಂ ಶಿವಮಯಂ ಜಗತ್ ।**
**ಶಿವಃ ಸರ್ವಮಯೋ ಜ್ಞೇಯಸ್ಸರ್ವಜ್ಞೇನ ವಿಪಶ್ಚಿತಾ ॥ ೩ ॥**

---

### ನಲವತ್ತಮೂರನೆಯ ಅಧ್ಯಾಯ.

೧–೩. **ಸೂತನು ಹೇಳಿದನು.**—ಎಲೈ ಋಷಿಗಳೇ! ಅತ್ಯಂತ ಗೋಪ್ಯವೂ, ಶ್ರೇಷ್ಠವಾದ ಮುಕ್ತಿಸ್ವರೂಪವೂ ಆದ ಶಿವಜ್ಞಾನವನ್ನು ನಾನು ಗುರುಗಳಿಂದ ಕೇಳಿ ತಿಳಿದಂತೆ ನಿಮಗೆ ಹೇಳುವೆದು. ಬ್ರಹ್ಮನೂ, ನಾರದನೂ ಸನತ್ಕುಮಾರನೇ ಮುಂತಾದವರೂ, ವ್ಯಾಸನೂ ಕಪಿಲಮುನಿಯೂ ಇವರುಗಳ ಸಮಾಜದಲ್ಲಿ ಅವರಿಂದ ನಿಶ್ಚಯಿಸಿ ಹೇಳಿದುದೇ ಈ ಶಿವಜ್ಞಾನವು. ಸಮಸ್ತ ಜಗತ್ತೂ ಶಿವಸ್ವರೂಪವಾದುದು. ಶಿವನು ಸಮಸ್ತ ಜಗತ್ತಿನ ಸ್ವರೂಪನು ಎಂದು ಯಾವಾಗಲೂ ತಿಳಿದುಕೊಳ್ಳುವುದೇ ಜ್ಞಾನವೆನಿಸುವುದು. ವಿವೇಕಿಯಾದ ಮನುಷ್ಯನು ಇದನ್ನು ತಿಳಿದುಕೊಳ್ಳಬೇಕು.

ಆಬ್ರಹ್ಮತೃಣಪರ್ಯಂತಂ ಯತ್ಕಿಂಚಿದ್ದೃಶ್ಯತೇ ಜಗತ್ ।
ತತ್ಸರ್ವಂ ಶಿವ ಏವಾಸ್ತಿ ಸ ದೇವಃ ಶಿವ ಉಚ್ಯತೇ ॥ ೪ ॥

ಯದೇಚ್ಛಾ ತಸ್ಯ ಜಾಯೇತ ತದಾ ಚ ಕ್ರಿಯತೇ ತ್ವಿದಂ ।
ಸರ್ವಂ ಸ ಏವ ಜಾನಾತಿ ತಂ ನ ಜಾನಾತಿ ಕಶ್ಚನ ॥ ೫ ॥

ರಚಯಿತ್ವಾ ಸ್ವಯಂ ತಚ್ಚ ಪ್ರವಿಶ್ಯ ದೂರತಃ ಸ್ಥಿತಃ ।
ನ ತತ್ರ ಚ ಪ್ರವಿಷ್ಟೋಽಸೌ ನಿರ್ಲಿಪ್ತಶ್ಚಿತ್ಸ್ವರೂಪವಾನ್ ॥ ೬ ॥

ಯಥಾ ಚ ಜ್ಯೋತಿಷಶ್ಚೈವ ಜಲಾದೌ ಪ್ರತಿಬಿಂಬತಾ ।
ವಸ್ತುತೋ ನ ಪ್ರವೇಶೋ ವೈ ತಥೈವ ಚ ಶಿವಃ ಸ್ವಯಂ ॥ ೭ ॥

ವಸ್ತುತಸ್ತು ಸ್ವಯಂ ಸರ್ವಂ ಕ್ರಮೋ ಹಿ ಭಾಸತೇ ಶುಭಃ ।
ಅಜ್ಞಾನಂ ಚ ಮತೇರ್ಭೇದೋ ನಾಸ್ತ್ಯನ್ಯಚ್ಚ ದ್ವಯಂ ಪುನಃ ॥ ೮ ॥

---

೪–೮. ಬ್ರಹ್ಮನು ಮೊದಲುಗೊಂಡು ಹುಲ್ಲುಕಡ್ಡಿಯವರಿಗೆ ಇರುವ ಸಮಸ ಜಗತ್ತೂ ಶಿವಸ್ವರೂಪವಾಗಿಯೇ ಇರುವುದು. ಆ ದೇವನೇ ಶಿವನು. ಯಾವಾಗ ಅವನ ಇಚ್ಛೆಯುಂಟಾಗುವುದೋ ಆಗ ಈ ಸಮಸ್ತ ಜಗತ್ತನ್ನೂ ಮಾಡುವನು. ಇವೆಲ್ಲವನ್ನೂ ಅವನು ತಿಳಿದಿರುವನು. ಆವನನ್ನು ಮಾತ್ರ ಯಾರೂ ತಿಳಿಯರು. ತಾನು ಇವುಗಳೆಲ್ಲವನ್ನೂ ರಚಿಸಿ ಅದರಲ್ಲಿ ಪ್ರವೇಶಿಸಿ ದೂರದಲ್ಲಿರುವನು. ಕರ್ಮ ಸಂಪರ್ಕವಿಲ್ಲದೆ ಸಾಕ್ಷೀಭೂತನಾಗಿರುವನು. ಎಂದರೆ ಜ್ಞಾನಸ್ವರೂಪನಾದುದ ರಿಂದ ಸಕಲ ವಸ್ತುಗಳಲ್ಲಿಯೂ ತಾನು ಪ್ರವೇಶಿಸಿದ್ದರೂ ಅವುಗಳಿಗೆ ಸಂಬಂಧಿಸಿದಂತೆ ಇರುವನು. ಸೂರ್ಯ, ಚಂದ್ರ ಮುಂತಾದ ಪ್ರಕಾಶಗಳು ಹೇಗೆ ನೀರಿನಲ್ಲಿ ಪ್ರತಿ ಬಿಂಬಿಸಿ ವಸ್ತುತಃ ನೀರಿನೊಳಗೆ ಪ್ರವೇಶಿಸದಿರುವುವೋ ಹಾಗೆ ಶಿವನು ಪ್ರಪಂಚದಲ್ಲಿ ಪ್ರವೇಶಿಸಿರುವನು. ನಿಜವಾಗಿಯೂ ಸಮಸ್ತ ವಸ್ತುವೂ ಆತ್ಮಸ್ವರೂಪವಾದುದೇ ಎಂಬುದು ಕ್ರಮವಾಗಿ ಭಾವಿಸುವುದು. ಬುದ್ಧಿಭೇದವೇ ಅಜ್ಞಾನವೆನಿಸುವುದು. ದ್ವಿತೀಯ ವಸ್ತುವೇ ಇರುವುದಿಲ್ಲ. ಎಲ್ಲವೂ ಶಿವಸ್ವರೂಪವೇ ಎಂಬುದು ಮುಖ್ಯಾ ಭಿಪ್ರಾಯವು.

ದರ್ಶನೇಷು ಚ ಸರ್ವೇಷು ಮತಿಭೇದಃ ಪ್ರದರ್ಶ್ಯತೇ ।
ಪರಂ ವೇದಾಂತಿನೋ ನಿತ್ಯಮದ್ವೈತಂ ಪ್ರತಿಚಕ್ಷತೇ ॥ ೯ ॥

ಸ್ವಸ್ಯಾಪ್ಯೇಶಸ್ಯ ಜೀವೋಂಶೋ ಹ್ಯವಿದ್ಯಾನೋಹಿತೋಽವಶಃ ।
ಅನ್ಯೋಽಹಮಿತಿ ಜಾನಾತಿ ತಯಾ ಮುಕ್ತೋ ಭವೇಚ್ಛಿವಃ ॥ ೧೦ ॥

ಸರ್ವಂ ವ್ಯಾಪ್ಯ ಶಿವಃ ಸಾಕ್ಷಾದ್ವ್ಯಾಪಕಃ ಸರ್ವಜಂತುಷು ।
ಚೇತನಾಚೇತನೇಶೋಽಪಿ ಸರ್ವತ್ರ ಶಂಕರಸ್ಸ್ವಯಂ ॥ ೧೧ ॥

ಉಪಾಯಂ ಯಃ ಕರೋತ್ಯಸ್ಯ ದರ್ಶನಾರ್ಥಂ ವಿಚಕ್ಷಣಃ ।
ವೇದಾಂತಮಾರ್ಗಮಾಶ್ರಿತ್ಯ ತದ್ದರ್ಶನಫಲಂ ಲಭೇತ್ ॥ ೧೨ ॥

ಯಥಾಗ್ನಿರ್ವ್ಯಾಪಕಶ್ಚೈವ ಕಾಷ್ಠೇಕಾಷ್ಠೇ ಚ ತಿಷ್ಠತಿ ।
ಯೋ ವೈ ಮಂಥತಿ ತತ್ಕಾಷ್ಠಂ ಸ ವೈ ಪಶ್ಯತ್ಯಸಂಶಯಂ ॥ ೧೩ ॥

ಭಕ್ತ್ಯಾದಿಸಾಧನಾನೀಹ ಯಃ ಕರೋತಿ ವಿಚಕ್ಷಣಃ ।
ಸ ವೈ ಪಶ್ಯತ್ಯವಶ್ಯಂ ಹಿ ತಂ ಶಿವಂ ನಾತ್ರ ಸಂಶಯಃ ॥ ೧೪ ॥

---

೯–೧೨. ಸಮಸ್ತ ಶಾಸ್ತ್ರಗಳಲ್ಲಿಯೂ ಬುದ್ಧಿಭೇದವಿರುವುದು. ವೇದಾಂತಿಗಳು ಮಾತ್ರ ಅದ್ವೈತವನ್ನು ಯಾವಾಗಲೂ ಶ್ರೇಷ್ಠವಾದುದೆಂದು ಹೇಳುವರು. ಜೀವನು ಈಶ್ವರನ ಅಂಶವಾದವನು. ಅವನು ಅವಿದ್ಯೆಯಿಂದ ಬಿಡುಗಡೆಯನ್ನು ಹೊಂದಿದರೆ ಶಿವನೇ ಆಗುವನು. ಶಿವನು ಸಾಕ್ಷಾತ್ತಾಗಿ ತಾನೇ ಎಲ್ಲವನ್ನೂ ವ್ಯಾಪಿಸಿಕೊಂಡಿರುವನು. ಶಂಕರನು ಚೇತನಾಚೇತನ ರೂಪವಾದ ಸಕಲ ವಸ್ತುಗಳಿಗೂ ಸ್ವಾಮಿಯಾಗಿರುವನು. ಯಾವನಾದರೂ ಬುದ್ಧಿವಂತನಾದ ಮನುಷ್ಯನು ಶಿವನ ದರ್ಶನವನ್ನು ಅಪೇಕ್ಷಿಸಿ, ಅದಕ್ಕೆ ತಕ್ಕ ಉಪಾಯವನ್ನು ಮಾಡಿದರೆ ಎಂದರೆ ವೇದಾಂತ ಮಾರ್ಗವನ್ನಾಶ್ರಯಿಸಿದರೆ ಅವನ ದರ್ಶನ ಫಲವನ್ನು ಪಡೆಯಬಹುದು.

೧೩–೧೪. ಅಗ್ನಿಯು ಪ್ರತಿಯೊಂದು ಕಟ್ಟಿಗೆಯಲ್ಲಿಯೂ ವ್ಯಾಪಕವಾಗಿರುವುದು. ಆ ಕಟ್ಟಿಗೆಗಳಲ್ಲಿ ಒಂದರಮೇಲೊಂದನ್ನು ಉಜ್ಜಿದರೆ ಅಲ್ಲಿ ಅಗ್ನಿಯು ಗೋಚರವಾಗುವುದು. ಆದರಂತೆ ಬುದ್ಧಿವಂತವಾದ ಮನುಷ್ಯನು ಭಕ್ತಿಯೇ ಮುಂತಾದ ಸಾಧನಗಳನ್ನಾಶ್ರಯಿಸಿ ಆ ಶಿವನನ್ನು ಕಾಣಬಹುದು. ಇದರಲ್ಲಿ

ಶಿವಃ ಶಿವಃ ಶಿವಶ್ಚೈವ ನಾನ್ಯದಸ್ತೀತಿ ಕಿಂಚನ ।
ಭ್ರಾಂತ್ಯಾ ನಾನಾಸ್ವರೂಪೋ ಹಿ ಭಾಸತೇ ಶಂಕರಸ್ಸದಾ ॥ ೧೫ ॥

ಯಥಾ ಸಮುದ್ರೋ ಮೃಚ್ಚೈವ ಸುವರ್ಣಮಥವಾ ಪುನಃ ।
ಉಪಾಧಿತೋ ಹಿ ನಾನಾತ್ವಂ ಲಭತೇ ಶಂಕರಸ್ತಥಾ ॥ ೧೬ ॥

ಕಾರ್ಯಕಾರಣಯೋರ್ಭೇದೋ ವಸ್ತುತೋ ನ ಪ್ರವರ್ತತೇ ।
ಕೇವಲಂ ಭ್ರಾಂತಿಬುದ್ಧ್ಯೈವ ತದಭಾವೇ ಸ ನಶ್ಯತಿ ॥ ೧೭ ॥

ತದಾ ಬೀಜಾತ್ಪ್ರರೋಹಶ್ಚ ನಾನಾತ್ವಂ ಹಿ ಪ್ರಕಾಶಯೇತ್ ।
ಅಂತೇ ಚ ಬೀಜಮೇವ ಸ್ಯಾತ್ತತ್ಪ್ರರೋಹಶ್ಚ ನಶ್ಯತಿ ॥ ೧೮ ॥

ಜ್ಞಾನೀ ಚ ಬೀಜಮೇವ ಸ್ಯಾತ್ಪ್ರರೋಹೋ ವಿಕೃತಿರ್ಮತಾ ।
ತನ್ನಿವೃತ್ತೌ ಪುನರ್ಜ್ಞಾನೀ ನಾತ್ರ ಕಾರ್ಯಾ ವಿಚಾರಣಾ ॥ ೧೯ ॥

---

ಸಂದೇಹವಿಲ್ಲ. ಸಮಸ್ತವೂ ಶಿವಸ್ವರೂಪವೇ ಹೊರತು ಬೇರೊಂದಿಲ್ಲ. ಭ್ರಾಂತಿಯಿಂದ ಶಿವನು ನಾನಾರೂಪವಾಗಿ ಕಾಣುವನು.

೧೬-೧೭. ಸಮುದ್ರವೇ ಕೊಲ್ಲಿ, ಖಾರಿ, ಅಳಿವೆ ಮುಂತಾದ ಹೆಸರನ್ನು ಹೊಂದುವಂತೆಯೂ; ಮಣ್ಣು, ಗಡಿಗೆ, ಕುಡಿಕೆ, ಶ್ರಾವೆ ಮುಂತಾದ ಹೆಸರನ್ನು ಪಡೆಯುವಂತೆಯೂ; ಚಿನ್ನವು, ಕಡಗ, ಹಾರ, ಉಂಗುರು ಮುಂತಾದ ಹೆಸರನ್ನು ಹೊಂದುವಂತೆಯೂ ಶಿವನು ಉಪಾಧಿಭೇದದಿಂದ ಅನೇಕ ರೂಪವನ್ನು ಪಡೆಯುವನು. ವಸ್ತುತಃ ಕಾರ್ಯಕಾರಣಗಳಿಗೆ ಭೇದವಿರುವುದಿಲ್ಲ. ಈ ಭೇದವು ಕೇವಲ ಭ್ರಾಂತಿ ಬುದ್ಧಿಯಿಂದ ಗೋಚರವಾಗುವುದು. ಭ್ರಾಂತಿಯಿಲ್ಲದಿದ್ದರೆ ಭೇದಬುದ್ಧಿಯೂ ನಾಶವಾಗುವುದು.

೧೮-೨೦. ಬೀಜದಿಂದ ಮೊಳಕೆಯೂ ಅನೇಕತ್ವವೂ ಪ್ರಕಾಶಿಸುವುದು. ಕೊನೆಯಲ್ಲಿ ಬೀಜವು ಮಾತ್ರವಿರುವುದು. ಅದರ ಮೊಳಕೆಗಳು ನಾಶವಾಗುವುವು. ಇಲ್ಲಿ ಜ್ಞಾನಿಯೇ ಬೀಜವು. ವಿಕಾರವೇ ಮೊಳಕೆಗಳು. ವಿಕಾರವು ನಾಶವಾದರೆ ಮತ್ತೆ ಜ್ಞಾನಿಯೇ ಆಗುವನು. ಈ ವಿಷಯದಲ್ಲಿ ಸಂದೇಹಪಡಬೇಕಾದುದಿಲ್ಲ.

ಸರ್ವಂ ಶಿವಃ ಶಿವಸ್ಸರ್ವೋ ನಾಸ್ತಿ ಭೇದಶ್ಚ ಕಶ್ಚನ ।
ಕಥಂ ಚ ವಿವಿಧಂ ಪಶ್ಯತ್ಯೇಕತ್ವಂ ಚ ಕಥಂ ಪುನಃ ॥ ೨೦ ॥

ಯಥೈಕಂ ಚೈವ ಸೂರ್ಯಾಖ್ಯಂ ಜ್ಯೋತಿರ್ನಾನಾವಿಧಂ ಜನೈಃ ।
ಜಲಾದೌ ಚ ವಿಶೇಷೇಣ ದೃಶ್ಯತೇ ತತ್ತಥೈವ ಸಃ ॥ ೨೧ ॥

ಸರ್ವತ್ರ ವ್ಯಾಪಕಶ್ಚೈವ ಸ್ಪರ್ಶತ್ವಂ ನ ವಿಬಧ್ಯತೇ ।
ತಥೈವ ವ್ಯಾಪಕೋ ದೇವೋ ಬಧ್ಯತೇ ನ ಕ್ವಚಿತ್ಸ ವೈ ॥ ೨೨ ॥

ಸಾಹಂಕಾರಸ್ತಥಾ ಜೀವಸ್ತನ್ಮುಕ್ತಃ ಶಂಕರಃ ಸ್ವಯಂ ।
ಜೀವಸ್ತುಚ್ಛಃ ಕರ್ಮಭೋಗೀ ನಿರ್ಲಿಪ್ತಃ ಶಂಕರೋ ಮಹಾನ್ ॥ ೨೩ ॥

ಯಥೈಕಂ ಚ ಸುವರ್ಣಾದಿ ಮಿಲಿತಂ ರಜತಾದಿನಾ ।
ಅಲ್ಪಮೂಲ್ಯಂ ಪ್ರಜಾಯೇತ ತಥಾ ಜೀವೋಽಪ್ಯಹಂಯುತಃ ॥ ೨೪ ॥

---

ಎಲ್ಲವೂ ಶಿವಸ್ವರೂಪವಾದುದೇ ಸರಿ. ಶಿವನೇ ಸರ್ವಸ್ವರೂಪನು. ಭೇದವೆಂಬುದು ಇಲ್ಲವೇ ಇಲ್ಲ. ಅನೇಕ ವಿಕಲ್ಪಗಳನ್ನು ಹೇಗೆ ಕಾಣುವನು ? ಪುನಃ ಐಕತ್ವವನ್ನು ಹೇಗೆ ಕಾಣುವನು ? ಎಂದರೆ ಹೇಳುವೆನು ಕೇಳಿರಿ.

೨೧-೨೨. ಸೂರ್ಯನೆಂಬ ಒಂದೇ ಪ್ರಕಾಶವು ನೀರಿನಲ್ಲಿಯೂ, ಕನ್ನಡಿ ಮುಂತಾದ ವಸ್ತುಗಳಲ್ಲಿಯೂ ಪ್ರತಿಬಿಂಬವಾಗಿ ಬಗೆಬಗೆಯ ರೂಪದಿಂದ ಕಾಣುವಂತೆ ಶಿವಸ್ವರೂಪವೂ ಬಗೆಬಗೆಯಾಗಿ ಕಾಣುವುದು. ಸೂರ್ಯನ ಪ್ರಕಾಶವು ಸರ್ವತ್ರ ವ್ಯಾಪಿಸಿದ್ದರೂ ಪದಾರ್ಥಗಳ ಸ್ಪರ್ಶದಿಂದ ಅವುಗಳ ಗುಣದೋಷಗಳ ಸಂಬಂಧವನ್ನು ಹೇಗೆ ಪಡೆಯುವುದಿಲ್ಲವೋ ಹಾಗೆ ಶಿವನು ಸರ್ವವ್ಯಾಪಿಯಾದರೂ ಲೌಕಿಕವಾದ ಪದಾರ್ಥಗಳ ಗುಣದೋಷಗಳ ಸಂಬಂಧವನ್ನು ಪಡೆಯುವುದಿಲ್ಲ.

೨೩-೨೪. ಜೀವನು ಅಹಂಭಾವದಿಂದ ಕೂಡಿದವನು. ಶಿವನು ಅಹಂಭಾವ ವಿಲ್ಲದವನು. ಜೀವನು ಅಲ್ಪನು, ತಾನು ಮಾಡಿದ ಕರ್ಮಫಲಗಳನ್ನು ಅನುಭವಿಸು ವವನು. ಶಿವನು ಮಹಾಮಹಿಮನು. ಕರ್ಮಫಲಗಳ ಸಂಬಂಧವಿಲ್ಲದವನು. ಚಿನ್ನಕ್ಕೆ ಬೆಳ್ಳಿ ಮುಂದಾದ ಲೋಹಗಳು ಸೇರಿದರೆ ಬೆಲೆಯು ಹೇಗೆ ಕಡಿಮೆಯಾಗು ವುದೋ ಹಾಗೆ ಅಹಂಭಾವದಿಂದ ಕೂಡಿದ ಜೀವನು ಗೌರವದಲ್ಲಿಯೂ ಮಹಿಮೆ

ಯಥೈವ ಹಿ ಸುವರ್ಣಾದಿ ಕ್ಷಾರಾದೇಃ ಶೋಧಿತಂ ಶುಭಂ ।
ಪೂರ್ವವನ್ಮೂಲ್ಯತಾಂ ಯಾತಿ ತಥಾ ಜೀವೋಽಪಿ ಶಂಸ್ಕೃತೇಃ ॥ ೨೫ ॥

ಪ್ರಥಮಂ ಸದ್ಗುರುಂ ಪ್ರಾಪ್ಯ ಭಕ್ತಿಭಾವಸಮನ್ವಿತಃ ।
ಶಿವಬುದ್ಧ್ಯಾ ಕರೋತ್ಯುಚ್ಚೈಃ ಪೂಜನಂ ಸ್ಮರಣಾದಿಕಂ ॥ ೨೬ ॥

ತದ್ವ್ಯಥ್ಯಾ ದೇಹತೋ ಯಾತಿ ಸರ್ವಪಾಪಾದಿಕೋ ಮಲಃ ।
ತದಾಽಜ್ಞಾನಂ ಚ ನಶ್ಯೇತ ಜ್ಞಾನವಾಞ್ಜಾಯತೇ ಯದಾ ॥ ೨೭ ॥

ತದಾಹಂಕಾರನಿರ್ಮುಕ್ತೋ ಜೀವೋ ನಿರ್ಮಲಬುದ್ಧಿಮಾನ್ ।
ಶಂಕರಸ್ಯ ಪ್ರಸಾದೇನ ಯಾತಿ ಶಂಕರತಾಂ ಪುನಃ ॥ ೨೮ ॥

ಯಥಾಽದರ್ಶಸ್ವರೂಪೇ ಚ ಸ್ವೀಯರೂಪಂ ಪ್ರದೃಶ್ಯತೇ ।
ತಥಾ ಸರ್ವತ್ರಗಂ ಶಂಭುಂ ಪಶ್ಯತೀತಿ ಸುನಿಶ್ಚಿತಂ ॥ ೨೯ ॥

---

ಯಲ್ಲಿಯೂ ಕಡಿಮೆಯಾಗುವನು. ಚಿನ್ನವು ಉಪ್ಪು ಮುಂತಾದುವುಗಳ ಸಂಬಂಧ ದಿಂದ ಶುದ್ಧಿಹೊಂದಿ ಬೆಲೆಯಲ್ಲಿ ಹೆಚ್ಚುವಂತೆ ಜೀವನು ಸಂಸ್ಕಾರಗಳಿಂದ ಶುದ್ಧನಾಗಿ ಶಿವನ ಮಹಿಮೆಯನ್ನು ಪಡೆಯುವನು.

೨೬-೨೮. ಅದಕ್ಕಾಗಿ ಮನುಜನು ಮೊದಲು ಸದ್ಗುರುವನ್ನು ಸೇರಿ ಭಕ್ತಿ ಯಿಂದ ಕೂಡಿ ಆ ಗುರುವೇ ಶಿವನೆಂಬ ಬುದ್ಧಿಯಿಂದ ವಿಶೇಷವಾದ ಪೂಜಾದಿಗಳನ್ನು ಮಾಡಬೇಕು. ಹೀಗೆ ಮಾಡಿದರೆ ಅಂತಹ ಬುದ್ಧಿಸಂಬಂಧದಿಂದ ಮನುಷ್ಯನ ಶರೀರದಲ್ಲಿರುವ ಸಮಸ್ತ ಪಾಪರೂಪವಾದ ಕೊಳೆಗಳೂ ಹೊರಟುಹೋಗುವುವು. ಯಾವಾಗ ಮನುಜನು ಜ್ಞಾನವುಳ್ಳವನಾಗುವನೋ ಆಗಲೇ ಅವನ ಅಜ್ಞಾನವು ನಾಶವಾಗುವುದು. ಆಗಲೇ ಜೀವನು ಅಹಂಕಾರವನ್ನು ಬಿಟ್ಟು ಪರಿಶುದ್ಧವಾದ ಬುದ್ಧಿಯುಳ್ಳವನಾಗಿ ಶಿವನ ಅನುಗ್ರಹದಿಂದ ಮತ್ತೆ ಶಿವಸ್ವರೂಪವನ್ನು ಹೊಂದು ವನು.

೨೯-೩೦. ಕನ್ನಡಿಯಲ್ಲಿ ತನ್ನ ಶರೀರದ ರೂಪು ಹೇಗೆ ಕಾಣುವುದೋ ಹಾಗೆ ಜ್ಞಾನಿಯಾದವನಿಗೆ ಎಲ್ಲೆಡೆಯಲ್ಲಿಯೂ ಶಿವನು ಕಾಣುವನೆಂಬುದು ನಿಜವಾದ ವಿಷ

ಜೀವನ್ಮುಕ್ತಸ್ಸ ಏವಾಸೌ ದೇಹಃ ಶೀರ್ಣಃ ಶಿವೇ ಮಿಲೇತ್ ।
ಪ್ರಾರಬ್ಧವಶಗೋ ದೇಹಸ್ತದ್ಭಿನ್ನೋ ಜ್ಞಾನವಾನ್ಮತಃ ॥ ೩೦ ॥

ಶುಭಂ ಲಬ್ಧ್ವಾ ನ ಹೃಷ್ಯೇತ ಕುಪ್ಯೇಲ್ಲಬ್ಧ್ವಾಽಶುಭಂ ನ ಹಿ ।
ದ್ವಂದ್ವೇಷು ಸಮತಾ ಯಸ್ಯ ಜ್ಞಾನವಾನುಚ್ಯತೇ ಹಿ ಸಃ ॥ ೩೧ ॥

ಆತ್ಮಯೋಗೇನ ತತ್ತ್ವಾನಾಮಥವಾ ಚ ವಿವೇಕತಃ ।
ಯಥಾ ಶರೀರತೋ ಯಾಸ್ಯಾಚ್ಛರೀರಂ ಮುಕ್ತಿಮಿಚ್ಛತಾ ॥ ೩೨ ॥

ಸದಾಶಿವೋ ವಿಲೀಯೇತ ಮುಕ್ತೋ ವಿರಹಮೇವ ಚ ।
ಜ್ಞಾನಮೂಲಂ ತಥಾಧ್ಯಾತ್ಮ್ಯಂ ತಸ್ಯ ಭಕ್ತಿಶ್ಶಿವಸ್ಯ ಚ ॥ ೩೩ ॥

ಭಕ್ತೇಶ್ಚ ಪ್ರೇಮ ಸಂಪ್ರೋಕ್ತಂ ಪ್ರೇಮ್ಣಶ್ಚ ಶ್ರವಣಂ ತಥಾ ।
ಶ್ರವಣಾಚ್ಚಾಪಿ ಸತ್ಸಂಗಸ್ಸತ್ಸಂಗಾಚ್ಚ ಗುರುರ್ಬುಧಃ ॥ ೩೪ ॥

---

ಯವು. ಅವನೇ ಜೀವನ್ಮುಕ್ತನೆನಿಸುವನು. ದೇಹವು ನಾಶವಾದರೆ ಅವನು ಶಿವನಲ್ಲಿ ಸೇರಿಹೋಗುವನು. ದೇಹವು ಪ್ರಾರಬ್ಧಕರ್ಮಕ್ಕೆ ಅಧೀನವಾದುದು. ಆ ದೇಹ ಸಂಬಂಧವಿಲ್ಲದವನೇ ಜ್ಞಾನಿಯೆನಿಸುವನು.

೩೧-೩೪. ಸುಖವು ಬಂದರೆ ಸಂತೋಷಪಡದೆಯೂ, ಕಷ್ಟವು ಬಂದರೆ ಕೋಪವನ್ನು ಹೊಂದದೆಯೂ, ಸುಖದುಃಖ ಶೀತೋಷ್ಣ ಮುಂತಾದ ದ್ವಂದ್ವಗಳಲ್ಲಿ ಸಮಾನಭಾವವು ಯಾರಿಗೆ ಇರುವುದೋ ಅವರೇ ಜ್ಞಾನಿಗಳೆನಿಸುವರು. ಮುಕ್ತಿಯನ್ನಪೇಕ್ಷಿಸುವ ಪುರುಷನು ಯೋಗಾಭ್ಯಾಸದಿಂದ ಆತ್ಮಜ್ಞಾನವನ್ನು ಪಡೆಯುವುದರಿಂದಲಾಗಲಿ ತತ್ತ್ವವಿವೇಚನೆಯನ್ನು ಮಾಡಿ, ಜ್ಞಾನವನ್ನು ಪಡೆಯುವುದರಿಂದಲಾಗಲಿ ಸದಾಶಿವನಲ್ಲಿ ಲೀನನಾಗಿ ಮುಕ್ತನಾಗುವನು. ಅಧ್ಯಾತ್ಮಜ್ಞಾನಕ್ಕೆ ಶಿವಭಕ್ತಿಯೇ ಮೂಲಕಾರಣವು. ಭಕ್ತಿಗೆ ಪ್ರೀತಿಯೂ, ಪ್ರೀತಿಗೆ ವೇದಾಂತಶ್ರವಣವೂ, ಶ್ರವಣಕ್ಕೆ ಸಜ್ಜನರ ಸಹವಾಸವೂ ಕಾರಣಗಳು. ಸಜ್ಜನರ ಸಹವಾಸದಿಂದಲೇ ವಿದ್ವಾಂಸನಾದ ಗುರುವು ದೊರೆಯುವನು. ಸದ್ಗುರುವಿನಿಂದ ಜ್ಞಾನವು ಪ್ರಾಪ್ತಿಯಾದರೆ ಜೀವನು

ಸಂಪನ್ನೇ ಚ ತಥಾ ಜ್ಞಾನೇ ಮುಕ್ತೋ ಭವತಿ ನಿಶ್ಚಿತಂ ।
ಇತಿ ಚೇಜ್ಜ್ಞಾನವಾನ್ಯೋ ವೈ ಶಂಭುಮೇವ ಸದಾ ಭಜೇತ್ ॥ ೩೫ ॥

ಅನನ್ಯಯಾ ಚ ಭಕ್ತ್ಯಾ ವೈ ಯುಕ್ತಃ ಶಂಭುಂ ಭಜೇತ್ಪುನಃ ।
ಅಂತೇ ಚ ಮುಕ್ತಿಮಾಯಾತಿ ನಾತ್ರ ಕಾರ್ಯಾ ವಿಚಾರಣಾ ॥ ೩೬ ॥

ಅತೋಽಧಿಕೋ ನ ದೇವೋಽಸ್ತಿ ಮುಕ್ತಿಪ್ರಾಪ್ತ್ಯೈ ಚ ಶಂಕರಾತ್ ।
ಶರಣಂ ಪ್ರಾಪ್ಯ ಯಂ ಚೈವ ಸಂಸಾರಾದ್ವಿನಿವರ್ತತೇ ॥ ೩೭ ॥

ಇತಿ ಮೇ ವಿವಿಧಂ ವಾಕ್ಯಮೃಷೀಣಾಂ ಚ ಸಮಾಗತೈಃ ।
ನಿಶ್ಚಿತ್ಯ ಕಥಿತಂ ವಿಪ್ರಾ ಧಿಯಾ ಧಾರ್ಯಂ ಪ್ರಯತ್ನತಃ ॥ ೩೮ ॥

ಪ್ರಥಮಂ ವಿಷ್ಣವೇ ದತ್ತಂ ಶಂಭುನಾ ಲಿಂಗಸಂಮುಖೇ ।
ವಿಷ್ಣುನಾ ಬ್ರಹ್ಮಣೇ ದತ್ತಂ ಬ್ರಹ್ಮಣಾ ಸನಕಾದಿಷು ॥ ೩೯ ॥

ನಾರದಾಯ ತತಃ ಪ್ರೋಕ್ತಂ ತಜ್ಜ್ಞಾನಂ ಸನಕಾದಿಭಿಃ ।
ವ್ಯಾಸಾಯ ನಾರದೇನೋಕ್ತಂ ತೇನ ಮಹ್ಯಂ ಕೃಪಾಲುನಾ ॥ ೪೦ ॥

---

ಮುಕ್ತನಾಗುವುದು ನಿಶ್ಚಯವು. ಯಾವನು ಜ್ಞಾನವನ್ನು ಪಡೆಯಬೇಕಾದರೂ ಯಾವಾಗಲೂ ಶಿವನನ್ನೇ ಧ್ಯಾನಿಸಬೇಕು.

೩೬-೩೭. ಶಿವನಲ್ಲಿ ಏಕಾಗ್ರವಾದ ಭಕ್ತಿಯಿಂದ ಕೂಡಿದವನು ಪುನಃಪುನಃ ಶಿವನನ್ನೇ ಭಜಿಸಿ ಕೊನೆಯಲ್ಲಿ ಮುಕ್ತನಾಗುವನು. ಆದುದರಿಂದ ಮೋಕ್ಷಪ್ರಾಪ್ತಿಯನ್ನುಂಟುಮಾಡುವ ವಿಷಯದಲ್ಲಿ ಶಿವನಿಗಿಂತ ಅಧಿಕನಾದ ದೇವನಿಲ್ಲ. ಜನರು ಅವನನ್ನು ಮರೆಹೊಕ್ಕು ಸಂಸಾರದುಃಖವನ್ನು ಕಳೆದುಕೊಳ್ಳುವರು.

೩೮. ಎಲೈ ಬ್ರಾಹ್ಮಣರೇ, ನಾನು ಋಷಿಗಳ ಗುಂಪಿನಲ್ಲಿ ಈ ನನ್ನ ಅನೇಕ ಮಾತುಗಳನ್ನು ನಿಷ್ಕರ್ಷೆಮಾಡಿ ಹೇಳಿರುವೆನು. ನೀವು ಪ್ರಯತ್ನಪೂರ್ವಕವಾಗಿ ಜ್ಞಾಪಕದಲ್ಲಿಟ್ಟುಕೊಳ್ಳಿರಿ.

೩೯-೪೦. ಮೊದಲು ಶಿವನು ಲಿಂಗದ ಎದುರಿಗೆ ವಿಷ್ಣುವಿಗೆ ಜ್ಞಾನವನ್ನು ಉಪದೇಶಮಾಡಿದನು. ವಿಷ್ಣುವು ಬ್ರಹ್ಮನಿಗೂ, ಬ್ರಹ್ಮನು ಸನಕಾದಿಗಳಿಗೂ, ಸನಕಾದಿಗಳು ನಾರದನಿಗೂ, ನಾರದನು ವ್ಯಾಸನಿಗೂ, ದಯಾಶಾಲಿಯಾದ ವ್ಯಾಸನು ನನಗೂ ಉಪದೇಶಮಾಡಿದನು.

ಮಯಾ ಚೈವ ಭವದ್ಭ್ಯಶ್ಚ ಭವದ್ಭಿರ್ಲೋಕಹೇತವೇ ।
ಸ್ಥಾಪನೀಯಂ ಪ್ರಯತ್ನೇನ ಶಿವಪ್ರಾಪ್ತಿಕರಂ ಚ ತತ್ ॥ ೪೧ ॥

ಇತಿ ವಶ್ಚ ಸಮಾಖ್ಯಾತಂ ಯತ್ಪೃಷ್ಟೋಽಹಂ ಮುನೀಶ್ವರಾಃ ।
ಗೋಪನೀಯಂ ಪ್ರಯತ್ನೇನ ಕಿಮನ್ಯಚ್ಛ್ರೋತುಮಿಚ್ಛಥ ॥ ೪೨ ॥

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ತು ಋಷಯ ಆನಂದಂ ಪರಮಂ ಗತಾಃ ।
ಹರ್ಷಗದ್ಗದಯಾ ವಾಚಾ ನತ್ವಾ ತೇ ತುಷ್ಟುವುರ್ಮುಹುಃ ॥ ೪೩ ॥

॥ ಋಷಯ ಊಚುಃ ॥

ವ್ಯಾಸಶಿಷ್ಯ ನಮಸ್ತೇಽಸ್ತು ಧನ್ಯಸ್ತ್ವಂ ಶೈವಸತ್ತಮಃ ।
ಶ್ರಾವಿತಂ ನಃ ಪರಂ ವಸ್ತು ಶೈವಂ ಜ್ಞಾನಮನುತ್ತಮಂ ॥ ೪೪ ॥

---

೪೧. ಅದನ್ನೇ ನಾನು ನಿಮಗೆ ಹೇಳಿರುವೆನು. ನೀವು ಲೋಕದ ಜನರಿಗೆ ಶಿವಪ್ರಾಪ್ತಿರೂಪವಾದ ಈ ಜ್ಞಾನವನ್ನು ಪ್ರಯತ್ನಪೂರ್ವಕವಾಗಿ ಉಪದೇಶಮಾಡಿ ಧರ್ಮವನ್ನು ನೆಲೆಗೊಳಿಸಿ.

೪೨. ಎಲೈ ಋಷಿಶ್ರೇಷ್ಠರೇ, ನಿಮ್ಮ ಪ್ರಶ್ನೆಗೆ ನಾನು ಸರಿಯಾದ ಉತ್ತರವನ್ನು ಹೇಳಿರುವೆನು. ಇದನ್ನು ಪ್ರಯತ್ನಪೂರ್ವಕವಾಗಿ ನೀವು ರಕ್ಷಣೆಮಾಡಿಕೊಂಡು ಬರಬೇಕು. ಮತ್ತೇನು ಕೇಳಬೇಕೆಂದು ನಿಮ್ಮ ಅಪೇಕ್ಷೆಯಿರುವುದೋ ಕೇಳಿರಿ ಎಂದನು.

೪೩. ವ್ಯಾಸನು ಹೇಳಿದನು.—ಇದನ್ನು ಕೇಳಿ ಋಷಿಗಳು ಸಂಪೂರ್ಣವಾಗಿ ಸಂತೋಷವನ್ನು ಹೊಂದಿ, ಆ ಸಂತೋಷಾತಿಶಯದಿಂದುಂಟಾದ ಗದ್ಗದಧ್ವನಿಯಿಂದ ನಮಸ್ಕಾರಮಾಡಿ ಪುನಃಪುನಃ ಸ್ತೋತ್ರಮಾಡಿದರು.

೪೪-೪೫. ಋಷಿಗಳು ಹೇಳಿದರು.—ವ್ಯಾಸಶಿಷ್ಯನಾದ ಓ ಸೂತನೇ, ನಿನಗೆ ನಮಸ್ಕಾರವು. ನೀನೇ ಶಿವಭಕ್ತರಲ್ಲಿ ಶ್ರೇಷ್ಠನೂ ಕೃತಾರ್ಥನೂ ಆಗಿರುವೆ. ನಮಗೆ

ಅಸ್ಮಾಕಂ ಚೇತಸೋ ಭ್ರಾಂತಿರ್ಗತಾ ಹಿ ಕೃಪಯಾ ತವ ।
ಸಂತುಷ್ಟಾಃ ಶಿವಸಜ್ಞಾನಂ ಪ್ರಾಪ್ಯ ತ್ವತ್ತೋ ವಿಮುಕ್ತಿದಂ ॥ ೪೫ ॥

॥ ಸೂತ ಉವಾಚ ॥

ನಾಸ್ತಿಕಾಯ ನ ವಕ್ತವ್ಯಮಶ್ರದ್ಧಾಯ ಶಠಾಯ ಚ ।
ಅಭಕ್ತಾಯ ಮಹೇಶಸ್ಯ ನಚಾಶುಶ್ರೂಷವೇ ದ್ವಿಜಾಃ ॥ ೪೬ ॥

ಇತಿಹಾಸಪುರಾಣಾನಿ ವೇದಾನ್ಶಾಸ್ತ್ರಾಣಿ ಚಾಸಕೃತ್ ।
ವಿಚಾರ್ಯೋದ್ಧೃತ್ಯ ತತ್ಸಾರಂ ಮಹ್ಯಂ ವ್ಯಾಸೇನ ಭಾಷಿತಂ ॥ ೪೭ ॥

ಏತಚ್ಛ್ರುತ್ವಾ ಹ್ಯೇಕವಾರಂ ಭವೇತ್ಪಾಪಂ ಹಿ ಭಸ್ಮಸಾತ್ ।
ಅಭಕ್ತೋ ಭಕ್ತಿಮಾಪ್ನೋತಿ ಭಕ್ತಸ್ಯ ಭಕ್ತಿವರ್ಧನಂ ॥ ೪೮ ॥

ಪುನಶ್ಶ್ರುತೇ ಚ ಸದ್ಭಕ್ತಿರ್ಮುಕ್ತಿಸ್ಸ್ಯಾಚ್ಚ ಶ್ರುತೇ ಪುನಃ ।
ತಸ್ಮಾತ್ಪುನಃ ಪುನಶ್ಶ್ರಾವ್ಯಂ ಭುಕ್ತಿಮುಕ್ತಿಫಲೇಪ್ಸುಭಿಃ ॥ ೪೯ ॥

---

ಪರಮ ಶ್ರೇಷ್ಠವಾದ ಶಿವಜ್ಞಾನವನ್ನು ಉಪದೇಶಮಾಡಿರುವೆ. ನಿನ್ನ ದಯೆಯಿಂದ ನಮ್ಮ ಮನಸ್ಸಿನ ಭ್ರಾಂತಿಯು ಹೊರಟುಹೋಯಿತು. ನಿನ್ನಿಂದ ಮುಕ್ತಿಯನ್ನು ಕೊಡುವ ಶಿವಜ್ಞಾನವನ್ನು ಪಡೆದು ನಾವು ತೃಪ್ತರಾದೆವು ಎಂದರು.

೪೬-೪೯. ಸೂತನು ಹೇಳಿದನು.—ಎಲೈ ಋಷಿಗಳೇ, ಇದನ್ನು ನೀವು ವೇದಧರ್ಮದಲ್ಲಿ ಆಸಕ್ತಿಯಿಲ್ಲದ ನಾಸ್ತಿಕನಿಗೂ, ಶಿವಭಕ್ತಿಯಿಲ್ಲದವನಿಗೂ, ಮೂಢನಿಗೂ, ನಂಬಿಕೆಯಿಲ್ಲದವನಿಗೂ, ಕೇಳದೆಯಿರತಕ್ಕವನಿಗೂ ಹೇಳಬಾರದು. ಇತಿಹಾಸ ಪುರಾಣಗಳನ್ನೂ ವೇದಶಾಸ್ತ್ರಗಳನ್ನೂ ಅನೇಕಬಾರಿ ವಿಚಾರಮಾಡಿ, ಅದರ ಸಾರವನ್ನು ತೆಗೆದು ವ್ಯಾಸಮುನಿಯು ನನಗೆ ಇದನ್ನು ಹೇಳಿರುವನು. ಇದನ್ನು ಒಂದಾವೃತ್ತಿ ಕೇಳಿದರೆ, ಕೇಳಿದವರ ಪಾಪಗಳೆಲ್ಲ ಭಸ್ಮವಾಗುವವು. ಭಕ್ತಿಯಿಲ್ಲದವನು ಭಕ್ತಿಯನ್ನು ಪಡೆಯುವನು. ಭಕ್ತನಾದವನು ಭಕ್ತಿಯನ್ನು ಇನ್ನೂ ಹೆಚ್ಚಿಸಿಕೊಳ್ಳುವನು. ಮತ್ತೆ ಕೇಳಿದರೆ ಉತ್ತಮವಾದ ಭಕ್ತಿಯೂ, ಪುನಃ ಕೇಳಿದರೆ ಮುಕ್ತಿಯೂ ಉಂಟಾಗುವುದು. ಆದುದರಿಂದ ಭುಕ್ತಿಮುಕ್ತಿಗಳನ್ನಪೇಕ್ಷಿಸುವವರು ಇದನ್ನು ಮತ್ತೆ ಮತ್ತೆ ಕೇಳುತ್ತಿರಬೇಕು.

ಆವೃತ್ತಯಃ ಪಂಚ ಕಾರ್ಯಾಃ ಸಮುದ್ದಿಶ್ಯ ಫಲಂ ಪರಂ ।
ತತ್ಪ್ರಾಪ್ನೋತಿ ನ ಸಂದೇಹೋ ವ್ಯಾಸಸ್ಯ ವಚನಂ ತ್ವಿದಂ ॥ ೫೦ ॥

ನ ದುರ್ಲಭಂ ಹಿ ತಸ್ಯೈವ ಯೇನೇದಂ ಶ್ರುತಮುತ್ತಮಂ ।
ಪಂಚಕೃತ್ವಸ್ತದಾವೃತ್ತ್ಯಾ ಲಭ್ಯತೇ ಶಿವದರ್ಶನಂ ॥ ೫೧ ॥

ಪುರಾತನಾಶ್ಚ ರಾಜಾನೋ ವಿಪ್ರಾ ವೈಶ್ಯಾಶ್ಚ ಸತ್ತಮಾಃ ।
ಇದಂ ಶ್ರುತ್ವಾ ಪಂಚಕೃತ್ವೋ ಧಿಯಾ ಸಿದ್ಧಿಂ ಪರಾಂ ಗತಾಃ ॥ ೫೨ ॥

ಶ್ರೋಷ್ಯತ್ಯದ್ಯಾಪಿ ಯಶ್ಚೇದಂ ಮಾನವೋ ಭಕ್ತಿತತ್ಪರಃ ।
ವಿಜ್ಞಾನಂ ಶಿವಸಂಜ್ಞಂ ವೈ ಭುಕ್ತಿಂ ಮುಕ್ತಿಂ ಲಭೇಚ್ಚ ಸಃ ॥ ೫೩ ॥

॥ ವ್ಯಾಸ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಪರಮಾನಂದಮಾಗತಾಃ ।
ಸಮಾನರ್ಚುಶ್ಚ ತೇ ಸೂತಂ ನಾನಾವಸ್ತುಭಿರಾದರಾತ್ ॥ ೫೪ ॥

---

೫೦–೫೩. ಪರಮಫಲವನ್ನುದ್ದೇಶಿಸಿ ಈ ಶಿವಪುರಾಣವನ್ನು ಐದಾವೃತ್ತಿ ಆವೃತ್ತಿಮಾಡಬೇಕು. ಸಂದೇಹವಿಲ್ಲದೆ ಪರಮಫಲವು ಪ್ರಾಪ್ತಿಯಾಗುವುದೆಂದು ವ್ಯಾಸರೇ ಹೇಳಿರುವರು. ಈ ಶಿವಪುರಾಣವನ್ನು ಐದಾವೃತ್ತಿ ಕೇಳಿದ ಮನುಷ್ಯನಿಗೆ ದುರ್ಲಭವಾದುದು ಆವುದೂ ಇರುವುದಿಲ್ಲ. ಅವನಿಗೆ ಶಿವದರ್ಶನವು ಪ್ರಾಪ್ತಿಯಾಗುವುದು. ಪೂರ್ವದ ರಾಜರುಗಳೂ, ಬ್ರಾಹ್ಮಣರೂ, ವೈಶ್ಯರಲ್ಲಿ ಶ್ರೇಷ್ಠರಾದವರೂ ಐದಾವೃತ್ತಿ ಈ ಪುರಾಣವನ್ನು ಕೇಳಿ ತಮ್ಮ ಬುದ್ಧಿಯಿಂದಲೇ ಜ್ಞಾನಶುದ್ಧಿಯನ್ನು ಪಡೆದಿರುವರು. ಈಗಲೂ ಭಕ್ತಿಯಿಂದ ಕೂಡಿದ ಮನುಷ್ಯನು ಈ ಶಿವಪುರಾಣವನ್ನು ಕೇಳಿದರೆ ಶಿವಸಂಬಂಧವಾದ ಜ್ಞಾನವನ್ನೂ ಭುಕ್ತಿಮುಕ್ತಿಗಳನ್ನೂ ಪಡೆಯುವನು.

೫೪-೫೬. ವ್ಯಾಸನಿಂತೆಂದನು.—ಈ ರೀತಿಯಾದ ಸೂತನ ಮಾತನ್ನು ಕೇಳಿ ಆ ಋಷಿಗಳು ಪರಮಾನಂದವನ್ನು ಹೊಂದಿ ಆ ಸೂತನನ್ನು ಪ್ರೀತಿಯಿಂದ ಅನೇಕ

ನಮಸ್ಕಾರೈಃ ಸ್ತವೈಶ್ಚೈವ ಸ್ವಸ್ತಿವಾಚನಪೂರ್ವಕಂ ।
ಆಶೀರ್ಭಿರ್ವರ್ಧಯಾಮಾಸುಃ ಸಂತುಷ್ಟಾಶ್ಚಿನ್ನಸಂಶಯಾಃ ॥ ೫೫ ॥

ಪರಸ್ಪರಂ ಚ ಸಂತುಷ್ಟಾಃ ಸೂತಸ್ತೇ ಚ ಸುಬುದ್ಧಯಃ ।
ಶಂಭುಂ ದೇವಂ ಪರಂ ಮತ್ವಾ ನಮಂತಿಸ್ಮ ಭಜಂತಿ ಚ ॥ ೫೬ ॥

ಏತಚ್ಛಿವಸುವಿಜ್ಞಾನಂ ಶಿವಸ್ಯಾತಿಪ್ರಿಯಂ ಮಹತ್ ।
ಭುಕ್ತಿಮುಕ್ತಿಪ್ರದಂ ದಿವ್ಯಂ ಶಿವಭಕ್ತಿವಿವರ್ಧನಂ ॥ ೫೭ ॥

ಇಯಂ ಹಿ ಸಂಹಿತಾ ಪುಣ್ಯಾ ಕೋಟಿರುದ್ರಾಹ್ವಯಾ ಪರಾ ।
ಚತುರ್ಥೀ ಶಿವಪುರಾಣಸ್ಯ ಕಥಿತಾ ಮೇ ಮುದಾವಹಾ ॥ ೫೮ ॥

---

ಬಗೆಯ ವಸ್ತುಗಳನ್ನು ಕೊಟ್ಟು ಪೂಜಿಸಿದರು. ತಮ್ಮ ಸಂದೇಹಗಳನ್ನು ಕಳೆದು ಕೊಂಡು ಆ ಋಷಿಗಳು ನಮಸ್ಕಾರಮಾಡಿಯೂ ಸ್ತೋತ್ರಮಾಡಿಯೂ ಸ್ವಸ್ತಿವಾಚನ ಪೂರ್ವಕವಾದ ಆಶೀರ್ವಾದಗಳಿಂದಲೂ ಸಂತೋಷದಿಂದ ಸೂತನನ್ನು ಗೌರವಿಸಿದರು. ಸೂತನೂ, ಬುದ್ಧಿವಂತರಾದ ಆ ಋಷಿಗಳೂ ಸಂತೋಷಪಡುತ್ತಾ ಶಿವನನ್ನೇ ಶ್ರೇಷ್ಠ ವಾದ ದೇವನೆಂದು ತಿಳಿದು ನಮಸ್ಕಾರಮಾಡಿ ಪೂಜಿಸುತ್ತಿದ್ದರು.

೫೭. ಈ ಶಿವಮಹಾಪುರಾಣವು ಶಿವಸಂಬಂಧವಾದ ಜ್ಞಾನವುಳ್ಳದು. ಶಿವನಿಗೆ ಅತ್ಯಂತ ಪ್ರೀತಿಪಾತ್ರವಾಗಿ ಮಹಾಮಹಿಮೆಯಿಂದ ಕೂಡಿದುದು. ಭುಕ್ತಿಮುಕ್ತಿ ಗಳನ್ನು ಕೊಡತಕ್ಕುದು ಮತ್ತು ಶಿವಭಕ್ತಿಯನ್ನು ಹೆಚ್ಚಿಸತಕ್ಕುದು.

೫೮. ಈ ಕೋಟಿರುದ್ರಸಂಹಿತೆಯು ಶಿವಮಹಾಪುರಾಣದ ನಾಲ್ಕನೆಯ ಸಂಹಿತೆಯಾಗಿ ಪುಣ್ಯಕರವಾಗಿಯೂ ಶ್ರೇಷ್ಠವಾದುದಾಗಿಯೂ ಶಿವನಿಗೆ ಸಂತೋಷ ವನ್ನುಂಟುಮಾಡುವುದಾಗಿಯೂ ಇರುವುದು.

ಏತಾಂ ಯಃ ಶೃಣುಯಾದ್ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ।
ಸ ಭುಕ್ತ್ವೇಹಾಖಿಲಾನ್ಭೋಗಾನಂತೇ ಪರಗತಿಂ ಲಭೇತ್ ॥ ೫೯ ॥

ಇತಿ ಶ್ರೀಶಿವಮಹಾಪುರಾಣೇ ಚತುರ್ಥ್ಯಾಂ ಕೋಟಿರುದ್ರಸಂಹಿತಾಯಾಂ
ಜ್ಞಾನನಿರೂಪಣವರ್ಣನಂ ನಾಮಕ
ತ್ರಿಚತ್ವಾರಿಂಶೋಽಧ್ಯಾಯಃ



॥ ಸಮಾಪ್ತೇಯಂ ಕೋಟಿರುದ್ರಸಂಹಿತಾ ॥

---

೫೯. ಇದನ್ನು ಯಾವ ಪುರುಷನು ಭಕ್ತಿಯಿಂದ ಕೇಳುತ್ತಾನೆಯೋ ಅಥವಾ ಹೇಳುತ್ತಾನೆಯೋ ಅವನು ಇಹಲೋಕದಲ್ಲಿ ಸಮಸ್ತ ಸುಖಗಳನ್ನೂ ಅನುಭವಿಸಿ ಕೊನೆಯಲ್ಲಿ ಪರಮಗತಿಯಾವ ಮುಕ್ತಿಯನ್ನು ಹೊಂದುವನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ನಾಲ್ಕನೆಯ ಕೋಟಿರುದ್ರಸಂಹಿತೆಯಲ್ಲಿ
ಜ್ಞಾನನಿರೂಪಣೆಯೆಂಬ ನಲವತ್ತಮೂರನೆಯ
ಅಧ್ಯಾಯವು ಮುಗಿದುದು.

**ಕೋಟಿರುದ್ರಸಂಹಿತೆಯು ಮುಗಿದುದು.**

॥ ಓಂ ತತ್ಸತ್ ॥

॥ ಮಂಗಳಂ ॥



